ನಿಷ್ಠೆಯಿಂದ ಯಶಸ್ವಿಯಾಗಿ ಕಾರ್ಯಗತಗೊಳಿಸಲು ಕಂಕಣವ ತೊಟ್ಟು ದಿಟ್ಟತನದಿಂದ ಮುನ್ನಡೆದು ತೇಜೋರಾಶಿಯಾಗಿ ವಿರಾಜಿಸಿದರು. ಶುದ್ಧ ಚೈತನ್ಯ ಮೂರ್ತಿಗಳಾಗಿ ಭಗವದ್ಭಕ್ತಿ ಸಾಮ್ರಾಜ್ಯದ ಸೌಭಾಗ್ಯವನ್ನು ಸೂರೆಗೊಳಿಸಿ, ವಿಪ್ರನಿಂದ ಮೊದಲುಮಾಡಿ ಅಂತ್ಯಜನವರವಿಗೂ ಏಕ ಪ್ರಕಾರವಾಗಿ ಅವರವರು ಕೃತಾರ್ಥರಾಗಲು ಲಿಂಗಾಂಗ ತತ್ವಗಳನ್ನು ಸ್ವಾನುಭೂತಿಗೊಳಿಸಿ, ಎಲ್ಲಾ ಜೀವರುಗಳಿಗೂ ಲೇಸನೆ ಬಯಸಿದ ಜಗನ್ಮಂಗಳ ಮೂರ್ತಿ ಶ್ರೀ ಬಸವಣ್ಣ.

13 ಜಗನ್ಮಾನ್ಯನಾದ ಶ್ರೀ ಬಸವಣ್ಣ ಬೋಧಿಸಿದ "ಕಾಯಕವೇ ಕೈಲಾಸ" ವೆಂಬ ನಿಷ್ಕಾಮ ಕರ್ಮಾನುಷ್ಠಾನ ಕ್ರಿಯಾ ಯೋಗವು, ನಿವೃತ್ತಿ ಹೇತುಕವಾದ ಉಜ್ವಲ ಪ್ರವೃತ್ತಿ ಧರ್ಮವನ್ನು ಎತ್ತಿಹಿಡಿದು, ಸ್ಫೂರ್ತಿಯಿಂದ ಪ್ರತಿಪಾದಿಸುವುದರಲ್ಲಿ ಅದ್ವಿತೀಯವೆನಿಸಿ, ಪ್ರಪಂಚದಲ್ಲಿದ್ದೂ ಪಾರಮಾರ್ಥವನ್ನು ಸಾಧಿಸುವುದರಲ್ಲಿ ಮಧ್ಯಮಣಿ ನ್ಯಾಯದಂಥಾ ರಸವತ್ತರವೂ ವೀರ್ಯವತ್ತರವೂ ಆಗಿ ರಾರಾಜಿಸುವ ಸರ್ವ ಧರ್ಮ ಸಮನ್ವಯ ಮಾರ್ಗ. ವಿಶ್ವಧರ್ಮವೆನಿಸಿದ ಪರಮ ವೀರ ಶೈವ (ಶಿವಾದ್ವೈತದಲ್ಲಿ) ಶಿವಪೂಜಾ ರೂಪ ಕ್ರೀಯಾ ಯೋಗವು ॥ಯದ್ಯತ್ಕರ್ಮ ಕರೋಮಿ ।ತತ್ತದಖಿಲಂ ಶಂಭೋ ತವಾರಾಧನಂ॥ ಎಂಬ ಸದ್ಭಾವನೆಯನ್ನು ವೊಳಗೊಂಡು, ಷಡ್ವಿಧ, ನವವಿಧ ಭಕ್ತಿ, ಪರಾಭಕ್ತಿ ಇಂದ ವಿಜೃಂಭಿಸಿ, ಭಕ್ತಿ ಜ್ಞಾನ ವೈರಾಗ್ಯಗಳ ಪರಾಕಾಷ್ಠತೆಯಲ್ಲಿ ಮೂಳ್ಗಿ ॥ ಪತಿರ್ಲಿಂಗಂ ಸತೀ ಚಾಹಂ । ಹೃದಿಯುಕ್ತಃ ಸ್ವಯಂ ಪ್ರಭುಃ ॥ ಎಂಬಂತೆ "ಅಂಗ ಸತಿ ಲಿಂಗ ಪತಿ" ಯೆಂಬ ಶ್ರೇಷ್ಠತಮ ಅವಿನಾಭಾವ ಸಂಬಂಧದಿಂದ ಕೂಡಿರುವುದು. ಜೀವನೆನಿಸಿದ ಅಂಗನು ಷಟ್ಸ್ಥಲ ಜ್ಞಾನೈಕ್ಯತೆಯಿಂದ ಶರಣ ಸ್ಥಲವನ್ನು ಹೊಂದಿರಲು, ಪರಿಪಕ್ವವಾದೀ ಬ್ರಾಹ್ಮೀ ಸ್ಥಿತಿಯ ನಿಜಾನಂದವು ॥ಶರಣಮೇವ ಲಿಂಗಂ । ಲಿಂಗಮೇವ ಶರಣಃ । ಏವಂಚ ಲಿಂಗತತ್ವಸ್ಯ ಶರಣ ತತ್ವಮಂಗಂ । ಶರಣಸ್ಯ ಲಿಂಗಂ ಪ್ರಾಣಃ । ಅನಯೋರ್ಬೀಜ ವೃಕ್ಷ ನ್ಯಾಯೇನ । ಅನ್ಯೋನ್ಯ ಸಾಮರಸ್ಯ ಮೇವ ॥ ಅಂದಹಾಗೆ, ಬೀಜ ವೃಕ್ಷ ನ್ಯಾಯ:ದಂತೆ ಲಿಂಗಾಂಗಗಳ ಸಂಬಂಧವು ವಂದರಲ್ಲೊಂದು ಹಾಸುಹೊಕ್ಕಾಗಿ ಸಮಾವೇಶಗೊಂಡಿರುವುವೆಂಬ ಮಹದಂಶ, ಪೂರ್ವಾಚಾರ್ಯರಾದ ಶ್ರೀಮಜ್ಜಗದ್ಗುರು ರೇಣುಕಾದಿ ಪಂಚಾಚಾರ್ಯರುಗಳಿಂದ ಪ್ರೋಕ್ತವಾದ ರೀತಿಯಲ್ಲಿ ಶ್ರೀ ಬಸವಾದಿ

ಪ್ರಮಥ ಗಣಾಧೀಶ್ವರರುಗಳು ಮನಗಂಡು ಆ ತತ್ವಾಚರಣೆಗಳಿಂದ ಕೃತಾರ್ಥರಾಗಿ, ತಂತಮ್ಮ ದಿವ್ಯ ಅನುಭವಾಮೃತಗಳನ್ನು ಲೋಕದ ಜನ ಸಾಮಾನ್ಯರ (ಸ್ತ್ರೀಪುರುಷರ) ಆತ್ಮ ಕಲ್ಯಾಣಕ್ಕಾಗಿ, ಅಚ್ಚ ತಿಳಿಗನ್ನಡದಲ್ಲಿ ಸ್ಫುಟಪಡಿಸಿರುವರು. ಶ್ರೀ ಬಸವಾದಿಗಳ ವಚನಾಮೃತಗಳೇ ವಚನೋಪನಿಷತ್ತುಗಳೆಂದು ಪರಿಗಣಿಸಲ್ಪಟ್ಟಿರುವುವು.

14 ಶ್ರೀ ಬಸವಣ್ಣನವರಿಂದ ಪ್ರತಿಪಾದಿತವಾದ ಕರ್ಮ ಭಕ್ತಿ ಜ್ಞಾನಗಳೆನಿಸಿದ ತ್ರಿವೇಣಿ ಸಂಗಮದ ಪುಣ್ಯ ಪ್ರವಾಹಂಗಳು – ಹಾಲು ತೊರೆಗೆ (ಹಾಲಿನ ಹೊಳೆಗೆ) ಬೆಲ್ಲದ ಕೆಸರು, ಸಕ್ಕರೆಯ ಮಳಲು, ತವರಾಜದ ನೊರೆ ತೆರೆಯಂತೆ ಮಧುರಾತಿಮಧುರವಾಗಿ, ದೇವಾಮೃತ ಕಡಲಿನಂತೆ ಗಂಭೀರವೆನಿಸಿ ಅರ್ಥಪುಷ್ಟಿಯಿಂದ ವೀರ್ಯವತ್ತರವೆನಿಸಿರುವುವು.

15 ಶ್ರೀ ಬಸವಣ್ಣನವರು ಸ್ವತಃ ಆಚರಿಸಿ ಜಗತ್ತಿಗೆ ಮಾರ್ಗದರ್ಶಕರಾಗಿ ತೋರಿಸಿಕೊಟ್ಟಿರುವ ||ಕಾಯಕವೇ ಕೈಲಾಸವೆಂಬ|| ಸತ್ಕ್ರಿಯಾನುಷ್ಠಾನದಿಂದ, ಮಾನವನು ಪ್ರಥಮತಃ ಅಂತರ್ಬಾಹ್ಯೇಂದ್ರಿಯಗಳಿಂದ ಶುದ್ಧನಾಗಬೇಕು ಎರಡನೆಯದಾಗಿ "ಧರ್ಮೋಲಿಂಗಾರ್ಚನಾತ್ಮಕಃ"|| ಎಂಬಂತ ನಿಜೇಷ್ಟ ಲಿಂಗೋಪಾಸನೆಯಿಂದ, ಆತ್ಮಾನುಸಂಧಾನವನ್ನು ಪಡೆದು ಪ್ರಭುದ್ಧನಾಗಬೇಕು. "ಶಿವೋಹಂ" ಭಾವನೆಯಿಂದ ಸ್ವಾನುಭೂತಿಯ ಪರವಶತೆಯುಳ್ಳವನಾಗಿ ಗುರುಕೃಪಾ ವಿಶೇಷದಿಂದ ಸಂಸಿದ್ಧನಾಗಿ ಕೃತಾರ್ಥನಾಗಬೇಕು

16 ಶ್ರೀ ಬಸವಣ್ಣನವರ ಅಮೃತ ಬಿಂದುಗಳಂತಿರುವ ವಚನ ವಾಙ್ಮಯದ ರಸಮಾಧುರ್ಯವನ್ನೂ, ತತ್ವಬೋಧಾಮೃತ ಬಿಂಧುಗಳಂತಿರುವ ವಚನಗಳ ಸವಿಯೂಟವನ್ನು ಕಂಡುಂಡನುಭವಿಸಿದ, ಅನಂತ ಶಿವಶರಣ ಶರಣೆಯರುಗಳಲ್ಲಿ ಅಗ್ರುಜರಾದ ಶರಣ ಮಡಿವಾಳ ಮಾಚಯ್ಯನವರು ಒಂದೆಡೆ ತಮ್ಮ ಸ್ವಾನುಭೂತಿಯ ನುಡಿಮುತ್ತುಗಳಿಂದ ಶ್ರೀ ಬಸವಣ್ಣನವರನ್ನು ಆತ್ಮೀಯ ಭಾವನೆಯಿಂದ ಕೊಂಡಾಡುತ್ತಾ :—

|| ಎತ್ತೆತ್ತ ನೋಡಿದರೆ ಅತ್ತತ್ತ ಬಸವನೆಂಬ ಬಳ್ಳಿ !
ಎತ್ತಿ ನೋಡಿದರೆ ಲಿಂಗವೆಂಬ ಗೊಂಚಲು !!
ಒತ್ತಿ ಹಿಂಡಿದರೆ ಭಕ್ತಿಯೆಂಬ ರಸವಯ್ಯಾ !!!

ಎಂಬುದಾಗಿ ಸಂಕೀರ್ತಿಸಿರುವುದು ನಿಜಕ್ಕೂ ಅಂತರ್‌ಸ್ಫುರಣ ಶಕ್ತಿಯನ್ನು ನವ ನವೋಲ್ಲಾಸದಿಂದ, ಇಮ್ಮಡಿ, ಮುಮ್ಮಡಿ ನಾಲ್ಮಡಿ ಅಧಿಕಾಂಶೇನ, ಉಕ್ಕೇರಿಸುವುದರಲ್ಲಿ ವೀರ್ಯವತ್ತರವೆನಿಸಿರುವುದು.

17 ಶ್ರೀ ಬಸವಣ್ಣ ದ್ವಿಶಂಭುವೆನಿಸಿದ ನಂದಿಕೇಶ್ವರನ ಅಂಶಾವತಾರಿ ಎಂಬುದು ಲೋಕಪ್ರಸಿದ್ಧವೇ ಯಿರುತ್ತೆ. ನಂದಿಕೇಶ್ವರನೇ ವೀರಾಂಜನೇಯ ನಾಗಿಯೂ ಅವತರಿಸಿದುದು ಶ್ರೀಮದ್ರಾಮಾಯಣ ಮಹಾ ಕಾವ್ಯದಿಂದ ವೇದ್ಯವೇ ಯಿರುತ್ತೆ. ಅಂತೆಂದ ಬಳಿಕ ವೀರಾಂಜನೇಯನ ಘನಸೇವೆ ಹಾಗೂ ಕೀರ್ತಿ ನಿರಂತರ ಸರ್ವತ್ರ ಚಿರಂಜೀವಿಯಾಗಿ ಪ್ರಕಾಶಿಸುವಂತೆ, ಶ್ರೀ ಬಸವಣ್ಣನ ವರ ಕೀರ್ತಿ ಮತ್ತೂ ಅವರ ಶ್ರೇಷ್ಠವಾದ ವಚನ ವಾಙ್ಮಯದ ದಿವ್ಯ ಸರಣಿ ನಿರಂತರ ಸರ್ವರ ಹೃದಯ ಕ್ಷೇತ್ರವನ್ನು ಬೆಳಗಿಸುತ್ತಾ ಸರ್ವಗಲ್ಲಿ ಕಾರ್ಯೋನ್ಮುಖ ಪ್ರವೃತ್ತಿಯನ್ನು ಹುರಿದುಂಬಿಸುವಂಥಾದ್ದಾಗಿರಲೆಂದು ಹೃತ್ಪೂರ್ವಕ ವಾಗಿ ಹಾರೈಸುತ್ತೇನೆ. ಯಾಕೆಂದರೆ, ದಿವ್ಯ ಪರುಷಮಣಿ ಬಸವಣ್ಣ.

18 ಮಹಾನುಭಾವ ಶ್ರೀ ಬಸವಣ್ಣನವರ ರಾಜ್ಯಮಟ್ಟದ ಎಂಟನೇ ಶತ ಮಾನೋತ್ಸವದ ಸಮಾರಂಭದ ಸವಿನೆನಪಿಗಾಗಿ ನನಗೆ ವೇದ್ಯವಾದ ನಾಲ್ಕು ನುಡಿಗಳನ್ನು ನನ್ನೀ ಗ್ರಂಥದಲ್ಲಿ ರಚಿಸಿ ನನ್ನ ಅಳಿಲು ಸೇವೆಯನ್ನು ಬಸವಣ್ಣ ನವರ ದಿವ್ಯ ಅಡಿದಾವರೆಗಳಲ್ಲಿ ಭಕ್ತಿ ಭಾವದಿಂದ ಅರ್ಪಿಸಿರುವೆನು.

ವೀರ ಮಾಹೇಶ್ವರಾದಿ ಗುರು ಲಿಂಗ ಜಂಗಮರ ಸೇವಾಗ್ರ ಗಣ್ಯರಾದ, ಶ್ರೀ ಬಸವೇಶ್ವರರ ದಿವ್ಯ ಅಡಿದಾವರೆಗಳನ್ನು ಭಕ್ತಿ-ಭಾವದಿಂದ ಪುನಃ ಪುನಃ ನಮಿಸುವೆನು.

ಇದು ಶ್ರೀ ಬಸವಣ್ಣನವರು ಬೋಧಿಸಿದ "ದಿವ್ಯ ಜೀವನದ" ತತ್ವಾವಳಿ ಯಲ್ಲಿ ನಾನು ಕಂಡ ಸಾರ ಸರ್ವಸ್ವ.

ಬಸವಣ್ಣನ ಸಾಹಿತ್ಯ ಶರಣ ಸಾಹಿತ್ಯ. ಬಸವಣ್ಣ ಶರಣ ಸ್ಥಲದ ದಿವ್ಯ ಪರುಷಮಣಿ. ಭಕ್ತ ಸ್ಥಲದ ಗೆರೆಯ ಅಂಚನ್ನು ಸ್ಪರ್ಶಿಸಲೂ ಭಾಗ್ಯವಿಲ್ಲದ ಅನಧಿಕಾರಿಗಳಿಗೆ, ಐಕ್ಯ ಸ್ಥಲದ ಅಥವ ಶರಣ ಸ್ಥಲದ ವಿಭೂತಿಯೋಗದ, ದೈವೀಸಂಪತ್ತಿನ ಅರಿವು ಅನುಭವಗಳು ಆಗುವುದು ತಾನೆ ಎಂತು ?

# ಶ್ರೀ
# ಶಿ ವಾ ನು ಭ ವ  ಮಂ ಟ ಪ

ಶಿವಶರಣರ ದಿವ್ಯ ದೃಷ್ಟಿ ಪಥದಲ್ಲಿ ಅಖಂಡ ವಿಶ್ವವೇ ಒಂದು ಮಹತ್ತರವಾದ ಶಿವಾನುಭವ ಮಂಟಪವೆನಿಸರುತ್ತೆ. ಅನಂತ ಜೀವಕೋಟಿಗಳಿಗೆ ಆಶ್ರಯವೆನಿಸಿರುವ ಅಖಿಲಾಂಡಕೋಟಿ ಬ್ರಹ್ಮಾಂಡಗಳು, ॥ ಬೀಜಂ ಮಾಂ ಸರ್ವ ಭೂತಾನಾಂ ॥ ಎಂಬ ಗೀತೋಕ್ತಿಯಂತೆ ಪರಬ್ರಹ್ಮನಿಂದ ಹೊರಹೊಮ್ಮಿ ವಿರಾಜಿಸಿ, ಮಾನವನ ಅನಂತ ಮುಖದ ಅಭ್ಯುದಯಕ್ಕೆ ಭವ್ಯವಾದ ಅನುಭವ ಮಂಟಪವೆನಿಸಿ ವಿರಾಜಿತವಾಗಿದೆ. ಕ್ಷರವೆನಿಸಿದ ಈ ಮಹಾಮನೆ ಸರ್ವ ಭೂತಾತ್ಮಕವಾಗಿ ವಿಸ್ತಾರಗೊಂಡಿರಲು, ಕರ್ತನೆನಿಸಿದ ಸ್ವಾಮಿ ಅಕ್ಷರನೆನಿಸಿ, ಕೂಟಸ್ಥನೂ ಹಾಗೂ ಸ್ವತಂತ್ರನೂ ಆಗಿ ಅಧಿಪತಿ ಎನಿಸಿರುವನು. ಕ್ಷರಾಕ್ಷರಗಳ ಅಂದರೆ, ಜೀವ ಜಗತ್ತು ಈಶ್ವರ ಇವರುಗಳ ನಡುವಣ ಸಂಬಂಧದ ಅರಿವು ಅನುಭವಗಳು, ಅನುಭವ ಮಂಟಪದ ಜ್ಞಾನಾರ್ಜನೆಯಾಗಿರುತ್ತೆ. ಬೀಜವೃಕ್ಷ ನ್ಯಾಯದಂತೆ, ಬ್ರಹ್ಮಾಂಡವೆನಿಸಿದ ಅನುಭವ ಮಂಟಪವು, ಪರಬ್ರಹ್ಮದ ನಿಲುವನ್ನರಿಯಲು ಧರ್ಮ ಕ್ಷೇತ್ರವೆನಿಸಿರುವುದು. ಶ್ರೀ ಬಸವಣ್ಣನವರು ನುಡಿದಂತೆ....

॥ ಮರ್ತ್ಯ ಲೋಕವೆಂಬುದು । ಕರ್ತಾರನ ಕಮ್ಮಟವಯ್ಯಾ
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ.... ॥

ಅಖಂಡ ಬ್ರಹ್ಮಾಂಡ ಮಹೀ ಮಂಡಲವು ಸೃಷ್ಟಿಕರ್ತನಾದ ಪರಮಾತ್ಮನ ಕ್ರೀಡಾ ಸ್ಥಾನ. ಇದರಲ್ಲಿ ವಿಹರಿಸುವವರು ಸನ್ನೀತಿ, ಭಕ್ತಿ ಸಂಪನ್ನರಾಗಿ ಅರ್ಹರೆನಿಸಿದರೆ ಶಿವಲೋಕದ ಶಿವಗಣಗಳೂ, ಇವರನ್ನು ಸಂಪನ್ನರೆಂದು ಆದರದಿಂದ ಸುಸ್ವಾಗತಿಸುವರೆಂದೇ ಮಹಾನುಭಾವನಾದ ಶ್ರೀ ಬಸವಣ್ಣ ಮುತ್ತಿನಂಥಾ ಮಾತನ್ನು ಮುದ್ದಾಗಿ ನುಡಿದಿರುವನು. ಮತ್ತೂ ಲಿಂಗಾಂಗಗಳ ಅವಿನಾಭಾವ ನೈಜ ಸಂಬಂಧದನುಭವಕ್ಕೆ ಅಖಂಡ ವಿಶ್ವವು ಒಂದು ಮಹಾಮನೆ ಅಥವಾ ಅನುಭವ ಮಂಟಪವೆನಿಸಿರುವುದು. ಈ ಮಹಾಮನೆಯ ಸ್ಥಾಪಕರು ಹಾಗೂ ಪ್ರಪ್ರಥಮ ಪ್ರವರ್ತಕರು : ಶಿವ, ಗಿರಿಜೆ, ಗಣಪತಿ, ಷಣ್ಮುಖ, ವೀರ, ನಂದಿ, ಭೃಂಗಿ, ವೃಷಭ, ಸ್ಕಂದ ಮತ್ತೂ ಶಿವಾಸ್ಯ ಸಂಭವರಾದ ಹಾಗೂ ಸರ್ವ

ಲೋಕಗಳಿಗೆ ಜಗದ್ಗುರುವರೋತ್ತಮರೆನಿಸಿದ, ಶ್ರೀಮಜ್ಜಗದ್ಗುರು ರೇಣುಕಾದಿ ಪಂಚಾಚಾರ್ಯರೆನಿಸಿರುವರು. ಜಗತ್ತೆಂಬೀ ಮಹಾ ಅನುಭವ ಮಂಟಪದಲ್ಲಿ ನಾನಾ ಜ್ಞಾನ ವಿಜ್ಞಾನಮಯ ಭಂಡಾರವನ್ನು ಆ, ಆಕಾಲಕ್ಕೆ ತಕ್ಕಂತೆ ಬಲಪಡಿಸಿ ಊರ್ಜಿತಗೊಳಿಸಿದವರಲ್ಲಿ, ಮಹಾಚಾರ್ಯರ ಅನುಯಾಯಿಗಳಾದ, ದೇವರ್ಷಿ, ಮಹರ್ಷಿಗಳೆನಿಸಿದ, ಆದಿ ಶ್ರೀ ಅಗಸ್ತ್ಯ, ದಧೀಚಿ, ವ್ಯಾಸ ಸಾನಂದ ದೂರ್ವಾಸ, ಗೌತಮ, ವಸಿಷ್ಠ, ವಾಮದೇವ, ಚ್ಯವನ, ಭೃಗು. ಭಾರ್ಗವ, ಭರಧ್ವಾಜ, ಅತ್ರಿ, ಕೌಶಿಕ, ಯಾಜ್ಞವಲ್ಕ್ಯ, ಮರೀಚಿ, ಮೈತ್ರೇಯಾದಿ ಋಷಿ ಶ್ರೇಷ್ಠರೂ ಹಾಗೂ ಉಪನಿಷತ್ಕಾಲದ ಋಷಿ ಪತ್ನಿಯರಾದ, ಲೋಪಾಮುದ್ರಾ ದೇವಿ, ಮೈತ್ರೇಯಿ, ಗಾರ್ಗಿ, ಗೌರಿ, ಕಾತ್ಯಾಯಿನಿ ಮೊದಲಾದ ಸತೀಮಣಿ ಯರೂ, ಹಾಗೂ ರಾಜರ್ಷಿಗಳೆನಿಸಿದ ಜನಕಾದಿಗಳೂ, ಅನೂಚಾನವಾಗಿ ಅನಾದಿಕಾಲದಿಂದ ಪ್ರಜ್ವಲಿಸುವ ಸನಾತನ ಧರ್ಮವನ್ನು ಸ್ವತಃ ಆಚರಿಸಿ ಬೆಳೆಸಿ ಉಳಿಸಿಕೊಂಡು ಬಂದಿರುವರು. ಈ ಮಹದಂಶ ಮಹಾಸ್ಕಾಂದ, ಜ್ಞಾನವಾಸಿಷ್ಠ ಗಳಲ್ಲಿ ಪ್ರತಿಪಾದಿತವಾಗಿರುವುದು. ಮತ್ತೂ ಅನಾದಿಯಿಂದ ಶ್ರೀ ಮಹಾ ಚಾರ್ಯರ ಮೂಲಧರ್ಮ ಪೀಠಗಳು, ಲಿಂಗಿಧರ್ಮ ಪ್ರಚಾರಕ್ಕೆಂದೇ ಜಗತ್ತಿನಲ್ಲಿ ವಿರಾಜಿತವಾಗಿರುವುವು.

2. ಹನ್ನೊಂದನೇ ಶತಮಾನದಿಂದ ಕರ್ಣಾಟಕದಲ್ಲಿ ವಿಶೇಷತಃ ಪರಮಪವಿತ್ರವಾದ ಶಿವಾದ್ವೈತ ಸಿದ್ಧಾಂತವನ್ನು (ಲಿಂಗಿಧರ್ಮವನ್ನು) ಶಿವಶರಣ ಶರಣೆಯರೆನಿಸಿದ ದೇವರ ದಾಸಮಯ್ಯ, ಶಂಕರ ದಾಸಮಯ್ಯಾದಿಗಳು, ದುಗ್ಗಳೆ, ಸುಗ್ಗಲೆಯರೂ, ತದನಂತರದಲ್ಲಿ ಶ್ರೀ ಬಸವಣ್ಣ, ಚೆನ್ನಬಸವಣ್ಣ, ಶ್ರೀ ಅಲ್ಲಮ ಪ್ರಭುದೇವರೂ, ಮಡಿವಾಳ ಮಾಚೀ ದೇವರೂ ಹಾಗೂ ಅಕ್ಕ ಮಹಾದೇವಿ, ಗಂಗಾಂಬಿಕೆ, ನೀಲಾಂಬಿಕೆ, ಮಹಾದೇವಿಯಕ್ಕ ಮೊದಲಾದ ಅನೇಕ ಮಹಾನ್ ವ್ಯಕ್ತಿಗಳು, ಪೂರ್ವಜರ ರಾಜಮಾರ್ಗವನ್ನು ಗಂಭೀರವಾಗಿ ಅನುಸರಿಸಿ ಲಿಂಗಿ ಧರ್ಮವನ್ನು ತಂತಮ್ಮ ಕಾಲಕ್ಕೆ ತಕ್ಕಂತೆ ಜನಮನವನ್ನು ಆಕರ್ಷಿಸಿ ನಲಿಯುವಂತೆ ಮಾಡಿರುವರು. ಹನ್ನೆರಡನೇ ಶತಮಾನದಲ್ಲಿ ಶ್ರೀ ಬಸವಾದಿ ಪ್ರಥಮ ಶ್ರೇಷ್ಠರು ಕಲ್ಯಾಣದಲ್ಲಿ ಸ್ಥಾಪಿಸಿದ ಅನುಭವ ಮಂಟಪದ ಶಿವಾನುಭವ ಗೋಷ್ಠಿಯ ತತ್ವಕಿರಣಗಳು, ಇಂದಿಗೂ ಮತ್ತೆಂದೆಂದಿಗೂ

ಸ್ಪ್ರಾಜ್ಞರಿಗೆ ದಾರಿ ದೀಪವಾಗಿರುವುದರೊಂದಿಗೆ ಐಹಿಕಾಮುಷ್ಮಿಕ ಫಲಪ್ರದವೂ ಹಾಗೂ ಮೋಕ್ಷಪ್ರದವೆನಿಸಿರುವುವು.

3. ಕ್ರಿಸ್ತಶಕ ಒಂದನೇ ಶತಮಾನದಲ್ಲಿ ತಮಿಳು ನಾಡಿನ ಪಾಂಡ್ಯದೇಶದ ರಾಜಧಾನಿ ಮಧುರೆಯಲ್ಲಿ "ಮಧುರೆ ತಮಿಳ್ ಸಂಘ" ವೆಂಬ, ತತ್ವವೇತ್ತರ ಅನುಭವ ಮಂಟಪ ಪ್ರಥಮ ಭಾರಿಗೆ ಆದಿ ಶ್ರೀ ಅಗಸ್ತ್ಯರಿಂದ ಸ್ಥಾಪಿತವಾಗಿ, ಪ್ರಸಿದ್ಧಿ ಪಡೆದಿತ್ತು ಎಂಬುದು ಲೋಕವಿಖ್ಯಾತವಾದ ಅಂಶವೆನಿಸಿರುತ್ತೆ.

ತಮಿಳು ನಾಡಿನ ಅಂದಿನ ಪ್ರಮುಖ ಜ್ಞಾನಜ್ಯೋತಿಗಳೆನಿಸಿದ ಶ್ರೀ ತಿರುವಳ್ಳುವನಾಯನಾರ್, ಶ್ರೀ ಸರಸ್ವತಿ ಅಂಶಳೆನಿಸಿದ ಅಜ್ಜಿ ಅವ್ವೆಯಾರ್, ನಂತರ ಕ್ರಮೇಣ ಒಟ್ಟಿ ಕೂತ್ತರ್, ಕಂಬರ್, ಮೊದಲಾದ ಶ್ರೇಷ್ಠ ಶರಣರು ಮಧುರೆ ತಮಿಳ್ ಸಂಘದ ಶಿವಾನುಭವ ಮಂಟಪವನ್ನು ಘನತೆಯಿಂದ ಮುಂದುವರಿಸಿ. ಶಿವಜ್ಞಾನ ಬೋಧಾಮಯ ಶೈವ ಸಿದ್ಧಾಂತವನ್ನು ಹಾಗೂ ಗಂಭೀರವಾದ ತಮಿಳು ಸಂಗೀತ ಸಾಹಿತ್ಯಗಳನ್ನು ಶಿವಸಮುದ್ರವೋ ! ಅನ್ನು ವಂತೆ ಬೆಳೆಸಿ ಉಳಿಸಿಕೊಂಡು ಬಂದರು. ಉತ್ತರೋತ್ತರ ಈ ದಿವ್ಯ ಸರಣಿ ಸರ್ವತ್ರ ಹರಡಿ, ಪರಮ ಪೂಜ್ಯರೆನಿಸಿದ ಅರುವತ್ತುಮೂರು ನಾಯನಾರು (63 ಪುರಾತನರು) ಗಳೂ, ಇನ್ನೂ ಪರಮಪೂಜ್ಯರೆನಿಸಿದ ಅಪ್ಪರ್, ಸುಂದ ರರ್, ಮಾಣಿಕ್ಯವಾಚಕರ್ ಮತ್ತೂ ತಿರುಜ್ಞಾನ ಸಂಬಂದರ್ ಎಂಬ ನಾಲ್ಕು ಜನ ಶೈವ ಸಮಯಾಚಾರ್ಯರುಗಳೂ, ತುರೈಮಂಗಲಂ ಶ್ರೀ ಶಿವಪ್ರಕಾಶ ಸ್ವಾಮಿಗಳೂ, ಶ್ರೀ ಸೇಕ್ಕಿಳಾರ್ ಎಂಬ ಮಹಾತ್ಮರೂ, ಶಿವಾನುಭವ ಮಂಟಪದ ಹಾಗೂ ತಮಿಳು ಸಾಹಿತ್ಯದ ಉದ್ಧಾರಕ್ಕಾಗಿ ದುಡಿದ ಮಹಾನ್ ವ್ಯಕ್ತಿಗಳಾ ಗಿರುವರು. ತಮಿಳು ನಾಡಿನ ಶಿವಾನುಭವ ಮಂಟಪದ ಹಿರಿಯ ವ್ಯಕ್ತಿಯೆಂದರೆ, ತಿರುಚಿರಾಪಳ್ಳಿ (ಟ್ರಿಚ್ಚಿ) ಯ ಮಹರ್ಷಿ ಶ್ರೀ ತಾಯುಮಾನ ಸ್ವಾಮಿಗಳು. ಇತ್ತೀಚೆಗೆ, ವಡಲೂರು ಪರಮ ಪೂಜ್ಯ ಶ್ರೀ ರಾಮಲಿಂಗ ಅಡಿಗಳ್ (ಸ್ವಾಮಿ ಗಳು) ಶಿವಾನುಭವ ಮಂಟಪದ ಶಿಖರದಂತೆ ಪ್ರಕಾಶಿತರಾಗಿ, ಮಹಾತ್ಮ ಶ್ರೀ ಬಸವೇಶ್ವರರಂತೆ, ಮತ್ತೂ ಅವರಿಗಿಂತಲೂ ಒಂದು ಹೆಜ್ಜೆ ಮುಂದೆ ಹೋಗಿ

ನೈಷ್ಠಿಕ ಬ್ರಹ್ಮಚಾರಿಗಳಾಗಿ, ಅಸ್ಖಲಿತೇಂದ್ರಿಯ ಪ್ರಭಾವದಿಂದ ತಮಿಳುನಾಡಿನಲ್ಲೆಲ್ಲಾ ತಮ್ಮ ಶಿವಾನುಭವ ಮಂಟಪದ ಸಿದ್ಧಾಂತವನ್ನು ಅಖಂಡವಾಗಿ ಸಾರಿ ಶಾಶ್ವತವಾದ ಕೀರ್ತಿ ಕಾಯದಿಂದ ಪೂಜ್ಯರೆನಿಸಿ, ಪಾರ್ಥಿವ ದೇಹದೊಂದಿಗೆ ಶೀಗ್ರದಲ್ಲೇ ಹಿಂದಿರುಗುವುದಾಗಿ ಶಿಷ್ಯಕೋಟಿಗೆ ಆಶ್ವಾಸನವಿತ್ತು, ಜೀವಂತರಾಗಿ ಶಿವಯೋಗದ ಸಮಾಧಿಯಲ್ಲಿ ಇಳಿದು ಇಲ್ಲಿಗೆ ಸುಮಾರು 200 ವರ್ಷಗಳಾಗಿರುತ್ತೆ. ಶ್ರೀ ರಾಮಲಿಂಗಸ್ವಾಮಿಗಳು, ವಡಲೂರು, ಚಿದಂಬರ ಮೊದಲಾದ ನಾನಾ ಕ್ಷೇತ್ರಗಳಲ್ಲಿ ಶಿವಾನುಭವ ಮಂಟಪಗಳನ್ನೂ "ಚಿತ್ಸಭೆ" ಎಂಬ ಜ್ಞಾನ ಸಭೆಗಳನ್ನು ಸ್ಥಾಪಿಸಿ, ಅಲ್ಲಲ್ಲಿ ದಾಸೋಹ ಸೌಲಭ್ಯಗಳನ್ನೂ ಚಿರಕಾಲ ಜರುಗುವಂತೆ ಸುವ್ಯವಸ್ಥೆಗೊಳಿಸಿ, ಜೀವಕಾರುಣ್ಯ ಸದಾಚಾರ, ಗಣಾಚಾರ, ಶಿವಭಕ್ತಿ, ಶಿವಜ್ಞಾನಾರ್ಜನೆ, ಸದಾ ಉಕ್ಕುತ್ತಿರುವಂತೆ ಭಕ್ತಿಯ ವಿದ್ಯುತ್ಸರಣಿಗಳನ್ನು ಸೀಮಾತೀತವಾಗಿ ಪ್ರತಿಪಾದಿಸಿ, ಸರ್ವರಿಗೂ ಅನುಭವ ವೇದ್ಯವಾಗುವಂತಹ "ತಿರು ಅರುಟ್ಪಾ" ಎಂಬ ಕರ್ಮ, ಜ್ಞಾನ, ವೈರಾಗ್ಯ, ಭಕ್ತಿ ತತ್ವಗಳನ್ನು ಮನಮುಟ್ಟುವಂತೆ ಸ್ಫೂರ್ತಿದಾಯಕವಾಗಿ ಬೋಧಿಸುವ ಧರ್ಮ ಗ್ರಂಥವನ್ನು ರಚಿಸಿ, ತಮಿಳು ನಾಡಿನ ಶಿವಾನುಭವ ಮಂಟಪಕ್ಕೆ ಮಹೋನ್ನತವಾದ ದಿವ್ಯ ಜೀವಕಳೆಯನ್ನು ಕೊಟ್ಟಿರುತ್ತಾರೆ.

4. ಅನೇಕ ಮಹಾತ್ಮರು, ದೈವಾಂಶ ಸಂಭೂತರೂ, ಆಚಾರ್ಯರು, ಮಹಾಚಾರ್ಯರುಗಳು, ಕಾಲಕಾಲಕ್ಕೆ ಈಶಾನುಗ್ರಹದಂತೆ ಅಲ್ಲಲ್ಲಿ ತೋರಿ, ವಿಶ್ವದ ಜನಕೋಟಿಯ ಉದ್ಧಾರಕ್ಕೆ ಆತ್ಮ, ಪರಮಾತ್ಮರುಗಳ, ಸಂಬಂಧವಾದ ವಿಚಾರಧಾರೆಯನ್ನು ರಮಣೀಯವಾದ ಪವಿತ್ರ ಗಂಗಾ ಪ್ರವಾಹದಂತೆ ಪ್ರಕಾಶಗೊಳಿಸಿ, ಮನಸ್ಸಿಗೆ ತೃಪ್ತಿಯನ್ನೂ ಬುದ್ಧಿಗೆ ನಿಲುಕಡೆಯನ್ನೂ ಹಾಗೂ ಪ್ರಶಾಂತತೆಯನ್ನೂ ತಂದೊಡ್ಡುವ ಮಂಗಳಮಯ ಬೋಧಾಮೃತಗಳನ್ನು ನೀಡಿ....

॥ ಮಚ್ಚಿತ್ತಾ ಮದ್ಗತ ಪ್ರಾಣಾ । ಬೋಧಯಂತಃ ಪರಸ್ಪರಂ ।
ಕಥಯಂತಶ್ಚಮಾಂ ನಿತ್ಯಂ । ತುಶ್ಯಂತಿ ಚ ರಮಂತಿ ಚ ॥

(ಗೀ॥ ಅ॥ 10 ಶ್ಲೋಕ 9)

ಎಂಬ ಗೀತೋಕ್ತಿಯಂತೆ ಶಿವಾನುಭವ ಮಂಟಪದ ಪ್ರವರ್ತಕರು ಸದಾ ಶಿವ ಯೋಗಾನಂದಾನುಭವೈಕ್ಯತೆಗಳಿಂದ ವಿಜೃಂಭಿತರಾಗಿ ; ಅಜ್ಞಾನ ನಿದ್ರೆಯಲ್ಲಿ ಮುಳುಗಿರುವ ಮಾನವಕೋಟಿಗಳನ್ನು ಕರುಣೆಯಿಂದ ಉದ್ಧರಿಸ್ಸು, ತಟ್ಟುತ್ತಾ, ॥ ಉತ್ತಿಷ್ಠತಾ ಉತ್ತಿಷ್ಠತಾ । ಜಾಗ್ರತ ಜಾಗ್ರತ । ಪ್ರಾಪ್ಯ ವರಾನ್ನಿಬೋಧತಾ ॥ ಎಂಬ ಕಠವಲ್ಲಿಯ ಆದೇಶದಂತೆ, ಶಿವಾನುಭವ ಮಂಟಪದ ಜೀವಂತ ತತ್ವಗಳನ್ನು ಪ್ರಜ್ವಲಗೊಳಿಸುತ್ತಾ ಬಂದಿರುವುದು, ನಾವು ಮಾಡಿದ ಪೂರ್ವ ಪುಣ್ಯದ ಮಹಾಫಲವೆಂದೇ ತಿಳಿದುಬರುತ್ತೆ. ವಿಶ್ವದ ಅನಂತ ಭಕ್ತ ಕೋಟಿಗಳು ಮೇಲ್ಕಂಡ ಮಹಾ ವಿಭೂತಿ ಪುರುಷರುಗಳಿಗೆ ಚಿರಋಣಿಗಳೆನಿಸಿರುವರು.

5. ಇದರಿಂದ ತಿಳಿದುಬರುವುದೇನೆಂದರೆ, ಅನಾದಿ ಸಂಸಿದ್ಧವಾದ ಆಸ್ತಿಕ ಪ್ರಪಂಚದಲ್ಲಿ ಶಿವಾನುಭವ ಮಂಟಪದ ಪಾತ್ರ ಅನೂಚಾನವಾಗಿ ಅಲ್ಲಲ್ಲಿ ಅನಾದಿ ಕಾಲದಿಂದಲೂ ಪ್ರಕಾಶಿತವಾಗಿ, ಅದರಲ್ಲಿ ಸ್ತ್ರೀಪುರುಷರಾದಿಯಾಗಿ ಭಾಗವಹಿಸಿಕೊಂಡು, ಕಾಲ, ದೇಶ, ವರ್ತಮಾನಗಳಿಗನುಗುಣವಾಗಿ ಕರ್ಮ, ಜ್ಞಾನ, ಭಕ್ತಿ, ವೈರಾಗ್ಯಗಳಿಂದಲೂ, ಅರಿವು, ಆಚಾರ, ವಿಚಾರ, ಅನುಭವಗಳಿಂದ, ಸನಾತನವಾದ ಪಾರಮಾರ್ಥ ಧರ್ಮವನ್ನು ಅವಲಂಭಿಸಿ, ಲೋಕ ಕಲ್ಯಾಣಾರ್ಥ ಅದನ್ನು ಉಳಿಸಿ, ಬೆಳಸಿಕೊಂಡು ಬಂದಿರುವರು. ದೇವಲೋಕಗಳಲ್ಲಿನ ಶ್ರೀ ಪಾರ್ವತಿ, ಲಕ್ಷ್ಮಿ, ಸರಸ್ವತಿ, ಶಚೀದೇವಿಯರೇ ಮೊದಲು ಮಾಡಿ, ಭೂಲೋಕದ ಋಷಿಪತ್ನಿಯರುಗಳವರವಿಗೂ, ಅನಾದಿ ಕಾಲದಿಂದಲೂ, ಅರ್ಧಾಂಗಿಯರೆನಿಸಿದ (Better half) ನಾರೀಮಣಿಯರುಗಳಿಗೆ, ಲೌಕಿಕ, ಪಾರಮಾರ್ಥಿಕ ದಿಶೆಗಳಲ್ಲಿ ಪುರುಷರೊಂದಿಗೆ ಸಮಾನತೆಯನ್ನು ಕೊಟ್ಟು, ಪುರಸ್ಕರಿಸಿ, ಸನ್ಮಾನಿಸುತ್ತಾ ಬಂದಿರುವ ಮಹದಂಶ ನಿರ್ವಿವಾದವೆನಿಸಿರುವುದು. ॥ ಯತ್ರ ನಾರ್ಯಸ್ತು ಪೂಜ್ಯಂತೇ । ತತ್ರ ರಮಂತೇ ಸರ್ವದೇವತಾಃ ॥ ಎಂಬ ಶಾಸ್ತ್ರೋಕ್ತಿ ಸರ್ವಶೃತವೇ ಇರುತ್ತೆ.

6. ಮಹಾತ್ಮಾ ಶ್ರೀ ಬಸವಣ್ಣನವರ ಕಾಲದಲ್ಲಿ ಸ್ತ್ರೀಯರುಗಳಿಗೆ ಶಿವಾನುಭವ ಮಂಟಪವೇ ಮೊದಲಾಗಿ ಎಲ್ಲಾ ಧಾರ್ಮಿಕ, ಸಾಮಾಜಿಕ ರಂಗ

ಗಳಲ್ಲಿ ಹೆಚ್ಚಿನ ನೆರವು ಕೊಟ್ಟು, ಪುರಸ್ಕರಿಸಿದುದು, ಈ ದಿಶೆಯಲ್ಲಿ ಮಹತ್ತರವಾದ ಸುಧಾರಣೆಯೆನಿಸಿ, ಶ್ರೀ ಬಸವಾದಿ ಶಿವಶರಣ-ಶರಣೆಯರ ಧಾರ್ಮಿಕ ಸಾಧನೆ ಹಾಗೂ ಪ್ರತಿಪಾದನೆ, ಅಖಂಡ ಕರ್ಣಾಟಕದಾದ್ಯಂತ ಹುರುಪಿನಿಂದ ಪ್ರಚಲಿತ ಗೊಂಡು ಪ್ರಕಾಶಿತವಾಗಿರುವುದು.

7. ಮೂರನೆಯದಾಗಿ ಶಿವಾನುಭವ ಮಂಟಪವೆಂದರೆ, ಪವಿತ್ರ ವಾದೀ ಮಾನವ ದೇಹವೆನಿಸಿರುವುದು, ಸ್ವರ್ಗದ ಸಮಸ್ತ ದೇವತೆಗಳು ನಿತ್ಯ ಬಯಸುವ ಮಾನವ ದೇಹವು ಲಭ್ಯವಾಗುವುದು ಅತಿ ದುರ್ಲಭವೆನಿಸಿರುವುದು. ಮೋಕ್ಷವನ್ನು ಹೊಂದುವುದಕ್ಕೆ ಭೂಲೋಕವು ಕರ್ತಾರನ ಕಮ್ಮಟವೆನಿಸಿ ಕರ್ಮಾಗಾರವೆನಿಸಿರುವುದರೊಂದಿಗೆ ಧರ್ಮ ಕ್ಷೇತ್ರವೆನಿಸಿರುವುದು. ಇದರಲ್ಲಿ ಮಾನವದೇಹವು ಮೋಕ್ಷವೆಂಬ ಪರಮ ಶಿವಸಾಯುಜ್ಯವನ್ನು ಪ್ರವೇಶಿಸಲು ಕೈಲಾಸ ಮಹಾದ್ವಾರವೆನಿಸಿರುವುದರಿಂದ, ಸ್ವರ್ಗಾದಿ ಯಾವ ದೇಹ ದ್ವಾರ ಗಳಿಂದಲೂ ಶಿವ ಸಾಯುಜ್ಯವನ್ನು ಹೊಂದಲು ಶಕ್ಯವಿಲ್ಲ. ಕಾರಣ, ಅವೆಲ್ಲಾ ಭೋಗಸ್ಥಾನಗಳು, ಅಷ್ಟೆ. ॥ ಕ್ಷೀಣೇ ಪುಣ್ಯೇ । ಮರ್ತ್ಯ ಲೋಕಂ ವಿಶಂತಿ ॥ ಎಂಬಂತೆ ಪುಣ್ಯವನ್ನು ಪೂರ್ಣ ಅನುಭವಿಸಿ ಮುಗಿಸಿದ ಮರುಕ್ಷಣದಲ್ಲೇ ನಿರ್ದಾಕ್ಷಿಣ್ಯವಾಗಿ, ಯಂಥವರಾಗಿದ್ದರೂ ಸರಿಯೇ, ಅಲ್ಲಿಂದ ಅರ್ಧಚಂದ್ರ ಪ್ರಯೋಗಕ್ಕೆ ವೊಳಗಾಗುವರು.

8. ಮಾನವನ ಪವಿತ್ರವಾದ ಹೃನ್ಮಂದಿರ ಶಿವನಿಗೆ ಅತ್ಯಂತ ಪ್ರೀತಿಯ ಆವಾಸಸ್ಥಾನವಾಗಿರುವುದರಿಂದ, ಭಕ್ತನ ಈ ದೇಹವು ನಿಜಕ್ಕೂ ಶಿವಾನುಭವ ಮಂಟಪವೆನಿಸಿರುವುದು. ॥ ತತ್ಸೃಷ್ಟ್ವಾ ತ ದೇವಾನು ಪ್ರಾವಿಶತ್ ॥ ನಿತ್ಯ ಚೈತನ್ಯ, ಪ್ರಕಾಶನೆನಿಸಿದ ನಿರಂಜನ, ನಿರಾಮಯನಾದ ಪರಶಿವನು । ಶಿವ ಶರಣ, ಶರಣೆಯರ ಹೃದಯಾಂಭೋಜವನ್ನು ಸೃಷ್ಟಿಸಿ, ಅದರೊಳಗೆ ಪ್ರವೇಶಿಸಿ ದನು.

॥ ಹೃತ್ಪದ್ಮಮಧ್ಯೇ ಪುರುಷಃ ಪ್ರಮಾಣಂ । ನಿತ್ಯಾತ್ಮಕಂ ಸರ್ವಜಗತ್ಸ್ವರೂಪಂ। ಧ್ಯಾಯಾಮಿ ನಿತ್ಯಂ ಪರಮಾತ್ಮ ಸಂಜ್ಞಂ । ಚಿದ್ರೂಪ ಮೇಕಂ ವಚಸಾಮಗ ಮ್ಯಂ ॥ ಅಂದರೆ........

॥ ಅಂಗುಷ್ಠ ಮಾತ್ರಃ ಪುರುಷೋಂತರಾತ್ಮಾ । ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ ॥
(ಕಠೋಪನಿಷತ್)

ಎಂಬಂತೆ, ಸರ್ವಾಂತರ್ಯಾಮಿಯಾದ ಪರಮಾತ್ಮನು ಸಾಧು ಸತ್ಪುರುಷರ, ಶಿವಶರಣ, ಶರಣೆಯರ ॥ ಸ್ವಹೃದಯ ಪ್ರಕಾಶಃ ॥ ಪವಿತ್ರವಾದ ಹೃದಯ ಕಮಲದಲ್ಲಿ ಜ್ಯೋತಿರ್ಮಯ ಲಿಂಗಸ್ವರೂಪಿಯಾಗಿ ನೆಲಸಿ ರಾರಾಜಿಸುತ್ತಲಿರುವನೆಂದು ಶಿವಾಗಮಾಮ್ನಾಯಾದಿಗಳು ಘಂಟಾಘೋಷದಿಂದ ಸಾರುತ್ತಿರುವುವು.

9. ಶ್ರೀಮದದ್ವೈತ ಮತ ಸ್ಥಾಪನಾಚಾರ್ಯರಾದ ಜ॥ ಶ್ರೀ ಶಂಕರಾಚಾರ್ಯಮಹೋದಯರು, ದೇಹಾದಿ ಪ್ರಪಂಚವನ್ನು ಮಿಥ್ಯೆಯೆಂದು ಸಾರಿದರೂ, ॥ದೇಹೋ ದೇವಾಲಯ ಪ್ರೋಕ್ತಾಃ । ಜೀವೋ ದೇವಃ ಸನಾತನಃ॥ ಎಂದು ಸ್ಪಷ್ಟೋಕ್ತಿಯಿಂದ ಜಗತ್ತಿಗೆ ಬೋಧಿಸಿರುವರು. ಮಾನವ ದೇಹದ ಅಂತರಂಗದಲ್ಲಿ ಪ್ರಜ್ವಲಿಸುವ ॥ ಅಂಗುಷ್ಟ ಮಾತ್ರಃ ಪುರುಷೋಂತರಾತ್ಮಾ ॥ ಎಂಬ ಕಠೋಪನಿಷತ್ತಿನ ಮಹದಂಶದಂತೆ, ಹೃದಯಾಂಭೋಜದಲ್ಲಿ ನೆಲಸಿರುವ ಪರತತ್ವವನ್ನು ಶಿವಶರಣನು, ಜೀವಿತಕಾಲದಲ್ಲೇ ಅರಿತು, ಆ, ಅರಿವಿನ ಪರಂಜ್ಯೋತಿಯಲ್ಲಿ ವಿಲೀನನಾಗಲು; ಆಹಹ ! ಮಾನವ ದೇಹವು ನಿಜಕ್ಕೂ ಚೈತನ್ಯಮಯವಾದ ಶಿವಾನುಭವ ಮಂಟಪವಲ್ಲವೆ ?.

ಈ ಮಹದಂಶವನ್ನು ದೃಢಪಡಿಸುವಂತೆ ಗೀತಾಚಾರ್ಯನು ॥ ಇದಂ ಶರೀರಂ ಕೌಂತೇಯ । ಕ್ಷೇತ್ರ ಮಿತ್ಯಭಿಧೀಯತೇ ॥ ಎಂದುಸುರಿರುವುದರಿಂದ, ಮನುಷ್ಯ ದೇಹವು ಶಿವಾನುಭವ ಕ್ಷೇತ್ರ ಅಥವಾ ಮಂಟಪವೆಂಬುದು ನಿರ್ವಿವಾದವೇ ಆಯಿತಷ್ಟೆ.

ಶ್ರೀಮಜ್ಜಗದ್ಗುರು ಭಗವತ್ಪಾದ ರೇಣುಕಾಚಾರ್ಯರು ಈ ಅಂಶವನ್ನು ರೇಣುಕ ಗೀತೆಯಲ್ಲಿ ಪ್ರತಿಪಾದಿಸುತ್ತಾ....

॥ ಮೂಲಾಧಾರೇಚ ಹೃದಯೇ । ಭ್ರೂಮಧ್ಯೇ ಸರ್ವದೇಹಿನಾಂ ।
ಜ್ಯೋತಿರ್ಲಿಂಗಂ ಸದಾಭಾತಿ । ಯದ್ಬ್ರಹ್ಮೇತ್ಯಾಹು ರಾಗಮಾಃ ॥
(ಸಿ.ಶಿ.ಪ. 6. ಶ್ಲೋ. 34)

ಅಂದರೆ, ಶಿವಾನುಭವ ಮಂಟಪವೆನಿಸಿದ ಮನುಷ್ಯ ದೇಹದಲ್ಲಿ, ಮೂಲಾಧಾರ ಚಕ್ರದಲ್ಲೂ, ಭ್ರೂಮಧ್ಯದ ಆಜ್ಞಾ ಚಕ್ರದಲ್ಲೂ, ಇವೆರಡಕ್ಕೂ ಆಧಾರವೆನಿಸಿ ಜಾಗ್ರತ ಸ್ಥಾನವೆನಿಸಿದ ಹೃದಯಾಂಭೋಜದಲ್ಲೂ, ಪರಶಿವನು ಸಾಕ್ಷಾತ್ ಜ್ಯೋತಿರ್ಮಯ ಸ್ವರೂಪಿಯಾಗಿ ಸದಾ ಪ್ರಜ್ವಲಿಸುತ್ತಲಿರುವನೆಂದು ಕುಂಭ ಜನಿಗೆ ಬೋಧಿಸಿರುವರು. ಇದಕ್ಕನುಗುಣವಾಗಿ ಮಹಾನುಭಾವನಾದ ಶ್ರೀ ಬಸವಣ್ಣ ॥ ದೇಹವೇ ದೇಗುಲ ॥ ವೆಂದು ನುಡಿದಿರುವುದರಿಂದ, ಮನುಷ್ಯ ದೇಹವು ನಿಜಕ್ಕೂ ಶಿವಾನುಭವ ಮಂಟಪವೆಂದು ದೃಢವಾಯಿತು. ಲಿಂಗಾಂಗಿ ಯಾದ ಪ್ರತಿಯೊಬ್ಬ ಶರಣ, ಶರಣೆಯರ ದೇಹಂಗಳೇ ಶಿವಾನುಭವ ಮಂಟಪ ವೆನಿಸಿರುವುವು. ಇದು ಸತ್ಯ.

10. ಕಲ್ಯಾಣದ ಶಿವಾನುಭವ ಮಂಟಪವನ್ನು, ಕಲ್ಲು, ಮಣ್ಣು, ಗಾರೆ, ಸುಣ್ಣ, ಸಿಮೆಂಟುಗಳಿಂದ ಕಟ್ಟಲಾಗಿರುತ್ತೆ. ಬ್ರಹ್ಮಾಂಡವೆನಿಸಿದ ಶಿವಾನುಭವ ಮಂಟಪವನ್ನು ಪೃಥ್ವಿ, ಅಪ್, ತೇಜಸ್, ವಾಯು, ಆಕಾಶ ಗಳೆಂಬ ಪಂಚ ಮಹಾಭೂತಗಳಿಂದ ಸೃಜಿಸಿರಲು, ಮನುಷ್ಯದೇಹವೆಂಬ ಶಿವಾನುಭವ ಮಂಟಪವನ್ನು, ಅಸ್ಥಿಪಂಜರಗಳಿಂದಲೂ, ನರನಾಡಿಗಳಿಂದಲೂ, ಮಾಂಸ, ರುಧಿರ, (ರಕ್ತ) ಮಜ್ಜೆಗಳಿಂದಲೂ ಹಾಗೂ ಸಪ್ತ ಧಾತುಗಳಿಂದ ವಿಚಿತ್ರವಾಗಿ, ॥ ತನುವಿನೊಳು ತನುವುಂಟಾದ ॥ ಬಗೆ, ದೈವಸೃಷ್ಟಿಯ ಮಹಾಶಕ್ತಿಯೆನಿಸಿರಲು, ಇದರೊಳಗೆ, ಭಕ್ತಿ ವಿಶೇಷದಿಂದ ಸರ್ವಾಂತರ್ಯಾ ಮಿಯಾದ ಆತ್ಮನನ್ನು ಕಂಡು, ಲಿಂಗಾಂಗ ಸಾಮರಸ್ಯವನ್ನು ಪಡೆಯುವುದೇ ಮೇಲ್ಕಂಡ ಮೂರು ಶಿವಾನುಭವ ಮಂಟಪಗಳ ಸಾರಸರ್ವಸ್ವ. ಈ ಮೂರು ವಿಧವಾದ ಶಿವಾನುಭವ ಮಂಟಪಗಳು ಒಂದರಲ್ಲೊಂದು ಪೂರಕವಾಗಿದ್ದು, ॥ ಭ್ರಾಮಯನ್ ಸರ್ವಭೂತಾನಿ। ಯಂತ್ರಾರೂಢಾನಿ ಮಾಯಯಾ ॥ ಎಂಬಂತೆ ಸರ್ವಜೀವಕೋಟಿಗಳನ್ನು ಸದಾ ಮೋಹ ಚಕ್ರಕ್ಕೆ ಸಿಕ್ಕಿಸಿ ಗರಗನೆ ತಿರುಗು ವಂತೆ ಮಾಡಿ ಕಾಲಚಕ್ರವು ಉರುಳುತ್ತಿರಲು, ಇದರಿಂದ ಎಚ್ಚೆತ್ತ ಯಾವಾತನು ಶಿವಾನುಭವಮಂಟಪದ ಸಂಘ, ನಿತ್ಯ ಸಹವಾಸದಿಂದ ಆತ್ಮಜ್ಞಾನಿಯಾಗು ವನೋ, ಆ ಮಹಾಪುರುಷನು ॥ ನಚ ಪುನರಾವರ್ತತೇ। ನಚ ಪುನರಾವರ್ತತೇ॥ ಪುನರಪಿ ಸಂಸಾರ ಚಕ್ರಕ್ಕೆ ಸಿಗದೆ, ಶಿವಸಾಯುಜ್ಯದಲ್ಲಿ ॥ ಶಿಖಿ ಕರ್ಪೂರವತ್ ॥

ವಿಲೀನನಾಗಿ ವಿರಾಜಿಸುವನು. ಶಿವಾನುಭವ ಮಂಟಪದ ತಿರುಳು ಇದೆನಿಸಿದೆ. ಇಂತಪ್ಪ ನಿತ್ಯಸುಖಪ್ರಾಪ್ತಿಗೆ ಗುರು ಕರುಣೆಯೇ ಮೂಲ. ಗುರುಭಕ್ತಿ ಇಲ್ಲ ವಾದರೆ, ಎಂತಹ ಪ್ರಾಜ್ಞನಾದರೂ ॥ ಪುನರಪಿ ಜನನಂ । ಪುನರಪಿ ಮರಣಂ । ಪುನರಪಿ ಜನನೀ ಜಠರೇ ಶಯನಂ॥ ಎಂಬಂತೆ, ಹುಟ್ಟು ಸಾವುಗಳ ಶೃಂಖಲೆಯಲ್ಲಿ ಸಿಕ್ಕಿ ಗತಿಕಾಣದೆ, ಕೊನೆಯಿಲ್ಲದ ದುಃಖಾಬ್ಧಿಯಲ್ಲಿ ಮುಳುಗುತ್ತಲೂ ತೇಲುತ್ತ ಲೂ ನುಚ್ಚುನೂರಾಗಿ ನೊಂದು ಬಳಲಬೇಕು.

11. ಇದರಿಂದ ತಪ್ಪಿ ಬದುಕಬೇಕಾದರೆ ಗುರುಭಕ್ತಿಯೊಂದೇ ವಿಮೋ ಚನೆಗೆ ಮಾರ್ಗವೆನಿಸಿರುತ್ತೆ.

॥ ಗುರು ಭಕ್ತಿರ್ವಿಹೀನಸ್ಯ । ಶಿವ ಭಕ್ತಿ ರ್ನಜಾಯತೇ ॥

ಎಂಬಂತೆ, ಅವಿಚ್ಛಿನ್ನವಾಗಿ ಪ್ರತಿಪಾದಿಸುತ್ತಿರುವ ಶಿವಾಗಮಗಳು ಒಂದು ಹೆಜ್ಜೆ ಮುಂದೆ ಹೋಗಿ ॥ ನ ಗುರೋರಧಿಕಂ । ನ ಗುರೋರಧಿಕಂ ॥ ಎಂದು ಒಂಭತ್ತು ಸಾರಿ ಉಚ್ಚ ಧ್ವನಿಯಿಂದ, ಅಜ್ಞಾನ ನಿದ್ರೆಯಲ್ಲಿ ಗಾಢವಾಗಿ ಎಚ್ಚರ ತಪ್ಪಿರುವವರನ್ನು, ತಟ್ಟ ಎಬ್ಬರಿಸುವಂತೆ ಸದಾ ಘೋಷಿಸುತ್ತಲಿರುವುವು.

ಈ ಮಹದಂಶವನ್ನು ಮನಗಂಡ ಮಹಾನುಭಾವನಾದ ಹಾಗೂ ಕರ್ನಾ ಟಕದಲ್ಲಿ ಶಿವಾನುಭವ ಮಂಟಪದ ಪ್ರವರ್ತಕನೂ, ಶಿವಶರಣನೆನಿಸಿದ ಶ್ರೀ ಬಸವಣ್ಣ, ಗುರುದೇವನ ಮಹತ್ವವನ್ನು ಮುಕ್ತ ಕಂಠದಿಂದ ಸಾರುತ್ತಾ....

॥ ಶಿವ ಪಥವನರಿಯಲು । ಗುರು ಪಥವೇ ಮೊದಲು ॥

ಎಂಬ ಮಿಂಚಿನಂಥಾ ಪ್ರಕಾಶಮಾನವಾದ ಬೋಧೆಯನ್ನು ಜಗತ್ತಿನ ಜೀವ ಕೋಟಿಗಳಿಗೆ, ಹಸಿ ಮರದಲ್ಲಿ ಆಣಿ ಹೊಡೆದಂತೆ ಸ್ಪಷ್ಟಪಡಿಸಿ ಮಾರ್ಗದರ್ಶಕ ರಾಗಿರುವರು.

12. ದ್ವಿಶಂಭುವೆನಿಸಿದ ಶ್ರೀ ಬಸವಣ್ಣ, ಶಿವನ ಪ್ರತಿನಿಧಿ ಎನಿಸಿ ಬೆಳಗಿ ದಂತೆ ಅವನ ಅನುಯಾಯಿಗಳಾದ ನಾವು ಪ್ರತಿಯೊಬ್ಬೊಬ್ಬರೂ, ಬಸವಣ್ಣ ನವರಂತೆ ಕೀರ್ತಿಶೇಷರಾಗಿ ಕಾಯಕವ ಗೈದು ಲಿಂಗಾಂಗ ಸಮರಸವನ್ನು ಹೊಂದಲು ಅರ್ಹತೆಯುಳ್ಳವರಾಗಿ ಬಾಳಿ ಬೆಳಕನ್ನು ಕಾಣಬೇಕು. ಶಿವಶರಣ ಹಡಪದ ಅಪ್ಪಣ್ಣನವರು ಈ ಗುರಿಯನ್ನು ಸಾಧಿಸಿದವರಲ್ಲಿ

ಪ್ರಮುಖರು. ನಾವೂ ಅಂತಪ್ಪ ಗುರಿಯನ್ನು ಸಾಧಿಸಿದಾಗ ಶ್ರೀ ಬಸವಣ್ಣ ನಲಿವನು. ಶ್ರೀ ಬಸವಣ್ಣನನ್ನು ಸ್ಮರಿಸಿದಷ್ಟು ನಮಗೆ ಪುಣ್ಯವು ಹಸ್ತಗತ ವಾಗುವುದು ಸತ್ಯ. ಅದಕ್ಕಿಂತಲೂ ನಾವು ಒಂದು ಹೆಜ್ಜೆ ಮುಂದೆ ಹೋಗಿ ನಿಷ್ಣಾತರಾಗಿ, ಶ್ರೀ ಹಡಪದ ಅಪ್ಪಣ್ಣನವರಂತೆ ನಿಜಶ್ಶೂ ಸಾಕ್ಷಾತ್ ಶ್ರೀ ಬಸವೇಶ್ವರರ ಆತ್ಮೀಯ ಪ್ರತಿನಿಧಿಗಳಾಗಿ ಜಗತ್ತಿನಲ್ಲಿ ಬೆಳಗಿದರೆ ಆಗ ಬಸವಣ್ಣನು ನಮ್ಮನ್ನು ಅಪ್ಪೈಸಿಕೊಳ್ಳುವುದರೊಂದಿಗೆ, ಸದ್ಗುರು ಕರುಣೆ ಯಿಂದ ಶ್ರೀ ಕೂಡಲ ಸಂಗಮನ ದಿವ್ಯಾನುಗ್ರಹಕ್ಕೂ ಪಾತ್ರರನ್ನಾಗಿಸುವನು. ಇದು ಸತ್ಯ.

॥ ಗುರು ಚರಣಂ ಭವಹರಣಂ ।
ಸದ್ಗುರು ಚರಣಂ ಭವಹರಣಂ ॥
ಜೈ ! ಶ್ರೀ ಗುರು ಚರಣಂ ಭವ ಹರಣಂ ।
ಜಗದ್ಗುರು ಶ್ರೀ ರೇಣುಕ ಚರಣಂ ಭವಹರಣಂ ॥

ಶುಭಂ ಭದ್ರಂ ಮಂಗಳಂ

ಕಂಟೋನ್ಮೆಂಟ್
ಬೆಂಗಳೂರು-೫

ಟಿ. ಬಿ. ಬಸವರಾಜಯ್ಯ.
೧-೧೦-೬೮

---



ತರೀಕೆರೆ ಚಿಕ್ಕಾತೂರು ಪಟೇಲ್ ಬಸಪ್ಪನವರು ಮೊಮ್ಮಗನೊಂದಿಗೆ ಮಂಡಿಸಿರುವರು. ಇವರು ಗ್ರಂಥಕರ್ತನ ಪೂಜ್ಯ ತಂದೆ. ಜನಾನುರಾಗಿಗಳಾಗಿದ್ದು ದೀರ್ಘ ಕಾಲ ಬಡವರ ಸೇವೆಗೈದು, ಒಳ್ಳೆಯ ಹೆಸರನ್ನು ಗಳಿಸಿದ್ದರು. ಒಳ್ಳೇತನವೇ ಇವರು ಗಳಿಸಿದ ಇಹಪರಂಗಳಲ್ಲಿನ ಅಮೂಲ್ಯ ಆಸ್ತಿ. ಜಪ ತಪವೂ ಅದೇ ಆಗಿತ್ತು.

ಚಿಕ್ಕಾತೂರ್ ಪಟೇಲ್ ಲಿಂ॥ ಬಸಪ್ಪನವರು ತಮ್ಮ ನಿತ್ಯ ಇಷ್ಟ ಲಿಂಗಾರಾಧನೆಯೊಂದಿಗೆ ಶ್ರೀ ಚಂದ್ರ ಮೌಳೀಶ್ವರ ಲಿಂಗದ ಅನನ್ಯ ಉಪಾಸಕರೂ ಆಗಿದ್ದರು. ಸುಮಾರು ತಮ್ಮ ಎಂಭತ್ತನೇ ವಯಸ್ಸಿನ ಅಂತರದ ಪ್ರಾಣೋತ್ಕ್ರಮಣ ಕಾಲದಲ್ಲಿ, ತಮ್ಮ ಮಗನಿಂದ (ಗ್ರಂಥಕರ್ತನು) ಸುಕ್ಷೇತ್ರ ಶ್ರೀ ರಾಮೇಶ್ವರದಿಂದ ತಂದಿದ್ದ, ಶ್ರೀ ರಾಮೇಶ್ವರ ಲಿಂಗದ ಸರ್ವ ತೀರ್ಥ, ಹಾಗೂ ಶ್ರೀ ಕಾಶಿಯಿಂದ ತಂದಿದ್ದ ಶ್ರೀ ಕಾಶಿವಿಶ್ವೇಶ್ವರನ ಪುಣ್ಯ ಗಂಗೋದಕಗಳನ್ನು ಗುಟುಕಿಸುತ್ತಾ, ಶಂಭುವಿನ ಸ್ಮರಣೆಯೊಂದಿಗೆ 1938ರಲ್ಲಿ ಪಾರ್ಥಿವ ಶರೀರವನ್ನು ನೀಗಿ ಶಿವನಲ್ಲಿ ನಿಜೈಕ್ಯವನ್ನು ಹೊಂದಿದರು.

॥ ಪಿತೃ ದೇವೋ ಭವ ॥

॥ ಶ್ರೀ ಕಾಶಿ ವಿಶ್ವನಾಥ ಗಂಗಾ । ಸೇತು ರಾಮನಾಥ ಲಿಂಗಾ ॥

॥ ಶ್ರೀ ಕಾಶಿ ವಿಶ್ವನಾಥ ಗಂಗಾ। ಸೇತು ಶ್ರೀ ರಾಮನಾಥಲಿಂಗಾ ॥

—o—

॥ ಶ್ರೀ ಪಂಚಾಚಾರ್ಯಾಃ ಪ್ರಸೀದಂತು ॥



## ಟಿ. ಬಿ. ಬಸವರಾಜಯ್ಯ

ಗ್ರಂಥಕರ್ತರು.

1. ॥ ದಿವ್ಯ ದ್ವಿಶಂಭುವೆನಿಸಿದ ಭೋ ಬಸವಾ ।
ಸರ್ವ ಧರ್ಮಗಳಿಗಾಗರವೆನಿಸಿದ ಭೋ ಬಸವಾ ॥
ದಯವೇ ಮೂರ್ತಿವತ್ತಾಗಿ ಎದ್ದು ಬೆಳಗಿದ ಭೋ ಬಸವಾ ।
ಅಹಿಂಸೆ, ಸತ್ಯ, ಕರುಣೆ, ತ್ಯಾಗಂಗಳೇ ರೂಪಂ ಗೊಂಡ ಭೋ ಬಸವಾ। ಭೋ ಭೋ ಬಸವೇಶ್ವರ ಜಯ ಶ್ರೀ ಬಸವಾ ।
ಶ್ರೀ ಕೃಪಾನಿಧೇ ! ಭೋ ದಯಾನಿಧೇ ! ಶರಣು ॥

॥ ಶ್ರೀ ಮಜ್ಜಗದ್ಗುರು ಪಂಚಾಚಾರ್ಯರು ॥

ಶ್ರೀ ಕೂಡಲ ಸಂಗಮ ದೇವನಲ್ಲಿ—

ನಮ್ಮ ಮನಸ್ಸು ಭಕ್ತಿ ಭಾವದಿಂ ನಲಿದೊಲಿದು ಎಡಬಿಡದೆ ಚೆಂದದಿಂ ತನಿಸಿ, ಮುದದಿಂ ಕೂಡಿರುವಂತೆ ಅನುಗ್ರಹಿಸಿ, ರಕ್ಷಿಸು, ರಕ್ಷಿಸು ನಮ್ಮ ನನವರತ.

---

॥ ನ ಭೂತ ಸಂಘ ಸಂಸ್ಥಾನೋ । ದೇವಸ್ಯ ಪರಮಾತ್ಮನಃ ॥

ಪಂಚ ಶಿವಲಿಂಗೋದ್ಭವ ದಿವ್ಯ ದೇಹಧಾರಿಗಳೂ ಮತ್ತು
ನಿತ್ಯೋದಿತ ರೆನಿಸಿ, ಪಂಚಾಸ್ಯಾನನ ಪಂಕಜಾತ
ಸಂಭವರಾದ ಆದಿ ಶ್ರೀ ಪಂಚ ಮಹಾಚಾರ್ಯರುಗಳ

# ಸ ತ್ಯ ದ ರ್ಶ ನ.

ಪಾಲ್ಕುರಿಕೆ ಸೋಮನಾಥಾರಾಧ್ಯನು ಶಿವನನ್ನು ಮುಕ್ತ ಕಂಠದಿಂದ ಸ್ತುತಿಸಿರುವಂತೆ—

॥ಇಡಬೇಕೀಶ್ವರನಲ್ಲಿ ಭಕ್ತಿ ರಸಮಂ॥ ಶಿವನನ್ನು ಸತತ ಅನನ್ಯ ಭಕ್ತಿ ಭಾವನೆಯಿಂದ ಸ್ಮರಿಸಿ ಧನ್ಯರಾಗಬೇಕು. ಏಕೆಂದರೆ ॥ಶಿವನೇ ದೇವರೊಳು ತ್ತಮಂ॥ ಎಂದು ಸ್ತುತಿಸಿ, ಶಿವನ ಸರ್ವೋತ್ತಮತ್ವವನ್ನು ಎತ್ತಿ ಹಿಡಿದಿರುವನು. ಜಗದ್ಗುರು ಶ್ರೀ ಶಂಕರಾಚರ್ಯರೂ ಇದೇ ಅಂಶವನ್ನು ಪ್ರತಿಪಾದಿಸುತ್ತಾ—

। ಹರಿ ಬ್ರಹ್ಮಾದೀನಾಮಪಿ । ನಿಕಟ ಭಾಜಾಮಸುಲಭಂ । ಚಿರಂಯಾಚೇ ಶಂಭೋ। ಶಿವತವ ಪದಾಂಭೋಜ ಭಜನಂ॥ಎಂದು ಹೃತ್ಪೂರ್ವಕ ಸ್ತುತಿಸಿ ಶಿವನಲ್ಲಿ ಶರಣಾಗತರಾಗಿರುವರು. ಕಲಾತ್ಮಕನಾದ ಶಿವನನ್ನು ಹೃದಯಂಗಮ ವಾಗಿ ಸ್ತುತಿಸುತ್ತಾ :—

॥ ಕಲಾಭ್ಯಾಂ ಚೂಡಾಲಂಕೃತ ಶಶಿಕಲಾಭ್ಯಾಂ ।
ನಿಜತಪಃ ಫಲಾಭ್ಯಾಂ, ಭಕ್ತೇಷು ಪ್ರಕಟಿತ ।
ಫಲಾಭ್ಯಾಂ ಭವತುಮೇ ಶಿವಾಭ್ಯಾಮಸ್ತೋಕ
ತ್ರಿಭುವನ ಶಿವಾಭ್ಯಾಂ । ಹೃದಿಪುನರ್ಭವಾಭ್ಯಾಂ
ಮಾನಂದಸ್ಫುರದನುಭ್ಯಾಂ ನತಿರಿಯಂ ಎಂದು ॥

॥ ಶ್ರೀಮಜ್ಜಗದ್ಗುರು ಪಂಚಾಚಾರ್ಯರು ॥

ಶ್ರೀಃ ಶಂಕರರು ಶಿವನನ್ನೇ ಗತಿಯಾಗಿ ಆಶ್ರಯಿಸಿ ಜಗತ್ತಿಗೆ ಮಾರ್ಗ ದರ್ಶಕರೆನಿಸಿರುವರು. **ಶಿವ.**

---

2. ಭ್ರಮನ್ವನಾಂತೇ ನವ ಮಂಜರೀಷು ।
ನಷಟ್ಪದೋ ಗಂಧ ಫಲೀಮಜಿಘ್ರತ್ ॥
ಸಾ ಕಿಂ ನರಮ್ಯಾ ಸ ಚ ಕಿಂ ನ ರಂತಾ ।
ಬಲೀಯಸೀ ಕೇವಲ ಮೀಶ್ವರೇಚ್ಛಾ ॥

ಮನೋಹರವಾದ ವನದೇವತೆಯ ಪ್ರಸನ್ನತೆಯಿಂದಲೂ, ಹಾಗೂ ರಮಣೀಯಾಂಬುವಿನಿಂದ ಆವೃತವಾದ, ಬಗೆ ಬಗೆಯ ಪುಷ್ಪಗಳ ಶ್ರೇಣಿಯಿಂ ರಂಜಿಸುವ, ಉದ್ಯಾನವನವನ್ನು ಉಷಃಕಾಲದಲ್ಲಿ ಎಚ್ಚರಗೊಂಡ ಭ್ರಮರವು (ದುಂಬಿಯೊಂದು) ಉಲ್ಲಾಸದಿಂ ಝೇಂಕರಿಸುತ್ತ ಪ್ರವೇಶಿಸಿತು. ಎತ್ತೆತ್ತ ನೋಡಿದಡತ್ತತ್ತ ತಂಬೆಲರಿಂ ಪರಿಮಳದ ಕಂಪು, ಕಣ್ಮನಗಳನ್ನು ಸೂರೆಗೊಳ್ಳುವ ನೋಟವು ಆಕರ್ಷಿತವಾಗಿರುವುದನ್ನು ಕಂಡ ದುಂಬಿ, ನಂಬಿ ಝೇಂಕರಿಸುತ್ತ ಹ್ರೀಂಕಾರದಿಂ ಧ್ವನಿಗೈಯುತ್ತ, ಆನಂದಾತಿರೇಖೆಯಿಂದ ವನದ ಸುತ್ತಲೂ ಹಾರಾಡುತ್ತ ಬಿಡುವಿಲ್ಲದೆ ಸುಮ್ಮನೆ ಸುತ್ತುತ್ತಲಿತ್ತು. ಆ ಸಂದರ್ಭ, ನಾನಾ ಪುಷ್ಪ ರಾಜಿಗಳು ಆಗ ತಾನೆ ಮೆಲ್ಲಮೆಲ್ಲಗೆ ಚೆಂದದಿಂ ಅರಳುತ್ತ, ಅಂದವಾದ ಕುಸುಮ ಕುಂಕುಮ ಪರಾಗವನ್ನು ಬೀರುತ್ತ ವಿಕಸಿತಗೊಂಡು ಕೋಮಲ ತರವಾಗಿ ವಿರಾಜಿಸಿ, ಮಕರಂದವನ್ನು ಸೂಸಿ ಹೊರಹೊಮ್ಮಿಸಿ ಪ್ರಕಾಶಿತವಾಗಿ ಪ್ರೇಕ್ಷಕರ ಕಣ್ಮನಂಗಳನ್ನು ಸೆಳೆಯುತ್ತಿದ್ದರೂ, ಪುಷ್ಪಗಳ ರಸಾಸ್ವಾದನೆಯನ್ನು ಗ್ರಹಿಸಿ ಅನುಭವಿಸಿ, ಮಕರಂದದೌತಣ ದೂಟವನ್ನು ಸಂತೃಪ್ತಿಯಾಗಿ ಕಂಡುಂಡು ವಿಹರಿಸುವುದರಲ್ಲಿ ಸಹಜವಾದ ಜಾಣ್ಮೆ ದುಂಬಿಗಳಿಗೆ ಹುಟ್ಟುಗುಣ ವಾಗಿದ್ದರೂ; ಉದ್ಯಾನವನವನ್ನು ಹೊಕ್ಕಿದ ದುಂಬಿ ಸುಮ್ಮನೆ ಮೇಲಿಂದ ಮೇಲೆ, ಅರಳುತ್ತಿರುವ ಕುಸುಮಗಳ ಸುತ್ತಲೂ ಅತ್ತಿತ್ತ ಹಾರಾಡುತ್ತಲಿತ್ತೇ ವಿನಃ ಯಾವೊಂದು ಕುಸುಮದ ಸಂಪರ್ಕವನ್ನೂ ಹೊಂದಲೇಯಿಲ್ಲ. ದುಂಬಿಯ ವಿಚಿತ್ರ ವರ್ತನೆಯನ್ನು ಕಂಡ ಕವಿ ವಿಸ್ಮಯ ಭಾವದಿಂ, ಇದೇನಿದ ॥ ಸಾ ಕಿಂ ನರಮ್ಯಾ ॥

ಕುಸುಮದ ಸೌರಭವು ದುಂಬಿಗೆ ಪ್ರಿಯಕರವೆನಿಸಲಿಲ್ಲವೇನು ? ಅಥವಾ ॥ ಸಚ ಕಿಂ ನ ರಂತೌ ॥ ಮಧುರಾತಿಮಧುರವೆನಿಸಿದ ಮಕರಂದ ವನ್ನು ಕೋಮಲವಾಗಿ ಅರಳುತ್ತಲಿರುವ ಹೂವಿನ ಸಂಪರ್ಕದಿಂದ ದುಂಬಿಯು ಅನುಭವಿಸುವಂಥಾ ನೈಪುಣ್ಯ ಹೂವಿನಲ್ಲಿ ಇರಲಿಲ್ಲವೇನು ? ಎಂದು ಶಂಕೆಗೊಂಡು ವಿಚಾರ ಸಾಗರದಲ್ಲಿ ಸ್ವಲ್ಪ ಹೊತ್ತು ಮುಳುಗಿದ್ದ, ಪಂಡಿತನು ಕೊನೆಯಲ್ಲಿ ನಿಶ್ಚಯಿಸಿದ್ದೇನೆಂದರೆ—

॥ ಬಲೀ ಯಸೀ ಕೇವಲ ಮೀಶ್ವರೇಚ್ಛಾ ॥ ಈಶ್ವರೇಚ್ಛೆ ಯಿಲ್ಲದುದೇ, ದೌರ್ಭಾಗ್ಯವಾದೀ ದುಂಬಿಗೆ ಕುಸುಮ ಕುಂಕುಮ ಪರಾಗದ ಸಂಪರ್ಕವೂ, ಮಕರಂದದ ಪಾನವೂ ಯಿಲ್ಲದಂತಾಯಿತೆಂದು ನುಡಿಯುತ್ತಾ ಮುಂತೆರಳಿದನು.

ಈ ಸಂದರ್ಭದಲ್ಲಿ॥ ತೇನೈವ ತೃಣಮಪಿ ನ ಚಲತಿ ॥ ಎಂಬ ಶಾಸ್ತ್ರೋಕ್ತಿ ಸಂಸ್ಮರಣೀಯ.

3. ಲಿಂಗರೂಪಿ ಪರಶಿವನ ಚಿತ್ಕಳಾ ಸ್ವರೂಪಿಗಳೆನಿಸಿದ ಶಿವಾಗಮಾ ಮ್ನಾಯಾದಿಗಳಲ್ಲಿ ಸ್ತುತ್ಯರಾದ, ಶಿವನ ಸದ್ಯೋಜಾತಾದಿ ಪಂಚಮುಖಗಳಿಂದ ಹೊರಹೊಮ್ಮಿ ॥ ಇಚ್ಛಾಮಾತ್ರ ಪ್ರಭೋಸ್ಸೃಷ್ಟಿಃ ॥ ಎಂಬಂತೆ ಸ್ವೇಚ್ಛಾ ವಿಗ್ರಹರಾಜಿತರಾಗಿ, ಭುವಿಯಲ್ಲಿ ಪಂಚಜ್ಯೋತಿರ್ಲಿಂಗಗಳಿಂದ, ಪೂರ್ಣ ಚಂದ್ರೋದಯದಂತೆ ಆವಿರ್ಭವಿಸಿ, ಪಂಚತತ್ವಗಳೆನಿಸಿದ ಪಂಚಮಹಾ ಭೂತಗಳಿಗೆ ಅಧಿಪತಿಗಳೆನಿಸಿ, ಸ್ವಯಂ ಸಮಗ್ರ ನಿಗ್ರಹಾನುಗ್ರಹ ಶಕ್ತಿಯುತ ರಾಗಿ ವಿರಾಜಿತರಾಗಿರುವ, ಶ್ರೀಮಜ್ಜಗದ್ಗುರು ರೇಣುಕಾದಿ ಪಂಚಮಹಾ ಚಾರ್ಯರುಗಳ ಘನ ಮಹಿಮೆ ಶಿವೋಕ್ತ ಶಾಸ್ತ್ರಮುಖದಿಂದ ಪ್ರಕಟಿತವಾಗಿ ಪ್ರಮಾಣವೆನಿಸಿರುವುದು ಸರ್ವಲೋಕ ವಿಶ್ರುತವೇ ಇರುತ್ತೆ.

4. ಅಯೋನಿಜರೆನಿಸಿದ ಶಿವಲಿಂಗೋದ್ಭವ ದಿವ್ಯದೇಹಧಾರಿಗಳಾದ ಶ್ರೀಮಜ್ಜಗದ್ಗುರು ಶ್ರೀ ರೇಣುಕಾದಿ ಪಂಚಾಚಾರ್ಯರು, ತಾವು ಸ್ವಯಮೇ ಶಿವ ಪಂಚಾಕ್ಷರಿ ಮೂಲ ಮಹಾ ಮಂತ್ರದ ಬೀಜಾಕ್ಷರ ಸ್ವರೂಪಿಗಳೆನಿಸಿ, ಪೃಥ್ವಿ, ಅಪ್, ತೇಜಸ್, (ಜ್ಯೋತಿರ್ಲಿಂಗ) ವಾಯುಲಿಂಗ ಆಕಾಶಲಿಂಗಂಗಳ ಪ್ರತೀಕರೆನಿಸಿ ವಿರಾಜಿಸುತ್ತಾ, ಭುವನಾಂಡ ಕೋಟಿಗಳಿಗೆ ಜಗದಾಚಾರ್ಯ ಸಾರ್ವಭೌಮರೆಂದೂ; ॥ ಮದಾದಿ ಸರ್ವಲೋಕಾನಾಂ। ಜಗದ್ಗುರು ವರೋ ತ್ತಮಾಃ॥ ಎಂಬುದಾಗಿ ಶಿವನ ಸ್ವಮುಖ ಕಮಲದಿಂದಲೇ ಸ್ತುತ್ಯರೆನಿಸಿರುವುದು

ನಿರ್ವಿವಾದವೂ, ಶಿವಾಗಮಾದಿಗಳ ದೇವಮಾನ ಕಾಲಕ್ಕಿಂತಲೂ, ಮಹದಾಚಾರ್ಯರುಗಳು ಬಹು ಪೂರ್ವಜರೆಂದು ಕರತಲಾಮಲಕವಾಗಿ ಕಂಡುಬರುತ್ತೆ. ಈ ಪ್ರಮಾಣವನ್ನು ಬಲಪಡಿಸುವಂತೆ—

|| ಏತೇ ಯುಗ ಚತುಷ್ಕೇಷು । ಪಂಚಾರಾಧ್ಯಾ ಯಥಾ ವಿಧಿಃ ।
ಮಮಲಿಂಗ ಮುಖೋದ್ಭೂತಃ || ಲೋಕ ವಿಶೃತ ಕೀರ್ತ್ತಯಃ || (ಶಿ.ವಾ.)

ಎಂದು ಶಿವಾಗಮವು ಘಂಟಾಘೋಷವಾಗಿ ಸಾರುತ್ತಿರುವುದು.

5) || ತತ್ವಾನಾಂ ಮಹದಾದೀ ನಾಂ || ಎಂದು ಪ್ರಸಿದ್ಧಿಯಾದ ಶಿವಾದ್ವೈತ ಸಿದ್ಧಾಂತವನ್ನು, ಶ್ರೀಮಜ್ಜಗದ್ಗುರು ಶ್ರೀ ರೇಣುಕಾದಿ ಪಂಚಾಚಾರ್ಯರು, ಋಷಿಕುಲ ತಿಲಕರೆನಿಸಿದ, ಆದಿ ಶ್ರೀ ಅಗಸ್ತ್ಯ, ದಧೀಚಿ, ವ್ಯಾಸ, ಸಾನಂದ ಮತ್ತು ದೂರ್ವಾಸಾದಿ ಮಹರ್ಷಿ ವೃಂದಕ್ಕೆ ಬೋಧಿಸಿ, ತನ್ಮೂಲಕ ಜಗತ್ತಿಗೆ ಜಾಜ್ವಲ್ಯಮಾನವಾದ ಆತ್ಮ ಸುಧೆಯ ಕ್ರಿಯಾ, ಭಕ್ತಿ, ಜ್ಞಾನ ಭರಿತ ಭಂಡಾರವನ್ನೂ, ಅಷ್ಟಾವರಣ, ಪಂಚಾಚಾರ ಹಾಗೂ ಷಟ್ಸ್ಥಲಗಳೆಂಬ ತ್ರಿವಿಧ ಶಿವಯೋಗದ ರಾಜ ಮಾರ್ಗಾನುಷ್ಠಾನದಿಂದ ಶ್ರದ್ಧಾವಂತನಾದ ಭಕ್ತನು ನಿಜಾನಂದವನ್ನು ಹೊಂದುವನೆಂದು ಮನಮುಟ್ಟುವಂತೆ ಪ್ರಕಾಶ ಗೊಳಿಸಿರುವರು.

6) ಶ್ರೀ ಪರಶಿವನ ಸದ್ಯೋಜಾತ ಮುಖ ಸಂಭವರೂ, ಭುವಿಯಲ್ಲಿ ಶ್ರೀ ಕುಲ್ಯಪಾಕ ಕ್ಷೇತ್ರ ಪ್ರವಿರಾಜಮಾನ ಸೋಮೇಶ್ವರ ಮಹಾಲಿಂಗಾವಿರ್ಭೂತರೂ ಆದ ಭಗವತ್ಪಾದ ಶ್ರೀಮಜ್ಜಗದ್ಗುರು ಸಾರ್ವಭೌಮ ಶ್ರೀ ರೇವಣಸಿದ್ಧ ಮಹಾಶಿವಯೋಗಿಗಳು, ಅರ್ಥಾತ್ ಆದಿ ಶ್ರೀ ರೇಣುಕಾಚಾರ್ಯರು ; ಪ್ರಸ್ಥಾನತ್ರಯುಗಳಿಗೆ ಭಾಷ್ಯಕರ್ತ್ತರೂ, ಅದ್ವೈತ ಮತಸ್ಥಾಪನಾಚಾರ್ಯರೂ ಹಾಗೂ ಶ್ರೀ ಶೃಂಗೇರಿ ಶಾರದಾ ಪೀಠಾಧೀಶ್ವರರಾದ, ಉಜ್ವಲ ಜಗದ್ಗುರು ಮಹೋದಯ ಶ್ರೀ ಆದಿ ಶಂಕರಾಚಾರ್ಯರಿಗೆ, ಶ್ರೀರತ್ನ ಗರ್ಭಗಣಪತಿಯನ್ನೂ ಮತ್ತು ಶ್ರೀ ಚಂದ್ರಮೌಳೀಶ್ವರ ಲೀಗವನ್ನೂ ಅನುಗ್ರಹಿಸಿರುವ ಅಂಶ, ಭಾನು ಕೋಟಿ ಪ್ರಕಾಶಮಾನವಾಗಿ ಗುರುವಂಶ ಕಾವ್ಯ ಮೊದಲಾದ ಅನೇಕ ಪ್ರಾಚೀನ ಮಹದ್ಗ್ರಂಥಗಳಲ್ಲುಕ್ತವಾಗಿರುವುದು ಸಾಧುವೆನಿಸಿರುತ್ತೆ. ಅಂದ ಬಳಿಕ ಶ್ರೀಮಜ್ಜಗದ್ಗುರು ಶ್ರೀ ರೇಣುಕಾದಿ ಪಂಚಾಚಾರ್ಯರು ಆದಿ ಶ್ರೀ

ಶಂಕರಾಚಾರ್ಯರಿಂದಲೂ ಹಾಗೂ ಅನೇಕಾನೇಕ ಋಷಿ ಮಹರ್ಷಿಗಳಿಂದಲೂ ಹಾಗೂ, ಭಾಷ್ಯಕರ್ತೃಗಳಿಂದಲೂ, ಚಕ್ರವರ್ತಿಗಳೂ ಮತ್ತೂ ರಾಜ ಮಹಾ ರಾಜರುಗಳಿಂದಲೂ ಅಸಂಖ್ಯಾತರಾದ ಋಷಿಜನ, ಮುನಿಜನ, ದೇವಜನ, ಬ್ರಹ್ಮಜನ, ವಿರಕ್ತವೃಂದ, ಸಿದ್ಧ ಜನ, ಹಾಗೂ ಸುರಾಸುರ ನರರಾದಿ ಯಾಗಿ, ಅಖಿಲ ಭಕ್ತ ಜನರಿಂದ, ನಿರಂತರ ಅಖಂಡವಾಗಿ ಸ್ತುತ್ಯಕೆನಿಸಿರುವುದು ನಿಷ್ಠಾವಂತರಾದ ಎಲ್ಲಾ ಶಿವಶರಣ ಶಿವಶರಣೆಯರುಗಳಿಗೆ ಕ್ಷೀರಸಾಗರದ ಮಾಧುರ್ಯದಂತೆ ವೇದ್ಯವೇ ಇರುತ್ತೆ.

7) ॥ ಶೈವಾಗಮಾಂಭುಜ ಭಾಸ್ಕರರೆಂದು ॥ ಸ್ತುತ್ಯರಾದ ಮಹದಾಚಾರ್ಯರುಗಳಿಂದ ಜಗದಾದಿಯಲ್ಲೇ ಸ್ಥಾಪಿತವಾದ ವಿಶ್ವಧರ್ಮ ವೆನಿಸಿರುವ ಪರಮ ವೀರಶೈವ ಧರ್ಮವು, ಭೋಗಪ್ರದದೊಂದಿಗೆ, ಪುಣ್ಯಮಯ ಮೋಕ್ಷಪ್ರದ ವೆನಿಸಿರುವ ಮಹದಂಶವನ್ನು ಶಿವಾಗಮಗಳು ಮುಕ್ತಕಂಠದಿಂದ :—

॥ ನಹಿ ವೀರಶೈವ ಸದೃಶ ಮತಮಸ್ತಿ ಜಗತ್ರಯೇ ।
ಸರ್ವಭೋಗ ಪ್ರದಂ ಪುಣ್ಯಂ । ಶಿವ ಸಾಯುಜ್ಯದಾಯಕಂ ॥

ಎಂದು ಘಂಟಾಘೋಷವಾಗಿ ಸಾರುತ್ತಿರುವುವು. ಮಹದಾಚಾರ್ಯರ ಪಾದ ಕಮಲಗಳ ಮಹಿಮೆಯನ್ನು ವರ್ಣಿಸುತ್ತಾ ॥ ಇದು ಸಮಸ್ತ ಸುರೌಘವಂದಿತ ಪದಯುಗನ । ರೇಣುಕ ಗಣೇಶನ ॥ ಎಂದು, ಸುರಾಸುರ ನರರಾದಿಯಾಗಿ ಅಖಿಲರೂ ಅನನ್ಯ ಭಕ್ತಿ ಭಾವದಿಂದ ವಂದಿಸಿ, ಶರಣಾಗತರಾಗಿ ಮುಕ್ತರಾದ ದಿವ್ಯ ಪಾದ, ರೇಣುಕನ ಪಾದ ಎಂದು ರೇಣುಕ ವಿಜಯದಲ್ಲಿ ವಿಸ್ತಾರವಾಗಿ ಪ್ರತಿಪಾದಿತವಾದ ಅಂಶ ಪಂಡಿತ ಪ್ರಪಂಚಕ್ಕೆ ವೇದ್ಯವಿರುತ್ತೆ.

8) ಶಿವಶರಣರ ಸದುಹೃದಯ ಕಮಲಾಲಯದಲ್ಲಿ ಸದಾ ಪರಿ ಶೋಭಿಸಿ ಬೆಳಗುತ್ತರಲಿರುವ, ಶ್ರೀಮಜ್ಜಗದ್ಗುರುವರೇಣ್ಯರೆನಿಸಿದ ಶ್ರೀ ರೇಣು ಕಾದಿ ಪಂಚಾಚಾರ್ಯರುಗಳ ದಿವ್ಯ ಪಾದ ಕಮಲಗಳು, ಮಹಿಮಾ ಸಂಪನ್ನ ವಾದವುಗಳೆಂಬ ಬಗ್ಗೆ, ಸುಮಾರು ಒಂದು ಸಾವಿರ ವರ್ಷಗಳ ಹಿಂದಿನವರಾದ ರೇಣುಕ ವಿಜಯ ಗ್ರಂಥಕರ್ತ ಶ್ರೀ ಸಿದ್ಧನಾಥ ಶಿವಾಚಾರ್ಯರು ಮುಕ್ತಕಂಠ ದಿಂದ ಸ್ತುತಿಸುತ್ತಾ—

|| ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ||

|| ರಾಗ ರಹಿತರುದಾರರುರೆ ಶೈವಾಗ ಮಾಂಬುಜ ಭಾಸ್ಕರರು ||

ಅಂದರೆ, ಪ್ರಕೃತಿ ಗುಣಗಳಿಗತೀತರೂ, ಪರಮೌದಾರ್ಯಾದಿ ಘನಗಂಭೀರರೂ, ಹಾಗೂ ಇಪ್ಪತ್ತೆಂಟು ಶಿವಾಗಮಗಳೆಂಬ ರಮಣೀಯಾಂಬು ಪುಣ್ಯೋದಕದಲ್ಲಿ ಉದ್ಭವಿಸಿದ, ಅರುಣಾಂಬುಜ ಸೋದರರೆಂಬಂತೆ ವಿಕಾಸಗೊಂಡು ಪ್ರಕಾಶಿಸುವ, ಅರ್ಥಾತ್, ಶಿವಾಗಮಗಳೆಂಬ ಕಮಲಗಳನ್ನು ಅರಳಿಸುವಂಥಾ, ಸಮಗ್ರ ಶಕ್ತಿ ಯುತವಾದ ಪಾದಕಮಲಗಳಿಂದ ವಿರಾಜಿತರಾದ, ಚಿದಾದಿತ್ಯ ಸದೃಶರೆಂದು ಸ್ತುತ್ಯರೆನಿಸಿದ, ಪರಮ ಹಂಸ ಪರಿವ್ರಾಜಕಾಚಾರ್ಯರೆನಿಸಿದ, ಶ್ರೀಮಜ್ಜಗ ದ್ಗುರು ರೇಣುಕಾದಿ ಪಂಚಾಚಾರ್ಯರು ; || ಭಜತಾಂ ಕಲ್ಪವೃಕ್ಷಾಯ । ನಮತಾಂ ಕಾಮಧೇನುವೇ || ಎಂಬಂತೆ, ಭಜಕರಿಗೆ ಕಲ್ಪವೃಕ್ಷದಂತೆಯೂ, ಶರಣಾಗತರಾದ ಶಿವಶರಣ ಶರಣೆಯರಿಗೆ ಕಾಮಧೇನು ಮತ್ತು ಚಿಂತಾಮಣಿ ಗಳಂತೆ ಕೃಪಾನುಗ್ರಹದಿಂದ ಅನುಗ್ರಹಿಸುವ ಪೂಜ್ಯ ಪರಮಾಚಾರ್ಯರೆಂದು ಅನಾದಿಕಾಲದಿಂದಲೂ ಜಗದ್ವಿಖ್ಯಾತರೆನಿಸಿರುವರು.

9) ನಿಗ್ರಹಾನುಗ್ರಹ ಸಮಗ್ರ ಶಕ್ತಿ ಸಂಪನ್ನರೆನಿಸಿದ ಭಗವತ್ಪಾದ ಶ್ರೀಮಜ್ಜಗದ್ಗುರು ರೇಣುಕಾಚಾರ್ಯರು ; ಪೂರ್ವಪುಣ್ಯ ವಶಾತ್, ಲಂಕಾ ಧೀಶನೂ, ಪರಮಭಾಗವತ ಶಿಖಾಮಣಿಯೂ ಮತ್ತು ಧರ್ಮಜ್ಞನೂ, ಕೃತಜ್ಞನೂ ಭಾವಜ್ಞನೂ ಆದ ಶ್ರೀ ವಿಭೀಷಣ ಚಕ್ರವರ್ತಿಯ ಪ್ರಾರ್ಥನಾನುಸಾರ; ಕನಕ ಮಯ ಕಲಶಗಳ ಗೋಪುರಗಳಿಂದಲೂ, ನವಕೋಟಿ ಶಿವಾಲಯಗಳಿಂದಲೂ ಕಂಗೊಳಿಸುವ ಲಂಕಾಪಟ್ಟಣದಲ್ಲಿ ಶ್ರೀ ರೇಣುಕ ಪರಂಜ್ಯೋತಿಯು–ಅದೆಂತಹ ದೈವೀ ಶಕ್ತಿಯೋ ! – ಕ್ಷಣಾರ್ಧದಲ್ಲಿ ಸಂಕಲ್ಪಮಾತ್ರೇಣ ಮೂರುಕೋಟಿ ಶಿವಲಿಂಗಗಳನ್ನು ವಿಧಿವತ್ತಾಗಿ ಸ್ಥಾಪಿಸಿ, ಮೂರು ಕೋಟಿ ಗುರು ರೂಪವನ್ನು ಏಕಕಾಲದಲ್ಲಿ ತಾಳಿ, ವಿಭೀಷಣ ಚಕ್ರವರ್ತಿಯಭೀಷ್ಟವನ್ನು ನೆರವೇರಿಸಿದ ಘನ ಕೀರ್ತಿ ಚಿದ್ಘನ, ದಯಾಘನರೆನಿಸಿದ ಪರಮಾಚಾರ್ಯರ ನೈಜ ಸ್ವರೂಪವೆಂತಹ ದೆಂಬ ಅಂಶವನ್ನು, ಪ್ರಾಜ್ಞರಿಗೆ ಹೃದಯಂಗಮಗೊಳಿಸುವ ಮಂಗಳಮಯ ಸನ್ನಿವೇಶವು, ಅಪ್ರಮೇಯರೆನಿಸಿದ ಪರಮಪೂಜ್ಯ ಭಗವತ್ಪಾದಾಚಾರ್ಯ ರವರ ಅಗಣಿತ ಪ್ರಭಾವವನ್ನು ಅನಂತ ಮುಖದಿಂದ ಸಾರುತ್ತಿರುವುದು.

|| ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ||

ಮೇಲ್ಕಂಡ ಘಟನೆಯ ವಿಷಯದಲ್ಲಿ ಸಂಶಯ ಪಡುವವರಿಗೆ; ಪೂರ್ಣ ಬ್ರಹ್ಮರೆನಿಸಿದ ಶ್ರೀ ಶುಕಾಚಾರ್ಯ ಪ್ರೋಕ್ತ ಶ್ರೀ ಮದ್ಭಾಗವತದಲ್ಲಿ, ಅರ್ಥ ಧ್ವನಿಯಿಂದ ಕೂಡಿದ ಭಕ್ತಿ ಪರವಶರಾದ ಹದಿನಾರು ಸಾವಿರ ಗೋಪಿಕೆಯರು ಅನನ್ಯ ಭಕ್ತಿ ಭಾವದಿಂದ ಪರಮಾತ್ಮನನ್ನು ಬಯಸಿ, ಪ್ರಾರ್ಥಿಸಲು, ಭಗ ವದ್ಭಕ್ತ ರಕ್ಷಾಮಣಿಯೆನಿಸಿದ ಪರಮಾತ್ಮನು, ಹದಿನಾರು ಸಾವಿರ ಶ್ರೀ ಕೃಷ್ಣನ ರೂಪದಲ್ಲಿ ಪ್ರಸನ್ನನಾಗಿ, ಕೇವಲ ತನ್ನ ಎಂಟನೇ ವಯಸ್ಸಿನಲ್ಲಿ, ಅವರೊಂದಿಗೆ ರಾಸಕ್ರೀಡೆಯನ್ನಾಡಿ ಗೋಪಿಕೆಯರಭೀಷ್ಟಗಳನ್ನು ನೆರವೇರಿಸಿದನೆಂಬ ಮಂಗಳ ಮಯ ಘಟ್ಟ ಅತ್ಯಂತ ಸ್ಮರಣೀಯ.

10. ಸಾರತಃ, ವೇದೋಪನಿಷದಾದಿಗಳಿಗೂ ಶಿವಾಗಮಗಳಿಗೂ ಯಾವ ತರವಾದ ಭೇದವು ಕಂಡುಬರುವುದಿಲ್ಲವೆಂಬ ಬಗ್ಗೆ ಶ್ರೀ ಅಪ್ಪಯ್ಯ ದೀಕ್ಷಿತರು || ವೇದಾಗಮಯೋ ರ್ಭೇದಂ ನ ಪಶ್ಯಾಮಃ|| ಎಂದು, ವಿದ್ವಜ್ಜನರೂ ಭಾಷ್ಯ ಕರ್ತರುಗಳೂ ಒಪ್ಪುವಂತೆ ಶೃತಪಡಿಸಿರುವುದು ಪಂಡಿತ ಪ್ರಪಂಚಕ್ಕೆ ವೇದ್ಯ ವಿರುವುದು ಸರಿಯಷ್ಟೆ. ಶಿವಾಗಮಗಳಲ್ಲಿ ಮಹಾಚಾರ್ಯರ ಬಗ್ಗೆ ವಿವರಿ ಸುತ್ತಾ || ಸದ್ಯೋಜಾತಾದಯಃ । ಪಂಚವ್ಯೂಹಾಃ ಸನಾತನಾಃ || ಎಂದು ಸ್ತುತ್ಯವಿರುತ್ತೆ. ಅಂದರೆ, ಇವರು ಪರಶಿವನ ಸದ್ಯೋಜಾತಾದಿ ಪಂಚಮುಖ ಕಮಲಗಳಿಂದ ಈಶಾಜ್ಞೆಯಂತೆ, ಚಿತ್ಕಳಾರೂಪದಲ್ಲಿ ಹೊರಹೊಮ್ಮಿ ಪರಶಿವನ ಸನ್ನಿಧಿಯಲ್ಲಿ ಪಂಚವ್ಯೂಹರೆನಿಸಿ ; ಸನಾತನರೂ, ಅಪ್ರಮೇಯರೂ ಹಾಗೂ ಮುಕ್ಕಣ್ಣನ ಸದೃಶರೆಂದು ಭುವನಾಂಡ ಕೋಟಿಗಳಿಗೆ ಗೋಚರವಾಗುವಂತೆ ಪ್ರತಿಪಾದಿತರಾಗಿರುವರು. ಸಿದ್ಧಾಂತ ಶಿಖೋಪನಿಷತ್ಪ್ರಮಾಣವೂ ಇದಕ್ಕೆ ಬಲವಾದ ಪ್ರಥಮ ದರ್ಜೆಯ ಆಧಾರವೆನಿಸಿರುವುದು. ಅಷ್ಟುಮಾತ್ರವಲ್ಲದೆ, ಸಾಕ್ಷಾತ್ ಪರಮೇಶ್ವರನು ಸ್ವಾಯಂಭುವಾಗಮದಲ್ಲಿ ಶ್ರೀಮಜ್ಜಗದ್ಗುರು ರೇಣುಕಾದಿ ಪಂಚಾಚಾರ್ಯರುಗಳ ನೈಜ ಸ್ವರೂಪ ಹಾಗೂ ಅವರ ಸಮಗ್ರ ಐಕ್ಯೈಕವೆನಿಸಿದ, ಸರ್ವತಂತ್ರ ಸ್ವತಂತ್ರಾಧಿಪತ್ಯದ ಬಗ್ಗೆ ಅಧಿಕೃತ ಅಮೃತ ವಾಣಿಯಿಂದ ಶ್ರೀ ಗಿರಿಜೆ, ಷಣ್ಮುಖ ಸ್ವಾಮಿಯರುಗಳಿಗೆ ಅಪ್ಪಣೆ ಕೊಡಿಸುತ್ತಾ

|| ತಸ್ಮಾತ್ತ್ವಸ್ಮಾಚ್ಛಗಿರಿಜೇ । ಮದಾದಿ ಸರ್ವ ಲೋಕಾನಾಂ ।
ಜಗದ್ಗುರು ವರೋತ್ತಮಾಃ || ಎಂದು ಸ್ಪಷ್ಟಪಡಿಸಿರುವನು.

11 ಇದರಿಂದ ಕಂಡುಬರುವುದೇನೆಂದರೆ, ಶ್ರೀಮಹಾಚಾರ್ಯವರೇಣ್ಯ ರೆನಿಸಿದ, ಜಗದ್ಗುರು ಸಾರ್ವಭೌಮ ಶ್ರೀ ರೇಣುಕಾದಿ ಪಂಚಾಚಾರ್ಯರುಗಳು- ವೀರ, ನಂದಿ, ಭೃಂಗಿ, ವೃಷಭ ಮತ್ತೂ ಷಣ್ಮುಖರೆನಿಸಿದ, ಪರಮ ವೀರಶೈವ ಧರ್ಮದ ಮೂಲ ಗೋತ್ರ ಪುರುಷರುಗಳಿಗೂ, ಪ್ರಣವಮಯ ಸಚ್ಚಿದಾನಂದ ಸ್ವರೂಪಿಗಳೆನಿಸಿ ಮತ್ತು ಚಿದಾಕಾಶದಲ್ಲಿ ನಿತ್ಯೋದಿತರೆನಿಸಿ, ಚಿದಾದಿತ್ಯರಾಗಿ ಉದಯಾಸ್ತಮಾನಂಗಳಿಲ್ಲದೆ ಆತ್ಮಾರಾಮರಾಗಿ ಬೆಳಗುವ, ಶ್ರೀ ರೇಣುಕಾದಿ ಪರಂಜ್ಯೋತಿಗಳೇ ಪರಮಪೂಜ್ಯ ಗುರುಗಳೆನಿಸಿ, ಪಂಚಮೂಲ ಗೋತ್ರಜರಿಗೂ ಅಧಿಕರೆಂಬುದು ಶಿವೋಕ್ತಿಯಿಂದ ಸುಸ್ಪಷ್ಟವೂ ನಿರ್ವಿವಾದವೂ ಆಗಿ ರಾರಾಜಿ ಷುವ ಮಹದಂಶವೆನಿಸಿರುವುದು.

12. ಸೊನ್ನಲಿ (ಸೊಲ್ಲಾಪುರದ) ಶ್ರೀ ಸಿದ್ಧರಾಮ ಶಿವಯೋಗಿ ಚಕ್ರವರ್ತಿಗಳು ೧೦೧ ಸ್ಥಲಗಳ ಸ್ವಾನುಭೂತಿಯ ಅನುಸಂಧಾನದಿಂದ, ೧೦೧ ವರ್ಷಗಳವರೆಗೂ, ಶ್ರೀ ಶೈಲ ಮಲ್ಲಿಕಾರ್ಜುನನ ಕಟ್ಟಾಜ್ಞೆಯಂತೆ, ಸೊನ್ನಲಿಗೆ ಯನ್ನು ಬಿಟ್ಟು ಹೊರಡದೆ, ಯಾವಜ್ಜೀವವೂ ತದೇಕ ಧ್ಯಾನ ಪರವಶತೆ ಯಿಂದ, ಅಸ್ಖಲಿತ ಬ್ರಹ್ಮಚಾರಿಯಾಗಿ ಹಾಗೂ ಅಸಂಪ್ರಜ್ಞಾತ ಧ್ಯಾನಾರೂಢ ಸಮಾಧಿಸ್ಥರಾಗಿ ಗುಹೇಶ್ವರರೆಂತಲೂ, ಅನಿಮಿಶಯೋಗಿಎಂತಲೂ ಸರ್ವತ್ರ ವಿಖ್ಯಾತರಾಗಿ ವಿರಾಜಿತರಾಗಿದ್ದರು. ಜ|| ರೇಣುಕೇಂದ್ರನ ದಿವ್ಯ ವರ ಪ್ರಸಾದ ದಿಂದ ಅವತರಿಸಿದ ಶ್ರೀ ಸಿದ್ಧರಾಮ ಶಿವಯೋಗಿ ಚಕ್ರವರ್ತಿಗಳು, ಶ್ರೀ ಶೈಲ ಮಲ್ಲೇಶನ ಹಾಗೂ ಜಗನ್ಮಾತೆ ಶ್ರೀ ಬ್ರಮರಾಂಬೆಯರ ಕರಕಮಲ ಸಂಜಾತ ರಾಗಿ, ಶ್ರೀ ಮಲ್ಲಿಕಾರ್ಜುನನಿಂದ ನೇರವಾಗಿ ಸಾಕ್ಷಾತ್ ಶಿವದೀಕ್ಷೆಯನ್ನು ಬಾಲ್ಯದಲ್ಲೇ ಪಡೆದು, ಶಂಭುಪ್ರಿಯರೆನಿಸಿದ ಶ್ರೀ ಅನಿಮಿಶ ಶಿವಯೋಗಿ ರಾಟ್‌ರವರ, ಶಿವಯೋಗವನ್ನೂ ಅವರ ತೀವ್ರತರವಾದ ವೈರಾಗ್ಯದ ವೈಭವ ವನ್ನೂ ವರ್ಣಿಸಲು, ಸಹಸ್ರ ಫಣಾಮಣಿಯಿಂದಲೂ ಅಸದಳವೆಂದ ಬಳಿಕ ಮಂದಮತಿಯಾದ ನಾನೆಂತು ಅದನ್ನು ಪೂರ್ಣ ವರ್ಣಿಸಲು ಸಾಧ್ಯ.

ಯಾವ ಗುಹೇಶ್ವರ ಚಕ್ರವರ್ತಿಯೆನಿಸಿದ ಸೊನ್ನಲಿಗೆ ಶ್ರೀ ಸಿದ್ಧರಾಮೇ ಶ್ವರರ ಜೀವಿತ ಕಾಲದಲ್ಲೇ; ಅವರ ಕಣ್ಮುಂದೆ ಮತ್ತವರ ಕೃಪಾನುಗ್ರಹಾ ಶೀರ್ವಾದಗಳ ಬಲದಿಂದ, ಶ್ರೀ ಶೂನ್ಯ ಸಿಂಹಾಸನಾಧಿ ಪತಿಗಳೆನಿಸಿ, ವೈರಾಗ್ಯ

|| ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ||

ಚಕ್ರವರ್ತಿಗಳೆಂದು ವಿಖ್ಯಾತರಾದ ಶ್ರೀ ಅಲ್ಲಮಪ್ರಭು ದೇವರೇನು, ಹಾಗೂ ಷಟ್ಸ್ಥಲ ತತ್ವ ಬೋಧಕ ಮತ್ತು ತತ್ವ ಪುನರೋದ್ಧಾರಕ ಚಕ್ರವರ್ತಿಯೆಂದು ಬೆಳಗಿದ ಮಹಾಮಹಿಮರಾದ, ಶ್ರೀ ಚೆನ್ನ ಬಸವಣ್ಣನವರೂ ಮತ್ತು ಕಲ್ಯಾಣದ ಕ್ರಾಂತಿ ಪುರುಷ ಶ್ರೀ ಬಸವಾದಿಗಳೂ, ತಂತಮ್ಮ ಶಿವಲೀಲಾ ವಿಭೂತಿಯೋಗ ಗಳನ್ನು ಆಚರಿಸಿ, ಬೋಧಿಸಿ. ಜಗತ್ತಿಗೆ ಮಾರ್ಗದರ್ಶಕರಾಗಿ, ಶಿವಸಾಯುಜ್ಯ ವನ್ನು ಪಡೆದು ಕೀರ್ತಿ ಶೇಷರಾದರೋ, ಅಂಥಾ ಮಹಾನ್ ಪುರುಷರುಗಳಿಗೆಲ್ಲಾ ಮಹಾಮಹಿಮರೆನಿಸಿ, || ಅಣೋರಣೀಯಾ್ನ್ ಮಹತೋ ಮಹೀಯಾ್ನ್ || ಎಂಬ ಮಹತ್ವಪೂರಿತವಾದ ಶಿವಯೋಗದಿಂದ ವಿರಾಜಿತರಾಗಿ, ಶ್ರೀ ಸೊನ್ನಲಿಗೆ ಸಿದ್ಧರಾಮ ಯತೀಂದ್ರ, ಯೋಗೀಂದ್ರ ಗುರು ಸಾಂದ್ರರು, ಶ್ರೀಮಜ್ಜಗದ್ಗುರು ರೇಣುಕ ಪರಂಜ್ಯೋತಿಯ ದಿವ್ಯ ಕೃಪಾನುಗ್ರಹ ಲವಲೇಶದಿಂದ ಅವತರಿಸಿ, ಶ್ರೀ ಶೂನ್ಯ ಸಿಂಹಾಸಿನಾಧಿಪತಿಗಳಾದ ಶ್ರೀ ಅಲ್ಲಮ ಪ್ರಭುದೇವರಿಗೂ, ಶ್ರೀ ಚೆನ್ನಬಸವಣ್ಣನವರಿಗೂ, ಪಂಚಕಲಶಪೂರ್ವಕ, ಸೊನ್ನಲಿಗೆಯ ತಮ್ಮ ಧರ್ಮ ಕ್ಷೇತ್ರವೆನಿಸಿದ ಗುಹೆಯಲ್ಲಿ ವಿಧಿವತ್ತಾಗಿ ಶಿವದೀಕ್ಷಾ ಸಂಸ್ಕಾರದಿಂದ, ಅವರನ್ನು ತಮ್ಮಂತೆಯೇ ಮಹಾಮಹಿಮರನ್ನಾಗಿ ಮಾಡಿದರೆಂದ ಬಳಿಕ, ಅಖಿಲ ಲೋಕ ಗಳಿಗೂ ಜಗದ್ಗುರು ಸಾರ್ವಭೌಮರೆನಿಸಿದ ಶ್ರೀ ರೇಣುಕಾದಿ ಪಂಚಾಚಾರ್ಯರ ಘನ ಮಹಿಮೆ, ಶಿವಾಗಮಗಳಿಗೂ ಸಹ ಇನ್ನೂ ಪೂರ್ಣ ಅಳವಡಿಸಿಲ್ಲವೆಂದ ಬಳಿಕ, ಬಡಮಾನವರ ಪಾಲಿಗೆ ಅದು ಪೂರ್ಣ ವೇದ್ಯವಾಗುವುದು ತಾನೆ ಎಂತು ?

13. ಶಿವಾಗಮ ಧರ್ಮಕ್ಕೆ ಶರಣಾಗತರಾದ ಅಣ್ಣ ಶ್ರೀ ಬಸವಣ್ಣ ನವರಿಗೂ, ಚೆನ್ನಬಸವಣ್ಣನವರಿಗೂ, ಪರಮ ವೈರಾಗ್ಯ ಚಕ್ರವರ್ತಿಗಳೆನಿಸಿದ ಶ್ರೀ ಅಲ್ಲಮ ಪ್ರಭುದೇವರಿಗೂ, ಕೋಟ್ಯಾನುಕೋಟಿ ಶಿವಶರಣ ಶರಣೆಯರಿಗೂ ಅಖಿಲ ವಿರಕ್ತ ವೃಂದದ ಯತೀಂದ್ರರಿಗೂ ಸಮಸ್ತ ಶಿವವ್ರತಿಗಳಿಗೂ, ಮೂಲ ಸ್ಥಂಭಾಯಮಾನವಾದ ಪ್ರಮುಖ ಧರ್ಮವೆಂದರೆ, ಶಿವಾಗಮೋಕ್ತ ಧರ್ಮವೇ "ಆದಿಧರ್ಮ" ವೆನಿಸಿರುವುದು.

ಶ್ರೇಷ್ಠತಮವಾದ ಶಿವಾಗಮೋಕ್ತ ಧರ್ಮ ಸ್ವರೂಪಿಗಳೆನಿಸಿ ವಿರಾಜಿಸುವ ಶ್ರೀಮಜ್ಜಗದ್ಗುರು ಶ್ರೀ ರೇಣುಕಾದಿ ಪಂಚಾಚಾರ್ಯರನ್ನು || ತಸ್ಮೈ ಶ್ರೀ

|| ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ||

ಗುರವೇ ನಮಃ || ಎಂದು ಪುನಃ ಪುನಃ ಸ್ಮರಿಸಿ, ನಮಸ್ಕರಿಸಿ, ಶರಣಾಗತಿ ಭಾವದಿಂದ ಆತ್ಮಾರ್ಪಣ ಮಾಡುವವರೇ ಧನ್ಯರಲ್ಲವೇ !

|| ಸತ್ಯಮೇವೋದ್ಧರಾಮ್ಯಹಂ ||

14. ಮಹದಾಚಾರ್ಯರ ವಿಷಯದಲ್ಲಿ ಮನಮುಟ್ಟುವಂತೆ ಸತ್ಯವಾದ ಹಾಗೂ ಆಗಮಾಮ್ನಾಯಾದಿಗಳಲ್ಲಿ ಸ್ತುತಿಸಿದಂತೆ ಮತ್ತು ಪರಮ ವಿರಕ್ತ ವೃಂದದ ಚಂದ್ರರೂ, ಯತೀಂದ್ರರೂ ಸಹ ಮುಕ್ತ ಕಂಠದಿಂದಲೂ, ಅವ್ಯಭಿಚಾರಿಣಿ ಭಕ್ತಿ ವಿಶೇಷದಿಂದಲೂ ಸ್ತುತಿಸಿರುವಂತೆ ಸಾಧುವಾದ ಮಾರ್ಗವನ್ನು ಅವಲಂಭಿಸಿ, ನನಗೆ ಗೋಚರವಾದಂತೆ ಅನನ್ಯ ಭಕ್ತಿ ಭಾವದಿಂದ, ಹಾಗೂ ನಿಶ್ಚಯಾತ್ಮಕ ಬುದ್ಧಿಯಿಂದ ಮೇಲ್ಕಂಡ ವಿಷಯಗಳನ್ನು ನಿರ್ಮಲ ಹೃದಯದಿಂದ ಪ್ರತಿಪಾದಿಸಿರುವೆನು. ಈ ಮಹದಂಶಗಳು ವಿದ್ವಜ್ಜನ ಮಾನ್ಯವಾಗಿರುವುವೆಂದು ದೃಢವಾಗಿ ನಂಬುವೆನು.

15. ಭಕ್ತಿ ಭಂಡಾರಿ ಶ್ರೀ ಬಸವಣ್ಣನವರ ಅಮೃತ ಬಿಂಧುವಿನಂತಿರುವ || ಸತ್ಯವ ನುಡಿವುದೇ ದೇವಲೋಕ || ವೆಂಬ ನುಡಿ ಮುತ್ತು, ಸರ್ವರಿಗೂ ಸರ್ವ ಕಾಲದಲ್ಲೂ ಆಸ್ವಾದನೀಯವೆನಿಸಿ ಪ್ರಿಯಕರ ವೆನಿಸಿರುವುದು. ಬಸವಣ್ಣನವರು ಶ್ರೀ ಕಪ್ಪಡಿ ಜಾತವೇದಮುನಿಗಳ (ಉಪಾಚಾರ್ಯರ) ಕರಕಮಲ ಸಂಜಾತರಾಗಿ, ಸುಮಾರು 14 ವರ್ಷದ ತಮ್ಮ ಸುದೀರ್ಘ ಗುರುಕುಲ ವಿದ್ಯಾಭ್ಯಾಸಂಗ ಕಾಲಾವಧಿಯಲ್ಲಿ ನೈಷ್ಠಿಕ ಬ್ರಹ್ಮಚರ್ಯ ವ್ರತವನ್ನು ರಕ್ಷಿಸಿಕೊಂಡು, ನಿಗಮಾಗಮಗಳ ಸಾರವನ್ನು ಅರಿತು ಮನಗಂಡು, ಇಪ್ಪತ್ತೆಂಟು ಶಿವಾಗಮಗಳನ್ನು ಸ್ವತಃ ಅಧ್ಯಯನಮಾಡಿ, ಮೇಲ್ಕಂಡ ತಮ್ಮ ಆತ್ಮೀಯ ಗುರುಗಳಾದ, ಸನಾತನ ವೀರಶೈವ ಧರ್ಮ ಪ್ರವರ್ತಕರಾದ ಉಪಾಚಾರ್ಯರ ಮುಖೇನ ಸರ್ವವನ್ನೂ ಅರಿತವರಾಗಿದ್ದರೆಂಬುದು ಸತ್ಯವೇ ಅಷ್ಟೆ. ಇದರಿಂದಾಗಿ ಮಹಾಚಾರ್ಯರುಗಳ ವಿಷಯ ಕೂಲಂಕಶವಾಗಿ ಕಲ್ಯಾಣದ ಶ್ರೀ ಶೂನ್ಯ ಸಿಂಹಾಸನದ ಪ್ರವರ್ತಕರಾದ, ಅಖಿಲ ಶಿವಶರಣ ವೃಂದದ ಮಹಾಪುರುಷರುಗಳಿಗೆ ವೇದ್ಯವಿತ್ತೆಂದೇ ಸ್ಪಷ್ಟವಾಗಿ ಕಂಡುಬರುತ್ತೆ. ಇದಕ್ಕೆ ಆಧಾರವೆನಿಸಿದಂತೆ ವಿರಕ್ತ ಕುಲ ಚಕ್ರವರ್ತಿಗಳೆನಿಸಿದ ಶ್ರೀ ಮರಿತೋಂಟಾಚಾರ್ಯರೂ, ಮಹಾಮಹಿಮ

ರಾದ ಶ್ರೀ ಯಡಯೂರು ಶ್ರೀ ಸಿದ್ಧಲಿಂಗಯತೀಂದ್ರ ಜಗದ್ಗುರುಗಳೂ, ಶ್ರೀಮಜ್ಜಗದ್ಗುರು ಸಾರ್ವಭೌಮರೆನಿಸಿದ ಶಿವಲಿಂಗೋದ್ಭವ ದಿವ್ಯ ಮಂಗಳ ದೇಹಧಾರಿಗಳಾದ ಶ್ರೀ ರೇಣುಕಾದಿ ಪಂಚಾಚಾರ್ಯರುಗಳನ್ನು ಮುಕ್ತಕಂಠ ದಿಂದ ಸ್ತುತಿಸಿರುವುದೇ ಸಾಕಷ್ಟು ಸತ್ಯಾಂಶವನ್ನು ಹೊರ ಸೂಸುತ್ತಲಿರುವುದು.

16. ಸತ್ಯದರ್ಶನದ ಸನ್ಮಾರ್ಗ, ಸನಾತನ ಕಾಲದಿಂದಲೂ, ಬಹು ವಿಶಾಲವಾದ ವಿಚಾರಭರಿತ ನಿರ್ಮಲ ಸರಣಿಯಿಂದ ಪ್ರತಿಪಾದಿತವಾಗಿ ಪ್ರಬಲ ವಾಗಿ ಸರ್ವತ್ರ ಬೇರೂರಿದ್ದರೂ, ಅಂಧಾಭಿಮಾನದಿಂದ, ದಾಕ್ಷಿಣ್ಯಕ್ಕೆ ತಲೆಬಾಗಿ ಮಹಾಚಾರ್ಯರ ವಿಷಯದಲ್ಲಿ ಮನಬಂದಂತೆ ಬರೆದು, ನುಡಿದು ಪ್ರಚಾರ ಮಾಡುವುದು, ಸತ್ಯಪ್ರಿಯರಾದವರಿಗೆ ಅರ್ಥವಾಗದುದಾಗಿರುವುದೆಂದು ಪೃತ್ತಿ ಹೇಳಬೇಕಾದುದಿಲ್ಲವಷ್ಟೆ. ಚಂಚಲ ಚಿತ್ತವುಳ್ಳವರ ಹಾದಿ, ಗೀತಾಚಾರ್ಯನು ಹೇಳಿದಂತೆ—

॥ ವ್ಯವಸಾಯಾತ್ಮಿಕಾ ಬುದ್ಧಿ ।
ರೇಕೇಹ ಕುರು ನಂದನ ॥
ಬಹು ಶಾಖಾ ಹ್ಯನನ್ತಾಶ್ಚ ।
ಬುದ್ಧಯೋರ್ವ್ಯವ ಸಾಯಿನಾಂ ॥ (ಗೀ)

ಭೂಮಿಯನ್ನು ಸಕಾಲದಲ್ಲಿ ಹದಮಾಡಿ ಉತ್ತು, ಭಿತ್ತಿ ಬೆಳೆಮಾಡಿದರೆ ಸೊಂಪಾದ ಫಸಲನ್ನು ಕಾಣಬಹುದು. ಬಾಲ್ಯದಿಂದ ವಿದ್ಯೆಯನ್ನು ಅಕ್ಕರೆಯಿಂದ ವ್ಯಾಸಂಗ ಮಾಡಿದರೆ ಕ್ರಮೇಣ ಪಂಡಿತನಾಗಬಹುದು. ಆ ಮಾರ್ಗಗಳಲ್ಲಿ ನಿಷ್ಣಾತರಾಗಿ ಸಹಿಷ್ಣುತೆಯಿಂದ ದುಡಿದವರು ಫಲವನ್ನು ಹೊಂದುತ್ತಲಿರುವರು. ಅದರಂತೆ, ಜಗತ್ತಿನಲ್ಲಿ ಕಾಣುವ ಸತ್, ಅಸತ್, ವಸ್ತುಗಳ ಜ್ಞಾನ ವಿಜ್ಞಾನ ಗಳಿಂದ ಅಸತ್ತನ್ನು ದೂರೀಕರಿಸಿ ತ್ಯಜಿಸಿ, "ಸತ್" ಸ್ವರೂಪಾನುಭವಕ್ಕೆ ಮಾನ ವನು ದುಡಿಯಬೇಕು. ಈ ಆಧ್ಯಾತ್ಮ ವಿದ್ಯಾಕ್ಷೇತ್ರ, ದುರ್ವಿಜ್ಞೇಯವೂ ದುರ್ಗಮವೂ ಆದುದರಿಂದ, ಶ್ರೀ ಸದ್ಗುರು ಕರಕಮಲ ಸಂಜಾತರಾದ ಧೀಮಂತ ರಿಗೆ ಮಾತ್ರ ವೇದ್ಯವೆನಿಸಿರುವುದು. ಸುದೀರ್ಘವಾದ ಗುರುಕುಲವಾಸದ ಶಿಕ್ಷಣ ದಿಂದ ಮಾನವನು ವ್ಯವಸ್ಥಿತವಾದ ಬುದ್ಧಿ ಸಂಪತ್ತಿನಿಂದ ನಿಶ್ಚಯಾತ್ಮಕ ನಿರ್ಧಾರ

ಗಳನ್ನು ಹೊಂದಲು ಸಮರ್ಥನಾಗಿ ಬೆಳಗುವವನು. ಇಂತಪ್ಪ ವ್ಯಾಸಂಗದಲ್ಲಿ ಚಿಕ್ಕಂದಿನಿಂದಲೂ ಸುಶಿಕ್ಷಿತರಾಗದವರು, ನಿಶ್ಚಯಾತ್ಮಕ ಬುದ್ಧಿಯನ್ನು ಕಳೆದು ಕೊಂಡವರಾಗಿ, ನಾನಾ ಬಗೆಯಲ್ಲಿ, ಅಸ್ಥಿರ ಬುದ್ಧಿ ಭೇದದಿಂದ ತೊಳಲಿ ಬಳಲುತ್ತಾ, ಕಷ್ಟಕಾರ್ಪಣ್ಯಗಳಿಗೆ ಈಡಾಗುತ್ತಿರುವರು. ಮತ್ತೆ ಕೆಲವರು ವಿದ್ಯಾ ನೈಪುಣ್ಯದಿಂದ ಪ್ರವೀಣರಾಗಿದ್ದರೂ ಪಂಥ, ಪಕ್ಷಗಳ ದಾಕ್ಷಿಣ್ಯಕ್ಕೆ ತುತ್ತಾಗಿ ನಿಶ್ಚಯಾತ್ಮಕ ಬುದ್ಧಿಶಕ್ತಿಯನ್ನು ಕಳೆದುಕೊಂಡು, ಅವ್ಯವಸ್ಥಿತವಾದ ಅಸ್ಥಿರ ಬುದ್ಧಿಯಿಂದ ಕಾಮಾತ್ಮರಾಗಿ, ಸ್ವರ್ಗಾದಿ ಭೋಗೋಪಶಮನಗಳೇ ಜೀವಿತದ ಹೆಗ್ಗುರಿಯೆಂದೂ, ಈ ಅಂಶಗಳನ್ನೇ ವೇದಶಾಸ್ತ್ರಗಳು ಬೋಧಿಸು ವುವೆಂದೂ, ಬಣ್ಣ ಬಣ್ಣದ ಹೂವಿನಂಥಾ ಬೋಧೆಗಳಿಂದ ಬಹುಮುಖವಾಗಿ ವರ್ಣಿಸುತ್ತಲಿರುವರು. ಈ ವಿಧಾನದಿಂದ, ॥ ಸಮಾಧೌ ನ ವಿಧೀಯತೆ. ॥ ಲಿಂಗಾಂಗ ಸಮರಸಯುಕ್ತವಾದ ಶಿವಸಾಯುಜ್ಯವು, ಸುವ್ಯವಸ್ಥಿತವಾದ ನಿಶ್ಚಯಾತ್ಮಕ ಐಕ್ಯೈಕ ಮಾರ್ಗದಿಂದ ಪ್ರಾಪ್ತಿಯಾಗುವುದೇ ವಿನಃ ಅಸ್ತಿರತ್ವದ ಬಹು ಮುಖಕ್ಕೆ ಅಪ್ರಾಪ್ತಿಯೆನಿಸಿರುವುದು. ಇದರಂತೆ ವೇದ, ವೇದಾಂತ ಸಿದ್ಧಾಂತಾಗಮೋಪನಿಷದಾದಿಗಳಲ್ಲಿ ಸನಾತನ ಕಾಲದಿಂದಲೂ ಸತತ ರಮ ಣೀಯವಾದ ಗಂಗಾಪ್ರವಾಹದಂತೆ ಜೀವಂತವಾಗಿ ಪ್ರತಿಪಾದಿತನಾಗಿರುವ, ಶ್ರೀಮಜ್ಜಗದ್ಗುರು ರೇಣುಕಾದಿ ಪಂಚಾಚಾರ್ಯರ ಶಿವಲಿಂಗೋದ್ಭವ ದಿವ್ಯಾವ ತಾರಾದಿ ಲಿಂಗಾವಿರ್ಭಾವ ದೈವೀ ಸಂಪತ್ತಿನ ವೈಭವಾತಿಶಯಗಳು, ಸಂಯಮಿ ಗಳೂ, ಹಾಗೂ ಆತ್ಮವೇತ್ತರಾದ ನಿಶ್ಚಯಾತ್ಮಕ ಬುದ್ಧಿಯುಳ್ಳ, ಧೀಮಂತರಿಗೆ ಗೋಚರಿಸಿ ವಿಶ್ವಸನೀಯವಾಗಿರುವಂತೆ, ಅವ್ಯವಸ್ಥಿತ ಚಿತ್ತರಾದ ಬಹುಮುಖ ಗಳುಳ್ಳ ಸಕಾಮಿಗಳಿಗೆ ಆಗೋಚರವೆನಿಸಿ, “ಕೈಗೆ ಎಟಕದ ದ್ರಾಕ್ಷಿ ಹುಳಿ,” ಯೆಂದಂತೆ ಅಂಥವರ ಪಾಲಿಗೆ ಗುರು ತತ್ವ ದೂರವೇ ಉಳಿಯಿತು.

॥ ಬಲೀಯಸಿ ಕೇವಲ ಮೀಶ್ವರೇಚ್ಛಾ ॥

ಅವ್ಯವಸ್ಥಿತ ಚಿತ್ತರನ್ನು ಈಶ್ವರಾನುಗ್ರಹ ಬಲವಿಲ್ಲದ ಕಡು ಬಡವರೆಂದೇ ಭಾವಿಸಬೇಕು.

17. ಅಖಿಲಾಂಡಕೋಟಿ ಬ್ರಹ್ಮಾಂಡಗಳಿಗೆ ಅಧಿಪತಿಯೆನಿಸಿ ವಿರಾಜಿಸುವ ಸ್ವಯಂಭು, ಪರಶಿವ ಪರಂಜ್ಯೋತಿ ಸ್ವರೂಪಿ ಸದಾಶಿವನ, ಸದ್ಯೋಜಾತ ಮುಖಸಂಭವರಾದ, ಶ್ರೀಮಜ್ಜಗದ್ಗುರು ರೇಣುಕಾಚಾರ್ಯರು, ಅಯೋನಿಜರಾಗಿ ಭುವಿಯಲ್ಲಿ ಶ್ರೀ ಕೊಲ್ಲಿಪಾಕಿ ಕ್ಷೇತ್ರ ಪ್ರವಿರಾಜಮಾನ ಶ್ರೀ ಸೋಮನಾಥ ಲಿಂಗ ಮುಖದಿಂದ ಆವಿರ್ಭವಿಸಿದುದು, ಅನಾದಿಕಾಲದಿಂದಲೂ ಶಿವಾಗಮೋಪನಿಷದಾದಿಗಳಲ್ಲಿ ಪ್ರೋಕ್ತವಾದ ಅಂಶವೇ ಆಗಿದ್ದು, ಜನಜನಿತವಾಗಿ ಸರ್ವತ್ರ ಸುಪ್ರಸಿದ್ಧವೇ ಆಗಿರುವುದು. ಸಪ್ತಕೋಟಿ ಶಿವಮಂತ್ರಗಳಿಗೆ ಮಸ್ತಕ ಮಣಿಯಂತೆಸೆವ ಶಿವ ಪಂಚಾಕ್ಷರ ಮಹಾಮಂತ್ರದ ಪ್ರಪ್ರಥಮ ಬೀಜಾಕ್ಷರ ಮಹಾಮಂತ್ರವೆಂದರೆ "ನ" ಕಾರ ಮಂತ್ರವೆನಿಸಿರುವುದು. "ನ" ಕಾರ ಮಹಾ ಬೀಜಾಕ್ಷರವು, ಸದಾಶಿವನ ಸದ್ಯೋಜಾತ ಮುಖದ ಘನ ಅಸ್ತಿತ್ವಕ್ಕೆ ಮೂಲ ಸ್ಥಂಭಾಯಮಾನವೆನಿಸಿ ಋಗ್ವೇದ ಮಯವೆನಿಸಿರುವುದು.

18. ಪ್ರಥಮ ವೇದವೆನಿಸಿದ ಋಗ್ವೇದವು ನೈಸರ್ಗಿಕ ದೇವತೆಗಳನ್ನು ಸ್ತವಿಸುವ ಸೂಕ್ತಗಳ ಆಗರವೆನಿಸಿದ್ದರೂ, ಆತ್ಮ ಪರಮಾತ್ಮರುಗಳ ಹಾಗೂ ಜೀವ,ಜಗತ್ತು, ಜಗದೀಶ್ವರರುಗಳ ನಡುವಣದ ಅವಿನಾಭಾವ ಸಂಬಂಧವನ್ನೂ ಮತ್ತೂ ಭೋಕ್ತೃ, ಭೋಗ್ಯ, ಪ್ರೇರಕಗಳೆಂಬ ತ್ರಿವಿಧ ವೈವಿಧ್ಯಗಳು ಏಕ ಸಾಮ್ಯತೆಯಿಂದ ಅಂದರೆ, ॥ ಏಕ ವಿಜ್ಞಾನೇನ ಸರ್ವವಿಜ್ಞಾನಂ ಭವತಿ ॥ ಎಂಬ ಸೂತ್ರಾನುಗುಣ್ಯವಾಗಿ, ಒಂದೇ ಮಹತ್ತತ್ವದ ಮೂರಂಶಗಳೆಂದು ಸ್ಫುಟ ಪಡಿಸುವುದರಲ್ಲಿ ಋಗ್ವೇದದ ಉತ್ತರ ಭಾಗದಿಂದ, ನಾಸದೀಯ ಸೂಕ್ತಗಳೇ ಮೊದಲಾದ ಅನೇಕ ಆಧಾರಗಳನ್ನೊಳಗೊಂಡಂತೆ, ವೇದಾಂತ ಸಿದ್ಧಾಂತಗಳ ಸಾರಸಮನ್ವಯದಂತೆ ಪ್ರಕಾಶಿಸುತ್ತಿರುವುದೆಂದು, ಅನಂತಾನಂತ ಋಷಿ ಪುಂಗವರೂ, ಭಾಷ್ಯಕಾರೂ ಹಾಗೂ ದಿವ್ಯದೃಷ್ಟಿ ವೇತ್ತರಾದ ಸಂಯಮಿಗಳೂ, ಶಿವಶರಣರೂ ಮನಗಂಡುದುದಾಗಿ ಪ್ರತೀತಿ. ಇದರಿಂದ ಶಿವಶಕ್ತಿಯರ ಅವಿನಾ ಭಾವಸಂಬಂಧ ಸಹಜವಾಗಿ ಸ್ಫುಟ ಪಡುತ್ತಲಿರುವುದು.

19. ಶಿವನ ಸದ್ಯೋಜಾತ ಮುಖ ಸಂಭವ ಶ್ರೀಮಜ್ಜಗದ್ಗುರು ಸಾರ್ವಭೌಮರೇಣುಕ ಪರಂಜ್ಯೋತಿ ಚಿನ್ಮಯರು, ಮೂಲ ಶಿವ ಪಂಚಾಕ್ಷರೀ ಮಹಾಮಂತ್ರದ ಪ್ರಪ್ರಥಮ ಬೀಜಾಕ್ಷರವೆನಿಸಿದ "ನ" ಕಾರ ಮಹಾಮಂತ್ರದ ನೈಜ

ಸ್ವರೂಪರೆನಿಸಿ, ಋಗ್ವೇದದ ಸಾರ ಸರ್ವಸ್ವರೂಪರೆಂಬುದು ಖಚಿತವೇ ಆಗಿರುವುದು. ಪೃಥ್ವಿ ತತ್ವವು "ನ" ಕಾರಮಯ ಪೃಥ್ವಿಲಿಂಗದಾಧಾರವನ್ನೊಳಗೊಂಡು ಪ್ರಾದುರ್ಭವಿಸಿ ಪ್ರಕೃತಿಮಾತೆಯೆಂದೆನಿಸಿರುವಳು. ಪ್ರಕೃತಿದೇವಿಯು ತನ್ನೊಂದು ಹಸ್ತದಿಂದ ಸತತ ಸಕಲ ಜೀವಕೋಟಿಗಳ ಶ್ರೇಯೋಭ್ಯುದಯೋನ್ನತಿಯತ್ತ ಭರದಿಂದ ಧಾವಿಸುತ್ತ || ಲೋಕಾಸ್ಸಮಸ್ತಾಸ್ಸುಖಿನೋಭವಂತು|| ಎಂದು ಅಖಿಲ ಜಗದ್ರಕ್ಷಕಳೂ ಪೋಷಕಳೆನಿಸಿ ವಿರಾಜಿಸುತ್ತಲಿದ್ದರೆ, ಅದೇ ಕಾಲದಲ್ಲಿ ತನ್ನ ಮತ್ತೊಂದು ಕರದಿಂದ ಬೇರೊಂದು ಕಡೆ ಜಗತ್ತಿನ ಜಟಿಲವಾದ ಸಮಸ್ಯೆಗಳ ತೊಡಕಿಗೆ ತುತ್ತಾಗಿ ಕಲುಷಿತರಾದವರ ಪಾಲಿಗೆ, ಕರಾಳಾ ಕೃತಿಯನ್ನು ಹೊಂದಿ, ಭೀಷಣವಾಗಿ ತೋರಿ, ನೈಸರ್ಗಿಕ ಪ್ರಕೋಪಕ್ಕೆ ಸಿಕ್ಕಿ || ಭೀಷಣಂ ಭೀಷಣಾನಾಂ || ಎಂಬಂತೆ, ತುಮುರು ತುಮುರಾಗಿ ನಶಿಸುತ್ತಲೂ ; ಇಂತು ಔನ್ನತಿ ಅವನತಿಗಳ ಸೆಳತದ ಉಯ್ಯಾಲೆಗಳ ಮಧ್ಯೆ ಜಗತ್ತು ಅನಿಶ್ಚಿತ ಅಸ್ತಿತ್ವದಿಂದ ತೋರ್ಪಡುತ್ತಿರುವುದು. ಇಂತಪ್ಪ ಜಗತ್ತನ್ನು ಆಶ್ರಯಿಸಿ ನಂಬಿ, ಜನಕೋಟಿಯು ತಂತಮ್ಮ ಜೀವನವನ್ನು ಸುಗಮಗೊಳಿಸಿಕೊಂಡು ಇಹಪರಗಳ ಸುಖಸಾಧನೆಯತ್ತ ಧಾವಿಸಬೇಕಾಗಿರುವುದು. ಅವಿನಾಭಾವಸಂಬಂಧದಿಂದ ಶಿವಾಭಿನ್ನಳೆನಿಸಿ ವಿರಾಜಿಸುವ ಪ್ರಕೃತಿದೇವಿಯ ಮಕ್ಕಳಾದ ನಾವು, ಆ, ಜಗಜ್ಜನನಿಯನ್ನು ಅಡಿಗಡಿಗೆ ಭಕ್ತ್ಯಾಸ್ಮರಿಸಿ, || ಪ್ರಣಮ್ಯ ಪ್ರಕೃತಿಂ ನಿತ್ಯಂ | ಪರಮಾತ್ಮ ಸ್ವರೂಪಿಣೀಂ || ಅಂದಂತೆ ನಿತ್ಯ ಸ್ತುತಿಸುವುದು ನಮ್ಮ ಆದ್ಯ ಕರ್ತವ್ಯವೆನಿಸಿರುವುದು. ಮೂಲ ಪ್ರಕೃತಿದೇವಿಯು ಪರಮ ಪುರುಷನ, ''ಸಹಧರ್ಮ ಚರೀತವ'' ಎಂತಲೂ, ಹಾಗೂ ''ಶಂಭೋಃ ಸಹ ಧರ್ಮ ಚಾರಿಣೀಂ'' ಎಂಬುದಾಗಿ ಸ್ತುತ್ಯಳೆನಿಸಿರುವಳೆಂಬುದು ಗಮನಾರ್ಹ.

20. ನೀರ್ಗುಳ್ಳೆಯಂತೆ ಕ್ಷಣ ಭಂಗುರವೆನಿಸಿದ ಮಾನವ ದೇಹವಿರುವಾಗಲೇ, ಸುಖ ದುಃಖಗಳೆಂಬ ಸಂಸಾರಸಾಗರದ ದುಮ್ಮಿಕ್ಕುವ ಅಲೆಗಳ ರಭಸದ ಹೊಡೆತದಿಂದ ನೊಂದು, ಬೆಂದು, ಬಳಲಿ, ಬೆಂಡಾದ ಜೀವಕೋಟಿಗಳನ್ನು, ಅಜ್ಞಾನಂಧಕಾರದ ಧೀರ್ಘ ನಿದ್ರೆಯಿಂದ– || ಯಮಸ್ಯಕರುಣಂ ನಾಸ್ತಿ | ತಸ್ಮಾಜ್ಜಾಗ್ರತ ಜಾಗ್ರತಃ || ಎಂಬಂತೆ ಎಚ್ಚರಗೊಳಿಸಿ, ಸರ್ವದುಃಖದಿಂದ ನಿವೃತ್ತಿಗೊಳಿಸಿ ಪರಮಾನಂದ ಪ್ರಾಪ್ತಿಗಾಗಿ ಮಾನವ ಕೋಟಿಯನ್ನು ತಟ್ಟಿ ಎಚ್ಚರಗೊಳಿಸುವ

ಉದ್ದಿಶ್ಯ ಗುರುದೇವನು ಜಗತ್ತಿನ ಭಕ್ತಕೋಟಿಗಳ ಮಧ್ಯೆ ಅಡಿಗಡಿಗೆ ಮಾನವನಂತೆ ಸಂಚರಿಸುತ್ತಾ, ನೈಜವಾದ ದರ್ಶನಾಶೀರ್ವಾದಗಳಿಂದ ಹಾಗೂ ಕೃಪಾಪೂರಿತ ತೀರ್ಥಪ್ರಸಾದಗಳಿಂದ ಆಶೀರ್ವದಿಸಿ॥ ಮಾನವ ಧರ್ಮಕ್ಕೆ ಜಯವಾಗಲೆಂದು ಹರಸಿ, ಶರಣಾಗತ ಜನರನ್ನು ಶಿವಕವಚೇನರಕ್ಷಿಸಿ, ಪ್ರಜ್ಞಾನಾನಂದಘನಮಯರನ್ನಾಗಿ ಮಾಡುತ್ತ, ಸಕಲ ಜೀವರುಗಳಿಗೆ ಲೇಸನೆ ಬಯಸುತ್ತ ಗುರುವು ಸರ್ವಧರ್ಮ ಸ್ವರೂಪಿಯೆನಿಸಿರುವನು. ॥ ಗುರೂಣಾಂ ಗುರುಃ ॥ ಎಂಬ ಗುರುತರವಾದ ಮಹಿಮಾ ಸಂಪನ್ನನಾದ ಶ್ರೀ ಮಜ್ಜಗದ್ಗುರು ರೇಣುಕಾಚಾರ್ಯರು ಜಗತ್ತಿನ ಅಸ್ತಿತ್ವಕ್ಕೆ ಮೂಲಸ್ಥಂಭಾಯಮಾನವಾದ "ನ" ಕಾರ ಬೀಜಾಕ್ಷರ ಮಹಾಮಂತ್ರದ ಪ್ರತೀಕವೆನಿಸಿದ ಪೃಥ್ವಿಲಿಂಗದ ಮಹದಂಶವೇ ತಾನಾಗಿ ಬೆಳಗುವ ಮಚಾರ್ಯನಾದುದರಿಂದ ॥ ಜಗದ್ಗುರು ವೆನಿಸಿ ॥ ಅನಾದಿ ಕಾಲದಿಂದಲೂ ಶಿವಾಗಮಾಮ್ನಾಯಾದಿಗಳಲ್ಲಿ ಸ್ತುತ್ಯನೆನಿಸಿರುವನು. ಇದರಿಂದಾಗಿ ಮನು, ಮುನಿ, ಮಾಂಧಾತಾದಿ ಅನಂತ ಋಷಿಜನ, ಮುನಿಜನ, ದೇವಜನ, ಬ್ರಹ್ಮಜನ, ಸಿದ್ಧಜನ, ಭಕ್ತಜನ ಹಾಗೂ ಘನ ವಿರಕ್ತ ವೃಂದದವರಿಂದಲೂ, ನರೇಂದ್ರ, ಸುರೇಂದ್ರ, ಯೋಗೀಂದ್ರ, ದಾನವೇಂದ್ರರುಗಳಿಂದಲೂ ಅನವರತ ಸ್ತುತ್ಯರೂ, ವಂದ್ಯರೂ ಆಗಿ ಪರಮಪೂಜ್ಯರೆನಿಸಿರುವರು. ಈ ಮಹದಂಶವನ್ನು ಮನಗಂಡು, ಆದಿ ಶ್ರೀ ಅಗಸ್ತ್ಯ ಮಹರ್ಷಿಗಳೂ, ಜ॥ ಆದಿ ಶ್ರೀ ಶಂಕರಾಚಾರ್ಯರಂಥಾ ಮಹೋಜ್ವಲ ಯತಿತಿಲಕರೂ, ಜ॥ ಆದಿ ರೇವಣಸಿದ್ಧ ಮಹಾಯೋಗಿಗಳ ಕೃಪಾಶೀರ್ವಾದಕ್ಕೆ ಪಾತ್ರರಾಗಿ ಧನ್ಯರಾಗಿರುವರು.

21. ಪರಶಿವನ ಚಿತ್ಕಳಾ ಸ್ವರೂಪಿಗಳಾದ ಶ್ರೀಮಜ್ಜಗದ್ಗುರು ರೇಣುಕಾದಿ ಪಂಚಾಚಾರ್ಯರುಗಳು ಭುವಿಯಲ್ಲಿ ॥ ಸಂಭವಾಮಿ ಯುಗೇ ಯುಗೇ ॥ ಎಂಬ ಭಗವದ್ವಾಣಿಯಂತೆ, ಅಯೋನಿಜರಾಗಿ ಶಿವಲಿಂಗಮುಖಗಳಿಂದ ಪರಂಜ್ಯೋತಿಗಳಾಗಿ ಆವಿರ್ಭವಿಸಿ, ಸ್ವೇಚ್ಛಾಕಾರಾಜಿತ ವಿಗ್ರಹರಾಗಿ, ಮೂಲ ಪಂಚಾಕ್ಷರೀ ಮಹಾಮಂತ್ರಮಯರೂ, ತೇಜೋನ್ಮಯರೂ ಆಗಿರುವುದರಿಂದ, ಜ॥ ಪಂಚಾಚಾರ್ಯರು ಬೇರೊಬ್ಬ ಗುರೂಪದೇಶಕ್ಕೆ ಭಾಗಿಗಳಾಗದೆ, ಯಾರ ಶಿಶ್ರೂಷೆಗೈಯ್ಯದೆ, ತಾವು ಸರ್ವತಂತ್ರ ಸ್ವತಂತ್ರ ಜಗದ್ಗುರು ಸಾರ್ವಭೌಮ

ರೆಂದು ಅಖಿಲ ಲೋಕಗಳೆಲ್ಲಲ್ಲೂ ಸ್ತುತ್ಯರೆನಿಸಿರುವ ಮಹದಂಶ ನಿಗಮಾಗಮಾದಿ ಗಳಲ್ಲಿ ವಿಖ್ಯಾತವಿರುವುದು ಸರಿಯಷ್ಟೆ. ಇಂತಪ್ಪ ಮಹದಾಚಾರ್ಯರುಗಳ ನೈಜ ಮಹತ್ವವನ್ನು ಶ್ರದ್ಧಾಭಕ್ತಿಗಳಿಂದ ಮಾನವ ದೇಹವಿರುವಾಗಲೇ ಅರಿತು ಅನನ್ಯ ಭಕ್ತಿ ಭಾವೇನ ಶರಣಾಗತರಾಗದವರು, ಅಂದೋ! ದೌರ್ಭಾಗ್ಯರೂ, ಪತಿತರೆನಿಸುವರೆಂಬುವುದರಲ್ಲಿ ಯಾವ ಸಂದೇಹವೂ ಇಲ್ಲ.

ಶಿವಪೂಜಾ ಕಾಲದಲ್ಲಿ ನಿತ್ಯ ಶಿವಪಂಚಾಕ್ಷರ ಮಂತ್ರೋಚ್ಚಾರಣೆ ಜಪಾದಿ ಗಳನ್ನು ಮಾಡುವುದರಿಂದ, ಮೂಲಪಂಚಾಕ್ಷರೀ ಮಹಾಮಂತ್ರದ ಬೀಜಾಕ್ಷರ ಸದೃಶರೂ, ಮಹಾಚಾರ್ಯ ವರೇಣ್ಯರೆನಿಸಿದ ಶ್ರೀಮಜ್ಜಗದ್ಗುರು ರೇಣುಕಾದಿ ಪಂಚಾಚಾರ್ಯರುಗಳನ್ನು ಸಾಕ್ಷಾತ್ತಾಗಿ ಸ್ಮರಿಸಿ, ಸ್ತುತಿಸಿ, ಧ್ಯಾನಿಸಿದಷ್ಟು, ಪರಾತ್ಪರ ಪರಂಜ್ಯೋತಿಯ ಹಾಗೂ ಪ್ರಣವ ಸಹಿತ ಶಿವಪಂಚಾಕ್ಷರೀ ಮಹಾಮಂತ್ರ ಸ್ವರೂಪಿಗಳೆನಿಸಿ "ಗುರು ಸಾಕ್ಷಾತ್ಪರಬ್ರಹ್ಮ" ಎಂಬ ತತ್ವ ಕ್ಕನುಗುಣವಾಗಿ ಪಂಚಮಹಾಚಾರ್ಯರುಗಳು, ಸದಾ ಸಂಸ್ಮರಣೀಯರೂ ಮತ್ತೂ ಮನನೀಯರೆಂಬುದು, ನಿಗೂಢವಾದ ಧರ್ಮ ರಹಸ್ಯದ ತಿರುಳು.

# ಧ್ಯಾ ನ

॥ ಯೋಗಿನಾಥನೆ ಜಗದ್ಗುರು ರೇಣುಕೇಶ್ವರನೆ ।
ಯೋಗಿಜನ ವಿನುತ ಚರಣಾಂಬು ಜಾತದ್ವಯನೆ ।
ಭೋಗಿ ಭೂಷಣ ವದನ ಜಾತನೇ
ಕೊನಲು ಪಾಕದ ಸೋಮಲಿಂಗ ಭವನೇ ॥ ॥ ೧ ॥

ಯೋಗಿ ಕುಂಭಜಗೆ ಷಟ್ ಸ್ಥಲ ಸುಬೋಧಕನೆ ।
ಭವರೋಗ ವೈದ್ಯನೆ ಭಕ್ತಿ ವಿಜ್ಞಾನ ವೇದ್ಯನೇ
ಆಗಮಾಚಾರ್ಯನೇ ಕರುಣದಿಂ ಪಾಲಿಸೈ
ರೇವಣಾ ಸಿದ್ಧ ಪ್ರಭುವೇ ॥ ॥ ೨ ॥

॥ ಶಿವಂ ಭೂಯಾತ್ ॥

ಶ್ರೀ

ಓಂ ನಮಃ ಶಿವಾಯ ಓಂ ನಮಃ ಶಿವಾಯ ಓಂ ನಮಃ ಶಿವಾಯ

# ಓ | ಂ || ನ | ಮಃ

ಓಂ ನಮಃ ಶಿವಾಯ ಓಂ ನಮಃ ಶಿವಾಯ

# ಶಿ | ವಾ | ಯ

ಓಂ ನಮಃ ಶಿವಾಯ ಓಂ ನಮಃ ಶಿವಾಯ ಓಂ ನಮಃ ಶಿವಾಯ

॥ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

# ಪ್ರಸ್ತಾವನೆ

"ಮನುಷ್ಯಾಣಾಂ ಹಿತಂ ಧರ್ಮಂ ವರ್ತಮಾನೇಕಲೌಯುಗೇ". ಅತಿಭೀಷಣವಾದೀ ವರ್ತಮಾನ ಕಾಲದಲ್ಲಿ ಮಾನವನ ಆಗು ಹೋಗುಗಳು ಅವನನ್ನು "ಚಕ್ರವತ್ಪರಿವರ್ತಂತೆ" ಚಕ್ರಾಕಾರವಾಗಿ ಗರಗರನೆ ಗೊತ್ತು ಗುರಿಯಿಲ್ಲದೆ ಮೇಲಿಂದ ಮೇಲೆ ತಿರುಗಿಸುತ್ತ ನೀರ್ಗುಳ್ಳೆಯಂತಿರ್ಪ ಕ್ಷಣಿಕ ಸುಖದುಃಖಗಳೆಂಬ ಅಲೆಗಳಿಂದ ಹೊಡೆದಪ್ಪಳಿಸಿ ದೂಷಿತ ಚಿತ್ತನನ್ನಾಗಿಮಾಡಿ ದುಃಖಾಬ್ಧಿಯಲ್ಲಿ ಮುಳುಗಿಸುತ್ತಿರುವುವು. ಗತಿ ಮೋಕ್ಷಗಳನ್ನು ಕಾಣದ ಜೀವಾತ್ಮನು ತತ್ತಳಿಸಿ, ತನ್ನ ಆತ್ಮೋದ್ಧಾರಕ್ಕಾಗಿ ರಕ್ಷಕರು ಯಾರೆಂದು ಹಂಬಲಿಸಿ, ಕಣ್ ಕಂಬನಿಗಳಿಂದ ತೋಯ್ದು ಬಿಸಿಸುಯಿದು ಆರ್ತತ್ರಾಣಪರಾಯಣನಾದ ಶ್ರೀ ಪರಮೇಶ್ವರನ ನೆನೆನೆನೆದು ಸ್ತುತಿಸಿ ವಂದಿಸಿ ಆತ್ಮಾರ್ಪಣಪೂರ್ವಕ ಅನನ್ಯಭಾವೇನ ಶರಣಾಗತನಾಗಿ ನಿಲ್ಲುವುದೊಂದೇ ಮಾರ್ಗವೆಂದು ಕೊನೆಯಲ್ಲಿ ನಿಷ್ಕರ್ಷಿಸುವನಲ್ಲವೇ !

ಇಂತಪ್ಪ ಜಿಜ್ಞಾಸುವಾದ ಜೀವನು ತನ್ನ ಜೀವನದಲ್ಲಿ ಇಹಪರಸುಖಸಾಧನೆಗಳನ್ನು ಸಾಧಿಸಲು ದೃಢಭಾವದಿಂದ ಕೂಡಿ ಈಶ್ವರಾರ್ಪಿತ ಬುದ್ಧಿ· ಮನೋವಾಕ್ಕಾಯಾದಿಗಳಿಂದ ಪರಮಾತ್ಮನ ನಾಮಸ್ಮರಣೆ, ಪೂಜೆ ಜಪಧ್ಯಾನಾದಿಗಳಲ್ಲಿ ಸ್ವಲ್ಪ ಸ್ವಲ್ಪವಾಗಿ ಮಗ್ನನಾಗುತ್ತಾ, ಶಾಂತನೂ ತೃಪ್ತನೂ ಆಗಲು ಉಪಕ್ರಮಿಸುವನು. ಇದರಿಂದಾಗಿ...

ಅಪಿಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।
ಸಾಧು ರೇವ ಸಮಂತವ್ಯಸ್ಸಮ್ಯಗ್ವ್ಯವಸಿತೋಹಿಸಃ ॥
ಕ್ಷಿಪ್ರಂಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ ।
ಕೌಂತೇಯ ಪ್ರತಿಜಾ ನೀಹಿ ನಮೇಭಕ್ತಃ ಪ್ರಣಶ್ಯತಿ ॥ (ಗೀ. ೯)

ಯಂತಃ ದುರಾಚಾರಿಯಾಗಿದ್ದರೂ ಈಶ್ವರನ ಚಿಂತನೆ ಸ್ಮರಣೆ ಧ್ಯಾನಶ್ರದ್ಧಾಭಕ್ತಿ ವಿಶೇಷದಿಂದ ಸಾಧುವಾಗಿ, ಬಹು ಶೀಘ್ರದಲ್ಲೇ ಧರ್ಮಾತ್ಮನಾಗುವ ಸಂಭವಯಿ

ರುವುದೆಂದೂ ತನ್ಮೂಲಕ ಶಾಶ್ವತವಾದ ಶಾಂತಿ ಸುಖಗಳನ್ನು ಸಹಜವಾಗಿಯೇ ಮಾನವನು ಪಡೆಯುವನೆಂದು ಶ್ರೀಮದ್ಭಗವತ್ ಗೀತೆಯ ಒಂಭತ್ತನೇ ಅಧ್ಯಾಯದಲ್ಲಿ ಶ್ರೀ ಗೀತಾಚಾರ್ಯನು ಅರುಹಿರುವನು. ಭಗವತ್ಪಾದ ಶ್ರೀ ರೇಣುಕಾಚಾರ್ಯರು ಶ್ರೀ ರೇಣುಕ ಗೀತೆಯ ಒಂಭತ್ತನೇ ಪರಿಚ್ಛೇದದಲ್ಲಿ :-

ಏವಂನವವಿಧಾಭಕ್ತಿಃ ಪ್ರೋಕ್ತಾದೇವೇನ ಶಂಭುನಾ।
ದುರ್ಲಭಾ ಪಾಪಿನಾಂ ಲೋಕೇ । ಸುಲಭಾ ಪುಣ್ಯಕರ್ಮಣಾಂ ॥
ಅಥವೋಚೋತ್ತಮೇ ವಾಪಿಯತ್ರ ಕುತ್ರಚಿದೂರ್ಜಿತಾ ।
ವರ್ತತೇ ಶಾಂಕರೀ ಭಕ್ತಿಃ ಸಭಕ್ತ ಇತಿಗೀಯತೇ ॥

"ಮುನಿಕುಲ ಚಂದ್ರನಾದ ಅಗಸ್ತ್ಯಮಹರ್ಷಿಯೇ, ಲಿಂಗಧಾರಣ ಶಿವ ಲಿಂಗಪೂಜೆ, ಶಿವಧ್ಯಾನಾದಿಗಳು ಭಾಗ್ಯವಂತರಿಗೆ ಸುಲಭವಾಗಿ ಪ್ರಾಪ್ತಿಯಾದರೂ ಪಾಪಿಗಳಿಗೆ ಅಗೋಚರವೇ ಹೌದು. ಹೀಗಿದ್ದರೂ ಒಮ್ಮೆ ಪಾಪಿಯಾಗಿರಲಿ, ಪುಣ್ಯಶಾಲಿಯಾಗಿರಲಿ ಯಾರೇ ಆಗಿರಲಿ ಶಿವಪೂಜೆ ಶಿವಧ್ಯಾನದಲ್ಲಿ ತಲ್ಲೀನರಾದರೆ ಅವರು ಕ್ರಮೇಣ ನಿಜ ಶಿವಭಕ್ತರೇ ಆಗುವರು ಇದರಲ್ಲಿ ಸಂಶಯವಿಲ್ಲ" ಎಂದು ಬೋಧಿಸಿರುವರು.

ಧರ್ಮದ ಕುರುಹುವಿಡಿದು ಆ ತೇಜಃಪುಂಜವಾದ ಶ್ರೇಯೋಭ್ಯುದಯಾದಿ ಪ್ರಗತಿ ಪಥದಲ್ಲಿ ಬೆಳಕನ್ನು ತನ್ನ ಅಂತರಂಗದಲ್ಲಿ ಕಾಣಲು ಮಾನವನಿಗೆ ಹಲವಾರು ಆಸ್ತಿಕ ಮತಗಳು ಇದ್ದರೂ ಅವುಗಳಲ್ಲೊಂದಾದ ವೀರಶೈವಮತ ಸಿದ್ಧಾಂತವು ಪ್ರಾಚೀನಕಾಲದಿಂದಲೂ, ಅಂದರೆ ಸೃಷ್ಟ್ಯಾರಂಭದ ಕಾಲದಿಂದಲೂ ಇದ್ದು ಅದನ್ನು "ಪ್ರೋಕ್ತಾಃದೇವೇನ ಶಂಭುನಾ" ಮಹಾದೇವನಿಂದ ಸ್ವತಃ ಪ್ರತಿಪಾದಿಸಲ್ಪಟ್ಟು ಮೊಟ್ಟಮೊದಲು ಶ್ರೀ ಶಾಂಭವಿಗೂ ತದನಂತರ ಶ್ರೀ ಷಣ್ಮುಖ ಸ್ವಾಮಿಗೂ ಶಿವನು ಅರುಹಿರುವನೆಂದು ಶ್ರೀ ರೇಣುಕ ಗೀತೆಯಿಂದ ಸ್ಪಷ್ಟವಾಗಿ ಕಂಡು ಬರುತ್ತೆ. ವೀರಶೈವ ಮತ ಅವೈದಿಕ ಮತವೆಂದು ಕೆಲವರು ಅಪಲಪಿಸುತ್ತಿರಲು ಪಂಡಿತರೂ ಪ್ರಾಜ್ಞರೂ ಇದು ಪರಮ ವೈದಿಕಮತವೆಂತಲೂ ವೇದಾಗ ಮೋಪನಿಷದಾದಿಗಳಲ್ಲಿ ಸ್ತುತ್ಯವಾದ ಸನಾತನವೂ ಅಪ್ರಾಕೃತವೂ

ಆದ ಮೋಕ್ಷ ಪ್ರದೈಕಮತವೆಂದು ಜಗತ್ತಿನಲ್ಲಿ ಆದಿಕಾಲದಲ್ಲೇ ಸ್ವಚ್ಛಂದವಾಗಿ ನಿರ್ಣಯಿಸಿರುವರು.

I

ವೀರಶೈವಮತವು ಪರಮ ವೈದಿಕಮತವೆಂಬುವ ಬಗ್ಗೆ ಬಲವಾದ ಸನಾತನ ಶಾಸ್ತ್ರೀಯ ಪ್ರಮಾಣಗಳು ಹೇರಳವಾಗಿ ಉಲ್ಲೇಖಿಸಲ್ಪಟ್ಟಿರುತ್ತವೆ.

ವೇದೋಕ್ತಃ ಪ್ರಥಮೋಧರ್ಮಃ। ದ್ವಿತೀಯಂ ಧರ್ಮ ಶಾಸ್ತ್ರಂತು। ತೃತೀಯಂ ಲೋಕ ಸಂಗ್ರಃ॥ ಎಂದು ಜಗತ್ತಿನಲ್ಲಿ ಮೂರು ವಿಧವಾದ ಪ್ರಥಮ ದರ್ಜೆಯ ಪ್ರಮಾಣಗಳುಂಟು, ಒಂದು ಮತವೈದಿಕಮತವೆಂದು ಅರ್ಥಾತ್ ವೇದಾಗಮೋಪನಿಷದಾದಿಗಳಲ್ಲಿ ಪ್ರೋಕ್ತವಾದ "ಜೀವ ಬ್ರಹ್ಮೈಕ್ಯ", ವೀರಶೈವ ಪಾರಿಭಾಷೆಯಲ್ಲಿ ಹೇಳಬೇಕಾದರೆ "ಲಿಂಗಾಂಗ ಸಾಮರಸ್ಯ" ರೂಪ "ತತ್ವಮಸಿ" ಮಹಾವಾಕ್ಯದ ರಹಸ್ಯಾರ್ಥವನ್ನು ಸರ್ವರೂ ಮನಗಾಣುವಂಥ ಸರಳಮಾರ್ಗವನ್ನು ಬೋಧಿಸುವ ವೇದವಿಹಿತ ಮತನೆಂದು ಅಂಗೀಕೃತವಾಗಬೇಕಾದರೆ, ಆ ಮತದ ಸ್ವರೂಪ, ಸಿದ್ಧಾಂತಧ್ಯೇಯಗಳೇನು ಎಂಬ ಅಂಶಗಳೂ ಮತ್ತು ಅದರ ಮೂಲಸ್ಥಾಪನಾಚಾರ್ಯರಾರು ಎಂಬುದನ್ನು ಮೇಲ್ಕಂಡ ಮೂರು ಪ್ರಮಾಣಗಳಿಂದ ನಿರ್ದೇಶಿಸಬೇಕಾಗಿರುತ್ತೆ. ವೀರಶೈವಮತದ ಸ್ವರೂಪ, ಸಿದ್ಧಾಂತಧ್ಯೇಯ ಹಾಗೂ ಈ ಉದಾತ್ತವಾದ ಧರ್ಮದ ಗಾಂಭೀರ್ಯವನ್ನು ವೇದಾಗಮೋಪನಿಷದಾದಿಗಳಲ್ಲಿ ತುಂಬಿದ ಕೊಡದಂತೆ ಪ್ರತಿಪಾದಿತವಾಗಿರುತ್ತೆ. ಎರಡನೆಯದಾಗಿ ಶ್ರೀಮದ್ರಾಮಾಯಣ ಭಾರತ ಶ್ರೀ ವ್ಯಾಸಪ್ರೋಕ್ತ ಮಹಾಸ್ಕಾಂದ ಶ್ರೀ ಸಿದ್ಧಾಂತ ಶಿಖಾಮಣಿ ಶ್ರೀ ನೀಲಕಂಠ ಭಾಷ್ಯ, ಶ್ರೀಕರ ಭಾಷ್ಯ, ಶಿವಾದ್ವೈತ ಮಂಜರಿ, ಕ್ರಿಯಾಸಾರ, ವೇದಾಂತಸಾರ ವೀರಶೈವ ಚಿಂತಾಮಣಿ ಶಿವತತ್ವ ರತ್ನಾಕರ, ಇನ್ನೇ ಮುಂತಾದ ಉದಾತ್ತ ಧರ್ಮಗ್ರಂಥಗಳಲ್ಲಿ ವೀರಶೈವ ಧರ್ಮದಲ್ಲಿ ವಿರಾಜಿಸುವ ಬ್ರಾಹ್ಮಣ್ಯದ ನೈಪುಣ್ಯವನ್ನು ಮನ ಮುಟ್ಟುವಂತೆ ಕಾಣಬಹುದು.

ವೀರಶೈವ ಮತದ ಸನಾತನ ತತ್ವ ಆಧ್ಯಾತ್ಮಿಕ ಮೂಲತತ್ವಕ್ಕೆ ಮಾತೃ ಸ್ಥಾನವಾಗಿ ವಿರಾಜಿಸಿ ಸರ್ವಾದರಣೀಯವಾದ ಮಹದಂಶಗಳನ್ನು ಭರತಖಂಡದ ನಾನಾ ಭಾಗಗಳಲ್ಲಿ ನಾನಾ ಭಾಷೆಗಳಲ್ಲಿ ಪ್ರಚುರಿಸಲ್ಪಟ್ಟು ಇಂದಿಗೂ ಪರಿಶೋಧಿಸುವ "ಲೋಕಸಂಗ್ರಃ" ಶಿಲಾ ಶಾಸನ, ತಾಮ್ರ ಶಾಸನ, ಇತಿಹಾಸ ಕಾವ್ಯಗಳ ಪ್ರಮಾಣಗಳಿಂದ ಈ ಮತದ ಸ್ವರೂಪ, ಸಿದ್ಧಾಂತ, ಸನಾತನತ್ವ ಹಾಗೂ ಇದರ ಮೂಲ ಸ್ಥಾಪನಾಚಾರ್ಯರುಗಳಾರು ಎಂಬುವ ಅಂಶಗಳನ್ನು ದೃಢೀಕರಿಸಬಹುದು. ಕೆಲವು ಶಿವಕ್ಷೇತ್ರ ತೀರ್ಥಗಳ ಸಂಬಂಧಪಟ್ಟ ಆ ಆ ಕ್ಷೇತ್ರದ ಸ್ಥಳ ಪುರಾಣಗಳ ಆಧಾರವೂ ಸಮಂಜಸವೇ ಆಗಿರುತ್ತೆ. ಇದರಿಂದಾಗಿ ವೀರಶೈವ ಮತ ವೈದಿಕಮತವೇ ಆಗಿ ವಿರಾಜಿಸುತ್ತಲಿರುವುದು ಸರ್ವಶೃತವೇ ಹೌದು.

## II

ವೀರಶೈವಮತದ ಸಿದ್ಧಾಂತ ಹಾಗೂ ಸ್ವರೂಪ ಅತ್ಯಂತ ಪ್ರಿಯಕರವೂ ಸರಳವೂ ಆಗಿರುವುದರೊಂದಿಗೆ ಮೋಕ್ಷ ಪ್ರದವೇ ಆಗಿರುತ್ತೆ. ವೀರಶೈವ ಸಿದ್ಧಾಂತ ಸರ್ವ ಆಧ್ಯಾತ್ಮಿಕ ಸಿದ್ಧಾಂತಗಳನ್ನು ಗರ್ಭೀಕರಿಸಿಕೊಂಡಿರುವುದರೊಂದಿಗೆ ತನ್ನದೇ ಆದ ಒಂದು ನಿಜ ವಿಶಿಷ್ಟತೆಯನ್ನು ಹೊಂದಿರುತ್ತೆ. ಈ ವೈಶಿಷ್ಟ್ಯವೇ ಈ ಮತದಲ್ಲಿನ ಗಣ್ಯವಾದ ನೈಪುಣ್ಯ. ಶಕ್ತಿ ವಿಶಿಷ್ಟಾದ್ವೈತ ಅಥವಾ ಶಿವಾದ್ವೈತವೇ ಈ ಮತದ ಸಿದ್ಧಾಂತ.

ಶ್ರೀಪತಿ ಪಂಡಿತಾರಾಧ್ಯರು ತಮ್ಮ ಘನ ಶ್ರೀಕರ ಭಾಷ್ಯದಲ್ಲಿ ಈ ಮತ ಸಿದ್ಧಾಂತವನ್ನು ದ್ವೈತಾದ್ವೈತವೆಂತಲೂ ವಿಶೇಷಾದ್ವೈತ ವೆಂತಲೂ ಸಮರ್ಥಿಸಿ ಶಿವಾಗಮೋಪನಿಷದಾದಿಗಳಲ್ಲಿ ಪ್ರೋಕ್ತವಾದ ಅನಂತಾನಂತ ಪರಮ ಆಧಾರದಿಂದ ಸ್ಫುಟಪಡಿಸಿರುವರು. ಶಿವನ ಈಶಾನ ಮುಖದಿಂದ ಹೊರಹೊಮ್ಮಿದ ೨೮ ಶಿವಾಗಮಗಳು ವೇದ ಸದೃಶವೇ ಆಗಿರುವುವು. ಸುಲಿದ ಬಾಳೆಯ ಹಣ್ಣಿನಂತೆ, ಕಡೆದ ಬೆಣ್ಣೆಯಂತೆ . ಕಾಯಿಸಿದ ತುಪ್ಪದಂತೆ ವೇದಗಳಿಗಿಂತಲೂ ಶಿವಾಗಮಗಳಲ್ಲಿ ಶಿವಶಕ್ತಿ ತತ್ವ ಮಹತ್ವ ಸರಳವಾಗಿಯೂ ಸುಂದರವಾಗಿಯೂ ಸ್ವಾರಸ್ಯವಾಗಿಯೂ ಪ್ರತಿಪಾದಿತವಾಗಿದೆ. ಉಪನಿಷತ್ಸಾರವೇ

ಶಿವಾಗಮಗಳ ಹೃದಯ. ಆದ್ದರಿಂದ ಜಗತ್ತಿನಲ್ಲಿ ಶಿವಸರ್ವೋತ್ತಮ ತ್ವವನ್ನು ಸಾರಿ ಸುಪ್ರಸಿದ್ಧರಾದ ಶ್ರೀ ಅಪ್ಪಯ್ಯ ದೀಕ್ಷಿತರು "ವಯಂ ವೇದ ಶಿವಾಗಮಯೋರ್ಭೇದಂ ನಪಶ್ಯಾಮಃ" ಎಂದುಸಿರಿರುವರು. ಶಿವಲಿಂಗವು ಪೂಜ್ಯವಾದುದು ಜೀವನು ಪೂಜಕನು. ಹೀಗೆ ದ್ವೈತ ಸ್ಥಿತಿಯಿಂದ ಪೂಜಕ ನಾದ ಭಕ್ತನು ಅನುದಿನ ಶ್ರದ್ಧಾಭಕ್ತಿಗಳಿಂದ ಪೂಜ್ಯವಾದ ಶಿವಲಿಂಗವನ್ನು ಆರಾಧಿಸಿ, ಸ್ತುತಿಸಿ, ಧ್ಯಾನಿಸಿ ಕ್ರಮೇಣ—ಪೂಜ್ಯ ಪೂಜಕಭಾವಲೀಲೆಯಿಂದ ಭಗವಂತನಾದ ಲಿಂಗದೇವನ ಕರುಣೆಯಿಂದ "ಕೀಟೋಪಿಬ ವ ರಾಯತೆ" ಎಂಬಂತೆ ಅನುದಿನ ಅವಿಚ್ಛಿನ್ನವಾದ ಅನನ್ಯ ಭಕ್ತಿಭಾವದಿಂದ ಭಜಿಸಿ ಪೂಜಿಸಿ ಧ್ಯಾಸಮಾಡಿ ಭಗವದ್ಭಕ್ತಿಯಲ್ಲಿ ತಲ್ಲೀನನಾಗಿದ್ದು ಕೊನೆಯಲ್ಲಿ ಪೂಜಕನು ಪೂಜೆಯಿಂದ ಪೂಜ್ಯವಾದ ತಾದಾತ್ಮ್ಯಭಾವದಿಂದ ಭಗವತ್ಸ್ವರೂಪದಲ್ಲೇ ಸಮರಸನಾಗುವನೆಂಬುದೇ ಮೇಲ್ಕಂಡ ಸಿದ್ಧಾಂತದ ಸಾರವಾಗಿರುತ್ತೆ. ಇಂಥಾ ಮೋಕ್ಷ ಪ್ರದವೂ, ಸರ್ವದುಃಖ ನಿವೃತ್ತಿ ಪರಮಾನಂದ ಪ್ರಾಪ್ತಿಕರವಾದ ನಿತ್ಯ ಸುಖವನ್ನು ಈ ಜನ್ಮದಲ್ಲೇ ಪಡೆಯಲು ವೀರಶೈವಮತ ಸ್ಥಾಪನಾಚಾರ್ಯರು ಗಳಾದ ಜಗದ್ಗುರು ಶ್ರೀ ರೇಣುಕಾದಿ ಪಂಚಾಚಾರ್ಯರು ಶಿವಲಿಂಗ ತತ್ವವನ್ನು ಬೋಧಿಸಿರುವರು. ಶಿವಾಗಮಾದಿಗಳಲ್ಲೂ ಹಾಗೂ ಶ್ರೀ ವ್ಯಾಸಪ್ರೋಕ್ತ ಮಹಾ ಸ್ಕಾಂದಾದಿಗಳಲ್ಲಿ ಪ್ರೋಕ್ತವಾದಂತೆ, ಶಿವಲಿಂಗಧಾರಣ, ಶಿವಲಿಂಗ (ಇಷ್ಟ ಲಿಂಗ) ಪೂಜಾ ಶಿವದೀಕ್ಷಾ ಸಂಸ್ಕಾರ, ಶಿವಪಂಚಾಕ್ಷರೀ ಮಹಾ ಮಂತ್ರ ಜಪ, ಶಿವಧ್ಯಾನ ಇವು ಈ ಮತದ ಚಿನ್ಹೆಗಳಾಗಿವೆ. ಗುರು, ಲಿಂಗ, ಜಂಗಮ, ಭಸಿತ, ರುದ್ರಾಕ್ಷಿ, ಶಿವಮಂತ್ರ ಪಾದೋದಕ ಪ್ರಸಾದಗಳಿಂದ ಕೂಡಿರುವ ಮೊಟ್ಟ ಮೊದಲಿನ ಧರ್ಮವೇ ಅಷ್ಟಾವರಣವೆನಿಸಿ ವೀರಶೈವರಿಗೆ ಇವು ಎಂಟೂ ಕೂಡಿ ಈ ಮಾನವ ದೇಹಕ್ಕೆ ವಜ್ರಕವಚದಂತೆ ವಿರಾಜಿಸುತ್ತಿರುವುವು. ಲಿಂಗಾಚಾರ, ಭೃತ್ಯಾಚಾರ, ಶಿವಾಚಾರಾದಿ ಪಂಚ ಆಚಾರಗಳು ಇವನ ಪಂಚಪ್ರಾಣ ಗಳಂತಿರಲು, ಇಂತಪ್ಪ ದೇಹ ಪ್ರಾಣಾದಿಗಳೊಂದಿಗೆ ಪರಿಶೋಭಿತನಾದ ಲಿಂಗಾಂಗ ಸಂಗಿಯು ಮೋಕ್ಷಮಂದಿರವನ್ನು ಪ್ರವೇಶಿಸಲು ಪರಮ ಸೋಪಾನ ಗಳಂತಿರುವ ಷಟ್‌ಸ್ಥಲಗಳು ಅಂದರೆ ಭಕ್ತಸ್ಥಲ, ಮಾಹೇಶ್ವರಸ್ಥಲ, ಪ್ರಸಾ ದಿಸ್ಥಲ, ಪ್ರಾಣಲಿಂಗಿಸ್ಥಲ, ಶರಣಸ್ಥಲ, ಐಕ್ಯಸ್ಥಲಗಳು. ಈ ತತ್ವದಲ್ಲಿ

ಮನಗಾಣುವ ಸ್ವರೂಪಾನು ಭವದ ಸಾಕ್ಷಾತ್ಕಾರ ಕೇವಲ ಆತ್ಮೀಯವೇ ಆಗಿರುವುದು, ವೀರಶೈವ ದರ್ಶನದಲ್ಲಿ ಇಷ್ಟಲಿಂಗವಾದ ಶಿವಲಿಂಗದ ಪೂಜೆ ಮಹತ್ತರವಾಗಿ ಪರಿಶೋಭಿಸುತ್ತಲಿದೆ. ಮೂರ್ತ ಪೂಜೆಯಿಂದ ಲಭಿಸುವ ಫಲವೂ, ಮೂರ್ತಾಮೂರ್ತ ಸ್ವರೂಪದಿಂದ ವಿರಾಜಿಸುವ ಶಿವಲಿಂಗ ಪೂಜೆಯ ಫಲವೂ ಈ ಉಭಯ ವಿಧ ಫಲ ಪ್ರಸಾದ ಪ್ರಾಪ್ತಿಯಿಂದ ಶಿವನ ಕೃಪೆಗೆ ಬಹು ಶೀಘ್ರದಲ್ಲೇ ಅರ್ಹರಾಗುವೆವು. ಜೀವಾತ್ಮನನ್ನು ಶಿವನನ್ನಾಗಿಸಲು. ಈ ಧರ್ಮ ದಲ್ಲಿ ಒಂದೇ ಆದ, ಶಿವಲಿಂಗವು ಮೂರು ವಿಧವಾಗಿ ಅವತರಣಗೊಂಡು ದೇಹ ತ್ರಯಂಗಳಲ್ಲೂ ಏಕಪ್ರಕಾರವಾಗಿ ಪ್ರಕಾಶಿಸುತ್ತಲಿರುವುದು. ಸ್ಥೂಲ ದೇಹ ದಲ್ಲಿ ಇಷ್ಟಲಿಂಗ ಪೂಜೆ ಧಾರಣೆಯಿಂದ ಪವಿತ್ರನಾದ ಲಿಂಗಧಾರಿಯು, ಸರ್ವಾ ನಿಷ್ಟಗಳಿಂದ ದೂರನಾಗಿ, ಶಿವಾನುಗ್ರಹದಿಂದ, ಸೂಕ್ಷ್ಮದೇಹದಲ್ಲಿ ಪರಿಶೋ ಭಿಸುವ ಪ್ರಾಣಲಿಂಗದ ದಿವ್ಯಾನುಗ್ರಹಕ್ಕೆ ಪಾತ್ರನಾಗಿ, ಧ್ಯಾನಾರಾಧನೆಗಳಿಂದ ಶುದ್ಧಾಂತಃಕರಣನೂ ನಿರ್ಮಲನೂ ಆಗಿ, ಅಲ್ಲಿಂದ ಕಾರಣ ದೇಹವನ್ನು ಬೆಳಗುವ ಭಾವಲಿಂಗದ ಆರಾಧನೆಯಿಂದ ಕೃತಕೃತ್ಯನಾಗಿ ಶಿವಾನುಗ್ರಹ ಬಲದಿಂದ ಪವಿತ್ರ ವಾದ ತನ್ನ ಹೃದಯ ಕಮಲದಲ್ಲಿ ಪ್ರಕಾಶಿಸುವ ಆತ್ಮಾಲಿಂಗದಲ್ಲಿ ತಲ್ಲೀನನಾಗಿ ಸಮರಸಭಾವೈಕ್ಯದಿಂದ ಲಿಂಗಾಂಗ ಸಾಮರಸ್ಯ ಶಿವಸಾಯುಜ್ಯವನ್ನು, ಈ ಜನ್ಮದಲ್ಲೇ ಪಡೆಯಲು ವೀರಶೈವಮತ ತತ್ವ ಸಹಕಾರಿಯಾಗಿರುತ್ತೆ. ದೇಹದ ವೊಳಗೂ ಹೊರಗೂ ದೇಹಾದ್ಯಂತ ನಿತ್ಯ ನಿರತಿಶಯಾನಂದವೀಯುವ ಶಿವಲಿಂ ಗದ ಸಂಪರ್ಕದಿಂದ ಪುನೀತನಾಗಿ "ಶರೀರಮಾದ್ಯಂಖಲು ಧರ್ಮ ಸಾಧನಂ" ಎಂಬೋಕ್ತಿಯಂತೆ ಧರ್ಮಚಿಂತನೆ ಧರ್ಮ ಸಂಗ್ರಹ ಶೀಲನಾಗಿ "ತತ್ ಚಿಂತನಂ ತತ್ಪ್ರಬೋಧನಂ" ಶಿವಭಾವ ಭಾವಿತನಾಗಿ ರಂಜಿಪನು.

ಲಿಂಗಂತು ತ್ರಿವಿಧಂ ಪ್ರೋಕ್ತಂ ಸ್ಥೂಲಂ ಸೂಕ್ಷ್ಮಂತು ಕಾರಣಂ ।<br>
ಧಾರಯತೋನರಾಃ ಸ್ಥೂಲಂಕಾರಣಂ ಸಂಪ್ರಯಾಂತಿಹಿ ॥

ಸ್ಥೂಲಸ್ಯ ಲಿಂಗದೇಹಸ್ಯ ಸೂಕ್ಷ್ಮಸ್ಯ ಮನಸಸ್ತಥಾ ।<br>
ಕಾರಣಸ್ಯಾತ್ಮನೋ ನಿತ್ಯಂ ಕುರ್ಯಾದೈಕ್ಯ ಮತಂದ್ರಿತಃ ॥

ಲಿಂಗವು ಸ್ಥೂಲ ಸೂಕ್ಷ್ಮಕಾರಣ ಭೇದದಿಂದ ಮೂರು ಪ್ರಕಾರವಾಗಿರುವುದೆಂದೂ ಸ್ಥೂಲಲಿಂಗವನ್ನು ಧರಿಸಿರುವವರು ಕಾರಣ ಲಿಂಗವನ್ನು ಹೊಂದುವರೆಂದೂ, ತ್ರಿಪುಟೀ ಸಂಧಾನವು ಶಿವಸಾಯುಜ್ಯಕ್ಕೆ ಕಾರಣವೆಂದೂ, ಸ್ಥೂಲವಾದ ಲಿಂಗ (ಇಷ್ಟಲಿಂಗ) ದೇಹಕ್ಕೂ ಸೂಕ್ಷ್ಮವಾದ ಪ್ರಾಣಲಿಂಗ ಮನಸ್ಸಿಗೂ ಭಾವಲಿಂಗ, ಕಾರಣವಾದ ಆತ್ಮನಿಗೂ ನಿತ್ಯದಲ್ಲಿ ಐಕ್ಯವನ್ನುಂಟುಮಾಡುತ್ತ, ದೇಹತ್ರಯಂಗಳಲ್ಲಿ ಲಿಂಗತ್ರಯಂಗಳನ್ನು ಧರಿಸಿ ಪರಿಶುದ್ಧಾಂತಃಕರಣದಲ್ಲಿ ಶ್ರೀ ಉಮೇಶನನ್ನು ಧ್ಯಾನಿಸುತ್ತ, ಪೂರ್ಣವಾಗಿ ಪರಮೈಕ್ಯವನ್ನು ಅನವರತ ಭಾವಿಸುವುದು ತ್ರಿಪುಟೀ ಸಂಧಾನ ಶಿವಯೋಗವೆಂದೂ ಭ್ರಮರದ ಸಂಬಂಧದಿಂದ ಕೀಟವು ಭ್ರಮರವಾಗುವಂತೆ ಶಿವನ ನಿತ್ಯ ಸಂಪರ್ಕ ಸಂಬಂಧದಿಂದ ಮಾನವನು ಶಿವಸ್ವರೂಪಿಯೇ ಆಗುವನು. "ಮುಕ್ತಃ ಶಿವಸಮೋಭವೇತ್", "ಬ್ರಹ್ಮವಿತ್ ಬ್ರಹ್ಮೈವಭವತಿ" ಎಂಬ ಸೂತ್ರ ಪ್ರಮಾಣಗಳಿಂದ, ಬಾಹ್ಯಾಂತರಂಗಗಳಲ್ಲಿ ಅವಿಚ್ಛಿನ್ನ ಭಕ್ತಿ ವಿಶೇಷದಿಂದ ಭಕ್ತನು ಭಗವಂತನ ಕೃಪೆಗೆ ಪಾತ್ರನಾಗಿ "ಏಕೇನ ಜನ್ಮನಾ ಮುಕ್ತಿರ್ವೀರಾಣಾಂತು ಮಹೇಶ್ವರಿ॥ ಲಿಂಗಾಂಗ ಸಂಗಿನೋವತ್ಸ। ಪುನರ್ಜನ್ಮನ ವಿದ್ಯತೇ" ಎಂಬ ಶೃತಿ ಪ್ರಮಾಣಗಳಂತೆ ಈ ಜನ್ಮದಲ್ಲೇ ಶಿವಸಾಯುಜ್ಯವನ್ನು ಪಡೆದು, ಭವಬಂಧನದಿಂದ ಮುಕ್ತನಾಗುವನು.

ಶ್ರೀ ಜಗದ್ಗುರು ಶ್ರೀ ರೇಣುಕಾದಿ ಪಂಚಾಚಾರ್ಯರುಗಳು ವೀರಶೈವ ಧರ್ಮಕ್ಕಳವಡಿಸಿಕ್ಕೊಂಡ ರೀತಿಯಲ್ಲಿ ಪ್ರಸ್ಥಾನತ್ರಯಗಳ ಮೇಲೆ ಸ್ವತಃ ಭಾಷ್ಯ ರಚಿಸಿರುವರು. ಶ್ರೀ ನೀಲಕಂಠಭಾಷ್ಯ ಶ್ರೀಪತಿ ಪಂಡಿತಾರಾಧ್ಯರ, ಶ್ರೀಕರ ಭಾಷ್ಯಾದಿಗಳಿಂದ ಇದು ಸ್ಪಷ್ಟವೇ ಆಗಿರುತ್ತೆ. ಆದರೆ ಪ್ರಾಚೀನಕಾಲದ ಸನಾತನ ತತ್ವಪ್ರಕಾಶಗೊಳಿಸತಕ್ಕಂಥ ಹಲ ಕೆಲವು ಅತ್ಯಂತ ಪ್ರಮುಖ ಗ್ರಂಥಗಳು ಸ್ವಾರ್ಥಿಗಳ ಹಾಗೂ ಪರಮತ ತತ್ವದ ಔನ್ನತಿಯ ಸಹಿಷ್ಣುತೆ ಇಲ್ಲದ ಪರಮ ಲೋಭಿಗಳ ಕೈವಾಡಕ್ಕೊಳಪಟ್ಟು ಕಣ್ಮರೆಯಾಗಿರುವದು ಸರಿಯಷ್ಟೆ. ಅದರಂತೆ ಶ್ರೀ ಮಜ್ಜಗದ್ಗುರು ರೇಣುಕಾದಿ ಪಂಚಾಚಾರ್ಯರು ಜಗದಾದಿಯಲ್ಲೇ ಪ್ರಸ್ಥಾನತ್ರಯಂಗಳಿಗೆ ವೀರಶೈವ ದರ್ಶನ ಪರವಾಗಿ ಬರೆದ ಉದಾತ್ತವಾದ

ಭಾಷ್ಯಗಳು ಹೇಗೆ ಯಾವಾಗ ಯಾರಿಂದ ಕಣ್ಮರೆಯಾದವೋ ಗೊತ್ತಿಲ್ಲ. ಬಹುಶಃ ಜರ್ಮನಿ ದೇಶದ ಪ್ರಸಿದ್ಧ ಲೈಬ್ರರಿಯಲ್ಲಿ ಇರುವವೋ ಏನೋ ತಿಳಿಯದು. ವೀರಶೈವವು ವೈದಿಕಮತವೆಂದೂ ಹಾಗೂ ಈ ಧರ್ಮ ಪ್ರಾಧಾನ್ಯತೆಯ ನಿರೂಪಣದ ಬಗ್ಗೆ ಈ ಕೆಳಗೆ ವೇದಾಗಮೋಕ್ತವಾದ ಕೆಲವು ಭಾಗಗಳನ್ನು ಇಲ್ಲಿ ವಿವರಿಸಿರಲಾಗಿದೆ:

### ಋಗ್ವೇದದಲ್ಲಿ

ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ ।
ಅತಪ್ತತನೂರ್ನ ತದಾಮೋಽ ಅಶ್ನುತೇ ॥
(ಅಷ್ಟಕ ೭. ಅಧ್ಯಾಯ ೩. ವರ್ಗ ೮)

ಈ ಮಂತ್ರವು ಉಕ್ತವಾಗಿದೆ. ಈ ಮಂತ್ರವು ಕೇವಲ ಲಿಂಗಧಾರಣವನ್ನೇ ಬೋಧಿಸುತ್ತದೆ.

ಲಿಂಗಧಾರಣಚಂದ್ರಿಕಾಕಾರರಾದ ಶ್ರೀ ನಂದಿಕೇಶ್ವರಶಿವಾಚಾರ್ಯರು ಈ ಋಗ್ವೇದಮಂತ್ರಕ್ಕೆ—

"ಹೇ ಬ್ರಹ್ಮಣಸ್ಪತೇ-ಲಿಂಗರೂಪಶರೀರಾವಚ್ಛೇದೇನ ಶರೀರಿ ಭಾವೇನಾಧಿಷ್ಠಿತ ಪರಮಶಿವ, ತೇ—ತವ, ತತ್—ಬ್ರಹ್ಮಪದವಾಚ್ಯ ಲಿಂಗರೂಪಂ ಶರೀರಂ, ಪವಿತ್ರಂ—ಉಕ್ತರೀತ್ಯಾಶುಚ್ಯಶುಚಿಕಾಲೇಽಪಿ ಧರ್ತುಂ ಯೋಗ್ಯಂ ವಿತತಂ—ಇಷ್ಟಾದಿಭೇದೇನ ಭಕ್ತಶರೀರಾದಿ ಭೇದೇನ ವಾ ಬಹುವಿಧಂ, ಪ್ರಭುಃ— ನಿಗ್ರಹಾನುಗ್ರಹಸಮರ್ಥಸ್ತ್ವಂ, ವಿಶ್ವತಃ—ಸಮಸ್ತಾನಿ (ಸಾರ್ವವಿಭಕ್ತಿಕಸ್ತಸಿಲ್) ಗಾತ್ರಾಣಿ—ಭಕ್ತಶರೀರಾಣಿ, ಪರ್ಯೇಷಿ—ವ್ಯಾಪ್ನೋಷಿ, ಧಾರ್ಯಮಾಣಸ್ಸನ್ ಲಿಂಗರೂಪಶರೀರದ್ವಾರಾ ಭಕ್ತಾಂಗಸಂಯುಕ್ತೋಽಸೀತ್ಯರ್ಥಃ—ಅತಪ್ತತನೂಃ—ತಪ್ತಾ ವೇಧಾ ಮನು-ಕ್ರಿಯಾದೀಕ್ಷಾತ್ರಯೇಣ ನಿರ್ದಗ್ಧ ಪಾಪಪಂಜರಾ ತನೂರ್ಯಸ್ಯ ಸಾ ನ ಭವತೀತ್ಯತಪ್ತತನೂಃ, ದೀಕ್ಷಾತ್ರಯರಹಿತಃ, ಆಮಃ—ಅಪರಿಪಕ್ವಾಂತಃಕರಣಸ್ಸನ್, ತತ್—ಪರಶಿವಸ್ವರೂಪಂ ನಾಶ್ನುತೇ."

ಈ ಪ್ರಕಾರವಾಗಿ ವ್ಯಾಖ್ಯಾನಮಾಡಿರುವರು

ಈ ವೇದಮಂತ್ರದ ಅಭಿಪ್ರಾಯವನ್ನು ಲೋಕವಿಖ್ಯಾತರಾದ ವ್ಯಾಸ ಮಹರ್ಷಿಗಳು ತಮ್ಮಿಂದ ರಚಿಸಲ್ಪಟ್ಟ "ಲಿಂಗಪುರಾಣ"ದ ಉತ್ತರಭಾಗದ ೨೧ನೆಯ ಅಧ್ಯಾಯದಲ್ಲಿ ಸ್ಪಷ್ಟವಾಗಿ ಹೇಳಿರುವರು. ಈ ಪುರಾಣವು ಕಾಂಚೀ ಪುರನಿವಾಸಿಗಳೂ, ಅಷ್ಟಾದಶಪುರಾಣೋದ್ಧಾರಕ ಬಿರುದಾಂಕಿತರೂ ಆದ ಪೂವ್ವಾಡ ವೆಂಕಟರಾಯರೆಂಬ ಮಹೋದಯರಿಂದ, ಕ್ರಿ. ಶ. ೧೮೭೯ ನೆಯ ಇಸ್ವಿಯಲ್ಲಿ ಮುದ್ರಿಸಲ್ಪಟ್ಟಿದೆ. ಅಲ್ಲಿ ಹೇಳಲ್ಪಟ್ಟಿರುವ ಶ್ಲೋಕಗಳ ನಿಜಾರ್ಥವನ್ನು ಸರ್ವರೂ ಪರಿಶೀಲಿಸಬೇಕು.

ಬ್ರಹ್ಮೇತಿ ಲಿಂಗಮಾಖ್ಯಾತಂ ಬ್ರಹ್ಮಣಃ ಪತಿರೀಶ್ವರಃ ॥೯೮॥
ಪವಿತ್ರಂ ತದ್ಧಿ ವಿಖ್ಯಾತಂ ತತ್ಸಂಪರ್ಕಾತ್ತನುಃ ಶುಚಿಃ ।
ಋಗಿತ್ಯಾಹ ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ॥೯೯॥
ತಸ್ಮಾತ್ಪವಿತ್ರಂ ತಲ್ಲಿಂಗಂ ಧಾರ್ಯಂ ಶೈವಮನಾಮಯಂ ।
ಅತಪ್ತತನುರಜ್ಞೋ ವೈ ಹ್ಯಘೀ ಸಂಸಾರಲಕ್ಷಣಃ ॥೧೦೦॥
ದೀಕ್ಷಯಾ ರಹಿತಃ ಸಾಕ್ಷಾನ್ನಾಪ್ನುಯಾಲ್ಲಿಂಗಮುತ್ತಮಂ ।
ಯಃ ಕರೋತಿ ತಪಃ ಪೂರ್ವಂ ಸ ತಪ್ತತನುರುಚ್ಯತೇ ॥೧೦೧॥
ಪರಿಪಕ್ವೋ ವಿಮೋಕ್ಷಾಯ ಸೋಽಶ್ನುತೇ ಲಿಂಗಧಾರಣಂ ।
ನ ಕರೋತಿ ತಪಃ ಪೂರ್ವಂ ಸೋಽತಪ್ತತನುರುಚ್ಯತೇ ।೧೦೨॥

(ಲಿಂ. ಪು. ಉ. ಭಾ. ಅ. ೨೧)

ಬ್ರಹ್ಮವೇ ಶಿವಲಿಂಗವೆಂದೂ, ಪವಿತ್ರವಾದ ಶಿವಲಿಂಗಧಾರಣದಿಂದ ಶರೀರವು ಪವಿತ್ರವಾಗುವುದೆಂದೂ, ಆದುದರಿಂದ ಪುನೀತವಾದ ಶಿವಲಿಂಗವನ್ನು ಧರಿಸಿಕೊಳ್ಳಬೇಕೆಂದೂ, ವೇಧಾ–ಮನು–ಕ್ರಿಯಾ ರೂಪತ್ರಿವಿಧದೀಕ್ಷೆಯಿಂದ ತಪ್ತನಾಗದಿದ್ದವನು ಅಜ್ಞನೂ ಪಾಪಿಯೂ ಸಂಸಾರಿಯೂ ಆಗುವನೆಂದೂ, ಆದುದರಿಂದಲೇ ದೀಕ್ಷೆಯನ್ನು ಹೊಂದಬೇಕೆಂದೂ, ದೀಕ್ಷಾರಹಿತನು ಶಿವಲಿಂಗವನ್ನು ಧರಿಸಲು ಯೋಗ್ಯನಲ್ಲವೆಂದೂ, ಪೂರ್ವಕಾಲದಲ್ಲಿ ಯಾವನು ಶಿವನಿಗೋಸುಗ ತಪಸ್ಸನ್ನಾಚರಿಸಿರುವನೋ ಅವನು "ತಪ್ತತನು" ಎಂದು ಹೇಳಿಸಿಕೊಳ್ಳುವನೆಂದೂ, ತಪಸ್ಸನ್ನಾಚರಿಸದಿದ್ದವನು "ಅತಪ್ತತನು" ಎಂದು ಹೇಳಿಸಿ

ಕೊಳ್ಳುವನೆಂದೂ, ಪರಿಪಕ್ವಾಂತಃಕರಣನು ಮುಕ್ತಿಗೋಸುಗ ಲಿಂಗಧಾರಣವನ್ನು ಹೊಂದುವನೆಂದೂ ವ್ಯಾಸಮಹರ್ಷಿಗಳು ಮುಕ್ತಕಂಠದಿಂದ ಸಾರಿದ್ದಾರೆ.

**ಋಗ್ವೇದದಲ್ಲಿ—**

ಅಯಂ ಮೇ ಹಸ್ತೋ ಭಗವಾನಯಂ ಮೇ ಭಗವತ್ತರಃ ।
ಅಯಂ ಮೇ ವಿಶ್ವಭೇಷಜೋಽಯಂ ಶಿವಾಭಿಮರ್ಶನಃ ।
ಅಯಂ ಮಾತಾ ಅಯಂ ಪಿತಾ ಅಯಂ ಜೀವಾತುರಾಗಮತ್ ।
ಇದಂ ತವ ಪ್ರಸರ್ಪಣಂ ಸಂಬಂಧವೇಹಿ ನಿರಿಹಿ ॥

(ಅಷ್ಟಕ ೮. ಅಧ್ಯಾಯ ೧ ವರ್ಗ ೩೫.)

ಈ ಮಂತ್ರವು ಉಕ್ತವಾಗಿದೆ. ಈ ಮಂತ್ರವಾದರೂ ಕೇವಲ ಲಿಂಗಧಾರಣವನ್ನೇ ಬೋಧಿಸುತ್ತದೆ. ಈ ಮಂತ್ರಾರ್ಥವು "ಲಿಂಗಧಾರಣಚಂದ್ರಿಕೆ" ಎಂಬ ಉದ್ಗ್ರಂಥದಲ್ಲಿ ವಿಶದೀಕರಿಸಲ್ಪಟ್ಟಿರುತ್ತದೆ. ಭರತಖಂಡದಲ್ಲೆಲ್ಲ ಅದ್ವಿತೀಯ ಪಂಡಿತರೆಂದು ಸಮಸ್ತ ಪ್ರಪಂಚದ ಜನರಿಂದ ಹೊಗಳಿಸಿಕೊಳ್ಳಲ್ಪಟ್ಟವರೂ, ಷಟ್‌ಶಾಸ್ತ್ರ ಪಾರಾವಾರಪಾರಂಗತರೂ, ಸ್ಮಾರ್ತಮತೀಯರೂ ಆಗಿದ್ದ ಶ್ರೀಕಾಶೀ ಕ್ಷೇತ್ರನಿವಾಸಿ ಕೈ॥ ಮಹಾಮಹೋಪಾಧ್ಯಾಯ ಶ್ರೀಶಿವಕುಮಾರ ಮಿಶ್ರರವರು ಈ ಉದ್ಗ್ರಂಥಕ್ಕೆ ಸಂಸ್ಕೃತ ಭಾಷೆಯಿಂದ ಘನತರವಾದ ವ್ಯಾಖ್ಯಾನವನ್ನು ಬರೆದು, ಲಿಂಗಧಾರಣದ ಸನಾತನತ್ವವನ್ನು ಸ್ಥಿರಗೊಳಿಸಿರುವರು. ಈ ಪಂಡಿತಪ್ರಕಾಂಡರ ಟೀಕೆಯಿಂದೊಡಗೂಡಿದ ಈ ಗ್ರಂಥವು, ಶ್ರೀಕಾಶೀಕ್ಷೇತ್ರವಿರಾಜಮಾನ ಶ್ರೀಮಜ್ಜಗದ್ಗುರು ವಿಶ್ವಾರಾಧ್ಯಪೀಠಾಧೀಶ್ವರರಿಂದ ೧೯೦೫ ನೆಯ ಇಸ್ವಿಯಲ್ಲಿ ಮುದ್ರಿಸಲ್ಪಟ್ಟಿದೆ. ಈ ಪಂಡಿತೋತ್ತಮರು ಋಗ್ವೇದೋಕ್ತವಾದೀ ಮಂತ್ರಕ್ಕೆ ಲಿಂಗಧಾರಣಪರವಾಗಿ ವ್ಯಾಖ್ಯಾನವನ್ನು ಬರೆದಿರುವರು, ಅವರ ವ್ಯಾಖ್ಯಾನದಲ್ಲಿ ರಾರಾಜಿಸುವ ನಿಜಾರ್ಥವನ್ನು ಸರ್ವರೂ ವಿವೇಚನ ದೃಷ್ಟಿಯಿಂದ ಅವಲೋಕಿಸಬೇಕು. ಅವರು ಬರೆದಿರುವ ಮಂತ್ರಾರ್ಥ ವಿವರವು ಈ ಪ್ರಕಾರವಾಗಿರುವುದು.

"ಅಯಂ ಭಗವಾನ್– ಲಿಂಗರೂಪಸದಾಶಿವಃ, ಮೇ ಹಸ್ತಃ—ಮಮ ಹಸ್ತಗತ ಇತ್ಯರ್ಥಃ । ಅಯಮೇವ ಸದಾಶಿವಃ, ಮೇ ಭಗವತ್ತರಃ—ಮಮ

ಸರ್ವೈಶ್ವರ್ಯವತ್ತರಃ, ಅಯಂ ಮೇ ವಿಶ್ವಭೇಷಜಃ— ವಿಶ್ವೇಷಾಂ ರೋಗಾಣಾಂ ನಿವರ್ತಕೌಷಧಸ್ವರೂಪಃ, ಅಯಂ ಶಿವಾಭಿಮರ್ಶನಃ—ಸರ್ವೇಷಾಂ ಕಲ್ಯಾಣಾನಾಂ ಪ್ರಾಪಕಃ, ಅಯಂ ಮಾತಾ—ಮಾತೃವತ್ ವಾತ್ಸಲ್ಯವಾನ್, ಅಯಂ ಪಿತಾ—ಪಿತೃವದ್ರಕ್ಷಕಃ, ಅಯಂಜೀವಾತುಃ—ಜೀವನಸಾಧನಭೂತಃ, ಹೇ ಸುಬಂಧೋ—ನಿರುಪಾಧಿಕವಿಶ್ವಸುಹೃತ್, ಏಹಿ-ಆಗಚ್ಛ, ಇದಂ—ಮದ್ಧಸ್ತಗತಂ ಲಿಂಗಂ, ತವ ಪ್ರಸರ್ಪಣಂ ವಿಹಾರಸ್ಥಾನಂ, ನಿರಿಹಿ— ನಿರ್ಗಮಚೇಷ್ಟಾರಹಿತಸ್ಸನ್ ಅಸ್ಮಿನ್ ಶಿವಲಿಂಗೇ ತಿಷ್ಠೇತ್ಯರ್ಥಃ ॥ "

(ಲಿಂ. ಚಂ. ವ್ಯಾ. ಪುಟ ೧೫೭)

ಈ ಮಂತ್ರದ ಅರ್ಥವು ಕನ್ನಡದಲ್ಲಿ ಈ ಪ್ರಕಾರವಾಗಿ ಆಗುವುದು :

ಅಯಂ ಭಗವಾನ್— ಲಿಂಗರೂಪನಾದ ಈ ಪರಶಿವನು, ಮೇ—ನನ್ನ ಹಸ್ತಃ — ಹಸ್ತಗತನು, (ಕರಪೀಠವನ್ನಲಂಕರಿಸಿದವನು) ಅಯಂ — ಈ ಪರಶಿವನು, ಮೇ—ನನಗೆ, ಭಗವತ್ತರಃ—ಸಕಲೈಶ್ವರ್ಯ ಸ್ವರೂಪನು, ಅಯಂ—ಇವನು, ಮೇ ವಿಶ್ವಭೇಷಜಃ—ನನ್ನ ಸಮಸ್ತರೋಗಗಳನ್ನು ಹೋಗಲಾಡಿಸಲು ದಿವ್ಯೌಷಧಸ್ವರೂಪನು, ಅಯಂ ಶಿವಾಭಿಮರ್ಶನಃ— ಇವನು ಸಮಸ್ತಕಲ್ಯಾಣಗಳನ್ನು ಕೊಡುವವನು. ಅಯಂ ಮಾತಾ—ಇವನು ತಾಯಿಯಂತೆ ಪ್ರೀತಿಸುವವನಾಗಿಯೂ, ಅಯಂ ಪಿತಾ—ಇವನು ತಂದೆಯಂತೆ ರಕ್ಷಿಸುವವನಾಗಿಯೂ, ಅಯಂ ಜೀವಾತುಃ— ಇವನು ಜೀವನಸಾಧನಭೂತನಾಗಿಯೂ, ಆಗಮತ್— ಪ್ರಾಪ್ತನಾಗಿರುವನು. ಸುಬಂಧೋ— ಎಲೈ ವಿಶ್ವಬಂಧುವೇ! ಏಹಿ—ಬಾ, ತವ ಪ್ರಸರ್ಪಣಂ--ನಿನಗೆ ವಿಹಾರಸ್ಥಾನವಾದ, ಇದಂ—ಈ ನನ್ನ ಕರಪೀಠವನ್ನಲಂಕರಿಸಿರುವ ಶಿವಲಿಂಗವನ್ನು, ನಿರಿಹಿ—ಬಿಟ್ಟುಹೋಗಬೇಡ. (ಯಾವಾಗಲೂ ಈ ಶಿವಲಿಂಗದಲ್ಲಿಯೇ ವಾಸವಾಗಿರು.) ನೆಲಸಿರು.

**ಯಜುರ್ವೇದದಲ್ಲಿ—**

ಯಾ ತೇ ರುದ್ರ ಶಿವಾ ತನೂರಘೋರಾಽಪಾಪಕಾಶಿನೀ ।
ತಯಾನಸ್ತನುವಾ ಶಂತಮಯಾ ಗಿರಿಶಂತಾಭಿಚಾಕಶೀಹಿ ॥

(ತೈತ್ತಿರೀಯಸಂಹಿತಾ-ಕಾಂಡ ೪. ಪ್ರಪಾಠಕ ೫. ಅನುವಾಕ ೧.)

ಈ ಮಂತ್ರವು ಉಕ್ತವಾಗಿದೆ. ಈ ಮಂತ್ರದಲ್ಲಿಯೂ ಲಿಂಗಧಾರಣವು ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಈ ಮಂತ್ರದ ವಿಷಯವನ್ನು ಭಗವತ್ಪಾದ ಶ್ರೀರೇಣುಕಾಚಾರ್ಯರು ಸಿದ್ಧಾಂತಶಿಖಾಮಣಿಯ ಲಿಂಗಧಾರಣಸ್ಥಲದಲ್ಲಿ

ಅಘೋರಾಽಪಾಪಕಾಶೀತಿ ಯಾ ತೇ ರುದ್ರ ಶಿವಾ ತನೂಃ ।
ಯಜುಷಾ ಗೀಯತೇ ಯಸ್ಮಾತ್ತಸ್ಮಾಚ್ಛೈವೋಽಘವರ್ಜಿತಃ ॥

ಈ ರೀತಿಯಾಗಿ ಅಪ್ಪಣೆಕೊಡಿಸಿ, ಲಿಂಗಧಾರಣವನ್ನು ಬೋಧಿಸಿರುವರು. ಯಜುರ್ವೇದಾಂತರ್ಗತಶ್ರೀರುದ್ರಕ್ಕೆ ಕರ್ಣಾಟಕಭಾಷೆಯಿಂದ ಬಹು ಮನೋಹರವಾದ ವ್ಯಾಖ್ಯಾನವನ್ನು ಬರೆದಿರುವ ಸೋಸಲೆಯ ಶ್ರೀರೇವಣಾರಾಧ್ಯರು ತಮ್ಮ ವ್ಯಾಖ್ಯಾನದಲ್ಲಿ—

"ಭೋ ರುದ್ರ—ಎಲೈ ಪರಮೇಶ್ವರನೆ! ತೇ—ನಿನ್ನ, ಅಪಾಪ ಕಾಶಿನೀ—ಮನೋವಾಕ್ಕಾಯಂಗಳಲ್ಲಿ ಪುಟ್ಟಿದ ಬಹುವಿಧಪಾಪಂಗಳನ್ನು ಪ್ರಕಾಶಪಡಿಸದೆ ಸಂಹರಿಸುತ್ತಿರ್ದ, ಅಘೋರಾ—ಭಯಂಕರವಲ್ಲದೆ ಶಾಂತ ರೂಪವಾಗಿರ್ದ, ಯಾ ತನೂಃ—'ಲಿಂಗಂ ತು ಶಿವಯೋರ್ದೇಹಸ್ತಾಭ್ಯಾಂ ಯಸ್ಮಾದಧಿಷ್ಠಿತಃ' ಎಂದು ವಾಯವೀಯಸಂಹಿತಾ ವಾಕ್ಯಮುಂಟಾಗಿ ಆವುದಾನೊಂದು ಇಷ್ಟಪ್ರಾಣಲಿಂಗರೂಪವಾದ ದೇಹವು, ಶಿವಾ—ಮಾಂಗಲ್ಯವುಳ್ಳುದೋ, ಶಂತಮಯಾ—ಭಕ್ತರಿಗೆ ಮಹಾಭೋಗಮೋಕ್ಷರೂಪವಾದ ಸುಖವನ್ನು ಕೊಡಲೋಸುಗವಾಗಿ ಅತ್ಯಂತಸುಖಸ್ವರೂಪವಾಗಿರ್ದ, ತಯಾ ತನುವಾ—ಆ ಇಷ್ಟಪ್ರಾಣ ಲಿಂಗರೂಪವಾದ ಶರೀರದಿಂದೆ, ಭೋ ಗಿರಿಶಂತ—ವಾಗ್ಜಪ್ರಣವಪೀಠದಲ್ಲಿಯೂ ಅನಾಹತಪ್ರಣವಪೀಠದಲ್ಲಿಯೂ ನಿರತಿಶಯಸುಖವನ್ನು ಪಸರಿಸುತ್ತಿರ್ದ ಎಲೈ ಪರಮೇಶ್ವರನೇ! ತ್ವಂ—ನೀನು, ನಃ—'ಇಷ್ಟಮೂರ್ಜಂ ತಪಸಾನುಯಚ್ಛತೇ ಪ್ರಾಣೇಷ್ವಂತರ್ಮನಸೋ ಲಿಂಗಮಾಹುಃ' ಎಂದು ಅಥರ್ವಶಿರೋಮಂತ್ರಮುಂಟಾಗಿ, 'ಇಷ್ಟಲಿಂಗಂ ಪ್ರಾಣಲಿಂಗಮೇಕೀಕೃತ್ಯಾರ್ಚನಂ ಪರಂ' ಎಂದು ವಾತುಲೋತ್ತರ ತಂತ್ರಮುಂಟಾಗಿ ದೇಶಿಕೋಪ

ದೇಶದಿಂದೆ ಶಿಕ್ಷಿತರಾದ ನಮ್ಮ ಕರಕಮುಲದಲ್ಲಿಯೂ ಹೃದಯಕಮುಲದಲ್ಲಿಯೂ, ಅಭಿಚಾಕಶೀಹಿ--ಅಭಿಮುಖವಾಗಿ ಪ್ರಕಾಶಿಸು."

ಮೇಲ್ಕಂಡ ಮಹಾ ಮಂತ್ರಗಳ ಸಾರಾಂಶವಾದರೋ; ಶಿವಲಿಂಗಾರಾಧಕನು ಅರ್ಥಾತ್ ಇಷ್ಟಲಿಂಗಾರಾಧಕನು, ಲಿಂಗಪೂಜೆಯಲ್ಲಿ ನಿರುತನಾಗಿ ತದೇಕಧ್ಯಾನದಿಂದ ಶಿವಪೂಜಾನು ಸಂಧಾನದಲ್ಲಿ ತಲ್ಲೀನನಾಗಿ, ಲಿಂಗರೂಪಿ ಪರಶಿವನನ್ನು ಮಾನಸಿಕವಾಗಿ ಸಂಭೋದಿಸಿ; "ಭೋ ಭೋ! ಜಗತ್ಪತೆ, ಮುಮುಪತೆ! ನನ್ನ ಪ್ರಾಣಾಧಾರನೆ, ನನ್ನಲ್ಲಿ ಕೃಪೆಮಾಡಿ ದಯಾಘನನಾದ ನೀನು ಸದ್ಯಃ ನನ್ನ ಹೃದಯಪೀಠದಿಂದ ಹೊರಹೊಮ್ಮಿ ನನ್ನನ್ನು ಕಟಾಕ್ಷಿಸಿ ರಕ್ಷಿಸುವುದಕ್ಕಾಗಿಯೇ ನನ್ನ ಕರಪೀಠವನ್ನು ಅಲಂಕರಿಸಿ ಸುಪ್ರಸನ್ನನಾಗಿರುವೆ· ನನ್ನ ಸಮಸ್ತ ರೋಗಗಳನ್ನೂ ಹಾಗೂ ಭವರೋಗವನ್ನೂ ಮತ್ತೂ ಅನಂತ ವಿಧವಾದ ಮಾನಸಿಕ ರೋಗಗಳನ್ನೂ ಹೋಗಲಾಡಿಸಿ ನನ್ನನ್ನು ಕಾಪಾಡುವ ವಿಷಯದಲ್ಲಿ ದಿವ್ಯೌಷಧ ಸ್ವರೂಪನೂ, ಭವರೋಗ ವೈದ್ಯನೂ ವೈದ್ಯನಾಥನೂ ನೀನೇ ಆಗಿರುವೆ. ನನ್ನ ಸಕಲ ಐಶ್ವರ್ಯವೂ ಹಾಗೂ ನನ್ನ ಸರ್ವಸ್ವವೂ ನೀನೇ ಆಗಿರುವೆ. ನನಗೆ ತಾಯಿಯೂ, ತಂದೆಯೂ, ಬಂಧುವೂ, ಬಳಗವೂ, ಗುರುವೂ, ದೈವವೂ, ಅಖಿಲವೂ ನೀನೇ ಆಗಿರುವೆ. ನನ್ನ ರಕ್ಷಕನೂ, ಪೋಷಕನೂ, ಜೀವನಸಾಧನ ಭೂತನೂ, ಸಮಸ್ತ ಕಲ್ಯಾಣ ಪ್ರದಾತನೂ ಆಗಿರುವುದರೊಂದಿಗೆ, ಅಖಿಲ ವಿಶ್ವಬಂಧುವೂ ಸಹ ಆಗಿರುವೆ ಹೇ ಪ್ರಭೋ! ದಯಾನಿಧೇ! ನಿನಗೆ ವಿಹಾರಸ್ಥಾನ, ನನ್ನ ಅಂತರಂಗವೆಂಬ ಕೋಮಲವಾದ ಹೃದಯಪೀಠವೊಂದಿರಲು, ಬಾಹ್ಯಪೀಠವೆಂಬ ನನ್ನ ಕರಪೀಠದಲ್ಲಿ ನೀನು ಸದಾ ಅಲಂಕರಿಸಿದ್ದು ನನ್ನ ಮನೋಬುದ್ಧಿ ಭಾವಗಳಿಂದ ಅಗಲದಂತೆ ಪ್ರಸನ್ನನಾಗಿ ಪ್ರಕಾಶಿಸಿ, ನಿನ್ನ ಅಮೃತಹಸ್ತದಿಂದ ಅಭಯವನ್ನೀಡಿ ಹೇ ಸ್ವಾಮಿನ್! ನಿನ್ನ ದಿವ್ಯ ಕರುಣಾಮೃತದಿಂದ ಕಟಾಕ್ಷಿಸಿ ಅನುಗ್ರಹಿಸು. "ತ್ರಾಹಿತ್ರಾಹಿಮಾಂ ಪ್ರಭೋ" ನನ್ನನ್ನು ಅನವರತ ರಕ್ಷಿಸು! ರಕ್ಷಿಸು!! ನಿನ್ನಲ್ಲಿ ಅನನ್ಯಭಾವೇನ ಶರಣಾಗತನಾದ ನನ್ನನ್ನು ಅಗಲದೆ ಸದಾ ನನ್ನೀ ಕರಪೀಠದಲ್ಲಿ ವಿಜೃಂಭಿತನಾದ ನೀನು ನನ್ನ ಅಂತರಂಗದ ಒಳಗೂ ಹೊರಗೂ ಓತಪ್ರೋತವಾಗಿ ನೆಲಸಿದ್ದು, ರಂಜಿಸಿ,

ನನ್ನ ಅರಿವಿನ ಕೊನೆಯ ಮೊನೆಯಲ್ಲಿ ವಿಹರಿಸಿ ಪ್ರಸನ್ನತೆಯಿಂದ, ಭೋಭೋ ಪರಮದಯಾನಿಧೇ! ಕರುಣಾಭರಣನೇ! ಕೃಪೆಮಾಡಿ ನನ್ನ ಕರಕಮಲದಲ್ಲಿಯೂ ಹೃದಯ ಕಮಲದಲ್ಲಿಯೂ ನನಗೆ ಅಭಿಮುಖವಾಗಿ ಗೋಚರಿಸಿ, ಪ್ರಸನ್ನತೆ ಯಿಂದ ಪ್ರಕಾಶಿಸಿ, ನನ್ನನ್ನು ಕಾಪಾಡು ಕಾಪಾಡು! ಅಮೃತಮಯನನ್ನಾಗಿ ಮಾಡು! "ಹರಃ ಓಂ" ಎಂಬ ಗಂಭೀರವೂ ಸರಳವೂ ಆದ ಅರ್ಥಪುಷ್ಟಿಯಿಂದ ಈ ಮಂತ್ರ ರಾಜಿಗಳು ಪ್ರಕಟವಾಗಿರುವುವು. ಶ್ರೀರೇಣುಕರು ಅಗಸ್ತ್ಯಮಹರ್ಷಿ ಗಳಿಗೆ ಈ ತತ್ವವನ್ನು ಬೋಧಿಸುವ ಸಂದರ್ಭದಲ್ಲಿ—|| ಯಜುಷಾಗೀಯತೇ....|| ಅಂದರೆ ಮಹತ್ತರವಾದ ಶಿವಲಿಂಗಧಾರಣ ಹಾಗೂ ಇಷ್ಟಲಿಂಗವನ್ನು ಕರಪೀಠ ದಲ್ಲಿರಿಸಿ ಪೂಜಿಸುವ ವಿಧಾನ ಯಜುರ್ವೇದದಲ್ಲಿ ಪ್ರಶಂಶಿಸಿರುವುದನ್ನು ಎದು ಕಾಣುವಂತೆ ತೋರಿಸಿರುವರು.

ಶ್ರೀ ವ್ಯಾಸಪ್ರೋಕ್ತ ಲಿಂಗಪುರಾಣದ ಉತ್ತರ ಭಾಗದ ೨ನೇ ಅಧ್ಯಾ ಯದ ಸಾರಸಂಗ್ರಹವೂ, ಋಗ್ವೇದ, ಯಜುರ್ವೇದಾಂತರ್ಗತವಾದ ಮಹದಂಶಗ ಳಿಂದ ವಿರಾಜಿಸುವ ಶ್ಲೋಕಗಳ ವಿಚಾರ ತರಂಗಗಳಿಂದ ಕಂಡುಬರುವುದೇ ನೆಂದರೆ:—

"ಸರ್ವಲಿಂಗಂ ಸ್ಥಾಪಯತಿ" ಎಂಬ ಯಜುರ್ವೇದ ಮಂತ್ರವು ಲಿಂಗಧಾ ರಣವನ್ನು ಬೋಧಿಸುತ್ತಿರುವುದರಿಂದ ಶಿವಲಿಂಗವನ್ನು ಧರಿಸಬೇಕೆಂದೂ, ಶಿವದೀಕ್ಷಾಸಮಯದಲ್ಲಿ ಶ್ರೀಗುರುವು ಶಿಷ್ಯನ ಹಸ್ತದಲ್ಲಿ ಶಿವಲಿಂಗವನ್ನಿಟ್ಟು ಇದರ ರಹಸ್ಯವನ್ನು ತಿಳುಹಿಸುವುದರಿಂದ ಇದು "ಪಾಣಿಮಂತ್ರ"ವೆಂದೆನಿಸಿಕೊಳ್ಳುವು ದೆಂದೂ, ಇದು ಪವಿತ್ರವಾದ ಶಿವತತ್ತ್ವವನ್ನು ಪ್ರತಿಪಾದಿಸುತ್ತಿರುವುದರಿಂದ "ಪವಿತ್ರ"ವೆನಿಸಿಕೊಳ್ಳುವುದೆಂದೂ, ಆದುದರಿಂದ ಮೋಕ್ಷಾಪೇಕ್ಷಿಯು ಜಾಗ್ರತ್ಸ್ವ ಪ್ನಾದ್ಯವಸ್ಥೆಗಳಲ್ಲಿಯೂ ಶುಚ್ಯಾಶುಚ್ಯಾದಿಸರ್ವಕಾಲಗಳಲ್ಲಿಯೂ ಈ ಶಿವಲಿಂಗ ವನ್ನು ಒಂದು ನಿಮಿಷವೂ ಎಡಬಿಡದೆ ಧರಿಸಿ ಪೂಜಿಸಬೇಕೆಂದೂ ಈ ಶ್ಲೋಕ ಗಳಿಂದ ಹೊರಹೊಮ್ಮುವ ಆತ್ಮೀಯವೂ ಪ್ರಿಯಕರವೂ ಆದ ನೈಜಾಂಶವಾಗಿ ರುತ್ತೆ.

## ಯಜುರ್ವೇದೇ ವೀರಶೈವಂಗ್ಯೋಪನಿಷದಿಃ

ಸದ್ಯೋಜಾತ ಮುಖಮಾಸೀತ್ ।
ರೇಣುಕಾಚಾರ್ಯಾರಾಧ್ಯ ಉದ್ಭವತಿ ॥ ೧ ॥
ವಾಮದೇವ ಮುಖಮಾಸೀತ್ ।
ದಾರುಕಾಚಾರ್ಯಾರಾಧ್ಯ ಉದ್ಭವತಿ ॥ ೨ ॥
ಅಘೋರಮುಖ ಮಾಸೀತ್ ।
ಘಂಟಾಕರ್ಣ ಗಣೇಶಾರಾಧ್ಯ ಉದ್ಭವತಿ ॥ ೩ ॥
ತತ್ಪುರುಷ ಮುಖಮಾಸೀತ್ ।
ಧೇನುಕರ್ಣ ಗಣೇಶಾರಾಧ್ಯ ಉದ್ಭವತಿ ॥ ೪ ॥
ಈಶಾನ ಮುಖಮಾಸೀತ್
ವಿಶ್ವಕರ್ಣ ಗಣೇಶಾರಾಧ್ಯ ಉದ್ಭವತಿ ॥ ೫ ॥

॥ ವೇದಾಗಮ ಸಂಪ್ರದಾಯ, ಮಾಹೇಶ್ವರ
ತತ್ವ । ಪಿತ್ಪಂಚಾಚಾರ್ಯೇಭ್ಯೋದೀಕ್ಷಿತಃ ।
ಲಿಂಗಸ್ಪರ್ಶನಃ ಸಪವಾಹಂ ॥

ಯಜುರ್ವೇದಾಂತಾರ್ಗತವಾಗಿ ರಂಜಿಸುವ ವೀರಶೈವಂಗ್ಯೋಪನಿಷತ್ತಿನಲ್ಲಿ ಶ್ರೀರೇಣುಕಾದಿ ಪಂಚಾಚಾರ್ಯರು ಸದಾಶಿವನ ಪಂಚಮುಖಗಳಾದ-: ಸದ್ಯೋಜಾತಮುಖ ಪದ್ಮದಿಂದ, ಶ್ರೀ ರೇಣುಕಾಚಾರ್ಯರೂ; ವಾಮದೇವ ಮುಖ ಕಮಲದಿಂದ ಶ್ರೀ ದಾರುಕಾಚಾರ್ಯರೂ; ಅಘೋರ ಮುಖ ಪದ್ಮದಿಂದ ಶ್ರೀ ಘಂಟಾಕರ್ಣ (ಶ್ರೀ ಏಕೋರಾಮಾರಾಧ್ಯ) ಶಿವಾಚಾರ್ಯರೂ; ತತ್ಪುರುಷ ಮುಖ ಕಮಲದಿಂದ ಶ್ರೀ ಧೇನುಕರ್ಣ (ಶ್ರೀ ಪಂಡಿತಾರಾಧ್ಯ ಶಿವಾಚಾರ್ಯರೂ) ಮತ್ತೂ ಪರಶಿವನ ಈಶಾನ ಮುಖದಿಂದ ಶ್ರೀ ವಿಶ್ವಕರ್ಣ (ಶ್ರೀ ವಿಶ್ವೇಶ್ವರ) ಶಿವಾಚಾರ್ಯರೂ ಅವತರಿಸಿ, ಈ ಐವರು, ಶ್ರೀ ಶಿವನಚಿತ್‌ಕಳಾ ಸ್ವರೂಪಿಗಳೇ ಆಗಿ ವೇದ, ಶಿವಾಗಮ, ಉಪನಿಷದಾದಿಗಳಲ್ಲಿ ಮುಕ್ತಕಂಠದಿಂದ ಸ್ತುತ್ಯರಾಗಿ,

ಭುವಿಯಲ್ಲಿ ಯುಗಪ್ರತಿಯುಗಂಗಳ ಪ್ರಾರಂಭಕಾಲದಲ್ಲೇ ಪಂಚಜ್ಯೋತಿರ್ಲಿಂಗ ಗಳ ದಿವ್ಯ ಮುಖಗಳಿಂದ ಆ ವಿರ್ಭವಿಸಿ ದಿವ್ಯ ದೇಹಧಾರಿಗಳಾಗಿ, ಪ್ರಕಾಶಿಸಿದ ಆದಿ ಶ್ರೀ ರೇಣುಕಾದಿ ಪಂಚಾಚಾರ್ಯರೇ ಆಗಿರುವರು.

ಮೇಲ್ಕಂಡ ವಿಷಯು ಯಜುರ್ವೇದದಲ್ಲಿ ಪ್ರೋಕ್ತವಾದ, ಅಪೌರುಷೇಯ (ದೇವವಾಣಿ) ವಾಣಿಯ ಆಧಾರವಾಗಿ ಪ್ರಕಾಶಿತವಾಗಿರುವುದು. ಅಸ್ತು.

ಯಜುರ್ವೇದಾಂತರ್ಗತವಾದ " ವೀರಲೈಂಗ್ಯೋಪನಿಷತ್ತು " ಮತ್ತೂ " ಲಿಂಗಧಾರಣೋಪನಿಷತ್ " ಈ ಎರಡು ಉಪನಿಷತ್ ಗ್ರಂಥರತ್ನಗಳು ಮದ್ರಾಸ್ ಗೌರ್‍ನಮೆಂಟ್ ಓರಿಯೆಂಟಲ್ ಲೈಬ್ರರಿಯಲ್ಲಿ ದೊರೆಯುವುವು. ಚತುರ್ವೇದಗಳಿಂದ ಒಟ್ಟು ೧೧೮೦ ಉಪನಿಷತ್ತುಗಳಿರುವುವು. ಇವುಗಳಲ್ಲಿ ೧೦೮ ಮುಖ್ಯವಾದವುಗಳಾಗಿ ಪರಿಗಣಿಸಲ್ಪಟ್ಟಿರುವುವು. ಇವುಗಳಲ್ಲಿ ಮುಖ್ಯ ವಾದವುಗಳನ್ನು ಆರಿಸಿಕೊಂಡು "ದಶೋಪನಿಷತ್" ಎಂದು ಹತ್ತು ಉಪನಿಷ ತ್ತುಳ್ಳ ಗ್ರಂಥವು ಸಹ ಪರಿಶೋಭಿಸುತ್ತಲಿರುವುದು. ಶಿವತತ್ವವನ್ನು ಬೋಧಿ ಸುವ ಉಪನಿಷತ್ತುಗಳೆಂದರೆ ವೇದಾಂತ ಸಾರೋಪನಿಷತ್; ಭಕ್ತಿಯೋಗೋಪ ನಿಷತ್; ನಿರ್ಲೇಪೋಪನಿಷತ್; ಪಿಪ್ಪಲೋಪನಿಷತ್; ಪ್ರಸಾದಜಾಬಾಲೋಪ ನಿಷತ್; ಚಿದಂಬರೋಪನಿಷತ್; ಪ್ರಣವಶರೀರೋಪನಿಷತ್, ಶೃತಿರಹಸ್ಯೋಪ ನಿಷತ್; ಸಿದ್ಧಾಂತಶಿಖೋಪನಿಷತ್ತು ಇತ್ಯಾದಿಗಳೊಂದಿಗೆ ೨೮ ಶಿವಾಗಮಗಳೂ "ಪರಶಿವ" ತತ್ವವನ್ನು ಅಖಂಡವಾಗಿ ಬೋಧಿಸುತ್ತಲಿರುವುವು.

ಶಿವಲಿಂಗಪೂಜೆ ಹಾಗೂ ಧಾರಣ ವಿಷಯದಲ್ಲಿ ಶ್ರೀ ನಂದೀಶ್ವರನಿಂದ ಪ್ರಣೀತವಾದ ಶಿವಧರ್ಮದಲ್ಲಿ :—

ಇಂದ್ರನೀಲಮಯಂ ಲಿಂಗಂ ವಿಷ್ಣುಃ ಪೂಜಯತೇ ಸದಾ ।
ಬ್ರಹ್ಮಾಮಣಿಮಯಂ ಲಿಂಗಂ ಪೂಜಯತ್ಯನಿಶಂ ಶುಭಂ ।
ಇಂದ್ರೋ ರತ್ನಮಯಂ ಲಿಂಗಂ ಚಂದ್ರೋಮುಕ್ತಾಮಯಂ ತಥಾ ।
ಭಾನುಸ್ತಾಮ್ರಮಯಂಲಿಂಗಂ ಪೂಜಯತ್ಯನಿಶಂ ಶುಭಂ ।

ರೌಕ್ಮಂ ಲಿಂಗಂ ಕುಬೇರಶ್ಚ ಪಾಶೀಚಾಲಕ ಮೇವಚ ।
ಯಮೋನೀಲಮಯಂ ಲಿಂಗಂ ರಾಜತಂ ನೈರ್ಋತಸ್ತಥಾ ।
ಕಾಶ್ಮೀರಂ ಪವನೋ ಲಿಂಗಮರ್ಚಯ ತ್ಯನಿಶಂ ವಿಧೋ ।
ಏವಂತೇ ಲಿಂಗಿತಾಃ ಸರ್ವೇ ಲೋಕಪಾಲಾಃ ಸವಾಸವಾಃ ।
ತಥಾ ಸರ್ವೇಽಪಿ ಗಂಧರ್ವಾಃ ಪಾತಾಲೇ ಕಿನ್ನರೈಃ ಸಹ ॥

ಕೇದಾರಖಂಡ ಅ. ೨

ಶಿವನಾಜ್ಞಾಧಾರಕರಾದ ಭಗವತ್ಪಾದ ಜಗದ್ಗುರು ಶ್ರೀ ರೇಣುಕಾಚಾರ್ಯರು, ಭೂಲೋಕದಲ್ಲಿ ತ್ರಿಲಿಂಗರಾಜ್ಯವೆಂದು ಪಸರ್ಗೊಂಡು ಮೆರೆಯುತ್ತಿಪ್ಪ, ಶುಭಕರವಾದ ಆ ರಾಜ್ಯದಲ್ಲಿ ಕಂಗೊಳಿಸುವ ಕೊಲನುಪಾಕಿ ಶ್ರೀ ಸೋಮೇಶ್ವರ ಜ್ಯೋತಿರ್ಲಿಂಗ ಮುಖದಿಂದ ಹೊರಹೊಮ್ಮುವುದಕ್ಕಾಗಿ, ಕೈಲಾಸವನ್ನು ಬಿಟ್ಟು ಶಿವಯೋಗಶಕ್ತಿಯಿಂದ ಗಗನ ಮಾರ್ಗದಿಂದದ ಕೆಳಗಿಳಿಯುತ್ತಾ....

ಪ್ರವಿದಿತಾಜ ರಮೇಶ ಶಕ್ರ।
ಧ್ರುವದಿವಾಕರ ಕುಮುದ ಬಾಂಧವ ।
ಭುವನಗಳ ದಾಂಟುತ್ತೆ ಗೌರೀ ರಮ
ಣನಾಜ್ಞೆಯಲಿ ॥ ಜವದಿ ಸಾರಿದನಲ್ತೆ
ಭೂಲೋಕವನು । ಸದ್ಯೋಜಾತಮು
ಖಸಂಭವನು, ರೇಣುಕನಮಲ ಶಿವ
ಸಿದ್ಧಾಂತಪಾರಗನು ॥

ಶ್ರೀಮತ್ಪರಶಿವನ ಕೈಲಾಸದ ಒಡ್ಡೋಲಗದಿಂದ ಗೌರೀರಮಣನ ಆಜ್ಞೆಯಂತೆಯೋಗಶಕ್ತಿಯಿಂದ ಆಕಾಶಮಾರ್ಗದಲ್ಲಿ, ಪರಮಾಕಾಶ ಸ್ವರೂಪಿಗಳೂ ಚಿದಾಕಾಶಮಯರೂ ಆದ ಭಗವತ್ಪಾದ ಜಗದ್ಗುರು ಶ್ರೀ ರೇಣುಕಾಚಾರ್ಯರು ಭೂಲೋಕಾಭಿಮುಖವಾಗಿ ಇಳಿಯುತ್ತಾ, ಶ್ರೀಮತ್ ವೈಕುಂಠಕ್ಕೆ ದಯಮಾಡುತ್ತಲೇ ಶ್ರೀ ಲಕ್ಷ್ಮೀನಾರಾಯಣರಿಂದ ಸಂಪೂಜ್ಯರಾಗಿ ಶ್ರೀ ವಿಷ್ಣುವಿಗೆ

ಇಂದ್ರನೀಲಮಣಿ ಲಿಂಗವನ್ನು ಅನುಗ್ರಹಿಸಿ, ಮುಂದೆ ಸತ್ಯಲೋಕಕ್ಕೆ ಆಗಮಿ ಸುತ್ತಲೇ ವಿದ್ಯಾಂಬೆಯಾದ ಶ್ರೀ ಶಾರದಾಂಬೆಯಿಂದೊಡಗೂಡಿದ ಚತು ರ್ಮುಖ ಬ್ರಹ್ಮನು ಶ್ರೀ ರೇಣುಕ ಗುರುಸಾರ್ವಭೌಮನನ್ನು ವಂದಿಸಿ ಸ್ತುತಿಸಿ ಪೂಜಿಸಲು ಬ್ರಹ್ಮನಿಗೆ ಮಣಿಮಯಲಿಂಗವನ್ನೂ ಅಲ್ಲಿಂದ ದೇವಲೋಕಕ್ಕಾಗ ಮಿಸಲು ಶ್ರೀ ಶಚೀದೇವಿಯಿಂದೊಡಗೂಡಿದ ದೇವೇಂದ್ರನು ಶ್ರೀ ಜಗದ್ಗುರು ಶ್ರೀಷ್ಮರನ್ನು ಪೂಜಿಸಲು ರತ್ನದಿಂದರಚಿತವಾದ ಶಿವಲಿಂಗವನ್ನು ಅನುಗ್ರಹಿಸಿ, ಅಲ್ಲಿಂದ ಮುಂದೆ ಚಿತ್ತೈಸುತ್ತಾ ಕ್ರಮವಾಗಿ ಸೂರ್ಯನಿಗೆ ತಾಮ್ರದ ಶಿವಲಿಂಗ ವನ್ನೂ ಚಂದ್ರನಿಗೆ ಮುತ್ತಿನಿಂದ ರಚಿತವಾದ ಶಿವಲಿಂಗವನ್ನೂ ಕುಬೇರನಿಗೆ ಬಂಗಾರದ ಶಿವಲಿಂಗವನ್ನೂ ವರುಣನಿಗೆ ಅರಗಿನ ಶಿವಲಿಂಗವನ್ನೂ, ನೈರ್ಋತನು ಬೆಳ್ಳಿಯ ಶಿವಲಿಂಗವನ್ನೂ, ವಾಯುವು ಕುಂಕುಮದಿಂದ ರಚಿತವಾದ ಲಿಂಗ ವನ್ನೂ ಪಡೆದು ದೀಕ್ಷಾಬದ್ಧರಾಗಿ ಸದಾ ಪೂಜಿಸುತ್ತಲಿರುವರು. ಶಿವಲಿಂಗ ಧಾರಣ ಮತ್ತೂ ಶಿವಲಿಂಗಪೂಜೆ ಮುಮ್ಮೂರ್ತಿಗಳೂ ಮತ್ತು ತ್ರಿಶಕ್ತಿ ದೇವಿಯರೇ ಮೊದಲುಮಾಡಿ ಊರ್ಧ್ವಲೋಕದ ಸಮಸ್ತ ದೇವಾನುದೇವತೆಗ ಳಿಂದ ಮೇಲ್ಕಂಡಂತೆ ಅನುಷ್ಠಿತವಾಗಿರುವುದು. ದೇವಲೋಕವನ್ನೆಲ್ಲಾ ಬಳಸಿ ಅಲ್ಲಿಂದ ಅನುಕ್ರಮವಾಗಿ ಶಿವನಾಜ್ಞೆಯಿಂದ ಈ ಭುವಿಗಿಳಿದು ಜಗತ್ತನ್ನೂ ಪಾವನಗೊಳಿಸಿರುತ್ತಾರೆ. ಪದ್ಮಪುರಾಣ ಹಾಗೂ ಲಿಂಗಪುರಾಣಗಳಲ್ಲಿ ಶ್ರೀ ವ್ಯಾಸಾಚಾರ್ಯರು :—

ಬ್ರಹ್ಮವಿಷ್ಣ್ವಾದಯೋ ದೇವಾ ಮುನಯೋ ಗೌತಮಾ ದಯಃ ।
ಧಾರಯಂತಿ ಸದಾಲಿಂಗಮುತ್ತಮಾಂಗೇವಿಶೇಷತಃ ॥

ಸ್ಕಾಂದ ಪುರಾಣದಲ್ಲಿ :—

ಲಕ್ಷ್ಮೀ ಸರಸ್ವತೀ ಮುಖ್ಯಾದೇವ್ಯೋಮಲ್ಲಿಂಗಮಾದರಾತ್ ।
ಧೃತ್ವಾನಿಜಾಂಗೇ ತಲ್ಲೀನ ಭಾವಾಜಗ್ಮುಃ ಪರಂ ಸುಖಂ ॥

ಎಂದು ಸ್ಪಷ್ಟಪಡಿಸಿರುವರು.

ಸುಪ್ರಭೋದಾಗಮದಲ್ಲಿ ಶ್ರೀ ಪರಶಿವನು ಶ್ರೀ ಪಾರ್ವತಿಯನ್ನುದ್ದೇಶಿಸಿ ಉಸುರಿದುದು:—

ತಸ್ಮಾತ್ತಸ್ಮಾಚ್ಚ ಗಿರಿಜೆ ಪಂಚಾನನ ಸಮುದ್ಭವಾಃ
ಮದಾದಿಸರ್ವಲೋಕಾನಾಂ ಜಗದ್ಗುರುವರೋತ್ತಮಾ ಃ ||

ಹೇ ದೇವಿ! ನನ್ನನ್ನೂ ನನ್ನ ಲೋಕವನ್ನೇ ಮೊದಲುಮಾಡಿ ಸರ್ವಲೋಕಗಳಿಗೂ ಶ್ರೀಮದ್ರೇಣುಕಾದಿ ಪಂಚಾಚಾರ್ಯರೇ ಆದಿ ಜಗದ್ಗುರುಗಳೆಂದು ಅಪ್ಪಣೆ ಕೊಡಿಸಿರುವನು. ಇವರು, ಧರ್ಮಕ್ಷೇತ್ರವಾದ ನಮ್ಮ ಭರತಖಂಡದಲ್ಲಿ ಪ್ರಾಚೀನಕಾಲದಲ್ಲಿ ಮಹರ್ಷಿ ಕುಲಮಂಡಲಿಗೆ ಮಕುಟಪ್ರಾಯರಾಗಿದ್ದ ಶ್ರೀ ಅಗಸ್ತ್ಯ, ದಧೀಚಿ, ದೂರ್ವಾಸ, ಗೌತಮ, ಸಾನಂದ ಶ್ರೀ ವ್ಯಾಸಾಚಾರ್ಯರೇ ಆದಿಯಾಗಿ ಅಖಿಲ ಋಷಿ ಶ್ರೇಷ್ಠರುಗಳಿಗೆಲ್ಲಾ ಹಾಗೂ ರಾಜಮಹಾರಾಜರಿಗೂ ಭಾಷ್ಯಕಾರರಿಗೂ ಜಗದ್ ಗುರುಗಳಾಗಿ ಪೂಜ್ಯರೆನಿಸಿರುವರು. ಶ್ರೀ ಶಿವ ವಿಷ್ಣು, ಬ್ರಹ್ಮ, ಇಂದ್ರ, ಚಂದ್ರ, ಸೂರ್ಯರೇ ಆಗಿ ಸರ್ವರಿಗೂ ವಂದ್ಯರೇ ಆಗಿ ಶಿವ ಲಿಂಗಗಳನ್ನು ಅನುಗ್ರಹಿಸಿರುವರು. ಅದೂ ಅಲ್ಲದೆ ಶ್ರೀ ಪಾರ್ವತಿ, ಲಕ್ಷ್ಮಿ, ಸರಸ್ವತಿ, ಶಚೀದೇವಿ ಯರಾದಿಯಾಗಿ, ಸಮಸ್ತರಿಗೂ ಶಿವಲಿಂಗಧಾರಣ ಮೂಲಕ ಉಪದೇಶವಿತ್ತು ರಕ್ಷಾ ಗುರು, ದೀಕ್ಷಾ ಗುರು ಮೋಕ್ಷ ಗುರುಗಳಾಗಿ ವಿಖ್ಯಾತರಾಗಿರುವರು.

ಭರತ ಖಂಡದಲ್ಲಿರತಕ್ಕ ಸಮಸ್ತ ಪ್ರಾಚೀನದೇವತಾಮೂರ್ತಿಗಳನ್ನು ಶೋಧಕ ದೃಷ್ಟಿಯಿಂದ ಪರಿಶೀಲಿಸಿದ್ದಾದರೆ, ಪ್ರತಿಯೊಂದು ದೇವತಾ ಮೂರ್ತಿಯ ಹಸ್ತದಲ್ಲಾಗಲಿ, ಮಸ್ತಕದಲ್ಲಾಗಲಿ ಲಿಂಗಧಾರಣವಿರುವುದು ಕಂಡುಬರುವುದು. ಭರತಖಂಡದಲ್ಲಿ ಅತ್ಯಂತ ಪ್ರಸಿದ್ಧವೆನಿಸಿದ ಪಂಢರಪುರದಲ್ಲಿರುವ ವಿಠೋಬ ನಾಮಕವಾದ ವಿಷ್ಣುಮೂರ್ತಿಯ ಮಸ್ತಕದಲ್ಲಿಯೂ, ಬಾರ್ಸಿಪಟ್ಟಣದಲ್ಲಿ ವಿರಾಜಿಸುತ್ತಿರುವ ಭಗವಂತನಾಮಕ ವಿಷ್ಣುಮೂರ್ತಿಯ ಮಸ್ತಕದಲ್ಲಿಯೂ, ಅನಂತಶಯನ ರಾಜಧಾನಿಯಲ್ಲಿರುವ ಅನಂತಪದ್ಮನಾಭ ಮೂರ್ತಿಯ ಹಸ್ತದಲ್ಲಿಯೂ, ಬಳ್ಳಾರಿ ಡಿ|| ನರಸಿಂಹದೇವರ ಗುಡ್ಡದಲ್ಲಿ ಶೋಭಿ

ಸುವ ನೃಸಿಂಹಮೂರ್ತಿಯ ಹಸ್ತದಲ್ಲಿಯೂ ಲಿಂಗಧಾರಣವಿರುವುದು ಲೋಕ ಪ್ರಸಿದ್ಧವೇ ಅದೆ.

ಲಕ್ಷ್ಮ್ಯಾದಿಶಕ್ತಯಸ್ಸರ್ವಾಃ ಶಿವಭಾವವಿಭಾವಿತಾಃ ।
ಧಾರಯಂತ್ಯಲಿಕಾಗ್ರೇಷು ಶಿವಲಿಂಗಮಹರ್ನಿಶಂ ॥ ೫೬ ॥
(ಸಿ. ಶಿ. ಪರಿಚ್ಛೇದ ೬)

—ಎಂಬ ಸಿದ್ಧಾಂತಶಿಖಾಮಣಿಯ ಪ್ರಮಾಣಾನುಸಾರವಾಗಿ ಲಕ್ಷ್ಮೀ ಮೊದಲಾದ ಸಮಸ್ತಶಕ್ತಿಗಳೂ ಸಹ ಲಿಂಗಧಾರಣಯುತೆಯರಾಗಿರುವರೆಂದು ಸ್ಪಷ್ಟವಾಗುತ್ತದೆ. ಈ ವಿಷಯದಲ್ಲಿ ಶಕ್ತಿಪೀಠಗಳಲ್ಲಿ ಅತ್ಯಂತ ಪ್ರಸಿದ್ಧ ವಾಗಿರುವ ಕೊಲ್ಲಾಪುರದ **ಮಹಾಲಕ್ಷ್ಮಿಯ** ಮಸ್ತಕದಲ್ಲಿಯೂ, ಕಾಶ್ಮೀರ ದೇಶದ **ಶಾರದಾದೇವಿಯ** ಮಸ್ತಕದಲ್ಲಿಯೂ, ತುಳಜಾಪುರ **ಭವಾನಿಯ** ಮಸ್ತಕದಲ್ಲಿಯೂ, ಕಾಂಚೀ **ಕಾಮಾಕ್ಷಿಯ** ಮಸ್ತಕದಲ್ಲಿಯೂ, ಕಾಶೀ **ವಿಶಾಲಾಕ್ಷಿಯ** ಮಸ್ತಕದಲ್ಲಿಯೂ ಈಗಲೂ ಪರಿಶೋಭಿಸುತ್ತಿರುವ ಲಿಂಗ ಧಾರಣವೇ ಬಲವಾದ ಸಾಕ್ಷಿಯಾಗಿದೆ. ಈ ಸಕಲಶಾಸ್ತ್ರೀಯ ಪ್ರಮಾಣ ಗಳಿಂದಲೂ, ಈ ಪ್ರಮಾಣಗಳಿಗನುಗುಣವಾಗಿ ಈಗಲೂ ಲೋಕದಲ್ಲಿ ಸರ್ವರ ಕಣ್ಣೆದುರಿಗೆ ಪ್ರತ್ಯಕ್ಷವಾಗಿ ತೋರುತ್ತಿರುವ ಚಿಹ್ನೆಗಳಿಂದಲೂ, ಶಿವಲಿಂಗಧಾರ ಣವು ದೇವಾನುದೇವತೆಗಳಿಗೂ ಸಹ ಮಾನ್ಯವಾದುದೆಂಬುದು ಸರ್ವರಿಗೂ ಸ್ಪಷ್ಟವಾಗಿ ಕಂಡುಬರುವದು.

ಈ ಪ್ರಪಂಚದಲ್ಲಿ ತಮ್ಮ ತಪಃಪ್ರಭಾವದಿಂದಲೂ, ಮಹಿಮಾ ಪ್ರಭಾವ ದಿಂದಲೂ, ಜ್ಞಾನಪ್ರಭಾವದಿಂದಲೂ, ವೈರಾಗ್ಯಪ್ರಭಾವದಿಂದಲೂ ಅಸಾಧಾರ ಣವಾದ ಕೀರ್ತಿಯನ್ನು ಸಂಪಾದಿಸಿಕೊಂಡು, ಇಂದಿನವರೆಗೂ ಕೀರ್ತಿಕಾಯ ರಾಗಿ ಪ್ರಕಾಶಿಸುತ್ತಿರುವ ಅಗಸ್ತ್ಯ, ಗೌತಮ, ದೂರ್ವಾಸ, ದಧೀಚಿ, ಸಾನಂದ, ವ್ಯಾಸ, ಕಶ್ಯಪ, ಉಪಮನ್ಯು, ಹರಕಂಠ ಮೊದಲಾದ ಅಸಂಖ್ಯಜನ ಮಹರ್ಷಿಗಳೂ ಸಹ ಲಿಂಗಧಾರಣ ಮಹಿಮೆಯನ್ನರಿತು ಶ್ರೀ ಜಗದ್ಗುರು ಪಂಚಾಚಾರ್ಯರ ಪಾದಾರವಿಂದಂಗಳನ್ನಾಶ್ರಯಿಸಿ, ಶಿವಲಿಂಗಧಾರಣವನ್ನು

ಪಡೆದು. ಅವರಿಂದ ಲಿಂಗಾಂಗಸಾಮರಸ್ಯರೂಪವಾದ ಜ್ಞಾನವನ್ನು ಸಂಪಾದಿಸಿ ಕೊಂಡು ಮುಕ್ತರಾಗಿರುವ ವಿಷಯವು, ಪಾಶುಪತತಂತ್ರ, ಕಾಶೀಖಂಡ, ಶ್ರೀಶೈಲಖಂಡ, ಸಿದ್ಧಾಂತಶಿಖಾಮಣಿ, ಶಂಕರಸಂಹಿತಾ ಮೊದಲಾದ ಗ್ರಂಥಗ ಳಲ್ಲಿ ಚನ್ನಾಗಿ ವಣಿ ಸಲ್ಪಟ್ಟಿದೆ.

## IV

ವೀರಶೈವ ಧರ್ಮವು ವೇದಾಗಮೋಪನಿಷತ್ ಪ್ರತಿಪಾದಿತವಾದ ಪರಮ ವೈದಿಕವೂ ಬಹುಪ್ರಾಚೀನವೂ ಆಗಿರುವುದು ಸರಿಯಷ್ಟೆ. ಈ ಧರ್ಮವು ಸ್ವರ್ಗ ಮರ್ತ್ಯ ಪಾತಾಳಾದಿ ಅಖಿಲ ಲೋಕಗಳಲ್ಲೂ ವ್ಯಾಪಕವಾಗಿ ಪರಿಶೋಭಿಸುತ್ತ ಲಿರುವುದೆಂದೂ, ಶಿವಲಿಂಗೋದ್ಭವಮೂರ್ತಿಗಳಾದ ಜಗದ್ಗುರು ಶ್ರೀ ರೇಣುಕಾದಿ ಪಂಚಾಚಾರ್ಯರು ಈ ಮತತತ್ವವನ್ನು ಪ್ರತಿಯುಗಗಳ ಆರಂಭದಲ್ಲೇ ಅವತ ರಿಸಿ ಸ್ಥಾಪಿಸುತ್ತಲಿರುವರೆಂದೂ; ಶಿವನೇ ಮೊದಲುಮಾಡಿ, ಹರಿಬ್ರಹ್ಮೇಂದ್ರಾದಿ ಗಳಿಗೂ, ವೃಷಭ, ನಂದೀಶ್ವರ, ಗಿರಿಜೆ, ಗಣಪತಿ, ಷಣ್ಮುಖ, ಸೂರ್ಯ ಚಂದ್ರಾದಿಗಳಿಗೂ ಅಷ್ಟದಿಕ್ಪಾಲಕರಿಗೂ ಇವರೇ ಪರಮಪೂಜ್ಯ ಜಗದ್ಗುರೋ ತ್ತಮರೆಂದೂ, ಶಿವಾದ್ವೈತ ಅಥವಾ ಶಕ್ತಿ ವಿಶಿಷ್ಟಾದ್ವೈತವೇ ಈ ಮತದ ಸನಾತನ ಸಿದ್ಧಾಂತವೆಂದೂ, ಶಿವಾಗಮೋಪನಿಷತ್ತುಗಳಲ್ಲಿ ಘಂಟಾಘೋಷ ವಾಗಿ ಉಲ್ಲೇಖವಿರುತ್ತೆ. ಜಗದ್ಗುರು ಶ್ರೀ ರೇಣುಕಾದಿ ಪಂಚಾ ಚಾರ್ಯರು ಊರ್ಧ್ವಾದಿ ದಿವ್ಯಲೋಕಗಳಲ್ಲಿ ಹೇಗೆ ವಿಶ್ರುತರೂ ಪರಮಪೂಜ್ಯ ಜಗದಾಚಾರ್ಯರುಗಳಾಗಿ ವಿರಾಜಿಸುತ್ತಲಿರುವರೋ ಅದರಂತೆಯೇ ಭೂಲೋಕ ದಲ್ಲೂ ಸರ್ವತ್ರ ವ್ಯಾಪಕರಾಗಿ, ಗುರುತರವಾದ ಅವರ ಪ್ರಜ್ವಲಿಸುವ ಗುರು ತ್ವದ ವ್ಯಾಪ್ತಿಯಿಂದ ಅನಂತಾನಂತ ಋಷಿ ಮಹರ್ಷಿಗಳಿಗೂ, ತಪೋಧನ ರಿಗೂ, ಪ್ರಸ್ಥಾನತ್ರಯಂಗಳ ಭಾಷ್ಯಕಾರರುಗಳಿಗೂ, ಚಕ್ರವರ್ತಿ ಸಾರ್ವಭೌ ಮರಿಗೂ, ರಾಜ ಮಹಾರಾಜರುಗಳಿಗೂ, ಶ್ರೀ ಬಸವಾದಿ ಸಹಸ್ರಾರು ಶಿವಶರಣ ಶರಣೆಯರುಗಳಿಗೂ ಆಬಾಲ ವೃದ್ಧರಿಗೂ ಸರ್ವಕಾಲದಲ್ಲೂ ಅಖಂಡ ಪೂಜ್ಯ

ಜಗದ್ಗುರುಗಳಾಗಿ ವಿರಾಜಿಸಿ ಲೋಕ ಕಲ್ಯಾಣಾರ್ಥ ಶಿವಲಿಂಗಧಾರಣೆ, ಶಿವ ಲಿಂಗಪೂಜೆ, ಶಿವಪಂಚಾಕ್ಷರೀ ಮಹಾಮಂತ್ರ ಜಪ, ಶಿವಯೋಗ ಇವೇ ಅತ್ಯಂತ ಮೋಕ್ಷ ಪ್ರದವಾದ ಧರ್ಮವನ್ನು ಜಗತ್ತಿನವರಿಗೆ ಬೋಧಿಸಿ ತಾವೂ ಆಚರಿಸಿ' ಅನುಷ್ಠಿಸಿ, ಜಗದಾದರ್ಶ ಗುರು ಸಾರ್ವಭೌಮರುಗಳಾಗಿ ಬೆಳಗಿ ಈ ಸಿದ್ಧಾಂತ ಜಗತ್ತಿನಲ್ಲಿ ಶಾಶ್ವತವಾಗಿ ನಿಂತು ಪ್ರಕಾಶಿಸುವ ಉದ್ದಿಶ್ಯ ಧರ್ಮ ಕ್ಷೇತ್ರವಾದ ಭರತಖಂಡದಲ್ಲಿ ಪಂಚಮಹಾಧರ್ಮ ಪೀಠಗಳನ್ನೂ ಸ್ಥಾಪಿಸಿರುವುದು ಸ್ತುತ್ಯಾ ರ್ಹವೇ ಆಗಿರುತ್ತೆ. ಈ ಪಂಚಧರ್ಮ ಮಹಾಪೀಠಗಳು ಜಗದಾದಿಯಿಂದಲೂ ಭುವಿಯಲ್ಲಿ ಅವಿಚ್ಛಿನ್ನವಾಗಿ ಪರಿಶೋಭಿಸುತ್ತ ಧರ್ಮಪ್ರಚಾರ ಹಾಗೂ ಉದ್ಧಾರ ಕಾರ್ಯಗಳಲ್ಲಿ ನಿರತವಾಗಿರುವುವು. ಉಪನಿಷತ್ತುಗಳಿಗೂ; ಬ್ರಹ್ಮಸೂತ್ರಗ ಳಿಗೂ ಮತ್ತೂ ಗೀತೆಗೂ ಅಂದರೆ ಪ್ರಸ್ಥಾನತ್ರಯಗಳಿಗೆ, ವೀರಶೈವ ಪರವಾಗಿ, ಶ್ರೀ ಪಂಚಸಿಂಹಾಸನಾಧಿಪತಿಗಳಾದ ಜಗದ್ಗುರು ಶ್ರೀ ರೇಣುಕಾದಿ ಪಂಚಾ ಚಾರ್ಯರು ಭಾಷ್ಯಗಳನ್ನು ಗಂಭೀರವಾಗಿ ರಚಿಸಿ ಲೋಕೋಪಕಾರಮಾಡಿರುವ ರೆಂಬ ವಿಷಯ ಸಂಸ್ಮರಣೀಯವೇ ಆಗಿರುವುದು. ಅದ್ವೈತಮತ ಸ್ಥಾಪನಾ ಚಾರ್ಯರಾದ ಆದಿ ಶ್ರೀ ಶಂಕರಾಚಾರ್ಯರಂಥ ಮಹಾ ಉಜ್ವಲಯೋಗಿಗಳು ಹಾಗೂ ಭಾಷ್ಯಕರ್ತರೂ ಆದ ಅವರು ಭಗವತ್ಪಾದ ಜಗದ್ಗುರು ಶ್ರೀ ರೇಣುಕಾದಿ ಗಳ ದಿವ್ಯಚರಣಕಮಲಗಳಲ್ಲಿ ಶರಣಾಗತರಾಗಿ ಮುಕ್ತರಾಗಿರುವಲ್ಲಿ, ಈ ಮಹಾ ಚಾರ್ಯರ ಮಹಿಮೆಯನ್ನು ಸಹಸ್ರ ನಾಲಿಗೆಯುಳ್ಳ ಫಣಾಮಣಿಯೂ ಸಹ ಸಂಪೂರ್ಣ ವರ್ಣಿಸಲು ಅಶಕ್ತನೇ ಆಗಿರುವನೆಂದಬಳಿಕ, ಪಾಮರನಾದ ನಾನೆಂತು ವರ್ಣಿಸಲು ಸಾಧ್ಯ.

ವೀರಶೈವಧರ್ಮದಲ್ಲಿ ಲಿಂಗಾಂಗಿಯಲ್ಲದವನು ಭವಸಾಗರದಲ್ಲಿ ಬಿದ್ದು ಬಳಲುವ ಭವಿಯೆಂದು ನಿರ್ಣಯಿಸಿರುತ್ತೆ. ಆದ್ದರಿಂದಲೇ ಶಿಶುವು ಜನಿಸುತ್ತಲ್ಲೇ ಪ್ರಸೂತ ಸಂಬಂಧವಾದ ಸೂತಕ ನಿವಾರಣಾರ್ಥ, ಐದನೆ ದಿನವೇ ಅಥವಾ ಒಂಭತ್ತನೇ ದಿನವೇ ಶಿವಲಿಂಗ ಧಾರಣವನ್ನು ಮಾಡುವ ಸಂಪ್ರದಾಯವು ಆದಿ ಯಿಂದಲೂ ಇರುವುದು. ಎಂಟನೇ ವರ್ಷದಲ್ಲಿ ಶಿವದೀಕ್ಷಾ ಸಂಸ್ಕಾರವೂ ಈ ಮತದಲ್ಲಿ ವಿಧಿಸಿರುತ್ತೆ. ತಾಯಿತನು ವಿನೊಳಗೆ ತನುವು ಉಂಟಾಗಿ

ಅದಕ್ಕೆ ಪ್ರಾಣ ಪ್ರತಿಷ್ಠೆಯಾಗುತ್ತಲ್ಲೇ ಲಿಂಗಾಂಗಿ ತನುವಿನಲ್ಲಿ, ಅಲಿಂಗಿ ಜೀವ ತನುವು (ಭವಿಯು) ಇರಬಾರದೆಂದು ತಾಯ ಉದರಕ್ಕೆ ಗರ್ಭಸ್ಥ ಶಿಶುವಿನ ಸ್ಮರಣೆಯಲ್ಲಿ ಮತ್ತೊಂದು ಶಿವಲಿಂಗವನ್ನು ಆಗಲೇ ಧಾರಣೆಮಾಡಿ; ಮಾತೆಯು ಎರಡೂ ಲಿಂಗಗಳನ್ನು ದ್ವಿಸಂಧ್ಯಾಕಾಲಗಳಲ್ಲಿ ಭಕ್ತಿಭಾವದಿಂದ ಎಡಬಿಡದೆ ಪೂಜೆಮಾಡಬೇಕೆಂದೂ ಹಾಗೆ ಮಾಡುವುದರಿಂದ ತಾಯ ತನುವಿನೊಳಗಿನ ಶಿಶುವಿಗೆ:- "ಪ್ರಹ್ಲಾದ, ಧೃವ, ಮಾರ್ಕಂಡೇಯ, ಉಪಮನ್ಯು, ಜ್ಞಾನ ಸಂಬಂದರ್" ಇವರುಗಳಂತೆ ಸುಸಂಸ್ಕೃತ ಸಂಸ್ಕಾರವಾಗುವುದರಲ್ಲಿ ಸಂದೇಹವೇ ಇಲ್ಲ.

ಈ ಸಂದರ್ಭದಲ್ಲಿ, ಜಗಜ್ಯೋತಿ ಎಂದು ಕರ್ಣಾಟಕದಲ್ಲಿ ವಿಖ್ಯಾತರಾದ ಶ್ರೀ ಅಣ್ಣ ಬಸವಣ್ಣನು; ತನ್ನ ಮಾತೆ, ಸಾಧ್ವೀಮಣಿಯಾದ ಮಾದಲಾಂಬಿಕೆಯು ಶ್ರೀ ನಂದೀಶ್ವರನ ದಿವ್ಯ ವರಪ್ರಸಾದದಿಂದ ಗರ್ಭವನ್ನು ಧರಿಸಲು, ಏಳನೇ ತಿಂಗಳಲ್ಲಿ ಗರ್ಭಸ್ತ ಶಿಶುವಿಗೆ (ಶ್ರೀ ಬಸವಣ್ಣನಿಗೆ) ಪ್ರಾಣಪ್ರತಿಷ್ಠೆ ಈಶಾನುಗ್ರಹದಿಂದ ಆಗುತ್ತಲೇ ತಾಯಿಯ (ಶ್ರೀ ಮಾದಲಾಂಬಿಕೆಯ) ಹೆಬ್ಬಯಕೆಯ ಪ್ರಭಾವಪೂರಿತವಾದ ದಿವ್ಯಂಶಗಳು, ಕೋಮಲತರವಾದ ಶಿಶುವಿಗೆ (ಶ್ರೀ ಬಸವಣ್ಣನಿಗೆ) ಶುಭಕರವಾದ ಸಂಸ್ಕಾರಗಳನ್ನು ರೂಪಗೊಳಿಸಲು ಅಣಿಯಾದವು. ಶ್ರೀ ಮಾದಲಾಂಬಿಕೆಯು ಜನ್ಮತಃ ಬ್ರಾಹ್ಮಣ ಸ್ತ್ರೀಯಾದ್ದರಿಂದಲೂ ಮತ್ತೂ ಶ್ರೀಷ್ಮಶೈವ ಸಂಪ್ರದಾಯದಲ್ಲಿ ಬೆಳೆದು, ಆಚಾರ, ನೀತಿ, ಸತ್ಯ, ಧೈವಭಕ್ತಿ; ಶಿವವ್ರತಾನುಷ್ಠಾನಾದಿಗಳಲ್ಲಿ ಸದಾ ತಲ್ಲೀನಳಾಗಿದ್ದು, ಶಿವವ್ರತಿಯಾಗಿದ್ದಳು. ಉದಾರವಾದ ಹೃದಯ, ಉಪವಾಸಾದಿ ಶೈವವ್ರತಾನುಷ್ಠಾನಗಳಲ್ಲಿ ಅಚಲವಾದ ಭಕ್ತಿ, ಶ್ರದ್ಧೆ ಹಾಗೂ ದಾನ, ಧರ್ಮ, ಪರೋಪಕಾರಾದಿ ಸದ್ಗುಣಗಳಿಗೆ ತವರೂರಿನಂತೆ ಪ್ರಕಾಶಿಸಿ, ಶಿವನ ಗುಣಗಾನವನ್ನು ಮಾಡುತ್ತ, ಶಿವನ ಪಂಚವಿಂಷತಿಲೀಲಾ ವೈಭವ ಸತ್ಕಥಾಶ್ರವಣಾಸಕ್ತಿಯಲ್ಲಿ ಪೂರ್ಣ ಮುಳ್ಗಿ ಮೈಮರತಿದ್ದರೂ, ಪತಿಸೇವೆ, ಹಿರಿಯರ ಹಾಗೂ ಅಥಿತಿ ಅಭ್ಯಾಗತರ ಸೇವೆಗಳಲ್ಲಿ "ಗೃಹಿಣೀ ಗೃಹಮುಚ್ಯತೆ" ಎಂಬ ವಾಣಿ, ಈ ಮಾತೆಯಲ್ಲಿ ಅಳವಡಿಸಿಕ್ಕೊಂಡಿತ್ತು. ಶಿವಪ್ರಸಾದವೇ ಈಕೆಯು ಬಯಸುವ ಆಹಾರ,

ಶಿವನ ಅಲಂಕರಿಸಿ, ಪೂಜಿಸಿ, ಸ್ತುತಿಸಿ, ವಂದಿಸಿ, ಹಿಗ್ಗಿ ಶಿವಾನಂದದಲ್ಲಿ ಮುಳುಗುತ್ತ ರೋಮಾಂಚನಗೊಳ್ಳುವುದೆಂದರೆ, ಇವಳ ದಿನಚರಿಯ ಬಯಕೆಗಳೇ ಆಗಿದ್ದವು. ಶಿವನಿರ್ಮಾಲ್ಯವ ಶಿರಸ್ಸಿನಲ್ಲಿ ಮುಡಿದು ಶಿವರೂಪವ ಕಂಡು ಹರ್ಷಿಸಿ, ಶಿವತೀರ್ಥ ಸೇವನೆ ಹಾಗೂ ಶಿವನಿಗರ್ಪಿಸಿದ ಫಲಗಳ ಪ್ರಸಾದವೆಂದು ಸೇವಿಸುವ ಸೇವನೆಯೇ ಈ ಗರ್ಭಿಣಿಯ ಹೆಬ್ಬಯಿಕೆಯಾಗಿತ್ತು.

ಸೂಕ್ಷ್ಮಮತಿಯೂ ಸುಜ್ಞಾನಿಯೂ ಆದ ಗರ್ಭಸ್ಥ ಕೋಮಲ ಕೂಸು (ಶ್ರೀ ಬಸವಣ್ಣ) ತನ್ನ ತಾಯಿಯ ಸದ್ಭಾವ, ಶಿವಭಕ್ತಿ, ದಯಾ, ಸತ್ಯ ಪ್ರಿಯತೆ, ದಾನ, ಧರ್ಮ, ಜ್ಞಾನಗಳನ್ನು ಶ್ರೀ ಮಾದಲಾಂಬಿಕೆಯ ರಕ್ತಗತ ವಾದ ಅಖಿಲ ದೈವೀ ಸಂಪತ್ತನ್ನು ದೈವದತ್ತವಾಗಿ ಗರ್ಭದಲ್ಲೇ ಮೈಗೂಡಿಸಿ, ಧರ್ಮ, ಶಿವಜ್ಞಾನ ಪೂರ್ಣ ಶಿಶುವಾಗಿ ಭುವಿಯಲ್ಲಿ ಉದಯಿಸಿದುದರಿಂದಲೇ, ಬಾಲ್ಯಾವಸ್ಥೆ ಮೊದಲುಮಾಡಿ, ಶ್ರೀ ಕೂಡಲಿ ಸಂಗಮೇಶ್ವರನಲ್ಲಿ ಬಯಲಾಗುವ ವರವಿಗೂ ಅವನಲ್ಲಿ ಕಂಡುಬಂದ ಲೋಕಕಲ್ಯಾಣಕರ ಅನುಭವಾಮೃತ ವಾಙ್ಮಯ ಶರಧಿಯು ಎಂದೆಂದಿಗೂ ಅಚ್ಚಳಿಯದೆ, ಧೃವ ತಾರೆಯಂತೆ ಲೋಕ ಹಿತೈಷಿಯಾಗಿ ಪ್ರಜ್ವಲಿಸಲು ಕಾರಣವಾಯಿತು. ಗರ್ಭಿಣಿಯಾದ ಶ್ರೀ ಮಾದ ಲಾಂಬಿಕೆಯಂಥ ಸಾಧ್ವೀಮಣಿಗಳ ಸನ್ಮಾರ್ಗ, ಗರ್ಭಸ್ಥ ಶಿಶುಗಳನ್ನು ಪೂರ್ಣ ಜ್ಞಾನಿಗಳನ್ನಾಗಿ ಮಾಡುವುದರಲ್ಲಿ ಬಹಳಮಟ್ಟಿಗೆ ಸಹಕಾರವೇ ಆಗುತ್ತೆ. ಇವಳು ಅಲಿಂಗಿ ಬ್ರಾಹ್ಮಣ ಸ್ತ್ರೀಯಾದ್ದರಿಂದ ಗರ್ಭಕ್ಕೆ ಲಿಂಗಧಾ ರಣ ಸಂಸ್ಕಾರದ ಪ್ರಸಂಗವಿಲ್ಲವಾದರೂ, ಭಾವಗತ, ರಕ್ತಗತ, ಅಸ್ತಿಗತವಾದ ತಾಯಿಯ ಶ್ರೇಷ್ಠ ದೈವೀ ಅಂಶಗಳ ಮಹತ್ವದಿಂದ ಶ್ರೀ ಬಸವಣ್ಣನು ಪ್ರಭಾವ ಪೂರಿತ ದೈವೀ ಸಂಪತ್ತಿನಿಂದ ಪ್ರತಿಭಾವಂತನಾಗಲು ಕಾರಣವಾಯಿತು.

ಶ್ರೀ ಗುರುವು ತನ್ನ ಕರಕಮಲಗಳಲ್ಲಿ ಶಿಶುವನ್ನಿರಿಸಿ, ದಿವ್ಯ ಕೃಪಾದೃಷ್ಠಿ ಯಿಂದ ಈಕ್ಷಿಸಿ (ನೋಡಿ), ಹಸ್ತಮಸ್ತಕ ಸಂಯೋಗದೀಕ್ಷೆಯಿಂದ ಆ ಕಂದಮ್ಮ ನನ್ನು ಮೈದಡವಿ,ಕೋಮಲವಾದ ಬಲಗಿವಿಯಲ್ಲಿ ಪಾವನವಾದ ಶಿವಪಂಚಾಕ್ಷರೀ ಮಹಾಮಂತ್ರವನ್ನು ಉಚ್ಚರಿಸಿ ಒಳಗಿನ ಶಿವಶಕ್ತಿಯನ್ನು ಕೊಂಚ, ಉಜ್ವಲ ಗೊಳಿಸಿ, ಕಂಠಕ್ಕೆ ಶಿವಲಿಂಗವನ್ನು ಧಾರಣೆಮಾಡಿ, ಮಹತ್ತರವಾದ ಲಿಂಗಧಾರಣ

ಮಹೋತ್ಸವದೊಂದಿಗೆ ನಾಮಕರಣ ಮಹೋತ್ಸವವನ್ನೂ ಮಾಡಿ ಆಶೀರ್ವದಿಸುವನು. ಗುರುವಿನ ಕರುಣಾ ಕಟಾಕ್ಷದಿಂದ, ಗುರುವಿನ ಅಮೃತ ಹಸ್ತಕ್ಕೂ ಶಿಶುವಿನ ಕೋಮಲವಾದ ಮಸ್ತಕಕ್ಕೂ ಶಿವ ಮಂತ್ರ ಉಚ್ಚಾರಣ ಪೂರ್ವಕವಾದ ದಿವ್ಯ ಸಂಪರ್ಕದಿಂದ ಸ್ವಯಂತೇಜಸ್ಸು ಉಂಟಾಗುವುದರಿಂದ, ಶಿರಸ್ಸಿನ ಸಹಸ್ರಾರ ಕಮಲದಲ್ಲಿ ಅಂತರ್ಗತವಾಗಿರುವ ಪರಶಿವರೂಪ ಚಿತ್ಕಳೆಯನ್ನು ಹೊರಹೊಮ್ಮಿಸಿ ಶಿವಯೋಗದಿಂದ ಆ ದೈವೀಶಕ್ತಿಯನ್ನು ಶಿಷ್ಯನ ಇಷ್ಟಲಿಂಗದಲ್ಲಿ ಸಮಾವೇಶಗೊಳಿಸಿ ನಿತ್ಯಪೂಜೆಗೆ ಅಣಿಮಾಡಿಕೊಡುವನು. ಶಿಷ್ಯನು ತನ್ನ ಜೀವಿತದಲ್ಲಿ ತಾನು ಬೆಳೆದು ದೊಡ್ಡವನಾದ ಹಾಗೆ ನಿತ್ಯಕರ್ಮವಾದ ಶಿವಪೂಜೆಯಲ್ಲಿ ನಿರತನಾಗಿ ನಿಷ್ಠಾವಂತನಾದರೆ, ಚಂದ್ರನ ಸಂಪರ್ಕದಿಂದ ಚಂದ್ರಕಾಂತ ಶಿಲೆಯಲ್ಲಿ ನೀರು ಹೊರಹೊಮ್ಮುವಂತೆ, ಸೂರ್ಯನರಶ್ಮಿಗಳ ಸಂಪರ್ಕದಿಂದ ಸೂರ್ಯಕಾಂತ ಶಿಲೆಯಲ್ಲಿ ಅಗ್ನಿ ಹೊರಬಿದ್ದು ಸಹಜವಾಗಿರುವಂತೆ ಜೀವನಲ್ಲಿ ಶಿವನು ಸ್ವಭಾವಸಿದ್ಧವಾಗಿಯೇ ಇರುವ ಅನುಭವವು ನಮ್ಮ ಅಂತರಂಗದಲ್ಲಿ ಕಾಣಬಹುದು. ಸದ್ಗುರುವಿನ ದಿವ್ಯ ಕಟಾಕ್ಷ ಹಾಗೂ ಆಶೀರ್ವಾದ ಅನುಗ್ರಹದಿಂದ, ದೇಹದೊಳಗಿನ ಆತ್ಮ ದೇವನ ತೇಜಸ್ಸು ಇಷ್ಟಲಿಂಗದಲ್ಲಿ ಅಂತರ್ಗತವಾಗುವುದು. ಅನನ್ಯ ಭಕ್ತಿಭಾವದಿಂದ ನಿತ್ಯ ಸಂಧ್ಯಾಕಾಲಗಳಲ್ಲಿ ಆರಾಧಿಸಿ, ಪೂಜಿಸುವುದರಿಂದ, ಪೂಜಕನಿಗೆ ಪೂಜ್ಯನಾದ ಶಿವಲಿಂಗವು ಚಿತ್ಸ್ವರೂಪವೆಂದೂ, ತನ್ನಲ್ಲಿ ಅಡಗಿರುವ ಯತ್ಕಿಂಚಿತ್ ಶಕ್ತಿ ಪ್ರಾಣ ಸ್ವರೂಪವೆಂದೂ, ತನ್ನ ಇಷ್ಟಲಿಂಗವು ಈ ಎರಡರ ಸ್ವರೂಪ ಸಾಕ್ಷಾತ್ಕಾರಮಯವಾದುದೆಂದೂ, ಭಾಸವಾಗುವುದು. ಇಂಥಾ ಜ್ಞಾನಾನುಭವವು ಅಂತರಂಗದಲ್ಲಿ ವೃದ್ಧಿಗೊಳ್ಳುತ್ತಾ, ಪತಿಯ ಹೊರತು ಅನ್ಯರಲ್ಲಿ ಮನಸನ್ನಿಡದ ಪತಿವ್ರತಾ ಸ್ತ್ರೀಯಂತೆ, ಭಕ್ತನು "ಲಿಂಗಪತಿ – ಶರಣಸತಿ" ಎಂಬ ಸದ್ಭಾವದಿಂದ ಇಷ್ಟಲಿಂಗದ ದಿವ್ಯಾನುಗ್ರಹದಿಂದ, ಸೂಕ್ಷ್ಮ ಶರೀರದಲ್ಲಿ ವಿರಾಜಿಸುವಪ್ರಾಣ ಲಿಂಗೋಪಾಸಕನಾಗಿ, ಶಿವನಲ್ಲಿ ನೆಟ್ಟಮನಸ್ಸಿನಿಂದ ರಮಿಸುವ ಸುಯೋಗವನ್ನು ಪಡೆಯುವನು. ಲಿಂಗಾಂಗಿಯಾದ ಶಿವಶರಣನು ಅಂತರಂಗದಲ್ಲಿ ಪ್ರಾಣಲಿಂಗೋಪಾಸನೆಯಿಂದ ನಿತ್ಯಾನಂದವನ್ನು ಅನುಭವಿಸುತ್ತ, "ಶಿವೋಹಂ" ಭಾವನೆಯಲ್ಲಿ ತಲ್ಲೀನನಾಗಿ,

ಕಾರಣದೇಹದಲ್ಲಿ ಪ್ರಜ್ವಲಿಸುವ ಭಾವಲಿಂಗದ ಸ್ಮರಣೆ. ಅನುಸಂಧಾನ, ಈಕ್ಷಣೆ, ಧಾರಣ, ಇವೇ ಮೊದಲಾದ ಶ್ರೇಷ್ಠ ಪೂಜಾ ವಿಧಾನಗಳಲ್ಲಿ ಆಸಕ್ತನಾಗಿ ಶರಣನೆಂದೆನಿಸಿ, ಶಿವಶರಣನು ಶಿವಯೋಗದಲ್ಲಿ ವಿಲೀನನಾಗಿ "ಜ್ಞಾನಕ್ಕಿಂತಲೂ ಸಹಸ್ರಪಟ್ಟು ಧ್ಯಾನವು ಉತ್ಕೃಷ್ಟವಾದುದು" ಎಂಬ ಅನುಭವ ವಾಣಿಯಂತೆ ಧ್ಯಾನಗಮ್ಯನಾದ ಸ್ವಾಮಿಯನ್ನು ಸದ್ಭಾವೈಕ್ಯತೆಯಿಂದ ಭಾವ ಲಿಂಗರೂಪನನ್ನಾಗಿ ಕಂಡು ಕಾಂಕ್ಷಿತನಾದ ಶರಣನು, ಮನೋವಾಕ್ಕಾಯಾದಿ ಅಖಿಲಕ್ರಿಯೆಗಳನ್ನೂ ಅನನ್ಯ ಭಾವೇನ ಭಾವಲಿಂಗಕ್ಕರ್ಪಣಮಾಡಿ, ಈ ಪವಿತ್ರವಾದ ಸೂಕ್ಷ್ಮ ಬ್ರಾಹ್ಮೀ ಸ್ಥಿತಿಯಲ್ಲಿ, ॥ ಶರಣಮೇವ ಲಿಂಗಂ । ಲಿಂಗಮೇವ ಶರಣಃ ॥ ಎಂಬ ಅನ್ಯೋನ್ಯಭಾವೈಕ್ಯತೆಯಿಂದ. ಅನಿರ್ವಚನೀಯವಾದ ಪ್ರೇಮಾಮೃತ ಸಾಗರದಲ್ಲಿ ತಾದಾತ್ಮ್ಯ ಭಾವವನ್ನು ಅನುಭವಿಸುವ ಸುಯೋಗವು ಭಾವಲಿಂಗಾರ್ಚನೆಯಿಂದ ಕೈಗೂಡುವುದು. ಶಿವಪೂಜೆಯು ಮೊಟ್ಟಮೊದಲು ದ್ವೈತಭಾವನೆಯಿಂದ ಅಂಕುರಿಸಿ, ಪೂಜಕನು ತಾನು ಭಕ್ತನೆಂತಲೂ, ಪೂಜ್ಯವಾದ ಇಷ್ಟಲಿಂಗವು ಭಗವಂತನೆಂತಲೂ ಸ್ಫೂರ್ತಿಗೊಂಡು; ಈ ಪೂಜಕಭಾವವು, ಶುಕ್ಲಪಕ್ಷದ ಚಂದ್ರನಂತೆ ಬಾಹ್ಯಾಂತರಂಗಗಳಲ್ಲಿ ಅನುಕ್ರಮವಾಗಿ ಬೆಳೆದು. ಇಷ್ಟ, ಪ್ರಾಣ, ಭಾವಲಿಂಗಗಳ ಆವಾಸಸ್ಥಾನವಾದ ಆತ್ಮಲಿಂಗ ಅಥವಾ ಮಹಾಲಿಂಗದ ಸ್ವಯಂ ಜ್ಯೋತಿ ದರ್ಶನವನ್ನು ತನ್ನ ಹೃದಯ ಗುಹೆಯಲ್ಲಿ, ॥ ಧ್ಯಾನಾವಸ್ಥಿತ ತದ್ಗತೇನ ಮನಸಾ । ಪಶ್ಯಂತಿ ಯಂ ಯೋಗಿನಃ ॥ ಎಂಬಂತೆ ಕಂಡು ಆತ್ಮಾದೇವನಾದ ಗುಹೇಶ್ವರನನ್ನು, ತನ್ನ ಪ್ರಶಾಂತವಾದ ಹೃನ್ಮಂದಿರದಲ್ಲಿ ॥ ಅಂತರ್ಜ್ಯೋತಿ ರಮೇಯ ಮೇಕಮಮೃತಂ ॥ ಅಂದರೆ ಅದ್ವಿತೀಯನೂ, ಸ್ವಯಂ ಜೋತಿಯೂ, ಅಪ್ರಮೇಯನೂ, ಅಮೃತಮಯನೂ ಆಗಿ ಪರಿಶೋಭಿಸುವ, ದೇದೀಪ್ಯವಾದ ಪ್ರಣವಾಕಾರ ಸ್ವರೂಪಧ್ಯಾನದಲ್ಲಿ, ಪೂರ್ಣ ತಲ್ಲೀನನಾಗಿ, ಅದ್ವೈತವೂ ಅಭೇದವೂ (ಶಿವಜೀವಭೇದ ಭಾವವಡಗಿ) ಆಗಿ ರಾರಾಜಿಸುವ ತಾದಾತ್ಮ್ಯಸ್ಥಿತಿಯನ್ನು ಹೊಂದಿ, ಶರಣನು ಶಿವಮಯನಾಗಿ ಲಿಂಗಾಂಗ ಸಾಮರಸ್ಯಾನುಭವದಲ್ಲಿ ಮುಳುಗಿ ಒಂದಾಗಿರ್ಪನು. ಹೀಗಿರಲು ಸಾಧ್ಯವೆಂಬ ಅಂಶವನ್ನು ಶ್ವೇತಾಶ್ವ

ತರೋಪನಿಷತ್ತು ॥ ತೇಧ್ಯಾನಯೋಗಾನುಗತಾ ಅಪಶ್ಯನ್ ॥ ಆತ್ಮದರ್ಶಿಗಳು ತಮ್ಮ ನಿಜಸ್ವರೂಪವಾದ ಆತ್ಮಸ್ವರೂಪವನ್ನು ಧ್ಯಾನಯೋಗಬಲದಿಂದ ದರ್ಶನಮಾಡುವರೆಂದು ಸಾರುತ್ತಿರುವುದು. ದ್ವೈತಾರಾಧನೆಯಿಂದ ಮೊದಲು ಮಾಡಿದ ಉಪಾಸನೆಯು ನಿರಂತರವೂ ದ್ವೈತವಾಗಿಯೇಯಿರದೆ, ಈ ಮತ ತತ್ವಾನು ಸಂಧಾನದಲ್ಲಿ, ವೇದಾಗಮೋಪನಿಷತ್ತುಗಳ ಹೃದಯದ ತಿರುಳಿನ ಸಾರದಂತೆ ಅದ್ವೈತಾಮೃತ ಸಾಗರದಲ್ಲಿ ಒಂದಾಗಿ ಬೆರತು ॥ ಏಕತ್ವಮನು ಪಶ್ಯತಃ ॥ ಶರಣನು ಶಿವ ಸ್ವರೂಪದಲ್ಲಿ ಒಂದಾಗಿ ವಿಲೀನನಾಗುವನು. ಇದೇ ಕೈವಲ್ಯ ಅಥವಾ ಮೋಕ್ಷ. ಆದ್ದರಿಂದ ವೀರಶೈವಮತ ಭೇದಾ ಭೇದಮತ ವೆಂತಲೂ ಶ್ರುತಿಪ್ರಮಾಣಗಳ ಮೇಲೆ ನಿರ್ಣಯಿಸಲ್ಪಟ್ಟಿರುತ್ತೆ. ಶರಣನು ॥ ಪತಿರ್ಲಿಂಗಂ ಸತೀಚಾಹಂ । ಹೃದಿಯುಕ್ತಃ ಸ್ವಯಂಪ್ರಭುಃ ॥ ಪತಿದೇವ ನಾದ ಸ್ವಯಂ ಪ್ರಭುವು ತನ್ನ ಹೃದಯದಲ್ಲೇ ಬೆಳಗುತ್ತಿರುವನೆಂದೂ ತಾನು ಆ ಆತ್ಮ ದೇವನಿಗೆ ಸತಿಯೆಂಬ ಪತಿವ್ರತಾನಿಷ್ಠೆ ಅಚಲವಾಗಿ ಇದ್ದದ್ದೇ ಆದರೆ ಶೀಘ್ರದಲ್ಲೇ ಲಿಂಗಾಂಗ ಸಾಯುಜ್ಯವನ್ನು ಹೊಂದಬಹುದು. ಭೇದಭಾವವುಳ್ಳ ಜ್ಞಾನ ಎಷ್ಟೇ ಉನ್ನತಮಟ್ಟದ್ದಾಗಿದ್ದರೂ ಬಂಧನದಲ್ಲಿ ತಳ್ಳುವುದೆಂಬುದು ಶತ ಸಿದ್ಧವಾದ ಅಂಶವೆಂಬುದನ್ನು ಮರೆಯಬಾರದು.

## V

॥ ಕರಾಬ್ಜ ಪೀಠೇವಿನ್ಯಸ್ಯ । ತಧ್ಯಾನಾಸಕ್ತಮಾನಸಃ ।
ಲಿಂಗಾಂಗ ಸಂಗಿನೋವತ್ಸ । ಪುನರ್ಜನ್ಮನವಿದ್ಯತೇ ॥

(ಶ್ರೀ ಶೈಲ ಖಂಡ ಅಧ್ಯಾಯ ೮೫)

ಇತ್ಯಾದಿಕಾರಣಗಳಿಂದ ಲಿಂಗಧಾರಣ, ಇಷ್ಟಲಿಂಗಾರಾಧನೆ ಪರಮವೈದಿಕವೂ ಸನಾತನವೂ ಸುರಾಸುರನರರಾದಿಯಾಗಿ ಸಮಸ್ತರಿಗೂ ಸಕಲಾಭೀಷ್ಟ ಪ್ರದವೂ ಮೋಕ್ಷೈಕ ಸಿಂಧುವೂ ಆಗಿರುವುದೆಂಬುದು ನಿರ್ವಿವಾದವೇ ಆಗಿ

ರುತ್ತೆ. ಶ್ರೀ ಗುರುವಿನಿಂದ ಅನುಗ್ರಹಿಸಲ್ಪಟ್ಟ ಇಷ್ಟ ಲಿಂಗವನ್ನು ॥ ಕರಾಬ್ಜ ಪೀಠೇ ವಿನ್ಯಸ್ಯ ॥ ಪವಿತ್ರವಾದ ವಾಮಕರ ಪೀಠದಲ್ಲಿರಿಸಿ ವಿಧಿವತ್ತಾಗಿ ಪೂಜಿಸುವುದು ಬಾಹ್ಯಭಕ್ತಿ ಎನಿಸುವುದು. ನಿರಂತರ ಅಂತರಂಗದಲ್ಲಿ ನಿರತಿಶಯಾನಂದವನ್ನು ಕಾಣಲು (ತನ್ನಲ್ಲಿ ತನ್ನನ್ನು ಕಾಣಲು) ಮಾನಸಿಕ ಪೂಜೆಯನ್ನು ವೃದ್ಧಿಗೊಳಿಸಬೇಕು. ಈ ಎರಡೂ ಪೂಜಾ ವಿಧಾನಗಳಲ್ಲಿ ಅನುಷ್ಠಾನಪರನಾಗಿ ದಿನೆ ದಿನೆ ನಿಷ್ಕಾಮಕರ್ಮಾರ್ಚನೆಯಿಂದ ಮನಸ್ಸಿನ ಹಾಗೂ ಅಂತಃಕರಣದಲ್ಲಿ ಧಾವಳ್ಯವಾದ ಪರಿಶುದ್ಧತೆಯನ್ನು ಪಡೆದು ಮನೋಚಾಂಚಲ್ಯವನ್ನು ದೂರೀಕರಿಸಿಕೊಳ್ಳಬೇಕು. ಇದು ಪ್ರಥಮ ಹೆಜ್ಜೆ. ಎರಡನೆಯದಾಗಿ ಉಪಾಸನಾ ಬಲದಿಂದ ಮನೋಬುದ್ಧಿ ಸ್ಥೈರ್ಯಂಗಳ ಸಾಧಿಸಿ, ವಿಕ್ಷೇಪಾದಿ ದೋಷಗಳಿಂದ ಕಲುಷಿತನಾಗದ ಸ್ಥಿತ ಪ್ರಜ್ಞಾವಸ್ಥೆಯ ಊರ್ಧ್ವಹಂತದಲ್ಲಿ ಹೆಜ್ಜೆಯೂರಿರಬೇಕು. ತದನಂತರದಲ್ಲಿ, ಅಂತರ್‌ಬಾಹ್ಯೇಂದ್ರಿಯಗಳನ್ನು ಸಾಧನೆಯ ಮೂಲಕ ॥ ಅಭ್ಯಾಸೇನತು ಕೌಂತೇಯ... ॥ ಎಂಬ ಗೀತೋಕ್ತಿಯಂತೆ, ತನಗಧೀನಗೊಳಿಸಿಕೊಳ್ಳಬೇಕು. ಇಂದ್ರಿಯಗಳಿಗೂ, ವಿಷಯಾದಿಗಳಿಗೂ ಗುಲಾಮನಾದವನು, ಅವನೆಂಥಾ ವಿರಕ್ತನಾದರೂ ॥ ಹೆಣ್ಣಿದ್ದ ಮನೆಗೆ ನೆಡೆಮಾಡಿದ ಸನ್ಯಾಸಿ। ಮಣ್ಣು ಮಸಿಯಾದ ಸರ್ವಜ್ಞ ॥ ಮತ್ತೂ ॥ ಬೆಣ್ಣೆ ಬೆಂಕಿಯ ನಡುವೆ ತಣ್ಣಗಿರಬಲ್ಲುದೇ ॥ ಎಂಬಿವೇ ಪ್ರಮಾಣಗಳಂತೆ ಇಂದ್ರಿಯಗಳಿಗೆ ವಿಷಯಾದಿಗಳ ಮೇಲೆ ಬಲಿಷ್ಠವಾದ ಪಟ್ಟಿರುವುದರಿಂದ ಕ್ಷಣಾರ್ಧದಲ್ಲಿ ಕಲುಷಿತಚಿತ್ತನಾಗಿ ಭ್ರಷ್ಟನಾಗುವನು. ಆದ್ದರಿಂದ ಬ್ರಹ್ಮ ಜಿಜ್ಞಾಸಿಯು ಜಿತೇಂದ್ರಿಯ ಬಲದಿಂದ ಪರಮ ಶಾಶ್ವತತರದ ವೈರಾಗ್ಯವ ಕೈಸಿಡಿದು ॥ ತಧ್ಯಾನಾಸಕ್ತ ಮಾನಸಃ ॥ ಅಂತರ್ಮುಖಿಯಾಗಿ ಇಷ್ಟಲಿಂಗಧ್ಯಾನಾಸಕ್ತನಾಗಿ, ಲಿಂಗದಲ್ಲಿ ಪ್ರಾಣವನ್ನೂ ಪ್ರಾಣದಲ್ಲಿ ಶಿವಲಿಂಗವನ್ನೂ (ಅಂದರೆ ಇಷ್ಟಲಿಂಗವನ್ನೂ) ಧ್ಯಾನಯೋಗ ಶಕ್ತಿಯಿಂದ ಸಂಬಂಧಿಸಿಕೊಂಡು ಮನಸ್ಸನ್ನು ಸಂಪೂರ್ಣವಾಗಿ ಶಿವನಲ್ಲಿ ವಿಲೀನಗೊಳಿಸಿ ಅಂತರಂಗದಲ್ಲಿ ಐಕ್ಯೈಕ ಭಾವದಿಂದ ಶಿವಾರ್ಪಿತ ಚಿತ್ತವೃತ್ತಿಯಿಂದಿರುವುದೇ ಪರಾಭಕ್ತಿ ಎನಿಸುವುದು. ಇದರ ಪೂರ್ಣತೆಯ ಅನುಭವದ ಫಲವಾಗಿ "ಶರಣನಿಗೆ ಅವಸಾನ ಭೂಮಿ ಶಿವಲಿಂಗ-

ಶಿವಲಿಂಗಕ್ಕವಸಾನ ಭೂಮಿ ಶರಣ" ಎಂಬಷ್ಟು ಶಿವಜೀವರ ನಿಕಟಸಂಬಂಧ ಸಾಮರಸ್ಯವು ವ್ಯಕ್ತವಾಗುವುದು. ಇಂಥಾ ಉನ್ನತವಾದ ಪರಾಭಕ್ತಿಯು ಕ್ಷೀರ ಸಾಗರದಂತೆ ಅಂದರೆ ಪೌರ್ಣಮಿಯ ಪೂರ್ಣ ಚಂದ್ರೋದಯವನ್ನು ಕಂಡ ಕ್ಷೀರಸಾಗರವು ಪರಮಾನಂದದಿಂದ ಉಕ್ಕುವಂತೆ ದೈನಂದಿನದ ಸತತ ಶಿವಪೂಜಾ ನುಷ್ಠಾನ ಯೋಗಬಲವು, ಶಿವಜೀವರ ನಡುವೆ ಸಾಮರಸ್ಯ (ಲಿಂಗಾಂಗ ಸಾಮರಸ್ಯರೂಪ) ಸಾಯುಜ್ಯಕ್ಕೆ ಮೂಲಭೂತವಾಗಿರುವುದು. ಅಂಕುರಿಸಿದ ವೃಕ್ಷದಿಂದ ಬೀಜವು ಹೇಗೆ ಹುಟ್ಟುವುದೋ ಬೀಜದಿಂದ ವೃಕ್ಷ ಪುನಃ ಅಂಕುರಿ ಸುವಂತೆ ಭಕ್ತಿಯು ಶಿವಾನುಗ್ರಹದಿಂದಲೇ ಹುಟ್ಟುವುದು. ಶಿವಾನುಗ್ರಹವು ಭಕ್ತಿಯಿಂದಲೇ ಪ್ರಾಪ್ತವಾಗುತ್ತಲಿರುವುದು. ಇವೆರಡೂ ಒಂದನ್ನೊಂದು ಅಗಲಿರದೆ ಅನ್ಯೋನ್ಯವಾಗಿ ಆಶ್ರಯಿಸಿಕೊಂಡೇ ಇರುವುವೆಂದು ಅರಿಯಬೇಕು.

ಈ ಪ್ರಕಾರದ ಸ್ವಾನುಭವಾನಂದದಿಂದ ಶಿವಾನಂದವನ್ನನುಭವಿಸಿ ಅಂಗ ದಲ್ಲಿ (ಶರೀರದಲ್ಲಿ) ಶಿವಲಿಂಗವನ್ನೂ ಶಿವಲಿಂಗದಲ್ಲಿ ಅಂಗವನ್ನೂ (ಇಲ್ಲಿ ಅಂಗವೆಂದರೆ ಜೀವಾತ್ಮನು) ಸಂಗಿಸಿ, ಸಮಾವೇಶಗೊಳಿಸಿ, ಇಂತಪ್ಪ ಮಹೋನ್ನ ತವಾದ ಶಿವಜೀವರ ಸಂಗಮದಿಂದ ಸಾಮರಸ್ಯಗೊಂಡ ಐಕ್ಯಂಗೆ ॥ ಪುನರ್ಜನ್ಮ ನವಿದ್ಯತೆ ॥, ಶಿವಸಾಯುಜ್ಯವನ್ನು ಹೊಂದಿದ ಮುಕ್ತನಿಗೆ ಪುನರ್ಜನ್ಮವಿಲ್ಲ. ಅವನು ಈ ಘೋರ ಸಂಸಾರ ಸಾಗರದಲ್ಲಿ ಮತ್ತೆ ಬೀಳುವುದಿಲ್ಲ. ॥ ನಚಪುನರಾ ವರ್ತತೆ – ನಚಪುನರಾವರ್ತತೆ ॥ ಎಂದು ಉಪನಿಷತ್‌ವಾಣಿ ಘೋಷಿಸುತ್ತಲಿರು ವುದು. ಗೀತಾಚಾರ್ಯನು ಈ ಅಂಶವನ್ನೇ ಅರ್ಜುನನಿಗೆ ಬೋಧಿಸುತ್ತಾ ॥ ಆಬ್ರಹ್ಮ ಭುವನಲ್ಲೋಕಾಃ । ಪುನರಾವರ್ತಿನೋಽರ್ಜುನ । ಮಾಮುಪೇತ್ಯತು ಕೌಂತೇಯ, ಪುನರ್ಜನ್ಮನವಿದ್ಯತೇ ॥ ಲಿಂಗೋದ್ಭವ ಮೂರ್ತಿಗಳೂ, ಪ್ರಥಮಾ ಶ್ರಮಸಂಭ್ರಮರೂ, ಪ್ರ ಪ್ರಥಮಾಚಾರ್ಯರೂ ಆದ ಶ್ರೀಮಜ್ಜಗದ್ಗುರು ರೇಣು ಕಾಚಾರ್ಯರು ಕುಂಭಸಂಭವನಾದ ಮುನಿಕುಲ ಲಲಾಮ ಆದಿ ಶ್ರೀ ಅಗಸ್ತ್ಯ ಮಹರ್ಷಿಗಳಿಗೆ ಶ್ರೀ ರೇಣುಕ ಗೀತೆಯನ್ನು ಉಪದೇಶಿಸುತ್ತಾ ಷಟ್‌ಸ್ಥಲ ಸಿದ್ಧಾಂತದ ಕೇಂದ್ರವೆನಿಸಿದ, ಲಿಂಗಾಂಗ ಸಾಮರಸ್ಯವನ್ನು ಹೊಂದಿದ ಮಹಾ ಪುರುಷನು, (ಶರಣನು) ಜೀವನ್ಮುಕ್ತನು ಪುನರಪಿ ಮಾತೃವಿನ ಗರ್ಭಕಾರಾಗೃಹ

ದಲ್ಲಿ ಬೀಳನು. ॥ಮುಕ್ತಃ ಶಿವಸಮೋಭವೇತ್ ॥ ಅಂದರೆ – ಜನ್ಮಜನ್ಮಾಂತರಗಳಿಂದ ಬೆನ್ನಹತ್ತಿ ಹಿಂಬಾಲಿಸಿದ ಹಾಗೂ ತನ್ನ ಹೃದಯ ಗವಿಯಲ್ಲಿ ಅಡಗಿರುವ ಅನಂತಕೋಟಿ ಅಜ್ಞಾನ ಗ್ರಂಥಿಗಳನ್ನು ಶಿವಾನುಗ್ರಹದಿಂದಲೂ ಹಾಗೂ ಶ್ರೀ ಸದ್ಗುರು ಕಟಾಕ್ಷವೀಕ್ಷಣ್ಯ ಲವಲೇಶದಿಂದ ಸಂಪೂರ್ಣವಾಗಿ ನಿರ್ಮೂಲಗೊಳಿಸಿ ಜ್ಞಾನಾಗ್ನಿಯಿಂದ ದಹಿಸಿ ತಪ್ತತನುವಿನಿಂದ ವಿರಾಜಿಸುವ "ಬ್ರಹ್ಮವಿತ್ ಬ್ರಹ್ಮೈವ ಭವತಿ" ಮುಕ್ತನಿಗೆ ಐಕ್ಯಂಗೆ, ಪುನರ್ಜನ್ಮವಿಲ್ಲ. "ಶಿಖಿಕರ್ಪೂರವತ್"; ಜ್ಯೋತಿಯಂನ್ನು ಸಂಗಿಸಿದ ಕರ್ಪೂರ ಜ್ಯೋತಿಯೇ ಆಗುವಂತೆ, ಸಮುದ್ರವನ್ನು ಮುಟ್ಟಿದ ನದಿ, ಸಮುದ್ರವೇ ಆದಂತೆ, ಶಿವಲಿಂಗದಲ್ಲಿ ಐಕ್ಯನಾದ ಶರಣನು ಶಿವನಾಗಿಯೇ ವಿರಾಜಿಸುವನು. ಇದನ್ನೇ ಲಿಂಗಾಂಗ ಸಾಮರಸ್ಯವೆಂಬ ಮೋಕ್ಷವೆಂದೂ ಇದನ್ನು ಭಕ್ತನು ತನ್ನ ನಿಜಭಕ್ತಿ ಜ್ಞಾನ ವೈರಾಗ್ಯ ತ್ಯಾಗ ಶಾಂತಿ ತೃಪ್ತಿ ಮನೋಭಾವ ವಿಕಾಸದಿಂದ, ಪವಿತ್ರವಾದ ತನ್ನ ಹೃದಯ ಕಮಲದಲ್ಲಿ ಸಾಕ್ಷಾತ್ಕರಿಸಿಕ್ಕೊಂಡು ಶಿವಾನಂದದಲ್ಲಿ ತಲ್ಲೀನನಾಗಿ ನಿತ್ಯ ಸುಖಿಯಾಗಬೇಕೆಂದು ಉಪದೇಶಿಸಿರುವರು. ಮಾನವನ ಹೃದಯಸ್ಥಾನ ಮಧ್ಯಮಣಿ ನ್ಯಾಯದಂತೆ ದೇಹದ ಮಧ್ಯಸ್ಥಾನದಲ್ಲಿ ಸ್ಥಾಪಿತವಾಗಿರುವುದು. ಇದು ಪರಮ ಕೋಮಲವೂ, ಸುಂದರವೂ, ಅತ್ಯಂತ ರಮ್ಯವೂ ಪವಿತ್ರವೂ ಆಗಿರುವುದರೊಂದಿಗೆ, ಆಕರ್ಷಣೀಯವೂ ಆಶ್ಚರ್ಯಯುತವೂ ಆಗಿ ರಂಜಿಸುತ್ತಲಿರುವುದು. ಹೃದಯವು ಶಿವನ ನಿಜ ವಾಸಸ್ಥಾನವೆಂದು ಶಾಸ್ತ್ರಗಳೂ ಮತ್ತೂ ತತ್ವವೇತ್ತರೂ ಬೋಧಿಸುತ್ತಲಿರುವರು. ಶ್ರೀ ಕೃಷ್ಣನು ಗೀತೆಯಲ್ಲಿ ॥ ಹೃದ್ದೇಶೇತಿಷ್ಠತಿ ಅರ್ಜುನ ॥ ಭಕ್ತನ ಹೃನ್ಮಂದಿರದಲ್ಲಿ ತಾನು ನಿತ್ಯ ಪ್ರಸನ್ನನಾಗಿರುವುದಾಗಿ ಸ್ಪಷ್ಟಪಡಿಸಿರುವನು. ಭಗವಂತನು ವೇಶಧಾರಿ ಭಕ್ತರ ಆಡಂಬರದ ವೈಯ್ಯಾರಕ್ಕೆ ಬೆರಗಾಗುವವನಲ್ಲ. ಭಕ್ತಿಪ್ರಿಯನಾದ ಭಗವಂತನಿಗೆ ನಿಜಭಕ್ತರನ್ನು ಕಂಡರೆ ಹಾಲು ಉಕ್ಕುವಂತೆ ಅವನ ಪ್ರೇಮಾಮೃತ ಭರಿತವಾದ ವಾತ್ಸಲ್ಯಾಮೃತವು ಉಕ್ಕಿ ಸಮುದ್ರದಂತೆ ಬೆಳಗುವುದು. ಪರುಷ ಮಣಿಯಂತೆ ಭಗವಂತನು ಭಕ್ತರ ಹೃದಯವನ್ನೇ ನೋಡಿ ಆಕರ್ಷಿಸುತ್ತಲಿರುವನು. ತಾವು ಭಕ್ತರೆಂದು ಹೇಳಿಕೊಳ್ಳುವವರನ್ನೆಲ್ಲಾ ಭಕ್ತರೆಂದೇ ಪರಿಗ್ರಹಿ

ಸಲು ಸಾಧ್ಯವಿಲ್ಲ. ಏಕೆಂದರೆ ಭಕ್ತಿಭಂಡಾರಿಯಾದ ಶ್ರೀ ಬಸವಣ್ಣನಂಥ ಹಿರಿಯ ಭಕ್ತಾಗ್ರಣಿಯೇ, ಶ್ರೀ ಕೂಡಲಸಂಗಯ್ಯನಲ್ಲಿ ನಿವೇದಿಸಿಕೊಳ್ಳುತ್ತ ತಾನು "ಭಕ್ತಿಯಿಲ್ಲದ ಬಡವನಯ್ಯಾ" ಎಂದು ನುಡಿದಿರುವರು. ಮುಂದುವರಿದು "ಭಕ್ತಿಯೇ ಮುಕ್ತಿಗೆ ಮೂಲವಯ್ಯಾ" ಎಂಬ ಅಂಶವನ್ನು ಎತ್ತಿ ತೋರಿಸಿರುವರು. ಭಕ್ತರ್ಯಾರು ಎಂಬುವ ಬಗ್ಗೆ ವಿವರಿಸುತ್ತಾ "ಲಕ್ಷಕ್ಕೊಬ್ಬ ಭಕ್ತ ಕೋಟಿಗೊಬ್ಬ ಶರಣ" ಎಂದಿರುವರು. ನಾವು ಭಕ್ತರು ಎಂದೆನ್ನುವ ಶಿವಲಾಂಛನಗಳಿಂದ ಮೆರೆಯುವ ಲಕ್ಷ ಜನಗಳಲ್ಲಿ ನಿಜಭಕ್ತನು ಒಬ್ಬ ಸಿಗಬಹುದು. ಹೀಗಿರುವಲ್ಲಿ ಭಗವಂತನು ಭಕ್ತನ ಹೃದಯುವನ್ನು ಕಂಡು ಕೊಂಡು ಅವನಿಗೆ ಅನುಗ್ರಹಿಸುವನು. ಆದ್ದರಿಂದ ಹೃದಯ ಪರಿವರ್ತನೆ ಅತಿ ಶ್ರೇಷ್ಠವಾದುದು. ದೇವರು ಭಕ್ತನ ಹೃನ್ಮಂದಿರದಲ್ಲಿ ವಾಸಿಸುವನು ಎಂಬ ಬಗ್ಗೆ ಮಹಾಭಾರತದಲ್ಲಿ ಸಹದೇವನು ಶ್ರೀ ಕೃಷ್ಣಸ್ವಾಮಿಯನ್ನು ಭಕ್ತಿಯೆಂಬ ಹಗ್ಗದಿಂದ ತನ್ನ ಹೃದಯ ಗುಡಿಯಲ್ಲಿ ಕಟ್ಟಿದ್ದನೆಂದು ಶ್ರೀ ವ್ಯಾಸಾಚಾರ್ಯರು ಉಲ್ಲೇಖಿಸಿರುವ ಅಂಶಗಮನಾರ್ಹವೇ ಆಗಿರುತ್ತೆ. ಶ್ರೀಮದ್ಭಾಗವತದಲ್ಲಿ ಶ್ರೀ ಶುಕಬ್ರಹ್ಮರು ಪರಿಕ್ಷತ್ ಮಹಾರಾಜನಿಗೆ ಶ್ರೀ ಧೃವ ಕುಮಾರನ ಪಾವನ ಚರಿತ್ರೆಯನ್ನು ವರ್ಣಿಸುತ್ತಾ, ಶ್ರೀ ಧೃವನು ತನ್ನ ಕೇವಲ ಅಯಿದನೇ ವರ್ಷಾರಂಭದಲ್ಲೇ ಧ್ಯಾನಗಮ್ಯನಾದ ಶ್ರೀಮನ್ನಾರಾಯಣನನ್ನು ತನ್ನ ಶುದ್ಧ ಸ್ಫಟಿಕದಂಥ ಭಕ್ತಿ ವಿಶೇಷದಿಂದ ತನ್ನ ಪಾವನವಾದ ಹೃದಯಾರವಿಂದದಲ್ಲಿ ರಂಜಿಸುವ ದಿವ್ಯ ಮಕರಂಧದಂತೆ ಸಾಕ್ಷಾತ್ಕರಿಸಿಕ್ಕೊಂಡು ಬುದ್ಧಿ ಪೂರ್ವಕ ಮಾನಸಿಕವಾಗಿ ಆ ದಿವ್ಯ ಸ್ವಯಂಜ್ಯೋತಿಯಲ್ಲಿ ತಲ್ಲೀನನಾಗಿದ್ದುದರಿಂದು ಪರಮಯೋಗಿಗಳಿಗೂ ಅಲಭ್ಯನಾದ ದೇವನು ಸೌಲಭ್ಯದಿಂದ ಧೃವ ಕುಮಾರನ ಶ್ರೇಷ್ಠಭಕ್ತಿಗೆ ಮೆಚ್ಚಿ ॥ ಭಕ್ತ್ಯಾತುಷ್ಯತಿ ಕೇವಲಂ ॥ ಮತ್ತೂ ॥ ಭಕ್ತಿಪ್ರಿಯೋ ಮಾಧವಃ ॥ ಎಂಬಂತೆ, ಶ್ರೀಹರಿ, ಶಂಖ-ಚಕ್ರ-ಗದಾ ಪದ್ಮಪಾಣಿಯಾಗಿ, ಹಾರಕೇಯೂರಾದಿ ಕಟಕ ಕುಂಡಲಗಳಿಂದಲೂ, ದಿವ್ಯ ಪೀತಾಂಬರಧಾರಿಯಾಗಿ ವನಮಾಲಾವಿಭೂಷಿತನಾಗಿ, ದಿವ್ಯ ವಕ್ಷಸ್ಥಲದಲ್ಲಿ, ಶ್ರೀ ಲಕ್ಷ್ಮಿಯಿಂದೊಡಗೂಡಿ, ಆನೀಲ ನೀಲಮೇಘ ಶ್ಯಾಮ ಕೋಮಲಾಂಗನಾಗಿ, ಅಭಯಾಮೃತ ಹಸ್ತ

ದಿಂದ ಸುಪ್ರಸನ್ನನನ್ನಾಗಿ, ಸಮಾಧಿ ಸ್ಥಿತಿಯಲ್ಲಿ ಆರೂಢನಾಗಿದ್ದ ರಾಜ ಕುಮಾರನ ಎದುರಲ್ಲಿ ನಿಂತು ಕೋಮಲಾಂಗನಾದ ಸುಕುಮಾರನನ್ನು ನೋಡಿ, ಆತನ ಘನತರವಾದ ಧ್ಯಾನದ ಫಲರೂಪವಾಗಿ ತಾನು ಬಂದಿರುವು ದಾಗಿ ನುಡಿದು, ಕಣ್‌ತೆರೆದು ನೋಡೆಂದು ಶ್ರೀ ಮಹಾ ವಿಷ್ಣುವು ಹಲವುಬಾರಿ ನುಡಿದರೂ, ಧೃವ ಬಾಲಕನು ಅಚಲವಾಗಿ ಅಸಂಪ್ರಜ್ಞಾತ ಸಮಾಧಿಯಲ್ಲಿ ಪರಿಪೂರ್ಣನಾಗಿದ್ದನು. ಧೃವ ಕುಮಾರನನ್ನು ಅನುಗ್ರಹಿಸಲು ಯಾವ ಶ್ರೀ ಸ್ವಾಮಿ ವೈಕುಂಠದಿಂದ ದಯಮಾಡಿಸಿದ್ದನೋ ಆ ಸ್ವಾಮಿಯ ದಿವ್ಯ ಮಂಗಳ ಸಚ್ಚಿದಾನಂದ ಸ್ವರೂಪವನ್ನು ಧೃವನು, ತನಗೆ ತನ್ನ ತಾಯಿ ಶ್ರೀ ಸುನೀತಿದೇವಿ ಉಪದೇಶಿಸಿದಂತೆ, ಶ್ರೀ ನಾರದರು ಬೋಧಿಸಿದಂತೆ, ಸ್ಮರಿಸಿ, ಧ್ಯಾನಿಸಿ, ತನ್ನ ಹೃದಯದಲ್ಲಿ ಸಾಕ್ಷಾತ್ಕರಿಸಿಕೊಂಡು ಅಖಂಡ ಬ್ರಹ್ಮಾನಂದದಲ್ಲಿ ಪೂರ್ಣನಾದವಂಗೆ ಬಾಹ್ಯ ಪ್ರಪಂಚದ ವ್ಯಾಪರ ದೂರವೇ ಆಗಿತ್ತು. ಇದರಿಂದಾಗಿ ದೇವನು ಭಕ್ತನ ಹೃದಯ ಕ್ಷೇತ್ರದಲ್ಲಿ ನೆಲಸಿರುವ ನೆಂಬುದು ನಿಜವೇ ಆಯಿತು. ಕೋದಂಡ ದೀಕ್ಷಾ ಗುರುವಾದ ಶ್ರೀ ರಾಘವನು ಶ್ರೀ ಮಾರುತಾತ್ಮಜನ ಅಂದರೆ, ಶ್ರೀ ರಾಮಧೂತನಾದ ಆಂಜನೇಯ ಸ್ವಾಮಿಯ ಅಸದೃಶ ಸೇವೆ ಅಖಂಡವಾದ ಭಕ್ತಿ ಅಚಲವಾದ ನಿಷ್ಠೆಗೆ ಮನಸೋತು ಮೆಚ್ಚಿ, ಅಂಜನಾದೇವಿಯ ಸುಕುಮಾರ ಶ್ರೀ ಆಂಜನೇಯ ನನ್ನು ಅಮರನನ್ನಾಗಿಸಿ (ಚಿರಂಜೀವಿಯಾಗಿರುವಂತೆ ಅನುಗ್ರಹಿಸಿ) ಮುಂಬ ರುವ ಬ್ರಹ್ಮ ಪಟ್ಟಕ್ಕೆ ಅಧಿಕಾರಿಯನ್ನಾಗಿಸುವಂಥಾ ಘನ ವರವನ್ನು ಅನುಗ್ರ ಹಿಸಿ, ಅಷ್ಟಕ್ಕೇ ಸ್ವಾಮಿ ತೃಪ್ತನಾಗದೆ, ವೀರಕೇಸರಿ ಸೂನುವಿನ (ವೀರಾಂಜನೇ ಯನ ಅಂದರೆ – ವೀರಭದ್ರನಿಂದ ವೀರಶೈವ ದೀಕ್ಷಾ ಸಂಪನ್ನನಾದ) ಶ್ರೀ ಆಂಜನೇಯ ಸ್ವಾಮಿಯ ಹೃನ್ಮಂದಿರವೆಂಬ ಗರ್ಭಗುಡಿಯಲ್ಲಿ ಭಕ್ತನನ್ನು ಅರಘಳಿಗೆಯೂ ಅಗಲಿರಲು ಸಾಧ್ಯವಿಲ್ಲದ ಅಪಾರ ವಾತ್ಸಲ್ಯಭಾವದಿಂದ, ಭಗ ವಂತನು "ಶ್ರೀ ಸೀತಾ ರಾಮ" ಸಮೇತ ದಿವ್ಯ ಮಂಗಳ ಸ್ವರೂಪದಿಂದ ಪ್ರಸನ್ನರಾಗಿ ನೆಲಸಿರುವ ಅಂಶ ಶ್ರೀಮದ್ರಾಮಾಯಣ ಧರ್ಮಗ್ರಂಥದಿಂದ ವೇದ್ಯವೇ ಆಗಿರುತ್ತೆ. ಇದರಿಂದಾಗಿ ದಯಾಘನನಾದ ಪರಮಾತ್ಮನು

॥ಹೃತ್ಪದ್ಮಮಧ್ಯೇ ಪುರುಷಃ ಪ್ರಮಾಣಂ। ನಿತ್ಯಾತ್ಮಕಂ ಸರ್ವ ಜಗತ್ಸ್ವರೂಪಂ॥ ಧ್ಯಾಯಾಮಿ ನಿತ್ಯಂ ಪರಮಾತ್ಮ ಸೌಂಜ್ಞಂ। ಚಿದ್ರೂಪಮೇಕಂ ವಚಸಾವು ಗಮ್ಯಂ॥ ಹೃದಾಕಾಶೇ ಚಿದಾದಿತ್ಯಃ। ಸದಾ ಭಾಸತಿ ಭಾಸತೀ। ಉದಯಾಸ್ತ ಮಯನೌನಾಸ್ತಿ। ಕುತಃ ಸಂಧ್ಯಾವಿಧೀಯತೇ॥

ಮೇಲ್ಕಂಡ ಶ್ಲೋಕಗಳಿಂದ ಶಾಸ್ತ್ರದ ಮತ್ತೂ ಜ್ಞಾನಿಗಳ ಸ್ವಾನುಭವಾನಂದದ ತಿರುಳು ತಿಳಿದಂತಾಯಿತು. ಅದೇನೆಂದರೆ ಅಂಗುಷ್ಟ ಪ್ರಮಾಣವುಳ್ಳ ಸದುಹೃದಯದ ಮಧ್ಯೇ ಸಚ್ಚಿದಾನಂದ ಸ್ವರೂಪಿಯಾದ ಶ್ರೀ ಪರಮಾತ್ಮನು (ಪರಶಿವನು) ಪುರುಷ ಪ್ರಮಾಣದಲ್ಲಿ ನೆಲಸಿ ಪ್ರಜ್ವಲಿಸುತ್ತಿರುವನು. ಹೃದಾಕಾಶ ಅಂದರೆ ಭಕ್ತನ ಗಹನವಾದ ಹೃದಯವೆಂಬ ಆಕಾಶದಲ್ಲಿ ॥ ಸನ್ ಹೃದಯ ಪ್ರಕಾಶಃ॥ ಅನವರತ ಬೆಳಗುತ್ತಿರುವ ಚಿತ್‌ಸ್ವರೂಪಿಯಾದ ಅಂದರೆ, ಕೋಟಿ ಕೋಟಿ ಸೂರ್ಯಪ್ರಕಾಶದಿಂದ ಹೊಳೆಯುವ ಆತ್ಮಾದಿತ್ಯನು (ಆತ್ಮವೆಂಬ ಸೂರ್ಯನು) ಅವಿಚ್ಛಿನ್ನವಾಗಿ ಯಾವಾಗಲೂ ಕಂದದೆ ಕುಂದದೆ ಸ್ವಯಂ ಪ್ರಕಾಶದಿಂದ ಬೆಳಗುತ್ತಲಿರುವುದರಿಂದ, ಅವನಿಗೆಲ್ಲಿದೆ ಉದಯ ಅಸ್ತಮಾನ. ಉದಯಾಸ್ತ ಮಾನಗಳೇ ಆತ್ಮಾದಿತ್ಯನಿಗಿಲ್ಲವೆಂದ ಬಳಿಕ ಆತ್ಮನಿಗೆ ಸಂಧ್ಯಾಕಾಲವಿರಲಿಕ್ಕಿಲ್ಲವಷ್ಟೆ. ॥ ನಿತ್ಯಾತ್ಮಕಂ ಸರ್ವಜಗತ್ಸ್ವರೂಪಂ ॥ ಎಂದು ಸ್ತುತಿಪಾಠವಿರುವುದರಿಂದ, ಅಖಿಲ ಚರಾ ಚರಾತ್ಮಕವಾದೀಜಗತ್ತು ಮಿಥ್ಯೆಯೆಂಬ ಮಾತು ಹುರುಳಿಲ್ಲದ್ದಾಗಿದೆ. "ನಾಮ ರೂಪಗಳು", ವಸ್ತುತಃ ಪದಾರ್ಥಗಳಲ್ಲವಾದ್ದರಿಂದ ಮಿಥ್ಯೆ ಎನಿಸಿರುವುವಾದರೂ, ಪಾಂಚ ಭೌತಿಕ ಪ್ರಪಂಚ ಶಿವನ ವ್ಯಕ್ತ ವಿರಾಟ್ ಸ್ವರೂಪವೇ ಆಗಿ ಅಶ್ವತ್ಥವೃಕ್ಷವೆಂದು ನಿತ್ಯವೂ ಸತ್ಯವೂ ಆಗಿರುವುದೆಂದು ಶೃತಿಪ್ರಮಾಣ ಸ್ಪಷ್ಟವೇ ಇರುತ್ತೆ. ಭಗವಂತನು ॥ ಧರ್ಮಧೃಮಃ ॥ ಸರ್ವಧರ್ಮ ಸ್ವರೂಪಿಯಾಗಿ ಅವ್ಯಕ್ತಸ್ಥಿತಿಯಿಂದ ವ್ಯಕ್ತಪ್ರಪಂಚರೂಪದಲ್ಲಿ ಪ್ರಸ್ಫುರಿಸಿರುವುದರಿಂದ ತತ್ವವೇತ್ತರೂ ಹಾಗೂ ಶೃತಿಮಾತೆಯೂ ॥ ಧರ್ಮಸಾರ ಮಿದಂ ಜಗತ್ ॥ ಎಂದೂ, ಮತ್ತೂ ಜಗತ್ತು ಸತ್ಸ್ವರೂಪಿಯಾದ ಜಗದೀಶ್ವರನ ಸತ್ಸಂಕಲ್ಪದಿಂದ ॥ ಇಚ್ಛಾಮಾತ್ರ ಪ್ರಭೋ ಸೃಷ್ಟಿಃ ॥ ಎಂಬಂತೆ ಅವನ ಇಚ್ಛಾಶಕ್ತಿಯಿಂದ ಪ್ರಾದುರ್ಭಾವಗೊಂಡು

ನಾನಾತ್ಮಕವಾಗಿ ವಿರಾಜಿಸುತ್ತಾ ಪರಶಿವನ ಇಚ್ಛಾಶಕ್ತಿ ದೇವಿಯು ಅಂತ ರ್ಬಾಹ್ಯ ದಿವ್ಯಕವಚಗಳಂತೆ ಜ್ಞಾನಶಕ್ತಿ ಕ್ರಿಯಾಶಕ್ತಿಗಳ ಕಾರ್ಯರೂಪವೇ ಅಖಂಡ ಜಗತ್ತಾಗಿ ವಿಸ್ತರಿಸಿರುವುದರಿಂದ ಶೃತಿಮಾತೆಯು ॥ ಸರ್ವಂ ಖಲ್ವಿದಂ ಬ್ರಹ್ಮ ॥ ; ॥ ಈಶಾವಾಸ್ಯಮಿದಂ ಸರ್ವಂ ॥ ; ॥ ಪೂರ್ಣಮದಃ ಪೂರ್ಣಮಿದಂ ॥ ; ॥ ವಾಸುದೇವ ಸರ್ವಮಿತಿ ॥ ; ॥ ಬೀಜಂ ಮಾಂ ಸರ್ವ ಭೂತಾನಾಂ । ವಿದ್ಧಿ ಪಾರ್ಥಸನಾತನಂ ॥ ಎಂದು ಘೋಷಿಸುತ್ತಿರುವಳು. ಮೇಲ್ಕಂಡ ಶೃತಿಪ್ರಮಾಣಗಳಲ್ಲಿನ "ಸರ್ವಂ" ಎಂಬ ಶಬ್ದ ವಿಶಾಲಾರ್ಥಗರ್ಭಿತ ವಾಗಿರುವುದು ಎಂಬಂಶ ಗಮನಾರ್ಹವಾದುದು. ಪರಮಾತ್ಮನ ದಿವ್ಯ ಅವ್ಯಕ್ತ ಸ್ಥಿತಿಯಿಂದ ವ್ಯಕ್ತವಾದೀಜಗತ್ತು ॥ ದೃಷ್ಟ ನಷ್ಟ ॥ ವಾಗುತ್ತಿರುವ ಸ್ವಭಾವ ದಿಂದ ಇರುವುದಾಗಿಯೂ ಷಡ್ ಭಾವ ವಿಕಾರಯುತವಾಗಿಯೂ ಕಾಣುತ್ತಲಿ ರುವುದರಿಂದ, ಪರಮಾತ್ಮನ ನಿತ್ಯಮಂಗಳಮಯವೂ ಸತ್ಸ್ವರೂಪವಾದ ಅವ್ಯಕ್ತಸ್ಥಿತಿಗೆ ಲೋಪ ಬರುವುದಿಲ್ಲವೇ ಎಂಬ ಶಂಕೆಗೆ, ॥ *When a candle is burnt nothing is lost* ॥ ಎಂಬ ರಸಾಯನಶಾಸ್ತ್ರದ ಪ್ರಮಾಣಾನು ಸಾರ, ವ್ಯಕ್ತಸ್ಥಿತಿಯಲ್ಲಿ ನಾನಾ ಪರಿಣಾಮಗಳು ಕಂಡುಬಂದರೂ, ಪರಶಿವನ ಅವ್ಯಕ್ತವೂ ಪೂರ್ಣವೂ ಆಗಿ ವಿರಾಜಿಸುವ ಪರಿಪೂರ್ಣ ಸ್ಥಿತಿಗೆ ಕಿಂಚಿತ್ತೂ ಲೋಪವೋ ವಿಕಾರವೋ ಉಂಟಾಗುವಂತಿಲ್ಲ.

ಉದಾಹರಣೆಗಾಗಿ :- ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ನೀರು, ನೀರಿನಿಂದ ಭೂಮಿ, ಭೂಮಿಯಿಂದ ಚರಾಚರಾತ್ಮಕ ವಾದ ಅಖಂಡ ವಿಶ್ವವು ಉದ್ಭವಿಸಿ ನಾನಾತ್ಮಕವೆನಿಸಿ ವಿಚಿತ್ರಾಯಮಾನವಾಗಿ ರುವುದು ಸರಿಯಷ್ಟೆ. ಮಹಾಪ್ರಳಯದಲ್ಲಿ ಅಖಿಲ ಚರಾಚರಾತ್ಮಕವಾದೀ ಜಗತ್ತು ಭೂಗರ್ಭದಲ್ಲಡಗಲು, ಭೂಮಿ (ಪೃಥ್ವಿ) ಜಲದಲ್ಲೂ, ಜಲವು ಅಗ್ನಿ ಯಲ್ಲೂ, ಅಗ್ನಿ ವಾಯುವಿನಲ್ಲೂ ಅಡಗಿ ಅಂತರ್ಧಾನವಾಗಲು, ಸೂಕ್ಷ್ಮವಾದ ವಾಯುವು ಅತಿಸೂಕ್ಷ್ಮವಾದ ಆಕಾಶ ತತ್ವದಲ್ಲಿ ಸಮಾವೇಶಗೊಂಡರೂ. ಇಷ್ಟೆಲ್ಲಾ ಪರಿಣಾಮಾತ್ಮಕ ಘಟನೆಗಳು ಸರ್ವವ್ಯಾಪಕವಾಗಿರುವ ಆಕಾಶ ತತ್ವದ ಅವಕಾಶವೆಂಬ ಗರ್ಭದಲ್ಲಿ ಉಂಟಾದರೂ, ಇವುಗಳಿಂದಾಗಿ ಆಕಾಶ

ತತ್ವದ ಪರಮಶಾಂತಿಮಯವೂ, ಅಚಲವೂ, ಏಕವೂ ಆಗಿ ರಾರಾಜಿಸುವ ಪೂರ್ಣಸ್ಥಿತಿಗೆ ಹೇಗೆ। ಕಿಂಚಿತ್ತೂ ಲೋಪವೂ ದ್ರೋಹವೂ ಚ್ಯುತಿಯೂ ಉಂಟಾಗಲಿಲ್ಲವೋ, ಆಕಾಶವು ನಿರ್ಮಲಾಕಾಶವಾಗಿಯೇ ನಿರ್ಲಿಪ್ತತೆಯಿಂದ ಸರ್ವದಾ ವಿರಾಜಿಸುತ್ತಲಿರುವುದೋ ಮತ್ತೂ; ॥ ಆಕಾಶಾತ್ ಸಂಭವತೀಹ ವಿಶ್ವಂ ॥ ದೃಗ್ಗೋಚರವಾದೀ "ಸರ್ವಂ", ಸಮಸ್ತ ಜಗತ್ತಿನ ಉತ್ಪತ್ತಿಗೆ ಆಕಾಶವು ಮಾತೃಸ್ಥಾನವಾಗಿರುವುದೆಂದು ಶೃತಿಯು ಸಾರುತ್ತಿರುವುದು. ॥ ಆಕಾಶಾತ್ ಪರತಃ ಪರಃ ॥ ಆಕಾಶ ತತ್ವಕ್ಕೂ ಅತೀತವಾದ ಪರಮಾಕಾಶ ಸ್ವರೂಪದಲ್ಲಿ, ಮೇಲೆ ಉದಹರಿಸಿದ ಮಹದಾಕಾಶವು ಸ್ವಭಾವಸಿದ್ಧವಾಗಿ ತಲ್ಲೀನಗೊಂಡಿರುವುದರಿಂದ ಶೃತಿಮಾತೆಯು ॥ ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ। ಸ್ವಾಭಾವಕಿ ಜ್ಞಾನಬಲ ಕ್ರೀಯಾಚ ॥ ಎಂಬ ಸೂತ್ರದಿಂದ ಇಚ್ಛಾಶಕ್ತಿಯು ಪರಶಿವನಲ್ಲಿ ಅವಿನಾಭಾವ ಸಂಬಂಧದಿಂದ ಸಹಜವಾಗಿರಲು, ಇದರ ಕಾರ್ಯವೇ ಜಗತ್ತಾದ್ದರಿಂದ ಇವು ವಿಶಿಷ್ಟ ಪರಮಾತ್ಮನಿಂದ ಪ್ರಕಟವಾಗಿ ಪ್ರಕಾಶಿಸಿ ಮತ್ತವನಲ್ಲೇ ವಿಲೀನವಾದರೂ, ಅವನ ಪರಿ ಪೂರ್ಣತೆಗೆ ಯಾವ ನ್ಯೂನತೆಯೂ ಉಂಟಾಗದೆ, ಆಕಾಶವತ್ ಭಗವಂತನು ನಿರ್ಲಿಪ್ತನೂ ಅಸಂಗನೂ ಪರಿಪೂರ್ಣನೂ ಆಗಿರುವನು. ಈ ಕಾರಣದಿಂದ "ಈಶ್ವರ ಜಗತ್ತು ಜೀವ" ಸಜಾತೀಯ ಶ್ರೇಣಿಯ ಅಂಶವುಳ್ಳವುಗಳೆಂದು ಪರಿಗಣಿಸಲು ಅವಕಾಶವಿರುವುದು. ಅದ್ವೈತಿಗಳ ಮಾಯಾವಾದವನ್ನೂ, ಬೌದ್ಧರ ಮಾಯಾವಾದವನ್ನೂ ಬಿಟ್ಟರೆ, ದ್ವೈತ, ವಿಶಿಷ್ಟಾದ್ವೈತ, ಶಿವಾದ್ವೈತ ತತ್ವವೇತ್ತರು ಒಮ್ಮತದಿಂದ ಶೃತಿಸ್ಮೃತಿಗಳ ಆಧಾರಗಳಿಂದ ಜಗತ್ ಸತ್ಯತ್ವವನ್ನು ಸ್ಫುಟಪಡಿಸಿಯೇ ಇರುವರು. ಆದಿ ಶ್ರೀ ಶಂಕರಾಚಾ ರ್ಯರ ಕಾಲಕ್ಕಿಂತಲೂ ಅತಿಪೂರ್ವವೇ ವೀರಶೈವಮತ ಸ್ಥಾಪನಾಚಾರ್ಯರು ಗಳು ಜಗತ್ ಸತ್ಯತ್ವವನ್ನು ನಿರೂಪಣಮಾಡಿ, ಬೋಧಿಸಿರುವ ಮಹದಂಶಗ ಳನ್ನು ಭಾಷ್ಯಕರ್ತೃಗಳಾದ ಶ್ರೀ ನೀಲಕಂಠಶಿವಾಚಾರ್ಯರುಗಳೂ ಹಾಗು ಶ್ರೀಪತಿ ಪಂಡಿತಾರಾಧ್ಯರೂ ತಮ್ಮ ಘನ ಭಾಷ್ಯಗಳಲ್ಲಿ ಸಪ್ರಮಾಣಗಳಿಂದ ಸ್ಫುಟಪಡಿಸಿರುವರು. ಪಾಶ್ಚಿಮಾತ್ಯ ಘನ ತತ್ವವೇತ್ತರನೇಕರು ಜಗತ್ ಸತ್ಯ

ವೆಂದೇ ನಿರ್ಧರಿಸಿರುವುದು ಸರಿಯಷ್ಟೆ. "*All are parts of that stupendous whole*" ಎಂದು ಆಂಗ್ಲೇಯ ಘನ ಸುಜ್ಞಾನಿಯೊಬ್ಬರು ತಿಳಿಸಿರುವರು. ಸದ್ಯಃ ಈ ವಿಷಯವನ್ನು ಇಲ್ಲಿಗೆ ವಿರಮಿಸಿ, ಪರಮಾತ್ಮನು ತನ್ನ ಭಕ್ತರ ಹೃದಯ ದರ್ಪಣ (ಕನ್ನಡಿ) ದಲ್ಲಿ ಗೋಚರಿಸುವನೆಂಬ ಅಂಶವನ್ನು ನೆನಹಿನಲ್ಲಿರಿಸೋಣ. ಭಗವಂತನು ಅಖಿಲಕ್ಕೂ ಅತ್ಯಂತ ದೊಡ್ಡವನು. ಇಂತಪ್ಪ ದೊಡ್ಡ ದೇವರು ಭಕ್ತನ ಅಂಗುಷ್ಟ ಪ್ರಮಾಣವುಳ್ಳ ಹೃದಯಪೀಠದಲ್ಲಿ ಅಲಂಕೃತನಾಗಿರಲು, ಹೃದಯುಸಿಂಹಾಸನದ ಮಹತ್ತರವಾದ ಶ್ರೇಷ್ಠತೆ ಇನ್ನೆಷ್ಟು ದೊಡ್ಡದು ಎಂಬುದನ್ನು ನಾವೇ ಊಹಿಸಿ ನಿಶ್ಚಯಿಸಬೇಕಾಗಿರುತ್ತೆ.

ಶೃತಿಯಾದರೋ ಹೃದಯದ ಗಹನವಾದ ಗಾಂಭೀರ್ಯವನ್ನು ವಿಸ್ತರಿಸುತ್ತಾ ॥ ಹೃದಯಂ ತದ್ವಿಜಾನೀಯಾತ್ । ವಿಶ್ವಸ್ಯ ಆಯತನಂ ಮಹತ್ ॥ ಎಂದು ಪ್ರತಿಪಾದಿಸುತ್ತಲಿರುವುದು. ವ್ಯಕ್ತಾವ್ಯಕ್ತವಾದ ಅಖಿಲವನ್ನೂ–ಕರಿಯ ರೂಪ (ದೊಡ್ಡ ಆನೆಯು) ಚಿಕ್ಕ ಕನ್ನಡಿಯೊಂದರಲ್ಲಿ ಅಡಗಿರುವಂತೆ– ಅಂಗುಷ್ಟ ಪ್ರಮಾಣದ ಹೃದಯಕ್ಷೇತ್ರದಲ್ಲಿ ಅಖಿಲಾಂಡಕೋಟಿ ಬ್ರಹ್ಮಾಂಡಗಳ ತೋರುವಿಕೆ ಅಥವ ಪ್ರತಿಫಲಿಸುವಿಕೆ ಹಾಸುಹೊಕ್ಕಾಗಿ ಅಡಗಿರುವುದು.

ಅಖಿಲಾಂಡಕೋಟಿ ಬ್ರಹ್ಮಾಂಡಗಳನ್ನೂ ಅಖಿಲ ಚರಾಚರಾತ್ಮಕ ಜಗತ್ತನ್ನೂ ಹೃದಯದಲ್ಲಿ ತೃಣದಂತೆ, ಪರಮಾಣುವಿನಂತೆ ಸಂಸ್ಕಾರರೂಪವಾಗಿ ಗರ್ಭೀಕರಿಸಿಕೊಂಡು ಎಲ್ಲದಕ್ಕೂ ಆಶ್ರಯಸ್ಥಾನವಾಗಿದ್ದು ಮಹದದ್ಭುತ ಶಕ್ತಿ ವಿಶಿಷ್ಟಮಯ ಸ್ಥಾನವೆಂದರೆ ಕೋಮಲ ಹೃದಯ ಸ್ಥಾನವೇ ಆಗಿರುತ್ತೆ. ಹೃದಯವು ಅನಂತ ಶಕ್ತಿ ಸಂಪದಭ್ಯುದಯಗಳಿಂದ ಕೂಡಿ ಈಶ್ವರನ ಪ್ರೇಮಾಮೃತಮಯ ದಿವ್ಯಮಂಗಳ ಮಂದಿರವಾಗಿ ಬೆಳಗುತ್ತಲಿರುವುದು. ದಹರಾಕಾಶ ವಾಸಿಯಾದ ಶಿವನನ್ನು ತನ್ನೊಳಗೆ ಸಾಕ್ಷಾತ್ಕರಿಸಿಕೊಂಡು ಶಿವನ ಸನ್ನಿಧಿ ಸೇವೆಯಲ್ಲಿ ನಿರಂತರ ವಾಸಿಸುವಂಗೆ ನಿಜಕ್ಕೂ ಪುನರ್ಜನ್ಮವೆಲ್ಲಿದೆ.

ವೀರಶೈವಾಚಾರವಿಧಿಯಂತೆ ಇಷ್ಟಲಿಂಗದ ಸತತ ದಿವ್ಯ ಸಂಬಂಧದಿಂದ ಸಂತುಷ್ಟನಾದವಂಗೆ ಶಿವಲಿಂಗಧಾರಣೆಯೇ ದಿವ್ಯಲಿಂಗಯಜ್ಞೋಪವೀತವಾಗಿರುವುದು. ಘನ ಗಾಯಿತ್ರಿ ಮಂತ್ರವನ್ನು ಗರ್ಭೀಕರಿಸಿಕೊಂಡು ಸಪ್ತಕೋಟಿ

ಮಂತ್ರಗಳಿಗೆಲ್ಲಾ ಮಕುಟ ಪ್ರಾಯವೂ ಮಾತೃವತ್ ವಿರಾಜಿಸುವ ಶಿವ ಪಂಚಾಕ್ಷರಿ ಮಹಾ ಮಂತ್ರೋಚ್ಚಾರಣವೇ ತಾರಕವೂ, ಮೋಕ್ಷದ ಉಗಮ ಸ್ಥಾನವೂ ಆಗಿರುವುದು. ಸತತ ಈಶ್ವರಾರ್ಪಿತ ಬುದ್ಧಿಯಿಂದ ಸಮರ್ಪಿಸುವ ತ್ರಿಕಾಲದ ಶಿವವ್ರತ ಶಿವಪೂಜಾದಿ ಜಪತಪಗಳೇ ಶಿವಪ್ರಾಪ್ತಿಗಾಗಿ ಅನುದಿನ ಮಾಡುವ ಅಹಿಂಸಾಮಯ ದಿವ್ಯ ಜ್ಞಾನಯಜ್ಞವೆನಿಸುವುದು. ಇದೇ ಬ್ರಾಹ್ಮಣ್ಯದ ತಿರುಳು, ಸಿದ್ಧಾಂತ ಶಿಖಾಮಣಿಯ ಸಾರ, ನಿಗಮಾಗಮಗಳ ಹೃದಯ. ರಾಜವಿದ್ಯೆ ರಾಜಗುಹ್ಯವೆಂಬ ಗೀತೆಯ ಸರ್ವಸ್ವವೂ ಇದೇ ಆಗಿ ರುತ್ತೆ. ಈ ಕಾರಣದಿಂದ ಸರ್ವ ಧರ್ಮ ಸಮನ್ವಯ ತತ್ವದಿಂದ ವಿರಾಜಿಸುವ ಪರಮ ವೀರಶೈವ ಧರ್ಮವು ಸನಾತನವೂ, ವಿಶ್ವಧರ್ಮವೂ, ಆಗಿರುವುದೆಂದು ಪ್ರಾಜ್ಞರಿಂದಲೂ ಪರಮಾಚಾರ್ಯ ಶ್ರೇಷ್ಠರಿಂದಲೂ ಪರಿಗಣಿಸಲ್ಪಟ್ಟು ಬೋಧಿ ತವಾಗಿರುತ್ತೆ. ಅದ್ವೈತಜ್ಞಾನಾನುಭವದಲ್ಲಿ ಧುರೀಣನಾದ ವೇಮಸಾರಾಧ್ಯನು (ವೇಮಣ್ಣ ಕವಿ ಶ್ರೇಷ್ಠನು) "....ಲಿಂಗಮತಮೇ ಗೊಪ್ಪ...." ಎಂದು ಸಾರಿರು ವುದು ಗಮನಾರ್ಹವೇ ಆಗಿರುತ್ತೆ. ಅಸ್ತು.

## VI

ಇಷ್ಟಲಿಂಗಧಾರಣ, ಶಿವಪೂಜೆ ಇತ್ಯಾದಿ ಮಹಾ ತತ್ವಗಳು ಮಾನವರ ಪಾಲಿಗೆ ಮಹಾದೇವನನ್ನು ಒಲಿಸಿಕೊಳ್ಳಲು ಈ ಕಲಿಕಾಲದಲ್ಲಿ ಮಹತ್ತರ ವಾದ ಸಾಧನವಾಗಿರಲು, ಅಕಟಕಟ! ವರ್ತಮಾನಕಾಲದಲ್ಲಿ ಮತಿಗೆಟ್ಟ ಮಾನವರು ಅದರಲ್ಲೂ ವೀರಶೈವರಲ್ಲಿ ಕೆಲವರು, ಗುರುವಿನಿಂದ ದತ್ತವಾದ ತಮ್ಮ ಒಳಗಿನ ನಿಜ ಆತ್ಮಚಿತ್ಕಳಾಮಯ ಇಷ್ಟಲಿಂಗವನ್ನು ದೌರ್ಭಾಗ್ಯವಶಾತ್ ಅಂಗದಿಂದ (ಶರೀರದಿಂದ) ದೂರೀಕರಿಸಿ, ಒಮ್ಮೊಮ್ಮೆ ಹಾಸಿಗೆಯಲ್ಲಿ ಸುತ್ತಿಟ್ಟು, ಇಲ್ಲವಾದರೆ ಗೂಟದಲ್ಲಿ ನೇತುಹಾಕಿ ಅಥವಾ ಗೂಡಿನಲ್ಲಿ ಬಚ್ಚಿಟ್ಟು ನಿಶ್ಚಿಂತ ರಾಗಿ, ಮರ್ಕಟದಂತೆ ಮಾರಿ ಮಸಣಿಗಳಾಗಿ ಮೈಮರೆತ ಮಾನವರ ಸಂಖ್ಯೆ

ದಿನೆದಿನೆ ಹೆಚ್ಚು ಹೆಚ್ಚಾಗಿ ಬೆಳೆಯುತ್ತಿರುವುದನ್ನು ನೋಡಿದರೆ, ನಾಗರೀಕತೆ ಹೆಚ್ಚಿ ವಿಜ್ಞಾನವು ಬೆಳೆಯುತ್ತಿರುವ ಜನಾಂಗದ ಭವಿತವ್ಯದ ಹೆಗ್ಗುರಿ ಯಾವ ರೀತಿ ಎಲ್ಲಿ ಕೊನೆಗಾಣುತ್ತೋ ಹೇಳಲು ನಾನು ಇಚ್ಛಿಸುವುದಿಲ್ಲ. ಇದು ಅಜ್ಞ ಜನರ ಮೇಲೆ ಆರೋಪಿಸುವ ಮಾತೇ ಆಗಿರದೆ, ಪ್ರಾಜ್ಞರಾದ ಶ್ರೀಮಂತರೂ, ಪ್ರೌಢ ವಿದ್ಯಾವಂತರೂ, ಕುಶಲಮತಿಯರಾದ ಬಡ ತರುಣ ತರುಣೀ ಮಣಿಯಂದಿರುಗಳೂ ಹೆಚ್ಚೇನು, ಕಾಲಪ್ರವಾಹದಲ್ಲಿ ಚಕ್ರವತ್ ಉರುಳಿ, ನೋಡುತ್ತಿದ್ದಂತೆಯೇ ಭ್ರಷ್ಟನಷ್ಟವಾಗುವಂಥ ಸ್ವಭಾವವುಳ್ಳ ದರ್ಪದ ಅಧಿಕಾರ ಸ್ಥಾನದಲ್ಲಿ ಲಂಪಟರಾಗಿ ದಂಡ ದಾಕ್ಷಿಣ್ಯಗಳಿಗೆ ತುತ್ತಾಗಿ ಭ್ರಮಿಸುವಂಥಾ ಆಡಂಬರದ ಗಣ್ಯವ್ಯಕ್ತಿಗಳೂ ಇನ್ನೂ ಅನೇಕರೂ ಅಲಕ್ಷ್ಯಭಾವದಿಂದ, ಶ್ರೇಷ್ಠವಾದ ಇಷ್ಟಲಿಂಗಧಾರಣ ಪವಿತ್ರವಾದ ಶಿವಪೂಜಾದಿ ನಿತ್ಯ ನೈಮಿತ್ತಿಕಾದಿ ಸತ್ಕರ್ಮರೂಪ ಜ್ಞಾನ ಯಜ್ಞಾನುಷ್ಠಾನವನ್ನು ದುರ್ಬುದ್ಧಿಯಿಂದ ದೂರೀಕರಿಸಿ, ದುರ್ಮದಾಂಧರಾಗಿ ದುಶ್ಚರ್ಯೆಗಳಿಂದ ದೂರದೃಷ್ಟಿಯನ್ನು ಕಳೆದುಕೊಂಡು ದುರ್ಗತಿಗಿಳಿಯುತ್ತಿರುವರು. ಇದು ಕಲಿಪುರುಷನ ಪ್ರೇರೇಪಣೆಯಾಗಿರಬಹುದೇನು ? ಇಲ್ಲ ಇಲ್ಲ! ಅಯ್ಯೋ ಪಾಪ!! ಕಲಿಪುರುಷನು ಈಗಾಗಲೇ ಹೀಗೆಲ್ಲಾ ಜನರನ್ನು ಪ್ರೇರೇಪಿಸಲು, ಅವನು ಇನ್ನೂ ತೊಟ್ಟಲಿನ ಮಗುವಾಗಿಯೇ ಹಲ್ಲು ಮೊಳೆಯದ ಕೂಸಾಗಿಯೇ ಹಸುಳೆಯಾಗಿರುವನು. ಕಲಿಪುರುಷನ ಪೂರ್ಣಾಯುಷ್ಯ ನಾಲ್ಕು ಲಕ್ಷದ ಮೂವತ್ತೆರಡು ಸಾವಿರ ವರ್ಷಗಳೆಂದು ಶಾಸ್ತ್ರಾಧಾರವಿರುತ್ತೆ. ಸದ್ಯಃ ಕಲಿ ಹುಟ್ಟಿ ಕೇವಲ ಐದು ಸಾವಿರ ಚಿಲ್ಲರೆ ವರ್ಷಗಳು ಮಾತ್ರ ಆಗಿರುತ್ತೆಂದರೆ, ಕಲಿಪುರುಷನು ಇನ್ನೂ ಕೇವಲ ಶೈಶವಾವಸ್ಥೆಯಲ್ಲೇ ತೊಟ್ಟಿಲಿನಲ್ಲೋ ಅಥವಾ ತಾಯಿಯ ಪರ್ಯಂಕದ ಮೇಲೋ ಮಲಗಿ ಮಲ ಮೂತ್ರಂಗಳಲ್ಲಿ ಮಿಂದು ಮೇಣ್ ಮಣ್ ತಿಂದು ಮತ್ತೋಕರಿಸುತ್ತ ನಿರ್ವ್ಯಾಜದಿಂ ಚೀರಿಟ್ಟಳುತ್ತಲೋ, ಒಡನೆ ನಿರ್ವ್ಯಾಜದಿಂ ನಕ್ಕು, ಲಾಲಾ ಜಲವಂ (ಜೊಲ್ಲನ್ನು) ಬಾಯಿಂದ ಸುರಿಸುತ್ತ, ತನ್ನಾಪ್ತರ್ಗೆ, ಹೆತ್ತ ತಾಯ್ತಂದೆಗಳಿಗೆ ಬಾಲಲೀಲೆಗಳಿಂದ ವಿನೋದಗೊಳಿಸುತ್ತ ಬೆಳೆಯುತ್ತಲಿರುವನು. ಆದ್ದರಿಂದ ಶಿಶುವಾದ ಕಲಿಪುರುಷನು ಜನಾಂಗದ ಮೇಲೆ ತನ್ನ ಪೌರುಷಯುಕ್ತವಾದ

ಪ್ರತಾಪವನ್ನು ಬೀರುವಷ್ಟು ವಯಸ್ಕನೂ ಶಕ್ತಿಯುತನೂ ಇನ್ನೂ ಆಗಿಲ್ಲ. ಇವನು ಬಾಲ್ಯಾವಸ್ಥೆಯನ್ನು ದಾಟಿ ತಾರುಣ್ಯಾವಸ್ಥೆಗೆ ಬರುವುದರೊಳಗಾಗಿ ಜಗತ್ತು ಹಾಗೂ ಜನಾಂಗ ಏನಾಗಿರ್ಪುದೋ ಜನಾರ್ಧನನೇ ಬಲ್ಲ. ಅಸ್ತು. ಇಷ್ಟಪ್ರಾಣ ಭಾವಲಿಂಗಗಳ ಅರ್ಚನೆ ಉಪಾಸನೆ ಆರಾಧನೆಗಳ ಸತತ ಸಂಬಂಧವನ್ನು ಭಕ್ತನು ಬಾಹ್ಯಾಭ್ಯಂತರಗಳಲ್ಲಿ ಏಕಪ್ರಕಾರವಾದ ಶುದ್ಧ ನಿಷ್ಠೆಯಿಂದ ಅವಿಚ್ಛಿನ್ನವಾಗಿ ಪರಿಪಾಲಿಸುತ್ತ ಮುಂದುವರಿದಲ್ಲಿ ಅವನು ಕ್ರಮೇಣ ಶಿವಾನುಗ್ರಹದಿಂದ ಸರ್ವಾನಿಷ್ಟಗಳಿಂದ ದೂರನಾಗಿ ಸಕಲಾಭೀಷ್ಟಗಳನ್ನು ಹೊಂದಿ ಶಾಂತನೂ ತೃಪ್ತನೂ ಆಗುವುದರೊಂದಿಗೆ ಇವನ ಭವ್ಯ ಭವಿತವ್ಯವು ಆನಂದದಾಯಕವೂ ಸ್ಫೂರ್ತಿದಾಯಕವೂ ಆಗಿ ಕಂಗೊಳಿಸಲಿರುವುದು. ಮೃತಮಾನವನನ್ನು ಅಮೃತಗೊಳಿಸುವ ಇಷ್ಟಲಿಂಗದ ಧಾರಣೋಪಾಸನೆಗಳಿಂದ ಯಂಥಾ ಸಂದರ್ಭದಲ್ಲೂ ಯಾವ ಕಾರಣದಿಂದಲೇ ಆಗಲಿ ಅರಘಳಿಗೆಯೂ ಅಗಲಿರಬಾರದು. ಅಗಲಿದ್ದೇ ಆದರೆ ಹಾಯ್ ಹಾಯ್ ! ಅಪರಾಧ ಮಹಾಪರಾಧಕ್ಕೆ ಗುರಿಯಾಗಿ, ಪ್ರಾಣವಗಲಿದ ಅಮಂಗಳ ಶರೀರದಂತೆ ಹೇಯ ಶವಸದೃಶನೆಂದು ತಿಳಿಯತಕ್ಕದ್ದು. ದೇಹಾಭಿಮಾನ, ದೇಶಾಭಿಮಾನ, ಭಾಷಾಭಿಮಾನ, ಕೋಶಾಭಿಮಾನ, ಮಾನಾಭಿಮಾನಗಳಂತೆ, ಧರ್ಮಾಭಿಮಾನವೂ ಅತ್ಯಂತ ಶ್ರೇಷ್ಠವೇ ಅಷ್ಟೆ. ಅದರಲ್ಲೂ ಸ್ವಧರ್ಮಾಭಿಮಾನ ಬಹು ಹಿರಿಯದು. ಸ್ವಧರ್ಮ ಪರಿಪಾಲನೆ ಧನ ಮಾನ ಪ್ರಾಣೇತ್ಯಾದಿ ಎಲ್ಲಾ ರಕ್ಷಣೆಗಳಿಗಿಂತಲೂ ಅತ್ಯಂತ ಉತ್ಕೃಷ್ಟವೂ ಮಂಗಳಕರವೂ ಆಗಿರುತ್ತೆ. ಗೀತಾಚಾರ್ಯನು ಗೀತೆಯಲ್ಲಿ, ಸ್ವಧರ್ಮದಿಂದ ಪತಿತನಾಗಿ ಕಷ್ಟಕಾರ್ಪಣ್ಯ ಸಂಕಟಗಳಿಗೆ ಸಿಕ್ಕಿ ನರಳುತ್ತಾ ॥ ಕಾರ್ಪಣ್ಯ ದೋಷೋಪಹತ ಸ್ವಭಾವಃ ॥ ಎಂಬ ಗೀತೋಕ್ತಿಯಂತೆ ಕಣ್ಣೀರಿಟ್ಟು ನರಕಕ್ಕಿಳಿಯಲೂ ಸಹ ತಾನು ಸಿದ್ಧನಿರುವೆನೆಂದು ನುಡಿಯುತ್ತಿರುವ ಅರ್ಜುನನನ್ನು ಕಾಲೋಚಿತವಾಗಿ ಎಚ್ಚರಗೊಳಿಸುತ್ತಾ ಶ್ರೀ ಕೃಷ್ಣಸ್ವಾಮಿಯು ॥ ಸ್ವಧರ್ಮೇ ನಿಧನಂ ಶ್ರೇಯಃ । ಪರಧರ್ಮೋ ಭಯಾವಹಃ ॥ ಎಂದು ಸ್ಪಷ್ಟವಾಗಿ ಬೋಧಿಸಿರುವನು. ಸಂಶಯ ಪಡದೆ ಇದನ್ನು ನಂಬಿ ವಿಶ್ವಸಿಸದೆ ಹೋದರೆ ಕೆಡುವರು. ॥ ಸಂಶಯಾತ್ಮಾ ವಿನಶ್ಯತಿ ॥ ಸನಾತನ ಧಾರ್ಮಿಕ ತತ್ವಗಳ ಅನುಸ

ರಣೆಯಲ್ಲಿ ಗೌರವಬುದ್ಧಿಯನ್ನು ಬಿಟ್ಟು ಸಂಶಯವೋ ಅಥವಾ ನಿಕೃಷ್ಟಭಾವವನ್ನು ಹೊಂದಿದರೆ ಅಂಥವನು ಊರ್ಜಿತವಾಗುವುದಿಲ್ಲವೆಂದು ಶ್ರೀ ಕೃಷ್ಣನು ಉಪದೇಶಿಸಿರುವನು. *Faith is life Doubt is Death* ಎಂಬ ಆಂಗ್ಲೇಯ ನುಡಿಯು ಮೇಲ್ಕಂಡ ಅಂಶವನ್ನೇ ಪ್ರತಿಪಾದಿಸುತ್ತಲಿರುವುದು. ಶ್ರೀ ರೇಣುಕ ಗೀತೆಯಲ್ಲಿ ಭಗವತ್ಪಾದ ಜಗದ್ಗುರು ಶ್ರೀ ರೇಣುಕಾಚಾರ್ಯರು ಆದಿ ಶ್ರೀ ಅಗಸ್ತ್ಯ ಮಹರ್ಷಿಗಳಿಗೆ ಬೋಧಿಸುವ ಸಂದರ್ಭದಲ್ಲಿ ಸ್ವಧರ್ಮಾನುಷ್ಠಾನವನ್ನು ವಿಶ್ವಾಸಪೂರ್ವಕ ಆಚರಿಸುವವನು, ॥ ಜ್ಞಾನೇನಾಚಾರಯುಕ್ತೇನ । ಪ್ರಸೀದತಿ ಮಹೇಶ್ವರಃ ॥ ಎಂದು ಅಪ್ಪಣೆಕೊಡಿಸಿರುವರು. ನಂಬಿಕೆಯಿಂದ ಅನುಷ್ಠಿಸುವ ಸ್ವಧರ್ಮಾಚಾರವು ಜ್ಞಾನಪೂರ್ವಕ (ತಿರುಳನ್ನು ತಿಳಿದುಕೊಂಡು) ಆಚಾರ ವಿಚಾರಗಳಿಂದ ಶಿವಪ್ರೀತ್ಯರ್ಥವಾಗಿ ಸಲ್ಲಿಸುವ ಯಾವ ಸ್ವಧರ್ಮಾಚಾರಣೆಯುಂಟೋ ಅದರಿಂದ ಮಹಾದೇವನು ಸಂಪ್ರೀತನಾಗುವನೆಂದು ಉಪದೇಶಿಸಿರುವರು. ಕರ್ಮಭೂಮಿಯಾದ ಈ ಭೂಲೋಕದಲ್ಲಿ ಪ್ರಾರಬ್ಧಕರ್ಮವನ್ನು ಅನುಭವಿಸುತ್ತಲಿರುವ ಜೀವಾತ್ಮನು ಸ್ವಧರ್ಮಾಚರಣೆಯನ್ನು ಕೈಬಿಟ್ಟು ಕ್ರೀಯಾಭ್ರಷ್ಟನಾಗದೆ ಸದಾಚಾರಯುಕ್ತವಾದ ಶಿವಪೂಜಾದಿ ನಿತ್ಯ ನೈಮಿತ್ತಿಕಾದಿ ಸತ್ಕರ್ಮಗಳನ್ನು ಶ್ರದ್ಧಾಭಕ್ತಿಯಿಂದ ಬಿಡದೆ ಆಚರಿಸಲೇಬೇಕು. ಇದು ಈಶ್ವರ ಪ್ರೋಕ್ತ ನಿಯಮ, ಇದು ವೇದ ವಿಧಿತವಿದಿ. ಇದು ಶಿವಶರಣ ಸಾಧು ಸಂತರ ಸನ್ಮಾರ್ಗ. ಬ್ರಾಹ್ಮಣನಿಗೆ ಸಂಧ್ಯಾವಂದನೆ ಹೇಗೆ ನಿತ್ಯವಿಧಿತ ಸತ್ಕರ್ಮವೋ ಅದರಂತೆಯೇ ವೀರಶೈವ ಬ್ರಾಹ್ಮಣನಿಗೆ ಇಷ್ಟಲಿಂಗಾರಾಧನೆ ನಿತ್ಯವಿಧಿತ ಸತ್ಕರ್ಮವೇ ಆಗಿರುವುದು. ಅವರವರ ಸತ್ಕರ್ಮಾನುಷ್ಠಾನಗಳನ್ನು ಶ್ರದ್ಧಾಭಕ್ತಿಯಿಂದ ಯಥಾಶಕ್ತಿ ಅನುಷ್ಠಿಸುತ್ತಾ ಬಂದರೆ ಎಲ್ಲಾ ಅಭೀಷ್ಟಗಳೂ ತಾವಾಗಿಯೇ ಕೈಗೂಡುವುವು. ಸರ್ವಮತೀಯ ರಸಧರ್ಮಗಳು ಹಿತಕರಗಳಾಗಿಯೇ ಇರುವುದರಿಂದ ಅವು ಸರ್ವತ್ರ ಮಾನ್ಯವೂ ಪೂಜನೀಯವೂ ಆಗಿರುವುವು. ಶ್ರೀ ಸ್ವಾಮಿ ವಿವೇಕಾನಂದರು ಈ ಅಂಶವನ್ನು ಪ್ರತಿಪಾದಿಸುತ್ತಾ, *"Let a Christian be a staunch Christian, let a Muslim be a strong Muslim, let a Buddhist be a brave Buddhist*

*and let a Hindu be a stalwart Hindu*" ಎಂದು ಘೋಶಿಸಿರುವರು. ಇದು ಸಂಸ್ಮರಣೀಯವೇ ಆಗಿರುವುದು, ನಮ್ಮ ಧರ್ಮವಾದರೋ ॥ ಸರ್ವೇ ಜನಾಃ ಸುಖಿನೋ ಭವಂತು ॥ ಲೋಕಾಸ್ಸಮಸ್ತಾಸ್ಸುಖಿನೋ ಭವಂತು ॥ ಎಂದು ಮಾನವ ಧರ್ಮಕ್ಕೆ ಸತತ ಹಿತವನ್ನು ಜಯವನ್ನೂ ಬಯಸುತ್ತ ಅಭಯ ಪ್ರದವಾಗಿ ರಾರಾಜಿಸುತ್ತಲಿರುವುದು. ಇಂಥಾ ಉತ್ಕೃಷ್ಟವಾದ ಧರ್ಮಾಚರಣೆಯಿಂದ ಶ್ರೀ ಬಸವಣ್ಣನವರು ನುಡಿದಿರುವಂತೆ "ಇಲ್ಲಿ ಸಲ್ಲುವವರು ಅಲ್ಲೂ ಸಲ್ಲುವರಯ್ಯಾ" ಎಂಬುದು ಸತ್ಯವೇ ಆಗಿ, ಇಹಪರ ಸುಖಸಾಧನೆಗಳಿಗೆ ಧರ್ಮ ಸೇತುವೆಯಂತಿರುವ, ಸ್ವಧರ್ಮಾನುಷ್ಠಾನವನ್ನು ನಿತ್ಯ ಯತೋಚಿತವಾಗಿ ಮಾಡುವಾತನೇ ಧೀಮಾನ್ ಸುಖೀಭವನಾಗುವನು. ಇದು ಸತ್ಯ. ಶ್ರೀ ರೇಣುಕ ಭಗವತ್ಪಾದರು ಲಿಂಗಪೂಜಾ ನಿಯಮದಲ್ಲಿ ಬರಿ ಜ್ಞಾನವಿದ್ದರೆ ಸಾಲದು, ಜ್ಞಾನವು ಉಜ್ವಲದಿಂದ ಪ್ರಜ್ವಲಿಸಿ ಫಲಕಾರಿಯಾಗಬೇಕಾದರೆ "ಆಚಾರ ಯುಕ್ತೇನ" ಎಂದು ಅಪ್ಪಣೆಕೊಡುತ್ತ ಬಂಗಾರವು ಪುಟಕ್ಕಿಟ್ಟನಂತರ ಅಪರಂಜಿ ಎನಿಸುವಂತೆ ಆಚಾರದಿಂದ ಸ್ವಚ್ಛವಾದ ಜ್ಞಾನವು ಶಿವಾತ್ಮಕವಾಗಿ ಆತ್ಮಜ್ಞಾನವೆನಿಸಿ ಬೆಳಗುವುದೆಂದಿರುವರು. ಆದ್ದರಿಂದ ಶ್ರೀ ರೇಣುಕ ಗೀತೆ ॥ ಆಚಾರಃ ಪ್ರಥಮೋಧರ್ಮಃ ॥ ಆಚಾರಾಲ್ಲಭತೇ ಹ್ಯಾಯುಃ । ರಾಚಾರಾಲ್ಲಭತೇ ಧನಂ ॥ ಇತ್ಯಾದಿ ಮಹಾತತ್ವಗಳನ್ನು ಪ್ರತಿಪಾದಿಸುತ್ತಾ ಮಾನವನ ಸಕಲವಿಧವಾದ ಶ್ರೇಯೋಭ್ಯುದಯಾದಿಗಳಿಗೆ ಆಚಾರವು ಹಾಗೂ ಆಚಾರಯುಕ್ತವಾದ ಸಹಜ ಜ್ಞಾನವೂ ಮೋಕ್ಷಪ್ರದವಾದವುಗಳೆಂದೂ, ಒಂದನ್ನು ಬಿಟ್ಟು ಮತ್ತೊಂದು ಪೃಥಕ್ ಸ್ಥಿತಿಯಲ್ಲಿ ಪೂರ್ಣ ಫಲಕಾರಿಯಾಗಿರಲು ಸಾಧ್ಯವಿಲ್ಲವೆಂದು ಅನೇಕ ಶೃತಿಪ್ರಮಾಣಗಳ ಆಧಾರದಿಂದ ನಿರ್ಧರಿಸಿ ಜ್ಞಾನ ಕರ್ಮಗಳ ಸಂಗಮ ಸಮನ್ವಯ ಮಹಾತತ್ವವನ್ನು ಹೃದಯಂಗಮವಾಗಿ ವಿವರಿಸಿ ಬೋಧಿಸಿರುವರು. ರೆಕ್ಕೆಗಳೆರಡು ಹಕ್ಕಿಗೆ ಹೇಗೆ ಅತ್ಯಾವಶ್ಯಕವೋ ಹಾಗೆ ಮಾನವನು ಶಿವನಲ್ಲಿ ವಿಲೀನನಾಗುವವರವಿಗೂ ಜ್ಞಾನಕರ್ಮಗಳೆಂಬ ಎರಡು ರೆಕ್ಕೆ ಬೇಕೇಬೇಕು. ಕರ್ಮವೆಂಬ ಒಂದು ರೆಕ್ಕೆ ಮುರಿದರೆ, ಜ್ಞಾನವೆಂಬ ಮತ್ತೊಂದು ರೆಕ್ಕೆಯಿಂದ ಹಕ್ಕಿ ಮುಂದೆಹಾರಲು ಸಾಧ್ಯವಿಲ್ಲದೆ, ಒಂದು ಚಕ್ರ ಮುರಿದ ರಥ ನೆಲಕ್ಕುರು

ಳುವಂತೆ ಹಕ್ಕಿ ನೆಲಕ್ಕುರುಳಿಬಿದ್ದು ನಷ್ಟವಾಗುವುದು. ಆಚಾರಯುಕ್ತವಾದ ಸತ್ಕರ್ಮಾವಲಂಭನೆಯಿಂದ ಬೆಳಗುವ ದಿವ್ಯ ಜ್ಞಾನ ಮಹಾದೇವನನ್ನು ಮುದಗೊಳಿಸುವಷ್ಟು ಪ್ರಭಾವಾನ್ವಿತವಾಗಿರುವುದು ಎಂಬ ಅಂಶ ಅತ್ಯಂತ ಗಮನಾರ್ಹವು. ಆದ್ದರಿಂದ ವೀರಶೈವನು ಅಂಗದ (ಶರೀರದ) ಮೇಲೆ ಇಷ್ಟಲಿಂಗವನ್ನು ಸತತ ಧರಿಸಿ, ಭಸಿತ ರುದ್ರಾಕ್ಷಿ ಧಾರಣೆಯಿಂದ ಶೋಭಿತನಾಗಿ, ಸಂಧ್ಯಾಕಾಲ ಪರ್ವಕಾಲಗಳಲ್ಲಿ ಶಿವಪೂಜೆ, ಶಿವಧ್ಯಾನ, ಓಂಕಾರ ಸಹಿತ ಶಿವಪಂಚಾಕ್ಷರೀ ಮಹಾಮಂತ್ರ ಜಪಾನುಸಂಧಾನಗಳನ್ನು ॥ ಅಭ್ಯಾಸೇನತು ಕೌಂತೇಯ ॥ ಎಂಬಂತೆ ಸ್ವಲ್ಪಸ್ವಲ್ಪವಾಗಿ ಅಭ್ಯಾಸಮಾಡುತ್ತಾ ಜೀವನದ ಯಾತ್ರೆಯನ್ನು ಮುಂದೂಡಿಕೊಂಡು ಬಂದರೆ ಕಾಲಕ್ರಮೇಣದಲ್ಲಿ, ಅಂದರೆ ಸುಕೃತವು ಪರಿಪಕ್ವವಾದ ಕೂಡಲೇ ವಾಂಛಿತಾರ್ಥಗಳೆಲ್ಲಾ ನೆನೆದಾಕ್ಷಣ ಕೈಗೂಡುವುವು. ಹಾಗಿಲ್ಲವಾದರೆ, ರಾಜಾಜ್ಞೆಯನ್ನು ಮೀರಿರುವವನಿಗೆ ಹೇಗೆ ದಂಡನೆಗೆ ಗುರಿಮಾಡಲಾಗುವುದೋ ಅದರಂತೆ ಶಾಸ್ತ್ರದ ವಿಧಿಯನ್ನು ಮೀರುವಾತಂಗೆ ಇಹಪರಗಳೆರಡರಲ್ಲೂ ಶಿಕ್ಷೆಗೆ ಗುರಿಮಾಡಲಾಗುವುದು ಎಂಬ ಎಚ್ಚರಿಕೆಯನ್ನು ಜ್ಞಾಪಕಪಡಿಸಲು ಬಯಸುವೆನು. ವೀರಶೈವ ಧರ್ಮದಲ್ಲಿ ಜಗತ್ ಸೃಷ್ಟ್ಯಾರಂಭದಿಂದ ಅನುಷ್ಠಿತಗೊಂಡು ವಿರಾಜಿಸುವ ಇಷ್ಟಲಿಂಗಧಾರಣ ಹಾಗೂ ಶಿವಲಿಂಗ ಪೂಜೆ ಕೇವಲ ಪ್ರಾಕೃತ ಧರ್ಮವೇ ಆಗಿರದೆ, ಅಪ್ರಾಕೃತವೂ ಸನಾತನವೂ, ವೇದಾಗಮಾದಿಗಳಲ್ಲಿ ಪ್ರೋಕ್ತವೂ ಆಗಿ ಅತ್ಯಂತ ಉತ್ಕೃಷ್ಟವಾದ ಬ್ರಾಹ್ಮಣ್ಯದಿಂದ ವಿರಾಜಿಸುತ್ತಲಿರುವುದೆಂದು ಎತ್ತಿ ಹೇಳಲು ಮಹದಾನಂದವೇ ಆಗುತ್ತೆ. ಈ ಕಾರಣದಿಂದ ವೀರಶೈವ ಧರ್ಮವು ತನ್ನದೇ ಆದ ವಿಶ್ವವಂದನೀಯ ವಿಶ್ವಮಾನ್ಯವಾದ ಸ್ವಧರ್ಮ ಪರಿಪಾಲನೆಯೊಂದಿಗೆ ಅಖಿಲ ಸನಾತನ ಆಧ್ಯಾತ್ಮಿಕ ತತ್ವಗಳಿಗೆ ತವರು ಸ್ಥಾನವಾಗಿ ಬೆಳಗಿ ವಿಶ್ವಧರ್ಮವನ್ನು ತನ್ನಲ್ಲಿ ಅಳವಡಿಸಿಕೊಂಡು ಶ್ರೀ ವಿಶ್ವೇಶ್ವರ ಶ್ರೀ ಕಾಶೀ ವಿಶಾಲಾಕ್ಷಿಯರಿಗೆ ಪ್ರಿಯಕರವಾಗಿ ವಿಶ್ವಾತ್ಮಕವಾಗಿಯೇ ಇರುವುದು. ಈ ಕಾರಣದಿಂದಲೇ ಶೃತಿಮಾತೆಯು ತನ್ನ ಅಮೃತವಾಣಿಯಲ್ಲಿ ॥ ನ ವೀರಶೈವ ಸದೃಶಂ ಮತಮಸ್ತಿ ಜಗತ್ರಯೇ । ಸರ್ವಭೋಗ ಪ್ರದಂ ಪುಣ್ಯಂ ಶಿವ ಸಾಯುಜ್ಯ ದಾಯಕಂ ॥

(ಪಾರಮೇಶ್ವರಾಗಮ) ಎಂಬುದಾಗಿ ತನ್ನ ಗಂಭೀರವಾಣಿಯಿಂದ ಶೃತಪಡಿಸಿರುವಳು. ಮೃತನಾಗಲಿರುವ ಮಾನವನನ್ನು ಅಮೃತನನ್ನಾಗಿಸಲು ಈ ಧರ್ಮದಲ್ಲಿ ॥ ಅಮೃತಸ್ಯ ದೇವಧಾರಣೋ ಭೂಯಾ ಸಂ ॥ ಎಂದು ಬೋಧಿಸಿರುವುದು. ಅಂದರೆ ಬ್ರಹ್ಮವಿತ್ತರಾದ ಜೀವನ್ಮುಕ್ತರೂ ಹಾಗೂ ಶಿವಶರಣರೂ ತಮ್ಮ ಜೀವಿತಕಾಲದಲ್ಲೇ ಅಮೃತಮಯ ದಿವ್ಯಮೋಕ್ಷ ಸುಖವನ್ನು ಸಾಕ್ಷಾತ್ತಾಗಿ ಅನುಭವಿಸಿ ಕೃತಕೃತ್ಯರಾಗಲು, ದೇವಾದಿದೇವನಾದ ಮಹಾದೇವನನ್ನು (ಪರಶಿವನನ್ನು) ॥ ಲಿಂಗಂ ಚಿದಾತ್ಮಕಂ ಬ್ರಹ್ಮ ॥ ಜ್ಯೋತಿರ್ಲಿಂಗರೂಪದಲ್ಲಿ ಅರ್ಥಾತ್ ಗುರುದೇವನಿಂದ ಅನುಗ್ರಹಿಸಲ್ಪಟ್ಟಿರುವ ಇಷ್ಟಲಿಂಗ ರೂಪದಲ್ಲಿ ಸ್ಫೂರ್ತಿಯಿಂದ ನೆಟ್ಟ ನಿಷ್ಠೆಯುಳ್ಳವರಾಗಿ ತಮ್ಮ ದೇಹದಲ್ಲಿ ಧರಿಸಿದ್ದು ॥ ಅಭಿಷೇಕಪ್ರಿಯ ಶಂಭುಃ । ಅಭಿಷೇಕೇನತುಷ್ಯತಿ ॥ ಶುದ್ಧೋದಕದಿಂದ ಮಂತ್ರಪೂರ್ವಕ ಅಭಿಷೇಕವನ್ನುಮಾಡಿ ದಿವ್ಯಗಂಧಾಕ್ಷತೆ ಬಿಲ್ವಪತ್ರೆ ಪುಷ್ಪ ದೀಪ ದೂಪ ಕರ್ಪೂರ ನೈವೇದ್ಯಾರಾಧನಾದಿ ಷೋಡಶೋಪಚಾರಗಳಿಂದಲೂ ಪರಮ ಭಕ್ತಿಯಿಂದಲೂ ಪೂಜಿಸಿ ಸ್ತುತಿಸಿ, ಪ್ರಣವಸಹಿತ ಶಿವ ಪಂಚಾಕ್ಷರಿ ಮಹಾ ಮಂತ್ರವನ್ನು ೧೦೮ ಸಾರಿ ಯಾದರೂ ಜಪಿಸಿ, ಸ್ವಲ್ಪಧ್ಯಾನಾಸನಾ ರೂಢನಾಗಿ ಶಾಂತನೂ ತೃಪ್ತನೂ ಆಗಿ ಶಿವನ (ಇಷ್ಟಲಿಂಗದ) ತೀರ್ಥ ಪ್ರಸಾದಗಳನ್ನು ಸೇವಿಸಬೇಕೆಂದೂ, ಈ ಪ್ರಕಾರ ಆಚರಿಸುವುದರಿಂದ ಜೀವನು ತನ್ನ ತನುಕರಣಗಳನ್ನು ನೀಗಿ ಶಿವಕರಣಗಳನ್ನಾಗಿಸಿಕ್ಕೊಂಡು ಶಿವನಲ್ಲಿ ಬೆರತು ಅಮೃತಮಯನಾಗುವುದಕ್ಕೆ ಈ ಧರ್ಮದಲ್ಲಿ ಬೋಧಿಸಿರುವ ರಾಜವಿದ್ಯೆ ರಾಜಧರ್ಮವೆಂದರೆ ಇದೇ ಆಗಿರುತ್ತೆ.

## VII

ಪರಮ ಪವಿತ್ರವಾದೀ ವೀರಶೈವ ಧರ್ಮವು ಮೇಲೆ ಉದಹರಿಸಿರುವಂತೆ ಸನಾತನವೂ ವಿಶ್ವಧರ್ಮಮಯವೂ ಆಗಿ ಶಿವಲಿಂಗೋದ್ಭವ ದಿವ್ಯಮೂರ್ತಿಗಳಾದ ಜಗದ್ಗುರು ಶ್ರೀ ರೇಣುಕಾದಿ ಪಂಚಾಚಾರ್ಯರಿಂದ ಶಿವಾಗಮೋಕ್ತಿಗಳಂತೆ

ಸ್ಥಾಪಿತವಾಗಿ, ಶಿವನ ಜಟಾಭಾರದಿಂದುದಿಸಿ ಭುವಿಗಿಳಿದು ಜೀವ ನದಿಯಾದ ಪರಮಪಾವನ ಗಂಗಾನದಿಯ ಪುಣ್ಯ ಪ್ರವಾಹದಂತೆ ಕಂಗೊಳಿಸುತ್ತಲಿರುವುದು, ಸೂರ್ಯ ಪ್ರಕಾಶದಂತೆ ಜಗದ್ವಿಖ್ಯಾತವಾದ ಅಂಶವೇ ಆಗಿರುತ್ತೆ. ಸತ್ಯಾಂಶ ಹೀಗೆ ಶೋಭಿಸುತ್ತಲಿದ್ದರೂ, ಕೆಲವು ಅಜ್ಞರಾದ ಜನರು ಹಟಮಾರಿತನದಿಂದ ಮಾರ್ಜಾಲ ಸನ್ಯಾಸಿಗಳಾಗಿ ಕೇವಲ ಸುಮಾರು ಎಂಟು ನೂರು ವರ್ಷಗಳ ಹಿಂದೆ ಅವತರಿಸಿ ಇಡಿ ಕರ್ಣಾಟಕ ದೇಶದಲ್ಲಿ ಇನ್ನೂ ಭರತ ಖಂಡದ ಇತರ ಭಾಗಗಳಲ್ಲೂ ಚರಿತ್ರಾರ್ಹ ಸುಪ್ರಸಿದ್ಧರಾದ, ಸಾಮಾಜಿಕ ರಾಜಕೀಯ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ಗಣನೀಯವಾದ ಸೇವೆ ಸಲ್ಲಿಸಿ ಮುಕ್ತರಾದ ಚಿರ ಸ್ಮರಣೀಯ ಮಹಾ ಪುರುಷ ಕಲ್ಯಾಣದ ಶ್ರೀ ಬಸವಣ್ಣನವರೇ ವೀರಶೈವಮತ ಸ್ಥಾಪನಾಚಾರ್ಯರೆಂದೂ ಪಂಚಾಚಾರ್ಯರು ಇತ್ತೀಚಿನ, ಇವರುಗಳ ಅನು ಯಾಯಿಗಳೆಂದೂ ನಿರಾಧಾರವಾದ ನೀರಸವಾದಗಳಿಂದ ಹಾಗೂ ತಮ್ಮ ಮೊಂಡುತನದ ಪಂಥಾಭಿಮಾನದ ಅಮಲಿನಿಂದ ತಾವು ದೂಷಿತರಾಗುವುದ ರೊಂದಿಗೆ, ಭಕ್ತಕೋಟಿಗಳ ಚಿತ್ತವನ್ನೂ ಕಲುಷಿತಗೊಳಿಸಿ, ಮಹಾನುಭಾವರೂ ಋಜುಸ್ವಭಾವದವರೂ ತಾವು ಶಿವನ ಮತ್ತೂ ಶಿವಶರಣರುಗಳ ಕಿಂಕರನೆಂದೇ ಮನ ಬಿಚ್ಚಿ ನುಡಿದು, ನಡೆನುಡಿಗಳಲ್ಲಿ ಒಂದಾಗಿ ಸದ್ಗೃಹಸ್ತರಾಗಿ ಬಾಳಿ ಅಮರರಾಗಿರುವ ಸತ್ಯಪ್ರಿಯ ಶ್ರೀ ಬಸವಣ್ಣನವರ ಮೃದು ಮಧುರ ಹೃದಯಕ್ಕೆ ಅಪ್ರಿಯವಾದ ಅಪಪ್ರಚಾರದಿಂದ ಘಾಸಿಗೊಳಿಸಿ, ಅನುಗ್ರಹಕ್ಕೆ ಬದಲು, ಅವರ ಆಗ್ರಹದ ತಾಪಕ್ಕೀಡಾಗುತ್ತಲಿರುವರು. "ಶಿವಂ ಶಾಂತಂ ಸುಂದರಂ."

ಎಂಥಃ ವಿಚ್ಛಿದ್ರ ಪರಿಸ್ಥಿತಿ ಪ್ರಾಪ್ತಿಯಾದರೂ ಮಾರುಹೋಗದೆ, ಏಕೈ ಕವೂ ಗಂಭೀರವೂ ಆಗಿರುವುದೇ ಸತ್ಯಮಾರ್ಗದ ಸೌಜ್ಞೆಯಾಗಿರುತ್ತೆ. ಅನೃತ ಮಾರ್ಗವಾದರೋ ನೀರ್ಗುಳ್ಳೆಯಂತೆ ಕೇವಲ ತೋರ್ವಿಕೆಯಿಂದ ತರತರವಾಗಿ ಮಾಯಾ ಮಾರೀಚನಂತೆ ಪ್ರಕಟವಾಗುತ್ತ, ಕೊನೆ ಮೊದಲಿಲ್ಲದ ಕ್ರೋಧಾ ಸೂಯೆಗಳಲ್ಲಿ ಪರಿಯವಸಾನವನ್ನು ಹೊಂದಿ ಎಂದೆಂದಿಗೂ ವಿಸ್ಮಯಕಾರಿಯಾಗಿ ವಿಷ ಪೂರಿತ ಸೌಜ್ಞದಿಂದ ವಿಕಾರವಾಗಿರುತ್ತೆ. ಶ್ರೀ ಬಸವಣ್ಣನವರ ಮಟ್ಟಿಗೆ ನೋಡುವಲ್ಲಿ ಅವರು ಸತ್ಯಪ್ರಿಯರು ಸತ್ಯದ ಮಾರ್ಗವನ್ನು ಹಿಡಿದು ಮುಂದು

ವರಿದು "ಗುರು ಲಿಂಗ ಜಂಗಮರ" ಸೇವೆಗಾಗಿ ಕಾಯಕವ ಹೊತ್ತು, ದೃಢ ಭಾವದಿಂದ ಆ ಘನ ಸೇವೆಯಲ್ಲಿ ದಾಸೋಹ ಕೈಂಕರ್ಯದಲ್ಲಿ ನಿರುತರಾಗಿ– ಕಿಂಕರಭಾವ ಶುದ್ಧಿಯಿಂದ ಶಂಕರತ್ವದ ಬೆಳಕನ್ನು ಕಂಡು, ಆ ಬೆಳಕಿನ ಅನುಭವ ವನ್ನು ಅನುಭವ ಮಂಟಪದಲ್ಲಿ ಮಾಣಿಕ್ಯದ ಮಣಿಯಂಥಾ ಅನುಭವ ಮಾತು ಗಳಿಂದ ಬೋಧಿಸಿ ನಡೆನುಡಿಗಳಲ್ಲೊಂದಾಗಿ ಬಾಳಿ ಕೀರ್ತಿ ಶೇಷರಾಗಿರುವರು. ಇವರ ಅನುಯಾಯಿಗಳೂ ಸಹ ತಮ್ಮ ಆದರ್ಶ ಮಹಾ ಪುರುಷನಂತೆ ಪಂಥ ಪಟ್ಟುಗಳ ಬಿಟ್ಟು ಇನ್ನಾದರೂ ಒಳ ಹೊರಗೂ ಏಕಪ್ರಕಾರವಾದ ವಿಶಾಲ ಹೃದಯಭಾವ ನಡೆನುಡಿಗಳಿಂದ ಗುರುಲಿಂಗ ಜಂಗಮರ ಸೇವಾನಿರತ ಕಿಂಕರತ್ವ ದಿಂದ ಧನ್ಯರಾಗಲು ಹೆಣಗೋಣ

ಶ್ರೀ ನಂದಿಕೇಶ್ವರನ ದಿವ್ಯವರಪ್ರಸಾದದಿಂದ ಪತಿವ್ರತಾ ಶಿರೋಮಣಿ ಯಾದ ಶ್ರೀ ಮಾದಲಾಂಬಿಕೆಯ ಸುಗರ್ಭಾಂಬುದಿಯಿಂದ, ಶ್ರೀ ಬಸವಣ್ಣನ ವರು ಸಮುದ್ರಾಂಬುದಿಯಿಂದ ಪೂರ್ಣಚಂದ್ರನುದಿಯಿಸುವಂತೆ ಉದಯಿಸಿ ದರು. ಮಾತಾಪಿತೃಗಳು ಮಾಡಿದ ಶಿವವ್ರತ ಶಿವಪೂಜಾ ಶಿವಧ್ಯಾನ ಹಾಗೂ ಅವರ ದಾನ ಧರ್ಮ ಪರೋಪಕಾರಗಳ ಸತ್ಫಲರೂಪವಾಗಿ ಅವರ ವೃದ್ಧಾಪ್ಯ ದಿಶೆಯಲ್ಲಿ ಅಪರೂಪಕ್ಕೆ ಅವರ ಕಣ್ಮಣಿಯಂತೆ ಬಸವಣ್ಣನವರು ಉದಿಸಿದರು. ಆದರೆ ಶಾನೇನು ಗಂಡು ಕೂಸು ಜನನವಾಯಿತೆಂಬ ಅಪಾರ ಸಂತೋಷ ಸಾಗ ರದ ಮಧ್ಯೆ ದುಃಖದ ಮತ್ತೊಂದು ಕಡಲು ಭೋರ್ಗರೆದು ಹಾರಿ ಹಂ! ಎಂದಂತೆ, ಹುಟ್ಟಿದ ಕೂಸು ಕಣ್ ತೆರೆಯಲಿಲ್ಲ ಕೈಕಾಲುಗಳನ್ನು ಬಡಿದಾಡಿಸ ಲಿಲ್ಲ, ಚೀರಿಟ್ಟಳಲಿಲ್ಲ. ಎಷ್ಟೊತ್ತಾದರೂ ನಿಶ್ಚೇಷ್ಟಿತವಾಗಿರುವ ದೃಶ್ಯವನ್ನು ಕಂಡು ಗಾಬರಿಗೊಂಡ ಮಾತಾ ಪಿತೃಗಳೂ ಕುಲಬಾಂಧವರೂ ಇತರರೂ ಗದ್ಗದ ಧ್ವನಿಯಿಂದ "ಓ! ಮಗು ಉಸಿರಿಲ್ಲದುದಾಗಿದೆ" ಎಂದು ಕಣ್ಣೀರಿಟ್ಟು ದುಃಖಳಿಸಿ ದುಃಖಿಸಲು ಉಪಕ್ರಮಿಸಿದರು. ಅಪಾರತರವಾದ ಸಂತೋಷದ ಮಡಲಿನಲ್ಲಿ ಎಂಥಾ ದುಃಖದ ಕಾಡ್ಗಿಚ್ಚು ಅಡಗಿರುವುದು ನೋಡಿದಿರಾ? ॥ ಸುಖಸ್ಯಾನಂತರಂ ಕಷ್ಟಂ। ಕಷ್ಟಸ್ಯಾನಂತರಂ ಸುಖಂ ॥ ಎಂಬುವುದು ಸತ್ಯವೇ ಹೌದು. ಶ್ರೀ ಮಾದಲಾಂಬಿಕೆಗೆ ಗರ್ಭದಲ್ಲೇ ಮೃತಪಟ್ಟ ಶಿಶು

ಜನನವಾಗಿರುವುದು ಎಂಬ ವಿಷಾದಕರ ಸುದ್ದಿ ಬಾಗೇವಾಡಿ ಅಗ್ರಹಾರದೆಲ್ಲೆಲ್ಲೂ ಹರಡಿ, ಇಂಗಳೇಶ್ವರ ಗ್ರಾಮದಲ್ಲೂ ಹಾಹಾಕಾರವನ್ನುಂಟುಮಾಡಿತು. *"God's ways are always mysterious"* ಎಂಬ ಆಂಗ್ಲೇಯ ನುಡಿಯು ನಿಜಕ್ಕೂ ಸತ್ಯವೇ ಆಗಿರುವುದು. ಆ ಸಮಯಕ್ಕೆ ಸರಿಯಾಗಿ ಕಪ್ಪಡಿ ಶ್ರೀ ಸಂಗಮೇಶ್ವರನ ಸನ್ನಿಧಿಯಿಂದ ಬಾಗೇವಾಡಿಗೆ ಆಕಸ್ಮಿಕವಾಗಿ ದಯಮಾಡಿಸಿದ್ದ ಶ್ರೀ ಜಾತವೇದ ಮುನಿಗಳೆಂಬ ಶಿವಾಚಾರ್ಯ ದೇಶಿಕೇಂದ್ರರು ಮಂಡಗಿ ಮಾದರಸನ ಅರಮನೆಗೆ ಅಪ್ರಾರ್ಥಿತರಾಗಿ ಸನ್ನಿಹಿತರಾಗಿ ಶ್ರೀ ನಂದೀಶ್ವರನ ಅಂಶಸ್ವರೂಪಿಯಾಗಿ ಶಿವಯೋಗದಲ್ಲಿ ಪೂರ್ಣ ತಲ್ಲೀನವಾಗಿ, ಸಮಾಧಿ ಸ್ಥಿತಿಯಲ್ಲಿ ಆನಂದೋಬ್ರಹ್ಮವಾಗಿ ಬಾಹ್ಯಪ್ರಪಂಚದ ಸೋಂಕಿಲ್ಲದೆ ॥ ಕರೇಜ್ಞಾನಮುದ್ರಾಂ । ಮುಖೇ ಮೌನಮುದ್ರಾಂ । ಸ್ವಯಂ ಯೋಗ ನಿದ್ರಾಂ ॥ ಎಂಬ ಪ್ರಕಾರ ವಿರಾಜಿಸುತ್ತಲಿರುವ ಆ ಶಿಶುವಿನ ಬ್ರಾಹ್ಮಿ ಸ್ಥಿತಿಯನ್ನು ಶ್ರೀ ಜಾತವೇದಮುನಿಗಳು ತಮ್ಮ ದಿವ್ಯ ಜ್ಞಾನದೃಷ್ಟಿಯಿಂದ ಅರಿತವರಾಗಿ, ಪಕ್ಕದಲ್ಲಿ ಅತೀವ ದುಃಖದಲ್ಲಿ ಮುಳಿಗಿ ಬಾಡಿದ ಮುಖದಿಂದ ಮರುಗುತ್ತಲಿದ್ದ ಜನಸಂದಣಿಯನ್ನು ನೋಡಿ ಈ ಕೂಸು ಜೀವಂತವಾಗಿರುವುದು ಎಂದು ನುಡಿಯುತ್ತಲೇ ಸರ್ವರೂ ಸಖೇದಾಶ್ಚರ್ಯದೊಂದಿಗೆ ಅರಳಿದ ಮುಖಕಮಲಗಳುಳ್ಳವರಾಗಿ ಸಂತೋಷಭರಿತವಾದ ಭಾಷ್ಪಾಂಜಲಿಗಳನ್ನು ಸುರಿಸಿ, ಶಿಶುವಿಗೆ ದೀರ್ಘಾಯುಷ್ಯನ್ನು ಕೋರಿ ಆನಂದಗೊಂಡರು.

ಆಜನ್ಮತಃ ಸುಜ್ಞಾನಿಗಳಾಗಿ ಅವತರಿಸಿದ ಸತ್ಯಪ್ರಿಯರೂ ಪರಮ ಆಚಾರ ಸಂಪನ್ನರೂ ಆದ ಕಲ್ಯಾಣದ ಶ್ರೀ ಬಸವೇಶ್ವರರು ಸನಾತನವಾದೀ ವೀರಶೈವ ಧರ್ಮದ ತಿರುಳನ್ನು ಮನಗಂಡು ॥ ಏಕೇನ ಜನ್ಮನಾಮುಕ್ತಿ । ವೀರಾಣಾಂತು ಮಹೇಶ್ವರೀ । ನೇತರೇ ಷಾಂತುಶೈವಾನಾಂಮುಕ್ತಿ ಜನ್ಮತ್ರಯಂ ಭವೇತ್ ॥ ಎಂದರೆ ಅಂಗದಲ್ಲಿ (ಶರೀರದಲ್ಲಿ) ಇಷ್ಟಲಿಂಗವನ್ನು ಧರಿಸಿದ ಲಿಂಗಾಂಗಿಗೆ (ತತ್ವವನ್ನರಿತು ಆಚಾರದಿಂದ ಅನ್ವಿತಮಯನಾದವಂಗೆ) ಅಂದರೆ ಶರಣ ಸ್ಥಲದ ಶಿವಶರಣನಿಗೆ ಮುಕ್ತಿ ಇದೇ ಜನ್ಮದಲ್ಲಿ ಖಂಡಿತ ಪ್ರಾಪ್ತಿಯಾಗುವುದೆಂಬ ಶಿವಾಗಮಗಳ ವಚನಾಮೃತದ ಸಾರಗ್ರಾಹಿಯಾದ ಕುಶಾಗ್ರಬುದ್ಧಿಯುಳ್ಳ

ಹಾಗೂ ಏಕಸಂಧಿಗ್ರಾಹಿಯಾದ ಅಣ್ಣ ಶ್ರೀ ಬಸವಣ್ಣನು, ಕಾಯಾ ವಾಚಾ ಮನಸಾ ಬುದ್ಧಿಪೂರ್ವಕವಾಗಿ ಉತ್ಕೃಷ್ಟವಾದೀ ಲಿಂಗಾಂಗಿ ಧರ್ಮಕ್ಕೆ ತಲೆಬಾಗಿ ಮನಸೋತು ಇಷ್ಟಲಿಂಗಕ್ಕೆ ಆತ್ಮಾರ್ಪಣ ಪೂರ್ವಕ ಶರಣಾಗತನಾಗಿ ನಿಜ ಶಿವಶರಣನೂ ಲೋಕಾದರ್ಶ ಶಿವಭಕ್ತ ಶ್ರೇಷ್ಠನೂ ಆದ ಮಹಾನುಭಾವನೆಂದರೆ ಶ್ರೀ ಬಸವಣ್ಣನವರೇ ಆಗಿರುವರು.

ಶಿವಾಗಮಗಳು ಲಿಂಗಿ ಬ್ರಾಹ್ಮಣ ಧರ್ಮದ ಮಹತ್ತರವಾದ ಮಹಿಮೆ ಯನ್ನು ಪ್ರತಿಪಾದಿಸುತ್ತಾ, ವೀರಶೈವ ಧರ್ಮವು ॥ ಅಲ್ಪಕ್ರಿಯಾ ಬಹುಫಲಂ । ವೀರಶೈವಂ ಮಹೇಶ್ವರಿ । ಇತರೇ ಷಾಂತು ಶೈವಾನಾಂ । ಫಲಮಲ್ಪಂ ಬಹು ಕ್ರಿಯಾಂ ॥ ಎಂದು ಉದ್ಘೋಷಿಸುತ್ತಲಿರುವುವು. ಕರಪೀಠದಲ್ಲಿ ವಿರಾಜಿಸುತ್ತ ಲಿರುವ ತನ್ನ ಸಹಸ್ರಾರದ ಶಿವನ ಚಿತ್ಕಲಾಮೂರ್ತಿ ಇಷ್ಟಲಿಂಗವನ್ನು ವಿಧಿವ ತ್ತಾಗಿ ಶ್ರದ್ಧಾಭಕ್ತಿ ವಿಶೇಷದಿಂದ ಆತ್ಮಾರ್ಪಣ ಪೂರ್ವಕ ಯಾರು ನಿತ್ಯದಲ್ಲಿ ಪೂಜಿಸುವರೋ ಅಂಥವರಿಗೆ ಸುಲಭದಲ್ಲಿ ಮಹಾ ಕ್ರಿಯಾತ್ಮಕ ಜ್ಞಾನ ಯಜ್ಞದಿಂದ – ಹರಿಬ್ರಹ್ಮ ದೇವೇಂದ್ರಾದಿಗಳಿಗೂ ಮಹರ್ಷಿಗಳಿಗೂ ಯಜ್ಞ ಯಾಗಾದಿ ಶ್ರಮಭರಿತ ಅಪಾರ ಕರ್ಮಾನುಷ್ಠಾನದಿಂದಲೂ ಅಪ್ರಾಪ್ಯವೆಂದೆನಿ ಸಿರುವ ಶಿವಸಾಯುಜ್ಯವು ಇಷ್ಟಲಿಂಗಾರಾಧನೆಯೆಂಬ ಶಿವಲಿಂಗ ಪೂಜೆಯಿಂದ ಮಹಾ ಫಲವು ಹಸ್ತಗತವಾಗುವುದು. ಈ ಕ್ರಿಯೆ ಅಲ್ಪ ಅಂದರೆ ಸ್ವಲ್ಪವೇ ಆಗಿದ್ದರೂ ಇದರಿಂದ ದೊರೆಯುವ ಫಲ ಅತಿದೊಡ್ಡದು. ಇಷ್ಟಲಿಂಗಾರಾಧ ನೆಯ ಗುಟ್ಟು ಇದೇ ಆಗಿರುವುದು. ಇತರ ಶೈವ ಧರ್ಮಾವಲಂಬಿಗಳು ತಮ್ಮ ಭೀಷ್ಟಗಳ ಪ್ರಾಪ್ತಿಗಾಗಿ ಆಚರಿಸುವ ವೇದವಿಹಿತ ಯಜ್ಞಯಾಗಾದಿ ಹೋಮ ಹವನಗಳೂ ಕಠಿನತರ ಕೃಚ್ಛ್ರಾಂದ್ರಾಯಣಾದಿ ಉಪವಾಸ ವ್ರತಗಳೂ ಇತರ ಸತ್ಕರ್ಮಾನುಷ್ಠಾನಗಳೂ ಅತ್ಯಂತ ಶ್ರಮಭರಿತವೂ ಕಾಯಕ್ಲೇಶಕರವೂ ಅಪಾರ ದ್ರವ್ಯ ವ್ಯಯದಿಂದಲೂ ಅನೇಕ ಭಕ್ತ ಜನಸಂದಣಿಯ ಸಹಾಯದಿಂದಲೂ ಯಾವ ಲೋಪವೂ ಬಾರದಂತೆ ಎಲ್ಲರಿಗೂ ತೃಪ್ತಿಪಡಿಸಿ ಮಾಡುವ ಥಾಟ ಬಹುಕ್ರಿಯಾತ್ಮಕ ಮಹಾಯಜ್ಞದ ಫಲವಾದರೋ, ಅಭೀಷ್ಟೆಯಾದ ಮಳೆ ಬರುವುದಕ್ಕೋ, ಮಹಾ ಸಾಂಕ್ರಾಮಿಕ ರೋಗೋಪದ್ರವಗಳನ್ನು ತಡೆಗ

ಟ್ಟಿಲೋ, ಪುತ್ರಕಾಮೇಚ್ಛಾ. ಅಶ್ವಮೇದಯಾಗೇಚ್ಛಾ, ಶತೃಗಳನ್ನು ತಡೆಗಟ್ಟಿ ರಾಜ್ಯವನ್ನು ಗೆದ್ದು ಅಖಂಡ ಸಾರ್ವಭೌಮತ್ವದ ಪ್ರಾಪ್ತಿಗಾಗಿ ಇಚ್ಛಿಸಿ ಮಾಡುವ ಮಹಾ ಯಾಗಗಳಿಂದ ಪ್ರಾಪ್ತವಾಗಲಿರುವ ಫಲ ಅಲ್ಪವೂ ನಶ್ವರವೂ ಆಗಿದ್ದು ದೀರ್ಘಾವಸ್ಥೆಯಲ್ಲಿ ದುಃಖದಲ್ಲಿ ಪರಿಯವಸಾನ ಹೊಂದುವುವು. ಪುತ್ರಕಾಮೇಷ್ಠಿಯಾಗದಿಂದ ಪುತ್ರನನ್ನು ಪಡೆಯುವುದು ಅಷ್ಟೇ ಫಲ. ದಶರಥ ಚಕ್ರವರ್ತಿ ಈ ಪುತ್ರಕಾಮೇಷ್ಟಿಯಾಗವನ್ನು ಲಕ್ಷಾಂತರ ರೂಪಾಯಿಗಳನ್ನು ಖರ್ಚುಮಾಡಿ ಅದರ ಫಲವಾಗಿ ಪುತ್ರರನ್ನು ಪಡೆದನಷ್ಟೆ. ದಶರಥನ ಮರಣ ಕಾಲದಲ್ಲಿ ಆ ಪುತ್ರರು ಹತ್ತಿರದಲ್ಲಿ ಯಾರೊಬ್ಬರೂ ಇರಲಿಲ್ಲವಾಗಿ ಅತೀವ ದುಃಖಕ್ಕೀಡಾಗಿ, ರೋಧಿಸಿ ಸ್ವರ್ಗಸ್ಥನಾದ. ಸಗರ ಚಕ್ರವರ್ತಿ ಅಶ್ವಮೇದ ಯಾಗವನ್ನು ಅನೇಕ ಲಕ್ಷಾಂತರ ರೂಪಾಯಿಗಳನ್ನು ಖರ್ಚುಮಾಡಿ ಯಾಗವನ್ನು ಆರಂಭಿಸಿ ಪಟ್ಟದ ಅಶ್ವವನ್ನು ಅಲಂಕರಿಸಿ ಬಿಡಲು ಅದರ ನಿಮಿತ್ತ ಸಗರನ ಅರುವತ್ತು ಸಾವಿರ ಮಕ್ಕಳೂ ಕಪಿಲ ಖುಷಿಗಳ ಶಾಪಗ್ರಸ್ಥರಾಗಿ ಬೂದಿಯಾಗಲು, ಸಗರನು ದುಃಖಾಬ್ಧಿಯಲ್ಲೇ ಕೊರಗಿ ಸಾಯಲು, ಕೆಲಕಾಲಾನಂತರ ಆ ವಂಶಜನಾದ ಭಗೀರಥನು ಭಗೀರಥ ಯತ್ನದಿಂದ ಭಾಗೀರಥಿಯನ್ನು ಭುವಿಗೆ ಕರತಂದು ತನ್ನ ಪಿತಾ ಪ್ರಪಿತಾ ಮಹರನ್ನು ಶಿವಾನುಗ್ರಹದಿಂದ ಸ್ವರ್ಗಸ್ಥರನ್ನಾಗಿ ಮಾಡಿದನೆಂಬ ಸತ್ಯಾಂಶಗಳಿಂದ "ಬಹು ಕ್ರಿಯಾ ಅಲ್ಪ ಫಲ" ಎಂಬ ಶಬ್ಧಕ್ಕೆ ಚೆನ್ನಾಗಿಯೇ ಅರ್ಥಮಾಡಿಕೊಳ್ಳಬಹುದಲ್ಲವೆ. ಅಲ್ಪೇಚ್ಛೆಯಿಂದ ಮಾಡತಕ್ಕ ಎಷ್ಟು ದೊಡ್ಡ ಯಾಗ ಯಜ್ಞಾದಿ ಮಹಾಕರ್ಮಗಳೇ ಆಗಿದ್ದರೂ ರಾಜ ಮಹಾರಾಜರುಗಳು ಇಂಥಾ ಮಹಾ ಯಜ್ಞಗಳನ್ನು ಹದ್ದೂರಿಯಾಗಿ ನಡೆಸಿದರೂ, ಅವಿಷ್ಟೂ "ಪಶುಕ್ರಿಯೆ" ಎನಿಸಿ ಅಂತ್ಯದಲ್ಲಿ ಒಂದಲ್ಲಾನಂದು ವಿಧದಲ್ಲಿ ದುಃಖಕ್ಕೀಡುಮಾಡುವುವು. ಇದರಂತಲ್ಲದೆ, "ಪತಿಕ್ರಿಯೆ" ಅಂದರೆ, ಶಿವಲಿಂಗಾರಾಧನೆ ಇಷ್ಟಲಿಂಗ ಪೂಜಾ ಯಜ್ಞವನ್ನು ಸಣ್ಣ ಕೈಂಕರ್ಯದಲ್ಲಿ ಖರ್ಚಿಲ್ಲದೆ ಏಕೈಕ ವ್ಯಕ್ತಿಯಿಂದ ಸುಲಭವಾದ ಅನನ್ಯ ಭಕ್ತಿ ಭಾವದಿಂದ ಮಾಡಿದ್ದೇ ಆದರೆ, ಕ್ರಮೇಣ ಅದರಿಂದ ಶಾಶ್ವತವಾದ ನಿತ್ಯಾನಂದ ಪ್ರಾಪ್ತಿ ಹೃದಯಂಗಮವಾಗುವುದೆಂದು ಅಮೃತವಾಣಿಯು ಅಭಯಭೇರಿ

ಮೊಳಗುತ್ತಲಿರುವುದು. ॥ ಇತಿ ವೇದಾಂತಡಿಂಡಿಮಃ ॥ ಇದೇ ಸರ್ವೋಪನಿಷತ್ತುಗಳ ಸಾರ, ಇದೇ ಶಿವಾಗಮುಗಳ ಹೃದಯ, ಮತ್ತಿದೇ ಸಿದ್ಧಾಂತ ಶಿಖಾಮಣಿ ನಾಮ ಶ್ರೀ ರೇಣುಕ ಗೀತೆಯ ತಿರುಳೂ ಆಗಿರುವುದು. ಶಿವಭಕ್ತನಾದ ಬೇಡರ ಕಣ್ಣಪ್ಪ, ಅಸ್ಪೃಶ್ಯ ಕುಲವಂತನೆನಿಸಿದ್ದ ಭಕ್ತ ನಂದನಾರ್ ಯೆಂಬುವವರೂ, ಬ್ರಾಹ್ಮಣ ಕುಲ ಸಂಜಾತನಾದ ಮೃಕಂಡುಸೂನು ಭಕ್ತ ಶ್ರೀ ಮಾರ್ಕಂಡೇಯನೂ ಇತ್ಯಾದಿ ಮಹಾ ಪ್ರಭೃತಿಗಳು "ಪತಿಕ್ರಿಯೆ" ಯಲ್ಲಿ ಆಸಕ್ತರಾಗಿ ಶಿವಸಾಯುಜ್ಯವನ್ನು ಹೊಂದಿರುವರೆಂಬುದು ಕೋಟಿ ಸೂರ್ಯ ಪ್ರಕಾಶಮಾನವಾದ ಸತ್ಯಾಂಶವೇ ಆಗಿರುವಲ್ಲಿ, ಗುರುದತ್ತವಾದ ಇಷ್ಟಲಿಂಗಾರ್ಚನೆಯನ್ನು ಸತತ ಭಕ್ತಿ ಪೂರ್ವಕ ಶಿವ ಪ್ರೀತ್ಯರ್ಥಮಾಡುತ್ತಾ ಅನವರತ ದೇಹದಲ್ಲಿ ಶಿವಲಿಂಗ ಸಂಪರ್ಕದಿಂದ ವಿಕಾಸಗೊಂಡು ಶಿವಜ್ಞಾನ ಪ್ರಕಾಶಿತನಾದ ಲಿಂಗಾಂಗಿ ಶಿವಶರಣನು, ಶಿವಾನುಗ್ರಹದಿಂದ ಸರ್ವದುಃಖಗಳಿಂದ ನಿವೃತ್ತನಾಗಿ ಅಖಂಡವೂ ಶಾಶ್ವತವೂ ಆದ ಪರಮಾನಂದ ಪ್ರಾಪ್ತಿಯನ್ನು ಹೊಂದುವನು ಎಂಬುದು ಸತ್ಯವೇ ಆಗಿರುವುದು ಸರಿಯಷ್ಟೆ. ಮುಂಗೈಯಲ್ಲಿ ಮಿರುಗುಟ್ಟುವ ಕೈಬಳೆ ಕಡಗಗಳನ್ನು ನೋಡಲು ಕನ್ನಡಿಯೊಂದು ಬೇಕೇ ? ದೇಹದಲ್ಲಿ ಧಾರಣೆಗೊಂಡು ವಿರಾಜಿಸುವ ಇಷ್ಟಲಿಂಗಾರ್ಚನೆಯ ಪಾವನವಾದ ಮಹತ್ವವನ್ನು ಶಿವಾಗಮುಗಳು ಮುಕ್ತಕಂಠದಿಂದ ಪ್ರತಿಪಾದಿಸುತ್ತಾ :—

॥ ಕಿಮನ್ಯೈಃ ಧರ್ಮಕಲಿಲೈಃ । ಕೀಕಸಾರ್ಥ ಪ್ರದಾಯಿಭಿಃ । ಸಾಕ್ಷಾನ್ಮೋಕ್ಷಪ್ರದ ಶಂಭೋಃ । ಧರ್ಮೋಲಿಂಗಾರ್ಚನಾತ್ಮಕಃ ॥ ಅಂದರೆ — ನಶ್ವರವೂ ಕೊನೆಯಲ್ಲಿ ದುಃಖಮಯವೂ ಆಗಿ ಪರಿಣಮಿಸಿ, ಏತನ್ಮಧ್ಯೇ ಕ್ಷುದ್ರ ಫಲಗಳನ್ನೀಯುವ ಅನಿತ್ಯ ಅಶಾಂತಿಯುತ ಅಲ್ಪ ಪದಾರ್ಥಗಳನ್ನು ಪಡೆಯುವಂಥ ಪ್ರಯಾಸ ಪೂರ್ವಕವಾದ ಹೇರಳ ದ್ರವ್ಯ ವ್ಯಯದಿಂದ ಸಾಧಿಸಬಹುದಾದ ಪಶುಕ್ರಿಯೆಗಳಿಂದೇನು ಫಲ ? ಇವು ಸುಖದಂಥ ತೋರಿಕೆಯನ್ನು ಮುಂದಿಟ್ಟು ಅಜ್ಞರನ್ನು ಆಕರ್ಷಿಸಿ ಬಹುಮುಖದಿಂದ ವಿಚಿತ್ರಾಯಮಾನವಾಗಿರುವುವು. ಈ ಮಾರ್ಗಾವಲಂಬನೆಯನ್ನು ತ್ಯಜಿಸಿ, ವಿಶ್ವಾಧಿಕನಾದ ಶಂಕರನ ದಿವ್ಯಾರ್ಚನೋಪಾಸನಾದಿಗಳಿಂದ ಈ ಜನ್ಮದಲ್ಲೇ ಸಾಕ್ಷಾತ್ ಮೋಕ್ಷ ಸುಖ ಸಾಮ್ರಾಜ್ಯ

ವನ್ನು ಹಸ್ತಗತಗೊಳಿಸುವಂಥಾ ಶ್ರೇಷ್ಠವಾದ ॥ ಧರ್ಮೋಲಿಂಗಾರ್ಚನಾತ್ಮಕಃ ॥ ಇಷ್ಟಲಿಂಗಾರ್ಚನೆ ಶಿವಲಿಂಗಾನು ಸಂಧಾನಮಯ ಧರ್ಮವೇ ಧರ್ಮವೆನಿಸುವುದು. ಈ ತತ್ವದ ಅಂತರಂಗವನ್ನರಿತ ಶ್ರೀ ರಾಮಚಂದ್ರನೂ, ಶ್ರೀ ಕೃಷ್ಣನೂ, ಪಂಚ ಪಾಂಡವರೂ, ಲಂಕಾಧಿಪತಿಯಾದ ದಶಕಂಠ ರಾವಣೇಶ್ವರನೂ ಹಾಗೂ ಶ್ರೀ ವಿಭೀಷಣನೂ, ಭಕ್ತಾಗ್ರಣಿ ಬಾಣಾಸುರನೆಂಬ ರಾಕ್ಷಸೇಂದ್ರರೂ, ಮಹರ್ಷಿ ಪುಂಗವರೂ, ಭಾಷ್ಯಕರ್ತರಾದ ಆದಿ ಶ್ರೀ ಶಂಕರಾಚಾರ್ಯರೂ, ರಾಜ ಮಹಾ ರಾಜರುಗಳೂ, ಭಕ್ತಶ್ರೇಷ್ಠರೂ ಶಿವಲಿಂಗಾರ್ಚನೆಯಿಂದ ಮುಕ್ತರಾಗಿರುವ ಅಂಶ ಲೋಕ ವಿಶ್ರುತವೇ ಇರುತ್ತೆ.

ಲಿಂಗಾಂಗಿಗಳಿಗೆ ಸ್ವಧರ್ಮಾನುಷ್ಠಾನದಿಂದ ಒಂದೇ ಜನ್ಮದಲ್ಲಿ ಮುಕ್ತಿ ಪ್ರಾಪ್ತಿಯಾಗುವುದೆಂದು ಸಾರಿದ ಶೃತಿವಾಣಿಯಲ್ಲಿ ಅಲಿಂಗಿಗಳಿಗೂ ॥ ಇತರೇ ಷಾಂತು ಶೈವಾನಾಂ । ಮುಕ್ತಿ ಜನ್ಮತ್ರಯಂ ಭವೇತ್ ॥ ಸ್ಥಾವರ ಶಿವಲಿಂಗಾ ರ್ಚನೆಯ ಪ್ರಭಾವದಿಂದ ಮೂರು ಜನ್ಮಗಳಲ್ಲಿ ಮೋಕ್ಷ ಲಭಿಸುವುದೆಂದು ಉಕ್ತ ವಾಗಿದೆ. ನಾದಬ್ರಹ್ಮೋಪಾಸಕರಾದ ಶ್ರೀ ತ್ಯಾಗಬ್ರಹ್ಮರು (ತಿರುವೆಯ್ಯಾರಿನ ಶ್ರೀ ತ್ಯಾಗರಾಜಸ್ವಾಮಿಗಳು) ಶ್ರೀ ರಾಮನ ದೊಡ್ಡ ಭಕ್ತರು. "ಓ ರಾಮ! ನೀನು ಬ್ರಹ್ಮನೋ, ಮಾಧವನೋ ಅಥವಾ ಶಿವನೋ! ನೀನು ಯಾರು ಎಂಬ ವಿವರವನ್ನು ತಿಳಿದಂಥಾ ಮಹಾನುಭಾವರಿಗೆ ನನ್ನ ಹೃತ್ಪೂರ್ವಕವಾದ ವಂದನೆ ಗಳು" ಎಂದು ಪರಮಾತ್ಮನಲ್ಲಿ ನಿವೇದಿಸಿಕ್ಕೊಂಡು, ತಮ್ಮ ಮನಸ್ಸಿಗೆ ತಾವೇ ಹಲವಾರು ಸಂದರ್ಭಗಳಲ್ಲಿ ಬೋಧೆಮಾಡಿಕ್ಕೊಂಡು ಧನ್ಯರಾದ ಹಿರಿಯ ವ್ಯಕ್ತಿ. ತಮ್ಮ ಎಂಭತ್ತು ವರ್ಷವನ್ನೂ ಮೀರಿದ ವೃದ್ಧಾಪ್ಯದವರಾಗಿಯೂ ತಮ್ಮಿಷ್ಟದೈವ ವಾದ ಶ್ರೀ ಸೀತಾರಾಮರ ಸೇವೆ ಧ್ಯಾನಾದಿಗಳನ್ನು ಘನತರವಾಗಿಮಾಡಿ, ೯೬ ಕೋಟಿ "ಶ್ರೀ ರಾಮತಾರಕವನ್ನು" ಸುಂದರವಾಗಿ ಭಕ್ತಿಭಾವದಿಂದ ಬರೆದು, ಇಷ್ಟು ಸೇವೆ ಅವಿಚ್ಛಿನ್ನವಾಗಿ ಶ್ರೀ ರಾಮನ ಪಾದಕಮಲಗಳಲ್ಲಿ ಸಲ್ಲಿಸಿ ದರೂ ತಮಗೆ ಶ್ರೀರಾಮದರ್ಶನವಾಗಲಿಲ್ಲವಲ್ಲಾ ಎಂದು ಕಣ್ಣೀರಿಟ್ಟು, ಏಕಮನ ಸ್ಕರಾಗಿ ಧ್ಯಾನಾವಸ್ಥಿತ ಸ್ಥಿತಿಯಲ್ಲೇ ಶಯನಂಗೊಂಡಿರಲು, ಇವರ ನಿಜಭಕ್ತಿಗೆ

Jangamawadi Math, Varanasi
Acc. No. ......611......................



ಸ್ವಾಮಿ ಸಂಪ್ರೀತನಾಗಿ ಶ್ರೀ ತ್ಯಾಗರಾಜರ ಕಣ್ಣೆದುರಿಗೆ ಕೋದಂಡಪಾಣಿಯಾಗಿ ಶ್ರೀ ಸೀತಾ, ಅನುಜ ಸೌಮಿತ್ರಿ (ಲಕ್ಷ್ಮಣ) ಯರೊಂದಿಗೆ ದಿವ್ಯ ಮಂಗಳ ವಿಗ್ರಹನೂ ನೀಲಮೇಘ ಶ್ಯಾಮಲನೂ ವನಮಾಲಾ ವಿಭೂಷಿತನೂ ಪೀತಾಂಬರಧಾರಿಯಾಗಿ ಪ್ರತ್ಯಕ್ಷನಾಗಲು, ಸಂತುಷ್ಟರಾದ ಶ್ರೀ ತ್ಯಾಗರಾಜರು ಕೊನೆಯಲ್ಲಿ ತಮಗೆ ಇನ್ನೂ ಯಾವಾಗ ಮೋಕ್ಷ ಪ್ರಾಪ್ತಿಯಾಗುವುದೆಂದು ಪ್ರಶ್ನಿಸಲು, ದಯಾಳು ಶ್ರೀ ರಾಮನು ಇನ್ನು ಮೂರು ಜನ್ಮಗಳಲ್ಲಿ ಮುಕ್ತಿ ಸಿಗುವುದೆಂದು ಹೇಳಿ ಅಂತರ್ಧಾನನಾದನೆಂದು ಶ್ರೀ ತ್ಯಾಗರಾಜರ ದಿವ್ಯ ಚರಿತ್ರೆಯಿಂದ ತಿಳಿದು ಬರುತ್ತೆ. ಇದು ಮೇಲ್ಕಂಡ ಶಿವಾಗಮಗಳ ಉಕ್ತಿಗೆ ಸರಿತೂಗುವುದು. ಇದು ಹೀಗಿದ್ದರೂ, ಅದ್ವೈತಮತ ಸ್ಥಾಪನಾಚಾರ್ಯ ಆದಿ ಶ್ರೀ ಶಂಕರಾಚಾರ್ಯರು ತಮ್ಮಿಂದ ರಚಿತವಾದ ವಿವೇಕ ಚೂಡಾಮಣಿ ಗ್ರಂಥದಲ್ಲಿ ಮುಕ್ತಿ ಬಗ್ಗೆ ಹೇಳುತ್ತಾ, ||............ಮುಕ್ತಿರ್ನೋ ಶತಕೋಟಿ ಜನ್ಮಸುಕೃತೈಃ । ಪುಣ್ಯೈರ್ವಿನಾ ಲಭ್ಯತೇ || ಅನೇಕ ಕೋಟಿ ಜನ್ಮಗಳಲ್ಲಿ ಮಾಡಿದ ಸುಕೃತವು ಹಣ್ಣಾಗಿದ್ದರೆ ಅದರೊಂದಿಗೆ ಪುಣ್ಯವೂ ಒಂದುಗೂಡಿದರೆ, ಆ ಪರಮ ಪುಣ್ಯ ವಿಶೇಷದಿಂದ ಮುಕ್ತಿ ಪ್ರಾಪ್ತಿಯಾಗಬಹುದು, ಲಭಿಸಬಹುದೆಂದು ಅಪ್ಪಣೆಕೊಡಿಸಿರುವರು. ಅಲಿಂಗಿಗಳು ಶಿವಲಿಂಗಾರಾಧಕರಾಗಿದ್ದರೂ ಮೋಕ್ಷ ವಿಷಯದಲ್ಲಿ ತಾಮಸದ ಪರಿಸ್ಥಿತಿಯಿರುವುದರಿಂದ, ಸೂಕ್ಷ್ಮದರ್ಶಿಗಳಾದ ಕಲ್ಯಾಣದ ಶ್ರೀ ಬಸವಣ್ಣನವರು ಜನ್ಮತಃ ತಾವು ಶುದ್ಧ ಶೈವ ಬ್ರಾಹ್ಮಣರಾಗಿದ್ದರೂ ಕಪ್ಪಡಿ ಶ್ರೀ ಸಂಗಮೇಶ್ವರ ಮುನಿಗಳ ಅಂದರೆ ಪರಮ ವೀರಶೈವ ಉಪಾಚಾರ್ಯರಾದ ಶ್ರೀ ಜಾತವೇದ ಮುನಿಗಳ ಕೃಪಾಶೀರ್ವಾದ ಉಪದೇಶದಿಂದ, ವೇದಾಗಮೋಪನಿಷದ್ ಪ್ರತಿಪಾದಿತವಾದ ಪರಮ ವೀರಶೈವಮತದ ತಿರುಳನ್ನು ಕಂಡುಂಡನುಭವಿಸಿ ಲಿಂಗಿ ಧರ್ಮಕ್ಕೆ ಸ್ವಾತ್ಮಪ್ರೀತಿ ಪುರಸ್ಕರ ಭಾವದಿಂದ ಶರಣಾಗತರಾಗಿರುವರು. ಮಹಾನುಭಾವರಾದ ಶ್ರೀ ಬಸವಣ್ಣನವರ ಪೂಜ್ಯಮಾತೆ ಶ್ರೀಮತಿ ಮಾದಲಾಂಬಿಕೆ, ಈಕೆಯನ್ನು ನಾಗಲಾಂಬಿಕೆ ಎಂಬಭಿಧಾನದಿಂದಲೂ ಕರೆಯುವ ವಾಡಿಕೆಯಿತ್ತು. ಮಹಾ ಸಾಧ್ವೀಮಣಿ, ಶಿವೋಪಾಸನೆಯಲ್ಲಿ ಅಪಾರ ಆಸಕ್ತಿಯುಳ್ಳಾಕೆ. ತಂದೆ ಶಿವಾರಾಧಕ ಮಂಡಗಿ

ಮಾದರಸ ಈತನನ್ನು ಮಧುವರಸ ಅಥವಾ ಮಹಾದೇವನೆಂದೂ ಕರೆಯುವ ವಾಡಿಕೆಯಿತ್ತು. ಶ್ರೀ ಬಸವಣ್ಣನವರ ತಾತನ ಹೆಸರು ಮಂಡಗಿಲಿಂಗಭಟ್ಟ ವ್ಯಾಪಕವಾದ ವ್ಯಕ್ತಿ.

## VIII

ಶ್ರೀ ಬಸವಣ್ಣನವರು, ಕನ್ನಡಾಂಬೆಯ ಮಣಿಮುಕುರದಂತೆ ಪರಿಶೋಭಿಸುವ ಕನ್ನಡ ಭಾಷೆಗೆ, ಆಗ್ಗೆ ಕನ್ನಡಕ್ಕೆ ಕಣ್ಣಿನಂತೆ ಕ್ಷೇಂದ್ರವೆನಿಸಿದ್ದ ಬಿಜಾಪುರ ಜಿಲ್ಲೆಗೆ ಸೇರಿದ ಇಂಗಳೇಶ್ವರ ಗ್ರಾಮದ ಬಾಗೇವಾಡಿ (ಬಸವನ ಬಾಗೇವಾಡಿ) ಎಂಬ ಬ್ರಾಹ್ಮಣ ಅಗ್ರಹಾರದಲ್ಲಿ ಶೈವಬ್ರಾಹ್ಮಣರಾದ ಸಾತ್ವಿಕ (ಋಜು ಸ್ವಭಾವದ) ಮಾತಾಪಿತೃಗಳ ಗರ್ಭಸುಧಾಂಬುಧಿಯಲ್ಲಿ ಪೂರ್ಣ ಚಂದ್ರೋದಯವಂತೆ ಉದಿಸಿದ ವೃತ್ತಾಂತ ಈ ಮುಂಚೆಯೇ ಸೂಕ್ಷ್ಮವಾಗಿ ವಿವರಿಸಲಾಗಿರುತ್ತೆ ಸರಿಯಷ್ಟೆ. ಶ್ರೀ ಬಸವಣ್ಣನವರು ಕ್ರಿ. ಶ. ಸಸಾವಿರದ ಒಂದನೂರು ಮೂವತ್ತೆರಡನೆ (1132 A. D.) ಇಸ್ವಿಯಲ್ಲಿ ಜನಿಸಿರುವುದಾಗಿ ನಿಶ್ಚಯಿಸಬಹುದಾಗಿದೆ. ಕಲ್ಯಾಣದ ಶ್ರೀ ಬಸವಣ್ಣನವರು ಹುಟ್ಟಿದ ಕಾಲಮಾನ ಅಂದರೆ ಅವರು ಜನಿಸಿದ ಸರಿಯಾದ ತಾರೀಖು, ತಿಂಗಳು, ವರ್ಷ, ಯಾವುದೆಂಬ ಬಗ್ಗೆ ಪಂಡಿತರಲ್ಲಿ ಹಿಂದಿನಿಂದಲೂ ಭಿನ್ನಾಭಿಪ್ರಾಯಗಳಿರುವುದು ಸರಿಯಷ್ಟೆ. ಪಂಡಿತ ಎಲ್. ಆರ್. ಕರಿಬಸವ ಶಾಸ್ತ್ರಿಗಳು ಶ್ರೀ ಬಸವಣ್ಣನವರ ಜನನ ಮೇಲ್ಕಂಡಂತೆ ನಿರ್ಧರಿಸಿರುವರು. ಈ ಅಭಿಪ್ರಾಯ ಬಹುಜನ ಶೋಧಕರಿಗೆ ಮಾನ್ಯವಾಗಿರುತ್ತದೆ. ಶ್ರೀ ಬಸವಣ್ಣ ಜಗನ್ಮಾನ್ಯ ಮಹಾಪುರುಷನಾಗಲು; ಅವನಲ್ಲಿದ್ದ ಧೀರೌಧಾರ್ಯಾದಿ ಉದಾತ್ತಭಾವ, ಏಕೈಕನಿಷ್ಠೆ, ಕುಶಾಗ್ರಬುದ್ಧಿ, ಏಕಸಂಧಿಗ್ರಾಹಿತ್ವ, ಕಾರ್ಯತತ್ಪರತೆ, ನುಡಿದಂತೆ ನಡೆ – ನಡೆದಂತೆ ನುಡಿ (ನುಡಿ ನಡೆಗಳಲ್ಲಿ ಒಂದಾಗಿ) ಸ್ವಾರ್ಥವತ್ಯಜಿಸಿ ॥ ಪರೋಪಕಾರಾರ್ಥ ಮಿದಂ ಶರೀರಂ॥ ಎಂಬಂತೆ ಸ್ವರ್ಗಕ್ಕಿಂತಲೂ ದಶಾಂಶ ಹಿತಕರವಾದ ॥ ಜನನೀ ಜನ್ಮಭೂಮಿಶ್ಚ । ಸ್ವರ್ಗಾದಪಿ ಗರೀಯಸಿ ॥ ಅಂದರೆ, ಹೆತ್ತ ತಾಯಿ, ಜನ್ಮ

ಭೂಮಿ, ತಾಯಿ ಭಾಷೆ, ಸ್ವಧರ್ಮಾಚರಣೆ ಇವುಗಳ, ನೇರವಾದ ಶುದ್ಧಾನು ಭವವು ಸ್ವರ್ಗಕ್ಕಿಂತಲೂ ದಶಾಂಶವಲ್ಲ ಸಹಸ್ರಾಂಶಕ್ಕಿಂತಲೂ ಮಿಗಿಲಾದು ದೆಂಬುದು ಗಮನಾರ್ಹ — ಕನ್ನಡನಾಡು, ಕನ್ನಡ ಭಾಷೆ, ಕನ್ನಡ ನುಡಿ, ಕನ್ನಡ ನಡೆ, ಕನ್ನಡಿಗರ ಕಲೆ, ಕನ್ನಡಿಗರ ಸಂಘ ಸಾಂಗತ್ಯ ಅಷ್ಟೇ ಅಲ್ಲದೆ ಅಂಗೈಯೊಳಗಿನ ಕನ್ನಡಿಯಂತೆ ಪ್ರತಿ ಫಲಿಸುವ ಅಖಿಲ ಮಾನವಕೋಟಿಗಳ ಹಿತಕ್ಕಾಗಿ ಸಮಸ್ತ ಜೀವಕೋಟಿಗಳ ಉದ್ಧಾರಕ್ಕಾಗಿ ಅಹರ್ನಿಶಗಳಲ್ಲೂ ದುಡಿದು ಶ್ರೇಷ್ಠತಮವಾದ ಕರ್ಮ, ಭಕ್ತಿ, ಜ್ಞಾನ, ವೈರಾಗ್ಯ ಮಾರ್ಗಗಳ ಸಾರವನ್ನು ತಿಳಿಗನ್ನಡದಲ್ಲಿ ಬೋಧಿಸಿ, ಸಾಮಾಜಿಕ ತತ್ವ ಸುಧಾರಕರಾಗಿ, ಉಜ್ವಲ ರಾಜಕಾರಣ ಪಟುಗಳಾಗಿ, ಶಿವರಾಜಯೋಗಿಗಳಾಗಿ, ಭೋಗೇಚ್ಛೆ ಯನ್ನು ತೊರೆದು ತ್ಯಾಗಿಯಾಗಿ ॥ ತ್ಯಾಗೇ ನೈಕೇ ಅಮೃತತ್ವಮಾನಶುಃ ॥ ಅಮೃತತ್ವವು ಮಾನವರಿಗೆ ತೃಪ್ತಿ, ತ್ಯಾಗಗಳಿಂದ ಹಸ್ತಗತವಾಗುವುವೆಂಬ ಸತ್ಯಾಂಶವನ್ನು ವಿಸ್ತರಿಸಿ ತೋರಿಸುವ ಬಗ್ಗೆ ತನು - ಮನ - ಧನಗಳನ್ನು ಗುರು-ಲಿಂಗ-ಜಂಗಮರಿಗೆ ನಿಷ್ಕಾಮ ಭಕ್ತಿಯೋಗದಿಂದ ಹಾಗೂ ಈಶ್ವರಾ ರ್ಪಿತ ಬುದ್ಧಿಯಿಂದ ಅರ್ಪಿಸಿ ಅಹಂಕಾರ ಮಮಕಾರಗಳ ವರ್ಜಿಸಿ ದಹಿಸಿ (ಸುಟ್ಟು) ಬೂದಿಮಾಡಿ ಸದ್ಗುರುವಿನಲ್ಲಿ ಶರಣಾಗತಿ ಭಾವೈಕ್ಯತೆಯನ್ನು ಬೆಳಸು ವಂಥ ಸನ್ಮಾರ್ಗವನ್ನು ಅಖಂಡವಾಗಿ ಬೋಧಿಸಿ ನಿತ್ಯಮುಕ್ತರಾಗಿ, ಜಗದಾ ದರ್ಶ ಮಹಾವ್ಯಕ್ತಿಗಳಾಗಿ ಪ್ರಸಿದ್ಧರಾಗಿರುವುದೇ ಮೂಲಕಾರಣವಾಗಿದೆ. ಬಸವಣ್ಣನವರ ಗುರುಭಕ್ತಿ ಗುರುತರವಾದುದಾಗಿ ವಿರಾಜಿಸುತ್ತಲಿರುವುದು. "ಕನ್ನಡ ಕಸ್ತೂರಿ" ಎಂಬ ಘನ ತೀರ್ಪಿನಂತೆ ಬಸವಣ್ಣನು ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಸಲ್ಲಿಸಿರುವ ಘನಸೇವೆ ಕಸ್ತೂರಿಯಂತೆ ಚ್ಯುತಿಯಿಲ್ಲದ ಪರಿಮಳ ಯುಕ್ತವೇ ಆಗಿರುವುದೆಂದರೆ ಕನ್ನಡಾಭಿಮಾನಿಗಳಿಗೂ ಕನ್ನಡಿಗರಿಗೂ ಹೆಮ್ಮೆ ಯನ್ನುಂಟುಮಾಡುವ ಅಂಶವೇ ಆಗಿರುತ್ತೆ. ಶ್ರೀ ಬಸವಣ್ಣನವರು ಹಿರಿಯ, ಗಣ್ಯ ಹಾಗೂ ಪೂಜ್ಯ ಮಹಾವ್ಯಕ್ತಿಗಳೆಂದು ಜನಜನಿತವಾಗಿ ವಿಖ್ಯಾತರಾಗಿ ದ್ದರೂ, ತಮ್ಮನ್ನು ತಮ್ಮ ಸ್ವಂತ ದೃಷ್ಟಿಯಲ್ಲಿ ಆತ್ಮಪ್ರಶಂಶೆಗೆ ದೂರರಾಗಿಸಿ, ತಾವು ಒಬ್ಬ ಕಿರಿಯ ಕಿಂಕರ, ಶಿವಭಕ್ತರ ಹಾಗೂ ಶಿವಶರಣರ ಸೇವಕರ ಸೇವಕ

ನೆಂದು ಭಾವಿಸಿ ಹಿಗ್ಗಿ ಹರಗುರುಗಳಲ್ಲಿ ಭಕ್ತಿ, ನಮ್ರತೆ, ವಿಚಾರ, ಆಚಾರ, ಶೀಲ, ಅಹಿಂಸಾವ್ರತ, ಸತ್ಯಪ್ರಿಯತೆ; ದಯ. ದಾನ, ಧರ್ಮ ಇವೇ ಮೊದ ಲಾದ ಅಚ್ಚಳಿಯದ ಶ್ರೇಷ್ಠಗುಣಗಳಿಂದ ಕೂಡಿ, ತಾವು ಜನತೆಗೆ ನೀಡಿದ ಆಪ್ಯಾಯನಕರವಾದ ದಿವ್ಯ ಸಂದೇಶಗಳೊಂದರಲ್ಲಿ "ಎನಗಿಂತ ಕಿರಿಯರಿಲ್ಲ! ಶಿವಭಕ್ತರಿಗಿಂತ ಹಿರಿಯರಿಲ್ಲ...." ಎಂದು ಸ್ಪಷ್ಟಗೊಳಿಸಿ ಸರ್ವರಿಗೂ ಸುಲಭ ಸಾಧ್ಯವಾದ ತಮ್ಮ ಸರಳತೆಯನ್ನು ಹೊರಸೂಸಿರುವರು. ಇದು ಅವರ ತೆರೆದ ಏಕೈಕ ಮನೋಭಾವ. ಕಿಂಕರತ್ವದ ನಿಶ್ಚಲ ಅವಿಚ್ಛಿನ್ನ ಘನಸೇವೆಯಿಂದ ಅತಿ ಉನ್ನತವಾದ ಚಿದ್ಘನ ಶಂಕರತ್ವದ, ನಿರವಯವ ನಿರಂಜನಮಯವಾಗಿ ರಾರಾಜಿಸುವ ಮೋಕ್ಷ ಮಂದಿರವನ್ನು ಭಕ್ತಿಯೆಂಬ ಏಣಿಯ ಸಹಾಯದಿಂದ ಹತ್ತಿ "***Devotion is the Ladder to climb up the Abode of Perfeetion***", ಅಲ್ಲಿ ನಿರತಿಶಯಾನಂದವನ್ನನುಭವಿಸಿ, ಲೋಕಕಲ್ಯಾಣಾರ್ಥ ಲೋಕದ ಸಮಸ್ತ ಆಸ್ತಿಕ ವೃಂದದವರನ್ನೆಲ್ಲಾ ಕೈಬೀಸಿ ಬನ್ನಿರೆಂದು ಕರೆದು, ಪರುಷಮಣಿಯಂತೆ ತಮ್ಮಕಡೆಗೆ ದೈವಶಕ್ತಿಯಿಂದ ಆಕರ್ಷಿಸಿಕ್ಕೊಂಡರು.

ಸನ್ಮಾರ್ಗದ ಶಿವಪಥವನರಿಯಲು ಶ್ರೀ ಬಸವಣ್ಣನವರು ತಮ್ಮ ಜ್ಞಾನ ಪ್ರಫುಲ್ಲಿತ ಅರ್ಥಪೂರ್ಣ ಸುಂದರ ವಚನವೊಂದರಲ್ಲಿ ॥ ಶಿವ ಪಥವನರಿಯಲು ಗುರುಪಥವೇ ಮೊದಲು ॥ ಎಂದು ಅಖಂಡವಾಗಿ ಸಾರಿ ಘನ ಸದ್ಗುರುವಿನ ನಿಜ ಹಿರಿಮೆಯನ್ನು ಮುಕ್ತಕಂಠದಿಂದ ಸ್ತುತಿಸಿ ಗುರುವಿಗೆ ಶರಣಾಗತರಾಗಿ ಮನ ವೊಲುಮೆಯಿಂದ ಮಣಿದಿರುವುದನ್ನು ನೋಡಿದರೆ ಅವರಲ್ಲಿದ್ದ ಗುರುಭಕ್ತಿಯ ಹಿರಿಮೆಯನ್ನು ಕೈ ಎತ್ತಿ ತೋರಿಸಿರುವಂತೆ ಭಾಸವಾಗುತ್ತಲಿದೆ. "ದಯವಿಲ್ಲದ ಧರ್ಮವದಾವುದಯ್ಯಾ? ದಯುವೇ ಬೇಕು ಸಕಲ ಪ್ರಾಣಿಗಳಲ್ಲಿ, ದಯವೇ ಧರ್ಮದ ಮೂಲವಯ್ಯಾ! ಕೂಡಲ ಸಂಗಯ್ಯನಂತಲ್ಲ ನೊಲ್ಲನಯ್ಯಾ" ಎಂದರು ಹಿರುವ ಶ್ರೀ ಬಸವಣ್ಣನವರು ಕಾಮಕ್ರೋಧಾದಿಗಳನ್ನರಿಯದವರು. ಸೇಡು ತೀರಿಸಿಕೊಳ್ಳುವಂಥಾ ಮನೋಭಾವವೇನೆಂಬುದನ್ನರಿಯದವರು. ಹಾಲೀಯು ತ್ತಿರುವ ತಮ್ಮ ಆಕಳುಗಳನ್ನು ಕ್ರೂರ ಕಳ್ಳರು ರಾತ್ರಿ ತಮ್ಮ ಮನೆಯ ಹಿಂದಿನ ದನದ ಕೊಟ್ಟಗೆಯಿಂದ ಕದ್ದೊಯ್ದರೆಂದು ಚಾರರು ಮಾರನೆ ಬೆಳಗಿನಜಾವ

ದಲ್ಲಿ ಶ್ರೀ ಬಸವಣ್ಣನವರಲ್ಲಿ ಬಿನ್ನಯಿಸಲು, ಕರುಗಳನ್ನು ಬಿಟ್ಟುಹೋಗಿದ್ದಕ್ಕೆ ಮರುಗಿ. ಅಯ್ಯೋ! ಕರುಗಳನ್ನು ವೊಯಿದು ಹಸುಗಳಿರುವೆಡೆಯಲ್ಲಿ ಬಿಟ್ಟು ಬಿಡಿ, ಇಲ್ಲವಾದರೆ ಆ ಹಸುಗಳು ಹಾಲು ತೊರೆಯವು ಕರುಗಳಿಗೂ, ಆ ಶರಣರಿಗೆ ಹಾಲಿಲ್ಲದಂತಾಗುವುದಲ್ಲಾ! ಎಂದು ಎಲ್ಲಾ ಕರುಗಳನ್ನೂ ತಕ್ಷಣ ತಾಯಿ ಆಕಳುಗಳಿದೆ ಡೆಗೆ ಕಳಂಕವಿಲ್ಲದ ಮನೋಭಾವದಿಂದ ಕಳುಹಿಸಿದರು ಎಂದ ಬಳಿಕ ಅವರ ಸಹನೆ ಶಾಂತಿ ಮನಸ್ಸಿನ ಸಮತ್ವಯೋಗದ ನೆಲೆಯನ್ನು ಎಷ್ಟು ಕೊಂಡಾಡಿದರೂ ಸ್ವಲ್ಪವೇ ಆಗಿರುತ್ತೆಯಲ್ಲವೇ ? ಶ್ರೀ ಬಸವಣ್ಣನವರು ಭಕ್ತಿ ನಿಷ್ಠೆಯನ್ನು ವೈಗೂಡಿಸಿಕೊಂಡಿದ್ದಂತೆಯೇ ಶಿವಯೋಗನಿಷ್ಠೆಯನ್ನೂ ಜ್ಞಾನ ನಿಷ್ಠೆಯನ್ನೂ ಕರತಲಾಮಲಕದಂತ ಅಳವಡಿಸಿಕ್ಕೊಂಡಿದ್ದರು. ಇವರು ಶುದ್ಧ ಸಾತ್ವಿಕ ಸಂಪತ್‌ಯೋಗದಿಂದ ಶಿವಪ್ರೋಕ್ತವಾದ ಇಪ್ಪತ್ತೆಂಟು ಶಿವಾಗಮಗಳ ಸಾರಸರ್ವಸ್ವವನ್ನೂ ಹೃದಯಂಗಮವಾಗಿ ಮಥಿಸಿ ಮನನ ಮಾಡಿಕ್ಕೊಂಡು ತತ್ವವೇತ್ತರಾಗಿದ್ದರು. ಇದರಿಂದಾಗಿ, ಶ್ರೀ ಬಸವಣ್ಣನವರು ಪರಮ ವೀರಶೈವ ಮತದ ಮೂಲತತ್ವವೇನು ಹಾಗೂ ಈ ಸನಾತನ ಮತದ ಆದಿಸ್ಥಾಪನಾಚಾರ್ಯರುಗಳು ಯಾರೆಂಬುದನ್ನು ಸುಸ್ಪಷ್ಟವಾಗಿ ಅರಿತವರಾಗಿದ್ದರು. ಅದೂ ಅಲ್ಲದೆ ತಮ್ಮ ನೆಚ್ಚಿನ ಗುರುಗಳಾದ ಕಪ್ಪಡಿ ಶ್ರೀ ಜಾತವೇದ ಮುನಿಗಳಿಂದಲೂ ಶ್ರೀಮಜ್ಜಗದ್ಗುರು ರೇಣುಕಾದಿ ಪಂಚಾಚಾರ್ಯರ ವಿಷಯವಾಗಿ ಶ್ರವಣ ಮಾಡಿದವರಾಗಿರಬೇಕು. ವೀರಶೈವ ಮತದ ಮೂಲಸ್ಥಾಪನಾಚಾರ್ಯರೂ ಶಿವಲಿಂಗೋದ್ಭವ ದಿವ್ಯಮೂರ್ತಿಗಳೂ ಆದ ಆದಿ ಶ್ರೀಮಜ್ಜಗದ್ಗುರು ಸಾರ್ವಭೌಮರ ದಿವ್ಯ ಅಡಿದಾವರೆಗಳಲ್ಲಿ ಅನನ್ಯ ಅಪಾರ ಭಕ್ತಿ ಉಳ್ಳವರೇ ಆಗಿರಬೇಕು. ಶ್ರೀ ಬಸವಣ್ಣನವರು ಅನ್ಯರಂತಲ್ಲದೆ ಕೇವಲ ಸತ್ಯವಾದಿಗಳು ಹಾಗೂ ಸತ್ಯಪ್ರಿಯರೇ ಆಗಿದ್ದರು. ಸತ್ಯವೇ ಅವರ ತಾಯಿ ತಂದೆ ಬಂಧು ಬಳಗ ಮತ್ತೂ ಸತ್ಯವೇ ಅವರ ನಿಜಸ್ವರೂಪವಾಗಿತ್ತೆಂದರೆ ಒಪ್ಪುವ ಮಾತೇ ಆಗಿರುತ್ತೆ. ॥ ಸತ್ಯಮೇ ವೋದ್ಧರಾಮ್ಯಹಂ ॥ ಎಂಬ ಪ್ರತಿಜ್ಞಾ ರೂಪ ಕಂಕಣ ಬದ್ಧರಾಗಿದ್ದರು. ಅವರು ತಮ್ಮ ವಚನವೊಂದರಲ್ಲಿ ಈ ವಿಷಯವನ್ನೂ ಪ್ರತಿಪಾದಿಸುತ್ತಾ ॥ ಸತ್ಯವ ನುಡಿವುದೇ ದೇವಲೋಕ । ಮಿಥ್ಯವ ನುಡಿವುದೇ

ಮರ್ತ್ಯಲೋಕ । ಆಚಾರವೇ ಸ್ವರ್ಗ ಅನಾಚಾರವೇ ನರಕ । ಕೂಡಲ ಸಂಗಮದೇವಾ ನೀವೇ ಪ್ರಮಾಣ ॥ ಎಂಬವರ ನುಡಿಯಂತೆ ನಡೆಯಲ್ಲೂ ಅನುಷ್ಠಿಸಿ, ತನು-ಮನ-ಧನಗಳನ್ನು ಗುರುಲಿಂಗ ಜಂಗಮ ಶ್ರೇಣಿಯ ಸೇವೆಗೆಂದೇ ಮೀಸಲಾಗಿರಿಸಿ, ಪುಣ್ಯಶ್ಲೋಕರಾದ ಕಲ್ಯಾಣದ ಶ್ರೀ ಬಸವಣ್ಣನವರಿಗೆ, ವೀರಶೈವಮತ ಸ್ಥಾಪನಾಚಾರ್ಯರಲ್ಲಿ ಅಮಿತಾನಂದವನ್ನುಂಟುಮಾಡುವ ಗುರುಭಕ್ತಿಯಿರಲಿಲ್ಲವೇ ? ಇಲ್ಲವೆಂದರೆ ಅನೃತವಾದೀತು.

ಸತ್ಯಾಂಶ ಹೀಗಿದ್ದರೂ ಅಕಟ ! ಲಿಂಗವಂತರಲ್ಲಿ ಅನೇಕರು ತಾವು ಶ್ರೀ ಬಸವಣ್ಣನವರ ಅನುಯಾಯಿಗಳೆಂದು ಹೇಳಿಕೊಂಡು, ಅವರ ನುಡಿಗಳನ್ನು ಗಿಳಿ ನುಡಿಯಂತೆ ಗುಡುಗುಟ್ಟಿಸಿ, ಅವರ ವಚನ ಶಾಸ್ತ್ರಾಮೃತದ ಸುರಿಮಳೆಯನ್ನು ತಮ್ಮ ತುಟಿದ್ವಯಗಳಿಂದ ಅಡಿಗಡಿಗೆ ವರ್ಷಿಸಿ, ವ್ಯಾಖ್ಯಾನಮಾಡಿ ಹಾಡಿ ಪಾಡಿದರೂ, ನಡೆಯಲ್ಲಿ ಶ್ರೀ ಬಸವಣ್ಣನವರ ಆಚರಣೆಗಿಂತ ವಿಲಕ್ಷಣವಾದ ಹೇಯ ಸಂಸ್ಕಾರಭರಿತರಾಗಿ ಪತಿತರಾಗಿ ವರ್ತಿಸುತ್ತಲಿರುವುದನ್ನು ನೋಡಿದರೆ ಸಖೇದಾಶ್ಚರ್ಯವೆನಿಸುವುದು. ಜೀವನ್ಮುಕ್ತನಾದ (ಶರಣನಾದ) ಶ್ರೀ ಬಸವಣ್ಣನಂತೆ ನುಡಿ ನಡೆಗಳಲ್ಲಿ ಒಂದಾಗಿ ಬಾಳಲು ಸಾಧ್ಯವೇ ? ಸಾಧ್ಯವಿಲ್ಲವೆಂಬುದನ್ನು ಹೊರಸೂಸುವಂತೆ "ಲಕ್ಷಕ್ಕೊಬ್ಬ ಭಕ್ತ ಕೋಟಿಗೊಬ್ಬ ಶರಣ" ಎಂದು ಶಿವಶರಣ ಬಸವಣ್ಣ ಕೈಎತ್ತಿ ಸಾರಿರುವನು. ಮನದ ಮುಂದಣ ಮೋಹಬಲೆಗೆ ಸಿಕ್ಕಿ ಕಂಗೆಟ್ಟು ಆಚಾರವ ಕೈಬಿಟ್ಟ ಬದ್ಧಜೀವರುಗಳಿಗೆ ಮುಕ್ತ ಮಹನೀಯನ ಶುದ್ಧಾಂತರಂಗದ ನೀಲಾಂಬರದಂಥ ಗಂಭೀರವಾದ ನಿಲುವು ಹೇಗೆ ತಾನೆ ಪೂರ್ಣ ಗೋಚರವಾದೀತು ? ಅದಕ್ಕೂ ಸುಸಂಸ್ಕಾರ, ಗುರು ಕರುಣೆ, ಈಶ್ವರಾನುಗ್ರಹ ಬೇಕಲ್ಲವೆ ? ಶ್ರೀ ಬಸವಣ್ಣನವರು ಗುರುದೇವನಿಗೆ ತಮ್ಮ ಸನ್ಹೃನ್ಮಂದಿರದಲ್ಲಿ ಯಂತಃ ಪೂಜ್ಯಸ್ಥಾನವನ್ನು ಕೊಟ್ಟಿದ್ದರೆಂಬುದು ಅವರಲ್ಲಿದ್ದ ಅಚಲವಾದ ಗುರುಭಕ್ತಿಯಿಂದ ವೇದ್ಯವಾಗುತ್ತೆ. ಸಾರಾ ಸಾರ ವಿವೇಚನೆಯಿಂದ ಶ್ರೀ ಬಸವಣ್ಣನವರು ಶಾಸ್ತ್ರದ ತಿರುಳನ್ನೂ ಶಿವಾನುಭವದ ದಿವ್ಯ ಸೌರಭದ ಅನುಭವವನ್ನೂ ಚೆನ್ನಾಗಿ ಮನಗಂಡಿದ್ದರು. ಸದ್ಗುರು ದೇವನಲ್ಲಿ ಪೂರ್ಣ ಭಕ್ತಿ ವಿಶ್ವಾಸವನ್ನಿಟ್ಟು ಗುರುವೆಂದರೆ ॥ ಗುರುಬ್ರಹ್ಮ ಗುರು

ವಿಷ್ಣು ಗುರುರ್ದೇವೋ ಮಹೇಶ್ವರಃ । ಗುರುಸಾಕ್ಷಾತ್ಪರಬ್ರಹ್ಮ ತಸ್ಮೈಶ್ರೀ ಗುರವೇ ನಮಃ ॥ ಅವನೆ ಪರಬ್ರಹ್ಮಸ್ವರೂಪಿಯಾದ ಪರಶಿವನೆಂದು ಅರಿತಿದ್ದರು. ಶಿವಲಿಂಗೋದ್ಭವ ಮೂರ್ತಿಗಳಾದ ಆದಿ ಜಗದ್ಗುರು ಸಾರ್ವಭೌಮ ಶ್ರೀ ರೇಣುಕಾದಿ ಪಂಚಾಚಾರ್ಯರುಗಳ ಮಹಾಮಹಿಮೆಯನ್ನು ಶಿವಾಗಮಗಳಿಂದ ಹೃದಯಂಗಮವಾಗಿ ಸ್ವತಃ ತಿಳಿದು ಅವರಲ್ಲಿ ಅಪಾರ ಭಕ್ತಿಯುಳ್ಳವರಾಗಿದ್ದರೆಂಬುದರಲ್ಲಿ ಸಂದೇಹವೇ ಇಲ್ಲ. ಶಿವನ ಕರುಣಾಕಟಾಕ್ಷ ಭಕ್ತನ ಮೇಲೆ ಬೀಳಬೇಕಾದರೆ ಅವನು ಮೊದಲು ಗುರುಪುತ್ರನಾಗಿ ಸದ್ಗುರುವಿನ ಕಟಾಕ್ಷಕ್ಕೆ ಅರ್ಹನಾಗಿರಬೇಕೆಂಬುದು ಅವರ ಅಚಲ ನಂಬಿಕೆ ಹಾಗೂ ಅಭಿಮತ. ಕಪ್ಪಡಿ ಮಹಾ ಶಿವಕ್ಷೇತ್ರದ ಗುರುಕುಲವಾಸದಲ್ಲಿ ಶ್ರೀ ಸಂಗಮೇಶ್ವರನ ದಿವ್ಯ ಸಾನ್ನಿಧ್ಯದಲ್ಲಿ ಹದಿನೆಂಟು ಸುದೀರ್ಘ ವರ್ಷಗಳು ಬ್ರಹ್ಮಚರ್ಯಾಶ್ರಮದ ಕಟ್ಟುನಿಟ್ಟಾದ ನಿಷ್ಠೆಯಿಂದ ಶ್ರೀ ಸಂಗಮೇಶ್ವರ ಮುನಿಗಳೆಂದು ವಿಖ್ಯಾತರಾದ ಹಾಗೂ ಜಗದ್ಗುರು ಶ್ರೀಮದ್ರಂಭಾಪುರೀ ಮಹಾವೀರ ಪೀಠದ ಉಪಾಚಾರ್ಯರೂ ಆಗಿ ಬಹುವ್ಯಾಪಕರಾಗಿದ್ದ ಶ್ರೀ ಜಾತವೇದಿ ಮಹಾಮುನಿಗಳ ದಿವ್ಯ ಪದ ನಖಚಂದ್ರಚಂಚಚ್ಚಕೋರಾಯಮಾನರಾಗಿ ವಿರಾಜಿಸಿ, ಶ್ರೀ ರಾಮ ಲಕ್ಷ್ಮಣಾದಿಗಳು ಶ್ರೀ ವಿಶ್ವಾಮಿತ್ರ ವಶಿಷ್ಠಾದಿಗಳ ಸೇವೆಮಾಡಿ ವಿದ್ಯಾರ್ಜನೆ ಮಾಡಿದಂತೆ, ಶ್ರೀ ಕೃಷ್ಣ ಸುಧಾಮಾ (ಕುಚೇಲ) ದಿಗಳು ಗುರು ಶ್ರೀ ಸಾಂದೀಪನಿ ಮುನಿಗಳ ಸೇವೆಯನ್ನುಮಾಡಿ ವಿದ್ಯಾರ್ಜನೆಗೈದಂತೆ, ಶ್ರೀ ಬಸವಣ್ಣನವರು ಗುರು ಶ್ರೀ ಜಾತವೇದಿ ಮುನಿಗಳ ಸುಶ್ರೂಷೆ ಸೇವೆಗಳನ್ನುಗೈದು ಪ್ರೌಢ ವಿದ್ಯಾವಂತರಾದರು.

ಶಿವಾಗಮೋಪನಿಷದಾದಿಗಳಲ್ಲಿ ಪಾರಂಗತರೂ, ಶ್ರೀ ಸದ್ಗುರು ಸೇವಾ ಧುರೀಣರೂ, ಸದಾಚಾರ ಸಂಪನ್ನರೂ, "ಅಹಿಂಸಾ ಪ್ರಥಮೋಧರ್ಮಃ" ಎಂಬ ವ್ರಥಾನುಯಾಯಿಗಳೂ, ಹರಗುರುಜಂಗಮ ಪ್ರೇಮಿಗಳೂ, ಸರ್ವ ಸಾಧಾರಣ ಜೀವನವನ್ನವಡಿಸಿಕೊಂಡು ಆಡಂಬರವಿಲ್ಲದ ಉದಾತ್ತಭಾವನೆಗಳಿಂದ ಶೋಭಿತರಾಗಿ ಪ್ರಸಿದ್ಧರಾಗಿದ್ದರು. *Simple living and high thinking* ಎಂಬ ವಾಣಿಗೆ ಪರಮಾದರ್ಶ ವ್ಯಕ್ತಿಯಾಗಿದ್ದರು. ತಮ್ಮ ಸದ್ವಂಶದ ಘನ

ಗೌರವಕ್ಕೆ ತಕ್ಕಂತೆ ತಾತ ಮಂಡಗಿ ಲಿಂಗಭಟ್ಟ ತಂದೆ ಮಂಡಗಿ ಮಾದರಸರಂತೆ- ಸೌಮ್ಯ ಸ್ವಭಾವದಿಂದ ಕೂಡಿ ವಿಚಾರ ಪರರಾಗಿದ್ದರು. ಮಂಡಗಿ ಮಾದರಸ ಬಾಗೇವಾಡಿಯ ಬ್ರಾಹ್ಮಣ ಕುಲಕ್ಕೆ ಶ್ರೇಷ್ಠರಾದ ದೇಶಪಾಂಡೆಯವರ ಮನೆತ ನಕ್ಕೆ ಸೇರಿದವರಾಗಿ ಕಂಡುಬರುತ್ತೆ. ಆಗ್ಗೆ ಶ್ರೇಷ್ಠ ಕುಲಕರಣಿ ಮನೆತನದವ ರಲ್ಲಿ ದೇಶಪಾಂಡೆಯವರು ನೆಂಟತನವನ್ನು ಬೆಳಸುವ ಪದ್ಧತಿ ಬಲವಾಗಿದ್ದು, ಬಹುಹಿಂದಿನಕಾಲದಿಂದಲೂ ಇವರುಗಳಲ್ಲಿ ಹೆಣ್ಣುಕೊಡುವ ತೆಗೆದುಕೊಳ್ಳುವ ಸುಮಧುರ ಬಾಂಧವ್ಯ ಮನೋಭಾವ ಘನತೆಯಿಂದ ಬೆಳೆದುಬಂದಿತ್ತೆಂದು ಭಾಸವಾಗುತ್ತೆ. ಶ್ರೀ ಬಸವಣ್ಣನವರ ತಾಯಿ ಸಾಧ್ವೀಮಣಿ ಮಾದಲಾಂಬಿಕೆ ಶ್ರೇಷ್ಠ ಕುಲಕರ್ಣಿ ಬ್ರಾಹ್ಮಣ ಮನೆತನದ ಕನ್ಯಾಮಣಿ. ಶ್ರೀ ಮಾದರಸ ಮಾದಲಾಂಬಿಕೆಯರಂಥಾ ಶ್ರೇಷ್ಠ ಸತಿಪತಿಯರುಗಳ ಸುಮಧುರ ಸಂಯೋಗ ಈಶ್ವರದತ್ತವಾದುದಾಗಿತ್ತೆಂದು ಹರ್ಷಿಸಬೇಕು.

ದೈವಭಕ್ತಿ ಸಂಪನ್ನರಾದ ಮಂಡಗಿ ಮಾದರಸ, ಮಡದಿ ಮಂಗಳಾಂಗಿ ಯಾದ ಮಾದಲಾಂಬಿಕೆಯರ ಇಂಗಿತ, ಇವರೀರ್ವರ ಪರಸ್ಪರಾನುರಾಗದ ॥ ದಂಪತಿ ಭಾವರಮ್ಯಂ ॥ ಅಂದರೆ, ವೀಳ್ಯೆದೆಲೆಯ ಕೋಮಲವಾದ ಬಳ್ಳಿಗೆ ಅಡಿಕೆ ಮರದ ನಿಕಟ ಆಶ್ರಯದ ಅವಶ್ಯಕತೆಯಂತೆ ಇವರೀರ್ವರ ದಾಂಪತ್ಯದ ರಮ್ಯವರ್ತನೆ, ಇಂಗದ ಅನ್ಯೋನ್ಯ ಭಾವಗರ್ಭಿತ ಪ್ರೇಮರಸಮಾಧುರ್ಯದಿಂದ ಕಂಗೊಳಿಸುತ್ತಲಿತ್ತು. ॥ ನಾಂ ಸ್ವರ್ಗಕೆ ದಾರಿ ॥ ಎಂಬ ವಾಣಿಯನ್ನು ಪೂರ್ಣ ಗೌರವಿಸುವಂಥಾ ಗಂಭೀರ ನಡೆ-ನುಡಿಗಳು ಮಾದಲಾಂಬಿಕೆಯಲ್ಲಿ ಕಂಗೊಳಿಸು ತ್ತಲಿದ್ದುವು. ಇಂಥವರಿಗೆ ಶ್ರೀ ಬಸವಣ್ಣನವರಂಥಾ ಪುತ್ರರತ್ನ ಉಂಟಾದುದು ಅವರ ಪೂರ್ವಾರ್ಜಿತ ಪುಣ್ಯಫಲವೆಂದು ವೇದ್ಯವಾಗುತ್ತೆ. ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ತ, ಮತ್ತೂ ಸನ್ಯಾಸಾಶ್ರಮಗಳೆಂಬ ಚತುರಾಶ್ರಮಗಳಲ್ಲಿ ಗೃಹಸ್ಥಾಶ್ರಮವು ಅಧಿಕ ಹೆಚ್ಚಿನಸ್ಥಾನವನ್ನು ಗಳಿಸಿದೆ. ಮಧ್ಯಮಣಿ ನ್ಯಾಯ ದಂತೆ ಗೃಹಸ್ಥನು ತನ್ನಲ್ಲಿಗೆ ಯಾಚಕಾರ್ಥವಾಗಿಬಂದ ಬ್ರಹ್ಮಚಾರಿಯನ್ನೂ ಹಾಗೂ ಸರ್ವಸಂಘ ಪರಿತ್ಯಾಗಮಾಡಿರುವ ಸನ್ಯಾಸಿಗೂ ಆಶ್ರಯಭೂತನಾಗಿ, ಗೃಹಸ್ಥಧರ್ಮವನ್ನು ಬೆಳಗಿಸುತ್ತಲಿರುವನು.

ಧರ್ಮಿಷ್ಟರೂ ಸುಕೃತಶಾಲಿಗಳೂ ಆದ ಗೃಹಸ್ಥರು ॥ ಸಾನಂದಂ ಸದನಂ ಸುತಾಶ್ಚ ಸುಧೀಯಃ। ಕಾಂತಾ ನ ದುರ್ಭಾಷಿಣೀ ಸನ್ಮಿತ್ರಂ, ಸ ಧನಂ। ಸ್ವಯೋಶಿತಿ ರತಿಶ್ಚಾಜ್ಞಾ ಪರಃ ಸೇವಕಾಃ। ಆಥಿತ್ಯಂ ಶಿವಪೂಜನಂ ಪ್ರತಿದಿನೆ। ಇಷ್ಟಾನ್ನ ಪಾನಂ ಗೃಹೇ, ಸಾಧೋಸ್ಸಂಘಮು। ಪಾಸತೇಹಿ ಸತತಂ, ಧನ್ಯೋ ಗೃಹಸ್ಯಾಶ್ರಮಃ ॥ ಇದರರ್ಥ ಸ್ವಾರಸ್ಯವೇನೆಂದರೆ—

ಒಂದು ಕುಟುಂಬವು ನಿಜವಾಗಿ ಸತತ ಆನಂದಭರಿತವಾಗಿರಬೇಕಾದರೆ; ವಂಶೋದ್ಧಾರಕನಾದ ಮಗನು ಸುಬುದ್ಧಿಯಿಂದ ಕೂಡಿ ವಿವೇಕಸಂಪನ್ನನಾಗಿರ ಬೇಕು. ಗೃಹಲಕ್ಷ್ಮಿಯಾದ ಸುಮಂಗಲೆಯು ಮುಖದಿಂದ ಎಂದೂ ಯಾವ ಸಂದರ್ಭದಲ್ಲೂ ಅಪಶಬ್ಧಗಳನ್ನು ನುಡಿಯದಂತಿರಬೇಕು. ಕುಟುಂಬದವರೆಲ್ಲಾ ಸತ್ಸಂಘ ಸಹವಾಸದಿಂದಿರಬೇಕು. ಭಾಗ್ಯಲಕ್ಷ್ಮಿಯಿಂದ ಅನುಗ್ರಹೀತರಾಗಿರ ಬೇಕು. ಗಂಡನು ತನ್ನ ಹೆಂಡತಿ ಪತಿವ್ರತೆಯಾಗಿರಬೇಕೆಂದು ಇಚ್ಛಿಸುವಂತೆ, ಸತೀಮಣಿಯೂ ಸಹ ತನ್ನ ಗಂಡನು ಏಕಪತ್ನೀವ್ರತನಾಗಿರಬೇಕೆಂದು ಆಶಿಸುವ ಳಾದ್ದರಿಂದ, ಈ ಸತಿಪತಿಗಳ ಸಂಪತ್ ಸೌರಭಕ್ಕೆ ಚ್ಯುತಿಬಾರದಂತಿರಬೇಕು. ದಣಿಯ ಇಂಗಿತವನ್ನರಿತು ವಿಧೇಯತೆಯಿಂದ ಸೇವೆಸಲ್ಲಿಸುವಂಥ ಆಳುಗಳಿರ ಬೇಕು. ನಿತ್ಯಸಂಧ್ಯಾಕಾಲಗಳಲ್ಲಿ ಪೂಜಾದಿ ಶಿವಾರ್ಚನೆಗಳಿಂದ ಬೆಳಗುತ್ತಿರುವ ಮನೆ ಮಂಗಳಮಯವಾಗಿ ಶೋಭಿಸುತ್ತಿರಬೇಕು. ಅಥಿತಿ ಅಭ್ಯಾಗತರ ಆದರಿಸಿ ಅನ್ನವಿಟ್ಟು ಸಂತೋಷಪಡಿಸಬೇಕು. ಕಂಡಕಂಡೆಡೆಗಳಲ್ಲಿ ಉಂಡು ಕೈತೊಳೆಯದೆ, ಇಷ್ಟಾನ್ನಪಾನಗಳನ್ನು ನಿತ್ಯ ಸ್ವಂತ ಮನೆಯಲ್ಲೇ ಮುಗಿಸಬೇಕು. ಈ ಪ್ರಕಾರ ಅನವರತ ಹರ ಗುರು, ಲಿಂಗ ಜಂಗಮರ ಘನಸೇವೆ ಯಾರು ಮಾಡುತ್ತಲಿರುವರೋ ಆ ಮನೆಯೇ ನಿರಂತರ ಕಲ್ಯಾಣ ಕಲ್ಪತರುವಾಗಿ, ಇಂಥಾ ಸದ್ಗೃಹಸ್ಥ ಗೃಹಿಣಿಯರೇ ಲೋಕದಲ್ಲಿ ॥ ಧನ್ಯೋಗೃಹಸ್ಯಾಶ್ರಮಃ ॥ ಧನ್ಯರು! ಬಹುಧನ್ಯರು!! ಶ್ರೀ ಬಸವಣ್ಣನವರು ಹುಟ್ಟಿದ ಕುಟುಂಬ ಮೇಲ್ಕಂಡಂತೆ ಶ್ರೇಷ್ಠತರ ಕುಟುಂಬವಾಗಿ ಜಗದಾದರ್ಶ ನೀಯವಾಗಿತ್ತು. ಬಾಗೆವಾಡಿ ಅಗ್ರಹಾರಕ್ಕೆ ಅರಸ ಮಾದರಸ. ಮಾದರಸನ ತಂಗಿಯ ಗಂಡ ಬಲದೇವ, ಬಿಜ್ಜಳನ ಆಸ್ಥಾನದಲ್ಲಿ ಮಂತ್ರಿ. ಮಾದಲಾಂಬಿ

ಕೆಯು ಆಗರ್ಭಶ್ರೀಮಂತರ ಮಗಳು. ಈಕೆಯ ಒಡಹುಟ್ಟಿದ ಅಣ್ಣ ಮೇಲೆ ಹೇಳಿದ ಬಲದೇವ ಮಂತ್ರಿ. ಈ ದಂಪತಿಗಳೀರ್ವರಲ್ಲಿದ್ದ ಸದ್ಗುಣ ದೈವೀಸಂಪತ್ತಿನ ಹೊನಲಿನಿಂದ ಹೊರಬಿದ್ದ ತೇಜಸ್ಸೇ "ಭಾಸಮಾನತ್ವಾತ್ ಬಸವಃ" ಎಂದಂತೆ ಶಿವಪ್ರಕಾಶದಿಂದ ಬೆಳಗಿದ ಸುಪುತ್ರ ಶ್ರೀ ಬಸವಣ್ಣ ಜಗಜ್ಯೋತಿಯೆಂದು ವಿಖ್ಯಾತನಾಗಲು ಕಾರಣವಾಯಿತು. ಮೊಳಕೆಯಲ್ಲಿಯೇ ವೃಕ್ಷದ ಅಂಶಗಳನ್ನು ನಿರ್ಣಯಿಸುವಂತೆ, ಕೇವಲ ಎಂಟನೇ ವಯಸ್ಸಿನಲ್ಲೇ ಶ್ರೀ ಬಸವಣ್ಣ ತನ್ನಲ್ಲಡಗಿದ್ದ ಜ್ಞಾನಜ್ಯೋತಿಯ ಬೆಳಕನ್ನು ಹೊರಗೆಡಹಿದ ಪ್ರಸಂಗವೊಂದು ಪ್ರಾಪ್ತಿಯಾಯಿತು. ಬಸವಣ್ಣನಿಗೆ ಎಂಟನೆ ವಯಸ್ಸು ಪ್ರಾಪ್ತವಾದುದನ್ನರಿತು ಮತಪದ್ಧತಿಯಂತೆ ಅವನಿಗೆ ಬ್ರಹ್ಮೋಪನಯನ ಸಂಸ್ಕಾರವನ್ನು ತಂದೆ ಏರ್ಪಡಿಸಿದನು. ಹಸಿರು ತಳಿರು ತೋರಣಗಳಿಂದ ಮಂಟಪ ಶೋಭಾಯಮಾನವಾಗಿರಲು, ಬಂಧು ಬಾಂಧವರು ಸಂಭ್ರಮದ ಉಪನಯನ ಮಹೋತ್ಸವದ ಅಂಗವಾಗಿ ಜರುಗುವ ಹೋಮ ಹವ್ಯ, ಕವ್ಯ ದೃಶ್ಯವನ್ನು ವೀಕ್ಷಿಸಿ, ಮಂದಸ್ಮಿತಾನಂದಭರಿತರಾಗಿದ್ದರು. ಮಂಗಳವಾದ್ಯದ ಮಧ್ಯೆ ಸನ್ಮಂಗಳ ಸ್ನಾನಾನಂತರ ದಿವ್ಯ ಧಾವಳ್ಯ ಪೀತಾಂಬರಧಾರಿಯೂ, ಭಸ್ಮ ತ್ರಿಪುಂಡ್ರ ರುದ್ರಾಕ್ಷಿಗಳಿಂದ ವಿಭೂಷಿತರೂ ಲಿಂಗಾಂಗಿಯಾದ ಶ್ರೀ ಬಸವಣ್ಣನವರನ್ನು ಬ್ರಾಹ್ಮಣ ಪುರೋಹಿತರು ವೇದಮಂತ್ರಗಳನ್ನು ಘೋಷಿಸುತ್ತ ಪೀಠದ ಮೇಲೆ ಕುಳಿತುಕೊಳ್ಳುವಂತೆ ಕೋರಿದರು. ಏತಕ್ಕೆ ? ಮತ್ತೂ ಉಪನಯನವೆಂದರೇನೆಂದು ? ಪ್ರಶ್ನಿಸಿದ ವಟುವನ್ನುದ್ದೇಶಿಸಿ, ಪುರೋಹಿತರು ಬ್ರಾಹ್ಮಣ ಧರ್ಮಕ್ಕನುಗುಣವಾಗಿ ಪ್ರತಿಯೊಬ್ಬ ಬ್ರಾಹ್ಮಣ ಪುರುಷನು ತನ್ನ ಎಂಟನೇ ವಯಸ್ಸಿನಲ್ಲಿ ಬ್ರಹ್ಮೋಪನಯನವೆಂಬ ಸಂಸ್ಕಾರದಿಂದ ಶುದ್ಧನಾಗಿ ದ್ವಿಜನಾಗಬೇಕು. ಇದು ಕರ್ಮಕಾಂಡದ ವಿಧಿ, ಪ್ರಥಮ ಹೆಜ್ಜೆ. ಈ ಉಪನಯನ ಸಂಸ್ಕಾರ ಬಾಹಿರನಾದರೆ ಅವನನ್ನು ಬ್ರಾಹ್ಮಣ ಕುಲದಿಂದ ಹೊರದೂಡುವರು. ಆದ್ದರಿಂದ ನೀನು ಈ ಪವಿತ್ರವಾದ ಯಜ್ಞೋಪವೀತ ಧಾರಣೆಯಿಂದ ಪರಿಶೋಭಿತನಾಗಿ ಉಪನಯನ ಸಂಸ್ಕಾರ ಬದ್ಧನಾಗು. ದ್ವಿಜನು ಶುದ್ಧನಾಗಬೇಕಾದರೆ ವೇದದ ಪೂರ್ವಕಾಂಡದ ವಿಧಿಗನುಸಾರ ಷೋಡಶ ಕರ್ಮಗಳುಂಟು. ಅದರಲ್ಲಿ ಉಪನ

ಯನ ಪರಮ ಶ್ರೇಷ್ಠವಾದುದು. ಶ್ರೀ ಗಾಯಿತ್ರಿ ಮಂತ್ರೋಪದೇಶವು ಬ್ರಹ್ಮೋಪನಯನದ ಹೃದಯ. ಸವಿತ, ಗಾಯಿತ್ರಿ ಮಹಾಮಂತ್ರದ ಅಧಿಷ್ಠಾನ ದೇವತೆ. ಅಗ್ನಿ ಈ ದೇವತೆಯ ಮುಖ. ಶ್ರೀ ಗಾಯಿತ್ರಿ ಮಹಾ ಮಂತ್ರೋಚ್ಛಾರಣೆ ಅನುಸಂಧಾನದಿಂದ ದ್ವಿಜನು ಪರಿಶುದ್ಧಾಂತಃಕರಣನಾಗಿ ತನ್ನ ಮನೋಬುದ್ಧಿ ವಾಕ್ಕಾಯಾತ್ಮಗಳನ್ನು ಪರಮಾತ್ಮನಿಗೆ ಅರ್ಪಣಮಾಡಿ ಮುಕ್ತನಾಗುವನು. ಉಪನಯನ ಸಂಸ್ಕಾರ ಯಜ್ಞೋಪವೀತ ಧಾರಣೆ ಮತ್ತೂ ಶ್ರೀ ಗಾಯಿತ್ರಿ ಮಂತ್ರೋಪದೇಶದ ತತ್ವ, ಇವು ಎಂದು ಹೃದಯಂಗಮವಾಗಿ ವಿವರಿಸಿದರು.

ಸಾವಧಾನಚಿತ್ತದಿಂದ ಸರ್ವವನ್ನೂ ಆಲಿಸಿದ ಧೀಮಂತ ಶ್ರೀ ಬಸವಣ್ಣ, ತಮಗೆ ಈಗಾಗಲೆ ಬ್ರಹ್ಮನಿಷ್ಠಾಗರಿಷ್ಟರಾದ, ಪರಮವೀರಶೈವಾಚಾರ ಸಂಪನ್ನರಾದ ಪ್ರಸಿದ್ಧ ಕಪ್ಪಡಿ ಕ್ಷೇತ್ರದ ಮಹಾ ಶಿವಯೋಗೀಶ್ವರರಾದ ಶ್ರೀ ಜಾತವೇದಿ ಗುರುಗಳ ಅಮೃತಹಸ್ತದಿಂದ ತಮಗೆ ಶಿವಲಿಂಗ (ಇಷ್ಟಲಿಂಗ) ಮಯಯಜ್ಞೋಪವೀತಧಾರಣೆಯಾಗಿ ಅವರ ದಿವ್ಯಮುಖ ಕಮಲದಿಂದ, ಸಪ್ತಕೋಟಿ ಮಹಾಮಂತ್ರಗಳಿಗೆ ಮಸ್ತಕಮಣಿಯಂತೆಸೆವ ಶಿವಪಂಚಾಕ್ಷರೀ ಮಹಾಮಂತ್ರವನ್ನು ಉಪದೇಶಿಸಿ, ಶಿವದೀಕ್ಷಾ ಸಂಸ್ಕಾರದಿಂದ ನನ್ನನ್ನು ಪರಿಶುದ್ಧನನ್ನಾಗಿಸಿರುವರೆಂದು ಉತ್ತರಕೊಟ್ಟು ॥ ಜನ್ಮನಾ ಜಾಯತೇ ಶೂದ್ರಃ । ಕರ್ಮಣಾದ್ವಿಜ ಉಚ್ಯತೇ ॥ ಎಂಬಂತೆ ಜನ್ಮತಃ ಶೂದ್ರನಾಗಿ ಹುಟ್ಟಿ, ಸತ್ಕರ್ಮಾಚರಣೆ. ಶಿವದೀಕ್ಷಾ ಸಂಸ್ಕಾರ, ಶಿವಲಿಂಗಧಾರಣೆ, ಶಿವಪಂಚಾಕ್ಷರೀ ಮಹಾಮಂತ್ರ ಜಪ, ಶಿವಧ್ಯಾನ ಇತ್ಯಾದಿ ಪೂಜಾಧ್ಯಾನಾದಿಗಳ ಅನುಷ್ಠಾನ ಅನುಸಂಧಾನಗಳಿಂದ ಆಣವಾದಿ ಮಲತ್ರಯಗಳಿಂದ ಮುಕ್ತನಾಗಿ, ತಾಪತ್ರಯಾದಿ ದುಃಖಗಳಿಂದ ದೂರನಾಗಿ ದೇಹತ್ರಯಂಗಳಲ್ಲಿ ಪರಿಶೋಭಿಸುವ ಲಿಂಗತ್ರಯಂಗಳು ಆತ್ಮಸ್ವರೂಪದಲ್ಲಿ ಐಕ್ಯಗೊಂಡಿರುವುದನ್ನು ಕಂಡು ಕೃತಕೃತ್ಯಭಾವದಿಂದ, ಸ್ಪರ್ಶಮಣಿಯು ಸ್ಪರ್ಶಿಸಿದ ಲೋಹವು ಬಂಗಾರವಾಗುವಂತೆ ಶಿವದೀಕ್ಷೆಯಿಂದ ॥ ತಪ್ತತನುಃ ॥ ಅಂದರೆ, — ಶಿವಮುದ್ರಾಂಕಿತದಿಂದ ಶರೀರವನ್ನು ಸುಟ್ಟು ಗುರ್ತುಗಳನ್ನು ಮಾಡುವುದಲ್ಲ, ಅದು ನಾನಾಚಾರ ಅವೈದಿಕ ಹಾಗಲ್ಲದೆ—

ಭಸ್ಮ ಲಿಂಗಮುದ್ರಾಂಕಿತ ಅವಯುವಗಳಿಂದ ಪರಿಶೋಭಿಸಿ, ಅವಿಚ್ಛಿನ್ನವಾಗಿ ಅನನ್ಯಭಾವದಿಂದ ಶಿವಚಿಂತನೆಯೆಂಬ ಕಾಯಕ, ವಾಚಕ, ಮಾನಸಿಕ ತಪಸ್ಸ ನ್ನಾಚರಿಸಿ. ಸುಸಂಸ್ಕೃತನಾದ ಬದ್ಧಜೀವನು ಇಷ್ಟಲಿಂಗಪೂಜಾಲೋಲನಾಗಿ ವಿಹರಿಸಿದರೆ, ತತ್ಪರಿಣಾಮವಾಗಿ ತಪ್ತತನುವೆನಿಸಿ ಮುಕ್ತನಾಗಿ ಮೋಕ್ಷಗಾಮಿ ಯಾಗುವನು. ನಾನು ತತ್ಪೂರ್ವವೇ ಸದ್ಗುರು ಕಟಾಕ್ಷದಿಂದ ದೀಕ್ಷಾವಿಧಿ ಯಿಂದಲೇ ಹುಟ್ಟಿ ಬೆಳೆದಿರುವೆನಾದ ಪ್ರಯುಕ್ತ, ವೇದದ ಉತ್ತರಭಾಗದಲ್ಲಿ ಪ್ರತಿಪಾದಿತವಾದ ಭಕ್ತಿಜ್ಞಾನಾದಿ ಪತಿಕರ್ಮಾನುಷ್ಠಾನದಲ್ಲಿ ಆಸಕ್ತಿಯುಳ್ಳವ ನಾಗಿ "ಉಪ+ನಯನ=ಉಪನಯನ", ನಯನ ಅಂದರೆ ಜ್ಞಾನ ಕಣ್ಣಿನ, ಉಪ=ಸಮೀಪವನ್ನು ಹೊಂದಿರುವುದು ಇದರರ್ಥ, ಪ್ರಜ್ಞಾನಮಯನಾದ ಆತ್ಮಲಿಂಗದಲ್ಲಿ ಮನೋಬದ್ಧೇಂದ್ರಿಯಂಗಳನ್ನು ಅರ್ಪಿಸಿ, ಜೀವಾತ್ಮನನ್ನು ಲಯ ಗೊಳಿಸುವ ಸುವಿಚಾರ ಸರಣಿಯೇ ಶಿವದೀಕ್ಷೆಯ ಸಾರ ಸರ್ವಸ್ವವಾಗಿರುವು ದೆಂದು, ಬ್ರಹ್ಮೋಪನಯನ ಮಹಾಮಂಟಪದಲ್ಲಿ ನೆರದಿದ್ದವರಿಗೆಲ್ಲಾ ಮಿಂಚಿ ನಂಥಾ ಉದ್ಯದ್ವೇಗವಾಣಿಯಿಂದ ಸ್ಪಷ್ಟಪಡಿಸಲು, ಪುರೋಹಿತರಾದಿಯಾಗಿ ಸರ್ವರೂ ಸ್ತಂಭೀಬೂತರಾಗಿ ಮುಗ್ಧರಾದರೆಂದರೆ ಆಶ್ಚರ್ಯವೆನಿಸಲಾರದಷ್ಟೆ. ಬೃಹತ್ ಕರ್ಮಾಚರಣೆಯಿಂದ ಕೂಡಿ ಮಾಡುವ ಕಾಮ್ಯಕರ್ಮಗಳು ಅಲ್ಪ ಫಲಗಳನ್ನು ಕೊಟ್ಟು, ಪುಣ್ಯವು ಕ್ಷೀಣಿಸಿದೊಡನೆ ಪುನಃ ದುಃಖಾಬ್ಧಿಯಲ್ಲೀ ತಳ್ಳುವುವು. ಆದ್ದರಿಂದ ಅಂಥಾ ಕರ್ಮಾಚರಣೆಗಳ ಗೊಂದಲ, ಗೋಜು ಬೇಡವೆಂದು ಗೊತ್ತುಮಾಡಿದ್ದ ಉಪನಯನ ಸಂಸ್ಕಾರವನ್ನು ತ್ಯಜಿಸಿದನು.

ಕರ್ಮಾನುಷ್ಠಾನ ಪರರಾದ ಬ್ರಾಹ್ಮಣಶ್ರೇಷ್ಠರು ಶ್ರೀ ಬಸವಣ್ಣನ ವಿದ್ಯಾ ಕೌಶಲ, ಚತುರತೆ, ಶ್ರದ್ಧಾನಿಷ್ಠೆಗಳಿಂದೊಡಗೂಡಿದ ಆ ಬಾಲ್ಯಾವಸ್ಥೆಯ ಅರ್ಥ ಪೂರ್ಣವಾದಕ್ಕೆ ತಲೆದೂಗಿದರೂ, ಸ್ವಧರ್ಮಾನುಸಾರವಾಗಿ ಬ್ರಹ್ಮೋಪ ನಯನ ಸಂಸ್ಕಾರದಿಂದ ಪವಿತ್ರನಾಗದಿದ್ದರೆ, ಬ್ರಾಹ್ಮಣ ಸಮಾಜದಿಂದ ಅವನು ಬಹಿಷ್ಕೃತನಾಗುವನೆಂದುತಿಳಿಸಿ ಬೆದರಿಸಿದರು. ಮಾತಾಪಿತೃಗಳ ಮನೋಸ್ಥಿತಿ ಆಗ ಹೇಗಿದ್ದಿರಬೇಕೆಂಬುದನ್ನು ವರ್ಣಿಸಲು ಅಳವೆ ? ಮಗನ ಸೌಶೀಲ್ಯಜ್ಞಾನ ಗಳಿಗಾಗಿ ಮೆಚ್ಚಿ ಸಂತೋಷಿಸುವ ಭಾಗ್ಯ ವಂದು ಕಡೆಯಿದ್ದರೆ, ಮತ್ತೊಂದು

ಕಡೆ ಸ್ವಮತ ಧರ್ಮಪರಿಪಾಲನೆಯನ್ನು ತ್ಯಜಿಸಿ, ಸ್ವಜನರ ಸಂಘದಿಂದ ದೂರ ವಾಗಿ ಬಹಿಷ್ಕೃತನಾಗುವನಲ್ಲಾ ಎಂಬ ದೌರ್ಭಾಗ್ಯ ದುಃಖದ ಉದ್ವೇಗ ಮತ್ತೊಂದು ಕಡೆ. ಈ ಎರಡು ತಾಪಗಳಿಂದ ನೊಂದ ಮನೋಭಾವದಿಂದ ಕುಗ್ಗಿ ಹೋಗಿದ್ದರು.

ಶ್ರೀ ಬಸವಣ್ಣನವರ ಬಾಲ್ಯದ ಬ್ರಹ್ಮೋಪನಯನೋತ್ಸವದ ಮಂಗಳ ಘಟ್ಟ, ವಿಚಾರಭರಿತವಾದ ಸ್ಫೂರ್ತಿಯಿಂದ ಬೆಳಗಿ ಭಕ್ತಿಜ್ಞಾನೋದ್ರೇಕಾದಿಗ ಳಿಗೆ ಅತ್ಯಂತ ಪ್ರೇರಕಸ್ಥಾನವಾಗಿರುವುದು. ಇಲ್ಲಿ ಎದ್ದು ಕಾಣುವ ಅಂಶವೆಂದರೆ– ಸ್ಥಾವರ ಶಿವಲಿಂಗಾರಾಧಕರಾದ ಅಲಿಂಗಿ ಬ್ರಾಹ್ಮಣರ ಧರ್ಮವೂ ಇಷ್ಟಲಿಂಗಾರಾ ಧಕರಾದ ವೀರಶೈವರ ಲಿಂಗಿಧರ್ಮತತ್ವವೂ, ಈ ಎರಡೂ, ಭಗವದ್ಭಕ್ತಿ ಸಾಧನೆ ಯೆಂಬ ಘನಪೂಜಾಪರತೆಯಲ್ಲಿ ಸಂಗಮಗೊಂಡಿರುವುವೋ, ಏನೋ ಎಂಬಂತೆ ವಿಕಾಸಿಸಿ ಆಕರ್ಷಿಸುವ ತೆರದಲ್ಲಿ ಮತ್ತೂ ಕರ್ಮಕಾಂಡದ ಪ್ರಕಾಂಡವನ್ನೇ ವಿಸ್ತ ರಿಸುವ ಪೂರ್ವಮೀಮಾಂಸಾರ್ಥ ಹಾಗೂ ಭಕ್ತಿಜ್ಞಾನ ಕಾಂಡಗಳ ಅರ್ಥಗ ಳನ್ನು ಸಮೀಚೀನಗೊಳಿಸಿ ಬೋಧಿಸುವ ಉತ್ತರ ಮೀಮಾಂಸಾರ್ಥಗಳ ಸಮನ್ವ ಯದ ಉದ್ಘಾಟನ ಸುಸಂಧಿಯ ಸಮಾರಂಭದ ವೈಭವೋತ್ಸವದಂತೆ ಆಶ್ಚರ್ಯ ಕರವೂ ಮಂಗಳಮಯವೂ ಆಗಿ, ಸಭಾಮಂಟಪದಲ್ಲಿ ನೆರೆದಿದ್ದ ಪಂಡಿತ ಪಾಮರರನ್ನು ಚಕಿತಗೊಳಿಸುವಂಥ ಪ್ರಸಂಗವೇ ಆಗಿತ್ತು.

ಲಿಂಗಿ ಧರ್ಮವನ್ನು ಬೆಳಗಿಸಿ ಎತ್ತಿಹಿಡಿದು ಪ್ರತಿಪಾದಿಸಿದ ಶರಣ ಶ್ರೀ ಬಸವಣ್ಣ; ಸವಿತಾದೇವನಾದ ಶ್ರೀ ಸೂರ್ಯಮಂಡಲದ ಮಧ್ಯಾಂತವರ್ತಿಯಾಗಿ ಬೆಳಗುವ ಅಗ್ನಿಯೇ ಮುಖವಾಗುಳ್ಳ ಹಿರಣ್ಮಯನಾದ ಮಹಾರುದ್ರನೇ ಅಂದರೆ ಸಾಕ್ಷಾತ್ಪರ ಶಿವನು "ನಿಜೇಷ್ಟಲಿಂಗವಾಗಿ" ತಮ್ಮ ತನು, ಮನ, ಕರ ಪೀಠಗಳನ್ನಲಂಕರಿಸಿ ಅಗಲದ ನಿತ್ಯಾರಾಧಕ ದೈವವೆಂದು, ಸರ್ವರೂ ಬೆರಗು ಗೊಳ್ಳುವಂಥಾ ವಾಕ್ ಸುಧಾಮೃತ ರಸವನ್ನು ವರ್ಷಿಸಿ, ಶಿವಲಿಂಗಧಾರಣೆ ಇಷ್ಟಲಿಂಗಾರಾಧನೆಯೇ ಪರಮೋತ್ಕೃಷ್ಟವಾದ ಶಾಸ್ತ್ರವಿಹಿತ ಧರ್ಮವೆಂದು ಸಾರಿ ಬಂಧುವರ್ಗದವರನ್ನೂ, ತಾಯಿ ತಂದೆಗಳನ್ನೂ ಬಿಟ್ಟು ಶಾಂತಮನಸ್ಕನಾಗಿ ಆಕ್ಷಣವೇ ಮನೆಯಿಂದ ಶ್ರೀ ಗುರುಸ್ಮರಣೆಯೊಂದಿಗೆ ಹೊರಟು, ತದ್ವಿ

ಜ್ಞಾನಾರ್ಥಂ, ಕಪ್ಪಡಿ ಕ್ಷೇತ್ರಪ್ರವಿರಾಜಮಾನ ಶ್ರೀ ಸಂಗಮೇಶ್ವರ ದೇವಾಲಯ ದಲ್ಲಿ ಪರಿಶೋಭಿತರಾದ ಶ್ರೀ ಜಾತವೇದಿ ಗುರುಗಳ ಪಾದಕಮಲಗಳಲ್ಲಿ ಶರಣಾಗತನಾಗಿ ಅವರಲ್ಲಿ ವಿದ್ಯಾರ್ಜನಾಸಕ್ತಿಯಿಂದ ಅಲ್ಲೇ ನೆಲಸಿ, ಶ್ರೀ ಸದ್ಗುರುವನ್ನಾಶ್ರಯಿಸಿದನು. ಬಸವನನ್ನು ಅರಘಳಿಗೆಯೂ ಬಿಟ್ಟಿರದ ಅಕ್ಕ ನಾಗಮ್ಮನೂ ಸಹ ಶ್ರೀ ಬಸವಣ್ಣನನ್ನು ಹಿಂಬಾಲಿಸಿ, ಶ್ರೀ ಕಪ್ಪಡಿ ಕ್ಷೇತ್ರ ವನ್ನು ಸೇರಿದಳು. ಸುಮಾರು ಹದಿನೆಂಟು ವರುಷಗಳತನಕ ಶ್ರೀ ಗುರು ಸೇವೆಯನ್ನು ಅಖಂಡವಾಗಿ ಸಲ್ಲಿಸಿ, ಸಕಲ ವೇದ ವೇದಾಂತಾ ಗಮೋಪ ನಿಷದಾರ್ಥಗಳಲ್ಲಿ ಪಾರಂಗತನಾದ ಬಸವಣ್ಣನಿಗೆ ಶಿವಾಗಮಗಳ ತಿರುಳು ವೇದ್ಯವೇ ಆಗಿತ್ತು. ಅಂತಃದಬಳಿಕ, ಅರುಣೋದಯವನ್ನು ಕಂಡ ಸರಸ್ಸಿ ನಲ್ಲಿರುವ ಕಮಲಗಳು ತಮ್ಮ ಸನ್ಮಿತ್ರನಾದ ಶ್ರೀ ಸೂರ್ಯನಾರಾಯಣನು ಪೂರ್ವದಿಕ್ಕಿನಲ್ಲಿ ಉದಿಸುವನೆಂದು ಹರ್ಷಿಸಿ ಸೂರ್ಯೋದಯಕ್ಕೆ ಮುನ್ನವೇ ದಿನಮಣಿಯನ್ನು ಸ್ವಾಗತಿಸುವ ತೆರದಲ್ಲಿ ಕೋಮಲವಾದ ಕಮಲಗಳು ಅಂದ ವಾಗಿ ಅರಳಿ ವಿಕಾಸಿಸುವಂತೆ, "ಶೈವಾಗಮಾಂಬುಜ ಭಾಸ್ಕರರು" ಅಂದರೆ ಯಾವು ಜಗದ್ಗುರು ಶ್ರೀ ರೇಣುಕಾದಿ ಪಂಚಾಚಾರ್ಯರ ಪಾವನವಾದ ಮಹಿ ಮಾಮೃತವು, ಮತ್ಯಾವ ಜಗದ್ಗುರು ಸಾರ್ವಭೌಮರ ಪಾದ ಯುಗಗಳು ಕೋಟಿ ಸೂರ್ಯಪ್ರಕಾಶಮಾನವಾಗಿ ರಾರಾಜಿಸಿ ಜ್ಞಾನ ಸೂರ್ಯ ಸದೃಶವಾ ಗಿರುವವೋ ಅಂತಪ್ಪಮಹದಾಚಾರ್ಯ ವರೇಣ್ಯರ ದಿವ್ಯಾಂಘ್ರಿ ಚಿದಾದಿತ್ಯ ಪ್ರತಿಭೆಯ ಪ್ರಕಾಶೋದಯುವ ಕಂಡ ಇಪ್ಪತ್ತೆಂಟು ಶಿವಾಗಮಗಳೆಂಬ ದಿವ್ಯ ಕಮಲಗಳು ಅರಳಿ ವಿಕಾಸಿಸಿ, ಶಿವಲಿಂಗೋದ್ಭವರಾದ ಜಗದ್ಗುರು ಸಾರ್ವ ಭೌಮರ ದಿವ್ಯ ಪಾದಕಮಲಗಳ ಮಹಿಮೆಯನ್ನು ಅನಂತವಾಗಿ ಸ್ತುತಿಸಿ ಗುರುತತ್ವಾಮೃತವೆಂಬ ಸುಗಂಧವ ಬೀರಿ, ವಿರಾಜಿಸಿ ಶಾಶ್ವತ ಕೀರ್ತಿ ಸಂಪತ್ ಘಣಿಗಳಂತೆ ಪರಿಶೋಭಿಸುತ್ತಲಿರುವುವು. ಶಿವಾಗಮಜ್ಞನಾದ ಶ್ರೀ ಬಸವಣ್ಣನಿಗೆ, ಶಿವಾಗಮಗಳೆಂಬ ಕಮಲಗಳನ್ನು ಅರಳಿಸುವಂಥಾ ಸನ್‌ಮಿತ್ರರೂ, ದಿವ್ಯಜ್ಞಾನ ಮಹಿಮಾ ಸಂಪನ್ನರಾದ ಶ್ರೀ ರೇಣುಕಾದಿ ಪಂಚಾಚಾರ್ಯರ ವಿಷಯ ಪೂರ್ಣ ವೇದ್ಯವೇ ಇತ್ತು. ಮತ್ತು ಸನಾತನ

ವಾದ ವೀರಶೈವಮತ ಸ್ಥಾಪನಾಚಾರ್ಯರಾದ ಮೂಲಗುರು ಸಾರ್ವಭೌಮರಲ್ಲಿ ಅವರಿಗೆ ಭಕ್ತಿ ವಿಶ್ವಾಸವಿರಲಿಲ್ಲವೆಂದರೆ ಅದು ಸುಳ್ಳಾದೀತು. ಶಿವಾಗಮಾದಿಗಳ ಪರಿಜ್ಞಾನವಿಲ್ಲದ ಪಾಮರರ ನುಡಿಯಂತಾದೀತು. ಯಾವ ಶಿವಾಗಮ ಪ್ರೋಕ್ತವಾದ ಹಾಗೂ ಸಾಕ್ಷಾತ್ ಪರಶಿವನು, ಜಗನ್ಮಾತೆಯಾದ ಶ್ರೀ ಶಾಂಭವಿಗೂ ಷಣ್ಮುಖನಿಗೂ ಸ್ವಮುಖದಿಂದ ಯಾವ ಶ್ರೇಷ್ಠವಾದ ಲಿಂಗಿಧರ್ಮವನ್ನು ಸ್ತುತಿಸಿ ಪ್ರತಿಪಾದಿಸಿದನೋ ಅಂಥಾ ಪರಮೋತ್ಕೃಷ್ಟವಾದ ಲಿಂಗಾಂಗಿ ಧರ್ಮವನ್ನು ಜಗದಾದಿಯಲ್ಲೇ ಶಿವಾಗಮಗಳಲ್ಲಿ ಸ್ತುತ್ಯವಾದಂತೆ ಸ್ಥಾಪಿಸಿ, ಜಗದ್ವಂದ್ಯರಾದ ಭಗವತ್ಪಾದ ಜಗದ್ಗುರು ಶ್ರೀ ರೇಣುಕಾದಿ ಪಂಚಾಚಾರ್ಯರಲ್ಲಿ ಕಲ್ಯಾಣದ ಅಣ್ಣ ಬಸವಣ್ಣನಿಗೆ ಅಪಾರ ಭಕ್ತಿಶ್ರದ್ಧೆ ವಿಶ್ವಾಸಾದಿಗಳು ಸಹಜವಾಗಿಯೇ ಇತ್ತೆಂಬುದು ಸ್ಪಷ್ಟವೇ ಇರುತ್ತೆ. ಕೇವಲ ಒಬ್ಬ ಜಂಗಮನೋ ಭಕ್ತನೋ ಅಥವಾ ಶಿವಶರಣರನ್ನು ಕಂಡಮಾತ್ರಕ್ಕೆ ದಾಸನಾಗಿ (ಕಿಂಕರಭಾವದಿಂದ) ಸೇವೆ ಸಲ್ಲಿಸುತ್ತಿದ್ದ ಬಸವಣ್ಣನಿಗೆ ಪರಶಿವನ ಅಪರಾವತಾರಿಗಳೂ, ಶಿವಲಿಂಗೋದ್ಭವರಾದ, ಶಿವಪಂಚಾಕ್ಷರಿ ಮಹಾಮಂತ್ರ ಸದೃಶರಾದ ಜಗದ್ಗುರು ಶ್ರೀ ರೇಣುಕಾದಿಗಳಲ್ಲಿ ಅವರಿಗೆ ಅಪಾರ ಭಕ್ತಿಯಿತ್ತೆಂದೇ ವ್ಯಕ್ತವಾಗುವುದು.

॥ ಜೀಯಾಚ್ಛ್ರೀ ರೇಣುಕಾಚಾರ್ಯ ಶಿವಾಚಾರ್ಯ ಶಿಖಾಮಣಿಃ । ಯೋ ವೀರಶೈವ ಸಿದ್ಧಾಂತಂ ಸ್ಥಾಪಯಾಮಾಸ ಭೂತಲೇ ॥ ಭೂಮಂಡಲದಲ್ಲಿ ಆದಿಯಲ್ಲಿ ವೀರಶೈವ ಸಿದ್ಧಾಂತವನ್ನು ಭಗವತ್ಪಾದ ಜಗದ್ಗುರು ಶ್ರೀ ರೇಣುಕಾಚಾರ್ಯರು ಸ್ಥಾಪಿಸಿದರೆಂದೇ ಶಿವಾಗಮಗಳು ಮುಕ್ತಕಂಠದಿಂದ ಸಾರುತ್ತಲಿರುವುವು. ಶಿವಾಗಮೋಕ್ತಿಗಳಲ್ಲಿ ಪೂರ್ಣ ವಿಶ್ವಾಸ ಭರಿತರೂ ಸತ್ಯಪ್ರಿಯರೂ ಆಗಿದ್ದ ನಿಷ್ಠಾವಂತ ಬಸವಣ್ಣ, ಶಿವಾಗಮಾದಿಗಳಲ್ಲಿ ಅಖಂಡವಾಗಿ ಸ್ತುತ್ಯರಾದ ಶ್ರೀಮತ್ಪರಶಿವನ ಶ್ರೀಮತ್ಪಂಚಾಕ್ಷರಿ ಮಹಾಮಂತ್ರದ ಪ್ರಥಮ ಬೀಜಾಕ್ಷರವೂ, ಪೃಥ್ವಿ ತತ್ವಕ್ಕಾಧಾರವಾಗುಳ್ಳ "ನ" ಮಹಾ ಮಂತ್ರಾಕ್ಷರಮಯ ಸದ್ಯೋಜಾತ ಮುಖಸಂಭವರಾದ ಆದಿ ಶ್ರೀ ರೇಣುಕಾಚಾರ್ಯ ಗುರು ಸಾರ್ವಭೌಮರಲ್ಲಿ ಶರಣಾಗತರಾಗಿ ಗುರುಭಕ್ತಿಯಿರಲಿಲ್ಲದವರಾಗಿದ್ದರೆಂದರೆ ಅದು ಜಗನ್ಮಾನ್ಯ ಶ್ರೀ ಬಸವಣ್ಣನವರಿಗೆ ಅಪ್ರಿಯವೂ ಅನೃತವೂ ಆಗುವುದು. ಶ್ರೀ ಬಸವಣ್ಣನವರು

ತಮ್ಮ ಗುರುಕುಲವಾಸದ ಕಾಲದಲ್ಲೇ ಮೇಲ್ಕಂಡ ಮಹದಂಶಗಳನ್ನು ಹೃದಯಂಗಮವಾಗಿ ಸ್ವತಃ ಅಧ್ಯಯನಮಾಡಿ ಅರಿತಿದ್ದರು. ಅಷ್ಟೇ ಅಲ್ಲದೆ ಅವರ ಗುರುಗಳಾದ ಶ್ರೀ ಜಾತವೇದಿ ಮುನಿಗಳು ಸಹ ಬಸವಣ್ಣನಿಗೆ ಸನಾತನವಾದ ವೀರಶೈವ ಧರ್ಮದ ಮೂಲತತ್ವವನ್ನು ವಿವರಿಸಿ ಬೋಧಿಸುವಾಗ, ಈ ಮತದ ಮೂಲಾಚಾರ್ಯರ್ಯ್ಯಾರೆಂಬುದನ್ನು ಹಲವುಭಾರಿ ತಿಳಿಸಿರಬೇಕು ಅದೂ ಅಲ್ಲದೆ ಕುಶಾಗ್ರಬುದ್ಧಿ ಸಂಪನ್ನನಾದ ಶ್ರೀ ಬಸವಣ್ಣನೇ, ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ ಧರ್ಮಗಳಿಂದ ವಿರಾಜಿಸುವ, ತಮ್ಮ ಮನೋಬುದ್ಧೀಂದ್ರಿಯಂಗಳ ಒಲಿಸಿಕೊಂಡಿರುವ, ಪವಿತ್ರವಾದೀ ವೀರಶೈವಮತದ ಮೂಲಸ್ಥಾಪನಾಚಾರ್ಯರ್ಯಾರು ಎಂಬ ಪ್ರಶ್ನೆ ಅವರಲ್ಲಿ ಮೂಡಿ ತಮ್ಮ ಗುರುಗಳಲ್ಲಿ ಈ ಬಗ್ಗೆ ನಿವೇದಿಸಿ ಕೊಂಡು ಇರಲೇಬೇಕು. ಪೂರ್ವಾಪರ ವಿಚಾರಹೀನತೆಯಿಂದ ಮನಬಂದಂತೆ "ಜನ ಮರುಳೋ ಜಾತ್ರೆ ಮರುಳೋ" ಎಂಬಂತೆ ತುಡುಬುಡಿಕಿತನ ಅವರಲ್ಲಿರಲು ಅವಕಾಶವೇ ಇಲ್ಲ. ಸಾರಾಃಸಾರ ವಿಚಾರಗ್ರಾಹಿಗಳಾದ ಬಸವಣ್ಣನವರು ತಮ್ಮ ಸುದೀರ್ಘ ಹದಿನೆಂಟು ವರ್ಷಗಳ ಅಧ್ಯಯನಕಾಲದಲ್ಲಿ ಮೇಲೆ ವಿವರಿಸಿದಂತೆ ವೀರಶೈವ ಮತಸ್ಥಾಪನಾಚಾರ್ಯ ಆದಿ ಜಗದ್ಗುರು ಸಾರ್ವಭೌಮ ಭಗವತ್ಪಾದ ಶ್ರೀ ರೇಣುಕಾದಿ ಮಹಾಚಾರ್ಯರಲ್ಲಿ, ಸರಳಭಾವದ ಗುರುಭಕ್ತಾಗ್ರಣಿ ಶ್ರೀ ಬಸವಣ್ಣನವರಿಗೆ ಅಖಂಡ ಪೂಜ್ಯ ಭಕ್ತಿಭಾವ ವಿಶ್ವಾಸಗಳು ಮನವರಿಕೆಯಾಗಿ ಇದ್ದಿರಬೇಕು. ಇದನ್ನು ಅಲ್ಲವೆಂದು ಮರೆಮಾಚಲು ಯಾರಿಂದಲೂ ಶಕ್ಯವಿಲ್ಲವಷ್ಟೇ ? ಯಾಕೆಂದರೆ, ಶ್ರೀ ಬಸವಣ್ಣನವರ ಆದಿಗುರುಗಳಾದ ಶ್ರೀ ಜಾತವೇದಿ ಮುನಿಗಳು ಸನಾತನವಾದ ಜಗದ್ಗುರು ಶ್ರೀಮದ್ರಂಭಾಪುರಿ ವೀರ ಸಿಂಹಾಸನ ಮಹಾಪೀಠಾನುವರ್ತಿ ಉಪಾಚಾರ್ಯರೇ ಆಗಿದ್ದರು. ಇದರಿಂದಾಗಿ ಮಹಾನುಭಾವರಾದ ಕಲ್ಯಾಣದ ಜಗಜ್ಯೋತಿ ಅಣ್ಣ ಶ್ರೀ ಬಸವಣ್ಣ ಶ್ರೀ ಮದ್ರಂಭಾಪುರಿ ಜಗದ್ಗುರು ಸಾರ್ವಭೌಮ ವೀರಸಿಂಹಾಸನದ ಶ್ವೇತಛತ್ರಿಯ ನೆಳಲಿನಲ್ಲಿ ನೆಳಲಾಗಿ ವರ್ತಿಸಿ ಮಹೋನ್ನತ ಮಹಾಪುರುಷನೆಂದು ಜಗದ್ವಿಖ್ಯಾತರಾಗಿರುವರು.

ಆದಿ ಜಗದ್ಗುರು ಶ್ರೀ ರೇಣುಕನ ಮಹಿಮೆ ॥ ಮಹಿಮ್ನಃ ಪಾರಂತೇ ಪರಮವಿದುಷೋ ಯದ್ಯ ಸದೃಶೀ । ಸ್ತುತಿಬ್ರಹ್ಮಾದೀನಾಮಪಿ ತದವಸನ್ನಾ

ಸ್ತ್ವಯಿಗಿರಃ ॥ ಅಥಾವಾಚ್ಯಃ ಸರ್ವಃ ಸ್ವಮತಿ ಪರಿಣಾಮಾವಧಿ, ಗೃಣನ್ । ಮಮಾಪ್ಯೇಷ ಸ್ತೋತ್ರೇ ಹರ ನಿರಪವಾದಃ ಪರಿಕರಃ ॥

"ಗುರುಸಾಕ್ಷಾತ್ ಪರಬ್ರಹ್ಮ" ಎಂಬ ಶಾಸ್ತ್ರೋಕ್ತಿಯಂತೆ ಶ್ರೀ ಸದ್ಗುರು ದೇವನೇ ಸಾಕ್ಷಾತ್ಪರಶಿವನಾಗಿ ಬೆಳಗುವ ಪರಂಜ್ಯೋತಿಯಾಗಿರುವನು. ಅವನ ಮಹಿಮೆಯನ್ನು, ಸಂಯಮಿಯಾದ ಸ್ಥಿತ ಪ್ರಜ್ಞನಿಂದಲೂ ಹಾಗೂ ಶಿವಾನು ಭವಿಯಾದ ಶಿವಯೋಗೀಶ್ವರನಿಂದಲೂ ಪೂರ್ಣ ಸ್ತುತಿಸಲು ಅಸದಳವೆಂದಬಳಿಕ ಹರಿ ಬ್ರಹ್ಮಾದಿಗಳ ಸ್ತುತಿಗಳೂ ಸಹ ಪರಮಾತ್ಮನ ಮಹಿಮೆಗಳನ್ನು ಸ್ತುತಿಸು ವುದರಲ್ಲಿ ಅಪೂರ್ಣವಾಗಿಯೇ ನಿಲ್ಲುವುವು, ಮತ್ತೂ ಚತುರ್ವೇದಗಳಿಗೂ ನಿಲುಕದ ಸದ್ಗುರು ಶ್ರೀ ದಕ್ಷಿಣಾಮೂರ್ತಿಯ ಹಾಗೂ ಅವನಂಶ ಸಂಭವರೇ ಆದ ಜಗದ್ಗುರು ಶ್ರೀ ರೇಣುಕಾಚಾರ್ಯರ ಪರಿಪೂರ್ಣ ಮಹಿಮೆಯನ್ನು ವರ್ಣಿಸಲು ಯಾರಿಂದ ಸಾಧ್ಯವಾದೀತು. ಒಮ್ಮೆ ವಿದ್ಯಾಂಬೆಯಾದ ಶ್ರೀ ಶಾರದಾಂಬೆಯು ಪರಶಿವನ ಅನಂತಾನಂತ ಮಹಿಮಾತಿಶಯಗಳನ್ನು ಪೂರ್ಣ ವರ್ಣಿಸಿ ಧನ್ಯಳಾಗ ಬೇಕೆಂದು ಸಂಕಲ್ಪಮಾಡಿದಳು. ಇದಕ್ಕಾಗಿ ಶುಭ ಮುಹೂರ್ತದಲ್ಲಿ ಶಿವನ ಮಹಿಮೆಯನ್ನು ಬರೆಯಲು ಸಂಕಲ್ಪಿಸಿ ತಾನೇ ಪ್ರಾರಂಭಿಸಿದಳು ಶಿವಮಹಿಮ್ನಾ ಸ್ತೋತ್ರದಲ್ಲಿ ಪುಷ್ಪದಂತನು ಇದನ್ನು ಸುಂದರವಾಗಿ ವಿವರಿಸುತ್ತಾ—

॥ ಅಸಿತಗಿರಿಸಮಂ ಸ್ಯಾತ್‌ಕಜ್ಜಲಂ ಸಿಂಧುಪಾತ್ರಂ ।
ಸುರತರುವರ ಶಾಖಾ ಲೇಖನೀ ಪತ್ರಮುರ್ವೀ ॥
ಲಿಖತಿಯದಿ ಗೃಹೀತ್ವಾ ಶಾರದಾ ಸರ್ವಕಾಲಂ ।
ತದಪಿತವ ಗುಣಾನಾ ಮೀಶಪಾರಂನಯಾತಿ ॥

ಅಂದರೆ "ಓ ಶಿವನೆ! ನಿನ್ನ ಅಗಣಿತಗುಣಗಾನವನ್ನು ಹಾಗು ಅಪಾರ ಮಹಿಮೆಯನ್ನೂ ಪೂರ್ಣವರ್ಣಿಸಿ ಸ್ತುತಿಸಿ ಬರೆಯುವ ಪರಮಾಸಕ್ತಿಯಿಂದ ಕೂಡಿ ಒಮ್ಮೆ ವಿದ್ಯಾಂಬೆಯಾದ ಶ್ರೀ ಶಾರದಾಂಬೆಯು ಸೀತಾಚಲದಂಥಾ ಘನ ಹಿಮಾಲಯ ಪರ್ವತವನ್ನು ದೌತಿ (ಇಂಕು) ಯನ್ನಾಗಿಸಿ, ಸೀಮಾತೀತವಾದ ಸಮುದ್ರವನ್ನು ದೌತಿ ಕುಡಿಕೆ (ಇಂಕಿ ಬುಡ್ಡಿ) ಯಾಗಿಸಿಕ್ಕೊಂಡು, ದೇವೇಂ ದ್ರನ ದೇವಲೋಕದಲ್ಲಿ ವಿರಾಜಿಸುವ ಕಲ್ಪವೃಕ್ಷದ ಕೊಂಬೆಯ ಕಡ್ಡಿಯೊಂದನ್ನು

ಸುಂದರವಾದ ಲೇಖನಿಕೆಯಾಗಿಸಿ ಕೈಯ್ಯೋಳ್ ಪಿಡಿದು, ವಿಶಾಲವಾದ ಭೂಮಿ ಯನ್ನು ದೊಡ್ಡ ಕಾಗದದ ಹಾಳೆಯಾಗಿಮಾಡಿ ಅದರ ಮೇಲೆ ಅನಂತಕಾಲದ ವರವಿಗೂ ಅವಿಚ್ಛಿನ್ನವಾಗಿ ವಿದ್ಯೆಗೆ ಅಧಿಷ್ಠಾನ ದೇವತೆಯಾದ ಶ್ರೀ ಸರಸ್ವತಿಯು ತಾನೇ ಸಾಕ್ಷಾತ್ತಾಗಿ ಹರ್ಷಚಿತ್ತದಿಂದ ವಿಜೃಂಭಿತಳಾಗಿ ದಃಸೂಘನನಾದ ಪರ ಮಾತ್ಮನ ಧ್ಯಾನಿಸಿ ನೆನೆನೆನೆದು ॥ ಔದಾರ್ಯಾ ದಘಶೋಷಣಾತ್ । ಅಗಣಿತ ಶ್ರೇಯಃ ಪದಪ್ರಾಪಣಾತ್ । ಸ್ಯೇವ್ಯಃ ಶ್ರೀಯಃ ಪತಿರೇಖ ಪೇವಜಗತಾಂ... ॥ ಅಂದರೆ ಹರಿಬ್ರಹ್ಮ ಹಾಗೂ ಹರನೂ ತಾನೊಬ್ಬನೇ ಆಗಿರುವ ಯಾವ ಜಗನ್ನಿ ಯಾಮಕನಾದ ಪರಮಾತ್ಮನ ದಿವ್ಯ ಅಡಿದಾವರೆಗಳು ಯಾವ ಅನನ್ಯ ಭಕಿ ಭಾವಗಳಿಂದ ಸೇವಿಸಿ, ಆ ಪರಮಾತ್ಮನ ದಯ ಔದಾರ್ಯಾದಿ ವಾತ್ಸಲ್ಯಾಮೃತ ದಿವ್ಯಕೃಪೆಗೆ ಪಾತ್ರರಾಗಿ ನರರು ತಮ್ಮ ಸಮಸ್ತ ಪೂರ್ವಕೃತ ಪಾಪರಾಶಿಗಳನ್ನು ಸುಟ್ಟು ಸಂಪೂರ್ಣ ಹೋಗಲಾಡಿಸುವುದರಲ್ಲಿ ಯಾವನ ಪಾದ ಕಮಲಗಳು ಸಮಗ್ರಶಕ್ತಿಯುತವಾಗಿರುವವೋ, ಮತ್ಯಾವ ಮಹಾಮಹಿಮಾನ್ವಿತನೂ ಮಹಾದೇವ ಸದೃಶನೂ ಆದ ರೇಣುಕ ಜಗದ್ಗುರು ದೇವನ ॥ ಅರುಣಾಂಬುಜ ಸೋದರ ಪಾದಯುಗ ಸ್ಮರಣಂ ಯಸ್ಯಾಶರಣಂ ಯನ್ನಃ ॥ ಅಂದರೆ, ಅತ್ಯಂತ ರಮಣೀಯಕರವಾದ ಯಾವ ತಟಾಕದಲ್ಲಿ ವಿರಾಜಿಸುವ ಕೋಮಲತರ ಕಮಲ ರಾಜಿಗಳು ಪೂರ್ವದಿಕ್ಕಿನಲ್ಲಿ ಪ್ರಭಾತ ಕಾಲದಲ್ಲಿ ಹೊರಹೊಮ್ಮುತ್ತಿರುವ ಯಾವ ನೇತ್ರಾನಂದಕರವಾದ ಹೊಂಬಣ್ಣದ ಅರುಣೋದಯವನ್ನು ಕಂಡು, ಕಮಲಾ ಮಿತ್ರನಾದ ಬಾಲಸೂರ್ಯೋದಯವ ನಿರೀಕ್ಷಿಸಿ ವಿಲಾಸಗೊಂಡು ವಿಕಸಿತಭಾವದಿಂದ ವಿರಾಜಿಸುವವೋ ಎಂಬಂತೆ ಸೌಂದರ್ಯಭರಿತ ಕಮಲಗಳ ಕೋಮಲತೆಯನ್ನು ತಿರಸ್ಕರಿಸುವಂಥಾ ಸಕಲಾಭೀಷ್ಟಪ್ರದವೂ ಮೋಕ್ಷಪ್ರದವೂ ಆಗಿ ಕಂಗೊಳಿಸುವ ಯಾವ ಗುರುವರೇಣ್ಯನ ಕೋಮಲತರ ಪಾದ ಕಮಲಗಳು ॥ ಸಮಸ್ತ ಸುರೌಘನಂದಿತ ಪದಯುಗನ ರೇಣುಕ ಗಣೇಶನ ॥ ಎಂಬಂತೆ, ಮೂವತ್ತುಮೂರು ಕೋಟಿ ದೇವಾದಿ ದೇವತೆಗಳಾದಿಯಾಗಿ ಸರ್ವರೂ ಯಾವ ಪರಶಿವ ಸದೃಶನಾದ ಜಗದ್ಗುರು ರೇಣುಕನ ದಿವ್ಯ ಪಾದಕಮಲಗಳ ಮಹಿಮೆ ಯನ್ನು ಇಲ್ಲಿ ರೇಣುಕನೆಂದರೆ ಹರನೇ ಗುರುವಾದುದರಿಂದ ಶಿವನ ಪಾದಕಮಲ

ಗಳ ಮಹಿಮೆಯನ್ನು ಸ್ತುತಿಸಿ, ವಂದಿಸಿ ಮುಕ್ತರಾಗುತ್ತಿರುವರೋ ಅಂಥಾ ಮಹಿಮಾನ್ವಿತವಾದ ಪರಮೇಶ್ವರನ ಪಾದಕಮಲಗಳ ದಿವ್ಯಮಹತ್ವವನ್ನು ಶ್ರೀ ಶಾರದಾಂಬೆಯು ಬರೆಯಲು ಉಪಕ್ರಮಿಸಿದಳು.

ಶ್ರೀ ರಾಮ ತಾರಕಮಂತ್ರ ಕೋಟಿಯನ್ನೂ, ಶಿವಪಂಚಾಕ್ಷರೀ ಮಹಾ ಮಂತ್ರ ಕೋಟಿಯನ್ನೂ ಭಕ್ತರು ಬರೆಯುವ ಹಾಗೆ, ॥ ವದನ ವಿದಿತಬಿಂಬಾ ಚಿತ್ಸ್ವರೂಪಾವಲಂಬಾ । ನಮತ ಮುರಕದಂಬಾ ಶ್ರೃಂಗತೋದ್ಯನ್ನಿತಂಬಾ । ವಿತರತು ಜಗದಾಂಬಾ ಮಂಗಳಂ ಶಾರದಾಂಬಾ ॥ ವಾಣಿ ವೀಣಾಪಾಣಿ ಪನ್ನಗ । ವೇಣಿ ನತಗೀರ್ವಾಣಿ ಸುಗುಣ । ಶ್ರೇಣಿ ಬೊಮ್ಮನರಾಣಿ ಮಂಗಳ ಸರಣಿ ಕಲ್ಯಾಣಿ ॥ ಜಾಣತನದೊಳಗಾಣ ಮಾದೊಡ । ಮೂಣಯವು ಬಳಿ ಸಾರದಂತಿರ । ಲೇಣಲೋಚನೆ ನಲಿದು ನರ್ತಿಸು ನನ್ನ ನಾಲಗೆಯೋಳ್ ॥ ಇಂತಪ್ಪ ಮಹಿಮಾನ್ವಿತಳಾದ ಶ್ರೀ ವಿದ್ಯಾಂಬೆಯು ದೇವಾದಿ ದೇವನಾದ ಮಹಾದೇವನ ಅನಂತ ಅಪಾರ ಅಗೋಚರ ॥ ಅಕ್ಷರಂ ಪರಮಂ ಬ್ರಹ್ಮ ॥ ಎಂದು ಸ್ತುತ್ಯನಾದ ಶಿವನ ಮಹಿಮಾವಳಿಗಳನ್ನು ದೇವಗಂಗಾ ಪ್ರವಾಹದಂತೆ ಕಾಯಾ ವಾಚಾ ಮನಸಾ ಸ್ಮರಿಸಿ ಪಠಿಸುತ್ತಾ ಬರೆದು ಬರೆದು ಅನಂತಕೋಟಿ ಕಾಲದವರವಿಗೂ ಭೂಮಿ (ಉರ್ವೀ ಪತ್ರಂ) ಎಂಬ ಕಾಗದದ ಹಾಳೆ ಪೂರ್ತಿ ಮುಗಿಯುವವರವಿಗೂ ಬರೆದು ಅಲ್ಲಿಗೂ ಕೊನೆಗಾಣದ ಶಿವನ ಘನ ಮಹಿಮೆ, ಎಲ್ಲೆಯಿಲ್ಲದ ಕ್ಷೀರಸಾಗರದಂತೆ ಮಹೋನ್ನತವಾಗಿ ವಿರಾಜಿಸುತ್ತಲಿರುವುದನ್ನು ಶಾರದಾಂಬೆಯು ಮನಗಂಡು ಪರಮಾತ್ಮನ ಮಹಿಮೆ ॥ ಗಗನಂ ಗಗನಾ ಕಾರಂ ಸಾಗರಃ ಸಾಗರೋಪಮಃ ॥ ಎಂಬಂತೆ ವಿಸ್ತರಿಸಿ ವ್ಯಾಪಕವಾಗಿ ಇತೋಪ್ಯತಿಶಯವಾಗಿರುವುವನ್ನು ಕಂಡು ಮುಗ್ಧಳಾದ ಜಗದ್ವಾಣಿಮಣಿಯು ತಾನು ಇಲ್ಲಿವರವಿಗೆ ಶಿವನ ಪ್ರಭಾವವನ್ನು ಬರೆದಿರುವುದನ್ನು ತುಲನಾತ್ಮಕ ದೃಷ್ಟಿಯಿಂದ ಪರಿಷ್ಕರಿಸಿ, ನೆಲದಿಂದ ಹಿಡಿ ಮಣ್ಣನ್ನು ಎತ್ತಿ, ಬರದಿರುವ ಶಿವನ ಮಹಿಮೆಯ ಭಾಗ ತನ್ನ ಹಿಡಿ ಮಣ್ಣಿನ ಪ್ರಮಾಣದಷ್ಟೇ ಮುಗಿದಿದ್ದು, ಧರಣಿಯಲ್ಲಿನ ಉಳಿದ ಮಣ್ಣಿನ ಅಪಾರ ಪ್ರಮಾಣದಷ್ಟು ಬರೆಯಬೇಕಾದ ಭಾಗ ಇನ್ನೂ ಸಾಗರದಂತೆ ಇರುವುದನ್ನು ಜ್ಞಾನ ದೃಷ್ಟಿಯಿಂದ ಅರಿತ

ಸರಸ್ವತಿ ದೇವಿಯು ಚಕಿತ ಮಾನಸಳಾಗಿ ಈಶನ ಮಹಿಮೆಗೆ ಪಾರವೇ ಇಲ್ಲವೆಂದು ದೃಢ ಭಕ್ತಿಭಾವದಿಂದ ತಟಸ್ಥಳಾಗಿ ಬರೆದಿದ್ದಷ್ಟನ್ನು ಶಿವನಂಘ್ರಿಕಮಲಗಳಲ್ಲಿ ಅರ್ಪಿಸಿ ತೃಪ್ತಳಾಗಿ ಪರಿಪೂರ್ಣ ಭಾವೈಕ್ಯತೆಯಿಂದ ಶರಣಾಗತಳಾಗಿರುವಳು.

## IX

॥ ಯಸ್ಯದೇವೇ ಪರಾಭಕ್ತಿ । ರ್ಯಥಾದೇವೇ ತಥಾಗುರೌ ॥ ಅಂದರೆ, ಶಿವನೆಂತೋ ಅಂತೇ ಗುರುದೇವನೂ ಮಹಿಮಾ ಸಂಪನ್ನನೇ ಆಗಿರುವನೆಂಬ ಸತ್ಯಾಂಶಕ್ಕೆ ಶ್ರೀ ಭಕ್ತಿ ಭಂಡಾರಿ ಬಸವಣ್ಣನು ತಲೆಬಾಗಿ ಬೆಳಗಿದ ಮಹಾಪುರುಷನಾಗಿದ್ದನು. ॥ ಗುರೂಣಾಂ ಗುರುಃ ॥ ಎಂಬ ಗುರುತರವಾದ ಬಿರುದಾಂಕಿತನಾದ ಜಗದ್ಗುರು ಶ್ರೀ ರೇಣುಕಾಚಾರ್ಯನ ಅನಂತ ಮಹಿಮೆಗಳಲ್ಲಿ ಮಸ್ತಕಮಣಿಯಂತೆ ವಿರಾಜಿಸಿದ ಒಂದಂಶ ಸದಾ ಸಂಸ್ಮರಣೀಯವಾದುದಾಗಿದೆ. ಲಂಕಾಧಿಪತಿಯಾದ ದಶಕಂಠ ರಾವಣೇಶ್ವರನು ತನ್ನ ಲಂಕಾ ಪಟ್ಟಣದಲ್ಲಿ ನವಕೋಟಿ ಶಿವಲಿಂಗಗಳನ್ನು ಸ್ಥಾಪಿಸುವ ಶುಭಕರವಾದ ಸತ್ಯ ಸಂಕಲ್ಪ ಮಾಡಿ, ತನ್ನ ಜೀವಿತ ಕಾಲದಲ್ಲಿ ಭಕ್ತಿ ವಿಶೇಷದಿಂದ ಆರುಕೋಟಿ ಶಿವಲಿಂಗಗಳನ್ನು ಸ್ಥಾಪಿಸಿ ಶಿವಭಕ್ತಾಗ್ರೇಸರನಾಗಿ, ಶ್ರೀ ರಾಮನ ಬಾಣಕ್ಕೆ ಬಲಿಯಾಗಿದ್ದನು. ರಾವಣೇಶ್ವರನು ತನ್ನ ಪ್ರಾಣೋತ್ಕ್ರಮಣ ಕಾಲದಲ್ಲಿ ತನಗೆ ಸಮೀಪದಲ್ಲೂ ಶ್ರೀ ರಾಮನ ಪಕ್ಕದಲ್ಲಿ ನಿಂತಿದ್ದ ತಮ್ಮನಾದ ವಿಭೀಷಣನನ್ನು ನೋಡಿ, ಮುಂದೆ ಈ ಸಹೋದರ ಧರ್ಮಜ್ಞನಾದ ವಿಭೀಷಣನೇ ಲಂಕಾಧಿಪತಿಯಾಗುವನೆಂದು ನಿಶ್ಚಯಿಸಿ, "ತಮ್ಮಾ! ವಿಭೀಷಣಾ !! ಒಡಹುಟ್ಟಿದಾತನೆ !!! ನನ್ನ ಏಕೈಕ ಸಂಕಲ್ಪವಾಗಿದ್ದ ನವಕೋಟಿ ಶಿವಲಿಂಗಗಳನ್ನು ನನ್ನೀ ಲಂಕಾ ರಾಜಧಾನಿಯಲ್ಲಿ ಸ್ಥಾಪಿಸಬೇಕೆಂಬ ಮಹೋನ್ನತವಾದ ಸಂಕಲ್ಪದಿಂದ ಆರು ಕೋಟಿ ಶಿವಲಿಂಗಗಳನ್ನು ಈಶಾನುಗ್ರಹದಿಂದ ಸ್ಥಾಪಿಸಿರುವೆನು. ಉಳಿದ ಮೂರು ಕೋಟಿ ಶಿವಲಿಂಗಗಳನ್ನು ತಮ್ಮನಾದ ನೀನು ಲಂಕೆಯಲ್ಲಿ ಸ್ಥಾಪಿಸಿ

ನನ್ನ ಅಭೀಷ್ಟವನ್ನು ಪೂರ್ತಿಮಾಡೆಂದು ತಿಳಿಸಿ" ಅಸುವ (ಪ್ರಾಣವ) ನೀಗಿ ಮೋಕ್ಷಗಾಮಿಯಾದನು. ಇತ್ತ ಶ್ರೀ ರಾಮಾನುಗ್ರಹದಂತೆ, ಶ್ರೀ ಲಕ್ಷ್ಮಣ ಸ್ವಾಮಿಯಿಂದ ಲಂಕಾಭಿಷಿಕ್ತನಾಗಿ ಧರ್ಮಾತ್ಮನೂ ಸತ್ಯಸಂಧನೂ ಆದ ಶ್ರೀ ವಿಭೀಷಣನು ಪರಮವೈಷ್ಣವ ಭಾಗವತ ಶಿರೋಮಣಿಯಾದ್ದರಿಂದ, ತನ್ನಣ್ಣನ ಸಂಕಲ್ಪದಂತೆ (ದಶಕಂಠ ರಾವಣೇಶ್ವರನ) ಮೂರು ಕೋಟಿ ಶಿವಲಿಂಗಗಳನ್ನು ಲಂಕೆಯಲ್ಲಿ ಸ್ಥಾಪಿಸುವ ಘನ ಅಭೀಷ್ಟವನ್ನು ನೆರವೇರಿಸುವ ಶಕ್ತಿ ತನ್ನಲ್ಲಿಲ್ಲದುದಕ್ಕೆ ಬಹಳ ಮರುಗುತ್ತಲಿದ್ದನು. ಕಾರಣ ತನ್ನಣ್ಣನಂತೆ ತನ್ನಲ್ಲಿ ಗಾಢವಾದ ಶಿವಭಕ್ತಿಯಿಲ್ಲದ್ದರಿಂದ ಜ್ಯೇಷ್ಠ ಭ್ರಾತೃವಿನ ಅವಸಾನ ಕಾಲದಲ್ಲಿ ಅಣ್ಣನ ಮುಖದಿಂದ ಹೊರಬಿದ್ದ ಇಚ್ಛೆಯನ್ನು ಯಾವ ವಿಧದಲ್ಲಿ ಈಡೇರಿಸಬೇಕೆಂಬುದನ್ನು ಅರಿಯದವನಾಗಿದ್ದನು. ಸುಯೋಗದ ಪರಿಪಕ್ವಸ್ಥಿತಿ ಕೈಗೂಡಿದರೆ ಎಲ್ಲಾ ಅಭೀಷ್ಟಗಳೂ ತಾವಾಗಿಯೇ ನೆನೆದಾಕ್ಷಣದಿ ನೆರವೇರುವುವೆಂಬ ಆಯ್ಯೋಕ್ತಿ ನಿಜವೇ ಹೌದು. ಶ್ರೀ ವಿಭೀಷಣನ ಅಂತರಂಗದಲ್ಲಿ ಈ ಚಿಂತೆ ಹೆಚ್ಚು ಹೆಚ್ಚಾಗಿ ತಲೆದೋರಿದಂತೆ, ಈಶಾನುಗ್ರಹವು ಕೈಗೂಡಿತೋ ಏನೋ ಎಂಬಂತೆ, ಬ್ರಾಹ್ಮೀ ಮುಹೂರ್ತದಲ್ಲಿ ಒಂದು ದಿನ ಶಿವತೇಜಸ್ ಸಂಪನ್ನರಾದ ಭಗವತ್ಪಾದ ಜಗದ್ಗುರು ಶ್ರೀ ರೇಣುಕಾಚಾರ್ಯರು ಆಕಾಶಮಾರ್ಗವಾಗಿ ಲಂಕಾ ಪಟ್ಟಣವನ್ನು ಯೋಗಶಕ್ತಿಯಿಂದ ಹಾದುಹೋಗುತ್ತಿರುವ ದಿವ್ಯದರ್ಶನವನ್ನು ಕಣ್ಣಾರೆ ಕಂಡ, ಧೀಮಂತನೂ ಧರ್ಮಜ್ಞನೂ ಆದ ಶ್ರೀ ವಿಭೀಷಣ ಚಕ್ರವರ್ತಿ, ಇವರು ಸಾಕ್ಷಾತ್ ಪರಶಿವ ಸದೃಶರೇ ಆಗಿರುವ ಶ್ರೀ ರೇಣುಕ ಗುರುಸಾರ್ವಭೌಮರೆಂದು ತನ್ನ ದಿವ್ಯಜ್ಞಾನದಿಂದರಿತು ಭಕ್ತಿಪೂರ್ವಕ ಅವರನ್ನು ಪ್ರಾರ್ಥಿಸಲಾಗಿ, ಲಂಕಾಧಿಪತಿಯ ಪ್ರಾರ್ಥನಾನುಸಾರ ಶ್ರೀಮಜ್ಜಗದ್ಗುರು ರೇಣುಕ ಸಾರ್ವಭೌಮನು ಅಂತರಿಕ್ಷದಿಂದ ಕೆಳಗಿಳಿದು ವಿಭೀಷಣನ ಆತಿಥ್ಯವನ್ನು ಸ್ವೀಕರಿಸಿ ಸಂಪ್ರೀತನಾಗಿ ಅವನ ಪ್ರಾರ್ಥನೆಯಂತೆ ಪ್ರಭಾವಾನ್ವಿತವಾದ ತಮ್ಮ ದಿವ್ಯ ಸಂಕಲ್ಪ ಮಾತ್ರದಿಂದ ಕ್ಷಣಾರ್ಧದಲ್ಲಿ ಮೂರು ಕೋಟಿ ಶಿವಲಿಂಗಗಳನ್ನು ಸೃಜಿಸಿ, ಒಂದೊಂದು ಶಿವಲಿಂಗದೆದುರಲ್ಲಿ ತಮ್ಮ ಇಚ್ಛಾಶಕ್ತಿ ಪ್ರಭಾವದಿಂದ ಒಬ್ಬೊಬ್ಬ ರೇಣುಕನಾಗಿ ಮಂಡಿಸಿ ರುದ್ರಾಭಿಷೇಕ ಪೂರ್ವಕ ಅಭಿಷೇಕಪ್ರಿಯನಾದ ಶಂಭುವನ್ನು ಸೇವಿಸಿ,

ವಿಭೀಷಣನ ಅಭೀಷ್ಟವನ್ನು ಪೂರ್ತಿಗೊಳಿಸಿ, ದಶಕಂಠ ರಾವಣೇಶ್ವರನ ಮನೋರಥವು ಈಡೇರಿಸಿದ ಅಂಶ ಅವರ ಚರಿತ್ರೆಯಿಂದ ಸುಪ್ರಸಿದ್ಧವೇಯಿರುತ್ತೆ. ಭಗವತ್ಪಾದ ಶ್ರೀ ರೇಣುಕಾಚಾರ್ಯರ ಮಹಿಮೆಯನ್ನು ಸತ್ಯಪ್ರಿಯರೂ ಶಿವಾಗಮವೇತ್ತರಾದ ಶ್ರೀ ಬಸವಣ್ಣನವರು ಅರಿತಿದ್ದರು ಮತ್ತೂ ಅವರ ಗುರುಗಳ ಮುಖದಿಂದಲೂ ಶ್ರವಣಮಾಡಿದ್ದರು. ಸನಾತನವಾದ ವೀರಶೈವ ಧರ್ಮದಲ್ಲಿ ಶಿವಾಗಮಾದಿಗಳಲ್ಲಿ ಪ್ರೋಕ್ತವಾದಂತೆ "ಗುರು ಲಿಂಗ ಜಂಗಮ" ಈ ಮೂರು ಬೇರೆ ಬೇರೆ ಎನಿಸದ ಅಭೇದ ತತ್ವವಾಗಿ ವಿರಾಜಿಸುತ್ತಿರುವದು ಹೃತ್ಪೂರಿತವಾದ ಅದ್ವಿತೀಯ ಅಂಶವಾಗಿದೆ. ಸ್ವಯಂಭುವಾದ ಶಿವ ತತ್ವ ಒಂದರಲ್ಲೇ ಕವಲೊಡೆದ ಮೂರು ಮಹದಂಶಗಳು ಲೋಕ ಕಲ್ಯಾಣಾರ್ಥ "ಗುರು – ಲಿಂಗ – ಜಂಗಮ" ಎಂಬ ಶಬ್ಧತ್ರಯಗಳಿಂದ ಕೂಡಿ ಪರಿಪೂರ್ಣ ಸ್ಥಿತಿಯಲ್ಲಿ "ಗುರುಜಂಗಮ" ಅಂಶಗಳು "ಶಿವಲಿಂಗ ತತ್ವದಲ್ಲಿ" ವಿಲೀನಗೊಂಡು ವಿರಾಜಿಸುವವು.

ಈ ಅಂಶವನ್ನು ಶೃತಿದೇವಿಯು ವಿಸ್ತರಿಸುತ್ತಾ—

॥ ಏಕ ಏವ ಶಿವ ಸಾಕ್ಷಾತ್ ಸರ್ವಾನುಗ್ರಹಕಾರಕಃ ।
ಗುರು ಜಂಗಮ ಲಿಂಗಾತ್ಮಾ ವರ್ತತೇ ಭುಕ್ತಿ ಮುಕ್ತಿದಃ ॥
ಯಥಾ ಗುರೌಯಥಾ ಲಿಂಗೇ ಭಕ್ತಿಮಾನ್ ಪರಿವರ್ತತೇ ।
ಜಂಗಮೇ ಚ ತಥಾ ನಿತ್ಯಂ ಭಕ್ತಿಂ ಕುರ್ಯಾದ್ವಿಚಕ್ಷಣಃ ॥

ಎಂಬಂತೆ ಅದ್ವಿತೀಯನೂ ನಿರವಯವನೂ ಅಪ್ರಮೇಯನೂ ಆದ ಪರಂಜ್ಯೋತಿ ಪರಶಿವನು ಅಖಿಲ ಲೋಕ ಕಲ್ಯಾಣಾರ್ಥ ತನ್ನಿಚ್ಛೆಯಿಂದ ಸಾಕ್ಷಾತ್ ತಾನೇ "ಗುರು ಲಿಂಗ ಜಂಗಮ"ನಾಗಿ ಆವಿರ್ಭವಿಸಿ ಲೋಕದಲ್ಲಿ ಮೂರು ಪ್ರಕಾರಗಳಿಂದಲೂ ಭಕ್ತ ಕೋಟಿಗಳ ಮಧ್ಯೆ ಲೀಲಾ ಮಾನುಷ ದಿವ್ಯ ವಿಗ್ರಹಧಾರಿಯಾಗಿ ಸಂಚರಿಸಿ, ಅಲ್ಲಲ್ಲಿನ ಆನಂತ ಭಕ್ತ ಕೋಟಿಗೆ ದರ್ಶನ ಕೃಪಾಶೀರ್ವಾದ ತೀರ್ಥ ಪ್ರಸಾದ ಹಾಗೂ ತತ್ವ ಬೋಧೆಗಳಿಂದ ಶ್ರೋತೃಗಳ ಮತ್ತೂ ಜಿಜ್ಞಾಸುಗಳನ್ನು ಅವರವರ ಸಂಸ್ಕಾರ ಮತ್ತು ಅಧಿಕಾರ ಭೇದಕ್ಕನು ಗುಣವಾಗಿ ಕಟಾಕ್ಷಿಸಿ; ಲಿಂಗಾಗಿ ಧರ್ಮವಾದ ಇಷ್ಟಲಿಂಗ ಧಾರಣೆ, ಆರಾಧನೆ,

ಮೂಲಮಂತ್ರ ಸಹಿತ ಶಿವ ಪಂಚಾಕ್ಷರಿ ಮಹಾ ಮಂತ್ರ ಜಪಾನುಸಂಧಾನ ಕ್ರಮ, ಪಂಚಾಚಾರ, ಅಷ್ಟಾವರಣ, ಷಟ್‌ಸ್ಥಲ, ಶಿವಧ್ಯಾನ, ಇವೇ ಮೊದಲಾದ ವೀರಶೈವಮತ ಧರ್ಮ ಸ್ಥಾಪನಾ, ಹಾಗೂ ಅಖಂಡ ವಿಶ್ವದ ಮಾನವ ಕೋಟಿಗಳಲ್ಲಿ ಧರ್ಮ ಪುನರೋತ್ಥಾನ ಜಾಗೃತಿ ಕಾರ್ಯಗಳನ್ನು ಸ್ವಚ್ಛಂದವಾಗಿ ಗುರುವು ಮಾಡುವನೆಂದು ಶಿವಾಗಮಗಳು ಮುಕ್ತಕಂಠದಿಂದ ಸಾರುತ್ತಿರುವವು. ಪರಶಿವನು ॥ ಏಕಮೂರ್ತಿ ಸ್ತ್ರಯೋಭಾಗಂ । ಗುರುರ್ಲಿಂಗಂತು ಜಂಗಮಃ ॥ ತಾನೇ, ಗಂಗೆಯು ಮೂರಾಗಿಕವಲೊಡೆದು ಗಂಗಾ, ಯಮುನಾ, ಸರಸ್ವತಿ ನದಿಗಳೆಂದು ನಾಮರೂಪಗಳನ್ನು ಪಡೆದಂತೆ ಗುರು, ಲಿಂಗ, ಜಂಗಮ ಎಂಬ ಮೂರು ಪ್ರಕಾರದಿಂದ ವಿರಾಜಿತನಾದನು. ಅಂದ ಬಳಿಕ ಶಿವಲಿಂಗದಿಂದ ಗುರುವು ಹೊರಹೊಮ್ಮಿ, ಮತ್ತವನೆ ಜಂಗಮನಾಗಿಯೂ ವಿರಾಜಿಸಿ, ಲಿಂಗ ಮಯನಾಗಿರುವನು ಎಂಬುದು ಸ್ಪಷ್ಟವೇ ಆದಂತಾಯಿತು. ಕೈಲಾಸದ ಪರಮೇಶ್ವರನ ಒಡ್ಡೋಲಗದಲ್ಲಿ ಶಿವನು, ತನ್ನ ವ್ಯೂಹ ಮೂರ್ತಿಗಳೂ ಹಾಗೂ ಪಂಚಬ್ರಹ್ಮ ಸ್ವರೂಪಗಳಲ್ಲೊಬ್ಬರೂ ಪ್ರ ಪ್ರಥಮಾಚಾರ್ಯರೂ ಆದ ಭಗವತ್ಪಾದ ಶ್ರೀ ರೇಣುಕಾಚಾರ್ಯರನ್ನು ನೋಡಿ "ಓ ರೇಣುಕಾ! ತ್ರಿಲಿಂಗದೇಶವೆಂದು ಪ್ರಸಿದ್ಧವಾದ ಶ್ರೀ ಶೈಲ ದಿವ್ಯ ಕ್ಷೇತ್ರಕ್ಕೆ ಉತ್ತರದಲ್ಲಿ ವಿರಾಜಿಸುವ ಕುಲ್ಯಪಾಕ ಕ್ಷೇತ್ರದಲ್ಲಿ ನಾನು ॥ ಸೋಮೇಶ್ವರಾಭಿದಾನಸ್ಯ । ತತ್ರವಾಸಪತೋ ಮಮ । ಅಸ್ಪೃಶನ್ ಮಾನುಷಂ ಭಾವಂ । ಲಿಂಗಾತ್ ಪ್ರಾದುರ್ಭವಿಷ್ಯಸಿ ॥ ಸೋಮೇಶ್ವರ ಹೆಸರಿನಿಂದ ಆ ಲಿಂಗ ಮಧ್ಯೆ ಪ್ರಸನ್ನನಾಗಿರುವೆನಾದ್ದರಿಂದ ಈ ಕ್ಷಣವೇ ನೀನು ಅಲ್ಲಿಗೆ ತೆರಳಿ ಆ ನನ್ನ ಶಿವಲಿಂಗ ಮುಖದಿಂದ ಉದಿಸುವವನಾಗು" ಎಂದು ಆಜ್ಞೆಯನ್ನು ಮಾಡಿದ ಪ್ರಕಾರ, ಜಂಗಮ ಜಗದ್ಗುರು ರೇಣುಕನು ಶಿವನಾಣತಿಯಂತೆ ಮೇಲ್ಕಂಡ ಮಹಾ ಶಿವಲಿಂಗದಿಂದ—

॥ ಅಥ ತ್ರಿ ಲಿಂಗ ವಿಷಯೇ ಕುಲ್ಯ ಪಾಕಾಭಿಧೇ ಸ್ಥಲೇ ।
ಸೋಮೇಶ್ವರ ಮಹಾಲಿಂಗಾತ್ ಪ್ರಾದುರಾಸೀತ್ ಸ ರೇಣುಕಃ ॥೧॥
ಪ್ರಾದುರ್ಭೂತಂ ತಮಾಲೋಕ್ಯ ಶಿವಲಿಂಗಾ ತ್ರಿಲಿಂಗಜಾಃ ।
ವಿಸ್ಮಿತಾಃ ಪ್ರಾಣಿನಃ ಸರ್ವೇ ಬಭೂವು ರತಿತೇಜಸಂ ॥೨॥

ಭಸ್ಮೋ ದ್ಧೂಲಿತ ಸರ್ವಾಂಗಂ ಸಾರರುದ್ರಾಕ್ಷ ಭೂಷಣಂ ।
ಜಟಾ ಮುಕುಟ ಸಂಯುಕ್ತಂ ತ್ರಿಪುಂಡ್ರಾಂಕಿತ ಮಸ್ತಕಂ ॥೩॥
ಕಟೀ ತಟೀ ಪಟೀಭೂತ ಕಂಥಾಪಟಲ ಬಂಧುರಂ ।
ದಧಾನಂ ಯೋಗದಂಡಂಚ ಭಸ್ಮಾಧಾರಂ ಕಮಂಡಲುಂ ॥೪॥
ಶಿವಾದ್ವೈತ ಪರಿಜ್ಞಾನ ಪರಮಾನಂದ ಮೋದಿತಂ ।
ನಿರ್ಧೂತ ಸರ್ವಸಂಸಾರ ವಾಸನಾ ದೋಷಪಂಜರಂ ॥೫॥
ಶಿವಾಗಮ ಸುಧಾಸಿಂಧು ಸಮುನ್ಮೇಷ ಸುಧಾಕರಂ ।
ಚಿತ್ತಾರವಿಂದ ಸಂಗೂಢ ಶಿವಪಾದಾಂಬುಜದ್ವಯಂ ॥೬॥

ಕೋಟಿ ಸೂರ್ಯ ಪ್ರಕಾಶಮಾನವಾದ ದಿವ್ಯ ಸ್ವಯಂ ಆತ್ಮತೇಜಸ್ಸು ಓಜಸ್ಸುಗಳಿಂದ ಕುಲ್ಯಪಾಕ ವಿರಾಜಮಾನ ಶ್ರೀ ಸೋಮನಾಥ ಜ್ಯೋತಿರ್ಲಿಂಗದಿಂದ, ಸಕಲ ಪ್ರಾಣಿಕೋಟಿಗಳು ಪರಮಾಶ್ಚರ್ಯ ಭರಿತರೂ ಅತುಲಾನಂದ ತುಂದಿಲ ಹೃದಯ ಸ್ವಾಂತರಾಗುವ ಭರದಲಿ, ಸರ್ವ ಶಿವಾಗಮಗಳ ಸಾರವನ್ನು ಸೂರೆಗೊಂಡು ಛಿನ್ಮುಮ ಶಿವಾದ್ವೈತ ಜ್ಞಾನದಯಾಸಿಂಧುವಿನಿಂದ ಪೂರ್ವಾಭಿಮುಖವಾಗಿ ಉದಯಿಸಿದ, ಸಚ್ಚಿದಾನಂದ ಪರಿಪೂರ್ಣ ದಿವ್ಯ ಪ್ರಜ್ಞಾನಾನಂದಮಯ ಚಿದ್ಘನ ತೇಜೋರಾಶಿಯಂತೆ, "ಪ್ರಾದು ರ್ಭೂತಂ," ದಿವ್ಯ ದೇಹಧಾರಿಗಳಾಗಿ ಜಟಾಮುಕುಟ, ತ್ರಿಪುಂಡ್ರಾಂಕಿತ, ರುದ್ರಾಕ್ಷಮಾಲಾ ವಿಭೂಷಿತರೂ, ಕಾವಿ ವಸ್ತ್ರದಿಂ ಆಚ್ಛಾದಿತರೂ, ಯೋಗದಂಡ, ಹಸರು ಕಂಥೆ, ಕಮಂಡಲ. ಭಸ್ಮಾಧಾರ, ಜಟಾಬಾರದೋಳ್ ಮೆರೆಯುವ ಇಷ್ಟಲಿಂಗ ಯಜ್ಞೋಪವೀತಾದ್ಯಲಂಕೃತರಾಗಿ, ಮೂಲ ಸಹಿತ ಶಿವಪಂಚಾಕ್ಷರಿ ಮಹಾಮಂತ್ರವ ಪಠಿಸುತ್ತ ಹೃದಯದೋಳ್ ಶಿವಪಾದಾಂಬುಜದ್ವಯುಗಳನ್ನು ಸ್ಮರಿಸುತ್ತ ಪ್ರಕಾಶಿತರಾದ "ಗುರೂಣಾಂ ಗುರುಃ" ಎಂಬ ಗುರುತರ ಬಿರುದಾಂಕಿತರಾಗಿ ಜಗತ್ತಿನ ಜಗದ್ಗುರುಗಳಿಗೆಲ್ಲಾ ಜಗದ್ಗುರು ಸಾರ್ವಭೌಮರಾದ ಗುರು ದಕ್ಷಿಣಾಮೂರ್ತಿ ಸದೃಶರಾದ ಭಗವತ್ಪಾದ ಶ್ರೀ ರೇಣುಕನ ಪಾದಕಮಲಗಳನ್ನು ಸಂದರ್ಶಿಸಿದ ಭಕ್ತ ಕೋಟಿಗಳು ॥ ವಿಸ್ಮಿತಾಃ ಪ್ರಾಣಿನಃ ಸರ್ವೇ ಬಭೂವು ರತಿತೇಜಸಂ ॥ ಶಿಊವತೇಜಃ ಪುಂಜವಾದ, ದೇದೀಪ್ಯಮಾನಕರ ದಿವ್ಯ ಪ್ರಕಾಶ ಹೊಂಬಣ್ಣದಿಂ

## ॥ ಪ್ರಸ್ತಾವನೆ ॥

ಹೊರ ಹೊಮ್ಮುತ್ತಿರುವುದನ್ನು ಚರ್ಮ ಚಕ್ಷುಗಳಿಂದ ವೀಕ್ಷಿಸಲು ಅಸಮರ್ಥರಾದ ಭಕ್ತ ಕೋಟಿಗಳು, ಭಕ್ತಿ ಭಾವದಿಂ ಕಣ್ಮುಚ್ಚಿ ಶಿರದೋಳ್ ಬದ್ಧಾಂಜಲಿ ಪುಟರಾಗಿ ಆನಂದಕರ ಭಾಷ್ಪಾಂಜಲಿಗಳ ವರ್ಷಿಸುತ್ತ, ಮುಖದಿಂ, "ಶಿವ ಶಂಭೋ ! ಹರಮಹಾದೇವ ಜಗದುದ್ಧರಣೈಕಶೀಲ ಪಶುಪತಿಯೆ, ಮಮ ಪತಿಯೇ" ಎಂದು ಹಾಡಿ ಪಾಡಿ ನಲಿದು ಕೊಂಡಾಡಿ ಮೈಮರೆತು ಶಿವನೋಳ್ ಬೆರತ ಮನೋಭಾವದಿಂದ ವಿಸ್ಮಯರಾಗಿದ್ದರು, ಎಂಬುದಾಗಿ ರೇಣುಕ ಗೀತೆ ಯಲ್ಲಿ,ಆಚಾರ್ಯ ಕುಲಸಂಜಾತರೂ, ಪ್ರಾಜ್ಞರೂ, ಪಂಡಿತ ಪ್ರಕಾಂಡ ಮಂಡ ಲಿಗೆ ಘನ ಪಂಡಿತ ಸಿಂಹ ಸದೃಶರೂ, ಭಕ್ತಜನ ಮಂದಾರರೂ ವಿಶಾಲ ಮೃದು ಮಧುರ ಮನೋಭಾವ ಗರ್ಭಿತರಾದ ಶ್ರೀ ಶಿವಯೋಗಿ ಶಿವಾಚಾರ್ಯರು ಹೃದಯಂಗಮವಾಗಿ ವರ್ಣಿಸಿರುವುದು ಸರಿಯಷ್ಟೆ.

ಜಗತ್ತಿನ ಜಗದ್ಗುರುಗಳಿಗೂ, ಆಚಾರ್ಯ ಪುರುಷರುಗಳಿಗೂ, ಬ್ರಹ್ಮ ವೇತ್ತರಿಗೂ, ಋಷಿ ಮಹರ್ಷಿಗಳಿಗೂ, ಪ್ರಸ್ಥಾನತ್ರಯ ಭಾಷ್ಯ ಕರ್ತರುಗಳಿಗೂ ರಾಜ ಮಹಾರಾಜರುಗಳಿಗೂ, ಚಕ್ರವರ್ತಿ ಸಾರ್ವಭೌಮರಿಗೂ, ಪಂಡಿತರಿಗೂ, ವಿದ್ಯಾವಂತರಿಗೂ, ಚರಿತ್ರೆಕಾರರಿಗೂ ಮತ್ತು ಭಗವದ್ಭಕ್ತ ಕೋಟಿಗೆ ಚಿನ್ಮ ಯರೂ ಶಿವಲಿಂಗೋದ್ಭವ ದಿವ್ಯಮೂರ್ತಿಗಳೂ ಆದ ಜಗದ್ಗುರು ಭಗವತ್ಪಾದ ಶ್ರೀ ರೇಣುಕಾದಿ ಪಂಚಾಚಾರ್ಯರ ಘನ ಮಹಿಮೆ, ಭಾನುಕೋಟಿ ಪ್ರಕಾಶ ಮಾನವಾಗಿ ಬೆಳಗಿ, ಬಹು ಪ್ರಾಚೀನ ಪ್ರಸಿದ್ಧ ಪ್ರಾಮಾಣಿಕತೆಯಿಂದ ಪ್ರಕಾ ಶಿಸುವ ಮಹಾ ಗ್ರಂಥಾಧಾರಗಳಿಂದಲೂ, ಪುರಾತನ ಓಲೆಗರಿ ಲಿಖಿತಗಳ ಆಧಾರಗಳಿಂದಲೂ, ಭರತಖಂಡದ ನಾನಾ ಭಾಗಗಳಲ್ಲಿ ಕಂಗೊಳಿಸುವ ಅನೇಕಾ ನೇಕ ಶಿಲಾ ಶಾಸನ, ತಾಮ್ರಶಾಸನ ಮತ್ತು ಕಾವ್ಯ ಹಾಗೂ ಚಾರಿತ್ರಿಕ ಆಧಾರಗಳಿಂದಲೂ, ಧರ್ಮ ಕ್ಷೇತ್ರವೆಂದು ಕೀರ್ತಿ ಪಡೆದಿರುವ ಕರ್ಮ ಭೂಮಿಯಾದ ನಮ್ಮೀ ಉಪಖಂಡದಲ್ಲಿ ಅಲ್ಲಲ್ಲಿ ಸನಾತನ ಕಾಲದಿಂದಲೂ ವಿರಾಜಿಸುತ್ತಲಿರುವ ಪುಣ್ಯಪ್ರದವಾದ ಕ್ಷೇತ್ರ ತೀರ್ಥಂಗಳ ಸ್ಥಳ ಪ್ರವರ ಆಧಾರಗಳಿಂದಲೂ ಸುಪ್ರ ಸಿದ್ಧವೇ ಇರುತ್ತೆ. ಇಂತಪ್ಪ ಜಗನ್ಮಾನ್ಯ ಭುವನಾಚಾರ್ಯರುಗಳಾದ ಶ್ರೀಮದ್ರೇಣುಕಾದಿ ಪಂಚಾಚಾರ್ಯರ ವಿಷಯ, ದೀರ್ಘದರ್ಶಿಗಳೂ ಮಹಾನು

ಭಾವರೂ ಆದ ಅಣ್ಣ ಬಸವಣ್ಣನವರಿಗೆ ತಿಳಿದಿರಲಿಕ್ಕಿಲ್ಲವೆಂದರೆ ಅರ್ಥವಿಲ್ಲದ ಮಾತಾಗುವುದಷ್ಟೆ. ಸತ್ಯಾಂಶ ಹೀಗಿದ್ದರೂ ಇತ್ತೀಚಿನ ಶ್ರೀ ಅಲ್ಲಮರೇ ಮೊದಲು ಮಾಡಿ ಬಸವಾದಿ ಶಿವಶರಣ ಶರಣೆಯರ ಸಹಸ್ರಗಟ್ಲೆ ವಚನಗಳಲ್ಲಿ ಶ್ರೀಮದ್ರೇಣುಕಾದಿ ಜಗದ್ಗುರು ಸಾರ್ವಭೌಮರ ಪುಣ್ಯನಾಮ ಹಾಗೂ ಅವರ ಮಹಿಮಾನ್ವಿತ ಪವಾಡಗಳ ಲೀಲಾ ವಿಭೂತಿಯು ಸ್ತುತಿ ಅಥವಾ ವರ್ಣನೆಯಾಗಲಿ, ಸ್ಮರಣೆಯಾಗಲಿ ವಿಪುಲವಾಗಿಲ್ಲದಿರುವುವನ್ನು ನೋಡಿದರೆ, ಲಿಂಗಾಂಗಿಗಳಲ್ಲಿ ಸಖೇದಾಶ್ಚರ್ಯವನ್ನುಂಟು ಮಾಡುವುದರೊಂದಿಗೆ, ಘನವೀರಶೈವ ಸತ್ಸಂಪ್ರದಾಯದ ಸನಾತನ ಪದ್ಧತಿಯ ಪುಣ್ಯ ಪ್ರವಾಹವನ್ನು, ಪಂಥೀಯ ಸಂಕುಚಿತ ದೃಷ್ಟಿಕೋನಕ್ಕೆ ಯಾರೋ ತುತ್ತಾಗಿಸಿ ತುಂಡುಮಾಡಿ ಛಿದ್ರಗೊಳಿಸಿ, ಸತ್ಯಕ್ಕೆ ದೂರವಾದ ಅವೈದಿಕ ಪಥಗಳನ್ನು ಚಂಚಲ ಭಾವದಿಂದ ಎಡೆ ಮಾಡಿಕೊಟ್ಟಂತೆ ಭಾಸವಾಗುತ್ತಲಿರುವುದು. ಪಾಂಚಭೌತಿಕ ಪ್ರಪಂಚದ ಅಸ್ತಿತ್ವಕ್ಕೆ ಹಾಗೂ ಅದರ ಶುಭಾಭ್ಯುದಯಾದಿಗಳಿಗೆ, ಭಗವತ್ಪಾದ ಶ್ರೀ ರೇಣುಕಾದಿ ಪಾಂಚಾಚಾರ್ಯರೇ ಮೂಲಭೂತ ಶಿವಪಂಚಾಕ್ಷರೀ ಬೀಜಮಂತ್ರ ಸ್ವರೂಪ ಸದೃಶರಾಗಿರುವರು. ಪೃಥ್ವಿ ತತ್ವವು "ನ"ಕಾರ ಬೀಜಾಕ್ಷರವನ್ನಾಶ್ರಯಿಸಿ ಬಳಸಿರಲು, ಅಪ್ ತತ್ವವು "ಮ" ಕಾರವನ್ನೂ, ತೇಜಸ್ ತತ್ವವು "ಶಿ" ಕಾರವನ್ನೂ, ವಾಯು ತತ್ವವವು "ವ" ಕಾರವನ್ನೂ ಮತ್ತೂ ಆಕಾಶ ತತ್ವವು ಶಿವಪಂಚಾಕ್ಷರಿಯ, "ಯ"ಕಾರ ಬೀಜಾಕ್ಷರವನ್ನು ಅವಲಂಬಿಸಿರಲು ; "ನ" ಕಾರಮಯ ಸದ್ಯೋಜಾತ ಮುಖಸಂಭವರೂ ಶ್ರೀ ಸೋಮನಾಥ ಲಿಂಗೋದ್ಭವರಾದ ಶ್ರೀ ರೇಣುಕ ಭಗವತ್ಪಾದರು ಅಖಂಡ ಮಹೀಮಂಡಲಕ್ಕೆಲಾ ಅಧಿಪತಿಗಳೂ ಏಕೈಕ ಜಗದ್ಗುರು ಸಾರ್ವಭೌಮರಾಗಿ ವಿರಾಜಿಸುತ್ತಲಿರುವರು. ಇದರಂತೆಯೇ ಇನ್ನುಳಿದ ಚತುರಾಚಾರ್ಯರೂ ಸಹ ಅನುಕ್ರಮವಾಗಿ ಆ, ಆ ಪಂಚತತ್ವಗಳಿಗೆ ಪಂಚ ಅಧಿಪತಿಗಳಾಗಿ ಶಿವ ಪಂಚಾಕ್ಷರೀ ಮಹಾಮಂತ್ರದ ಬೀಜಾಕ್ಷರ ಸದೃಶ ಜಗದ್ಗುರು ಶ್ರೀಮತ್ಪಂಚಾಚಾರ್ಯರುಗಳೆಂದು ಶಿವಾಗಮೋಪನಿಷದಾದಿಗಳಲ್ಲಿ ಸ್ತುತ್ಯರಾಗಿರುವರು.

ರೇಣುಕರು ಧರ್ಮ ಸ್ಥಾಪನೆಗಾಗಿ ಭದ್ರಾತೀರದಲ್ಲಿ ಸುಭದ್ರವಾದ ರಂಭಾ

ಪುರಿ ಪೀಠವನ್ನು ಸ್ಥಾಪಿಸಿ ವೀರಸಿಂಹಾಸನಾಧಿಪತಿಗಳಾಗಿ ವಿರಾಜಿಸುತ್ತಿರುವರು. ದಾರುಕರು ಉಜ್ಜಯಿನಿ ಕ್ಷೇತ್ರದಲ್ಲಿ ತಮ್ಮ ದಿವ್ಯ ಪೀಠವನ್ನು ಸ್ಥಾಪಿಸಿ ಸದ್ಧರ್ಮ ಸಿಂಹಾಸನಾರೋಹಣದಿಂದ ಪ್ರಕಾಶಿತರಾಗಿರುವರು ಏಕೋರಾಮಾರಾಧ್ಯರು ಕೇದಾರ ಮಹಾ ಕ್ಷೇತ್ರದಲ್ಲಿ ತಮ್ಮ ಘನಪೀಠವನ್ನು ಸ್ಥಾಪಿಸಿ ಪರಮ ಪಾವನವಾದ ಅಸ್ಖಲಿತ ವೈರಾಗ್ಯ ಸಾಮ್ರಾಟ್ ಸಿಂಹಾಸನಾರೋಹಣ ವಂಗೈದಿರುವರು. ಪಂಡಿತಾರಾಧ್ಯರು ಶ್ರೀಶೈಲಕ್ಷೇತ್ರದಲ್ಲಿ ತಮ್ಮ ಧರ್ಮ ಪೀಠವನ್ನು ಸ್ಥಾಪಿಸಿ ಶ್ರೀ ಮದ್ಗಿರಿರಾಜ ಸೂರ್ಯ ಸಿಂಹಾಸನವನ್ನೇರಿ ಶೋಭಿಸಿರುವರು. ವಿಶ್ವಾರಾಧ್ಯರು ಶ್ರೀ ಕಾಶಿಕ್ಷೇತ್ರದಲ್ಲಿ ತಮ್ಮ ಘನಪೀಠವನ್ನು ಸ್ಥಾಪಿಸಿ ದಿವ್ಯ ಜ್ಞಾನ ಸಿಂಹಾಸನಾಧಿಪತಿಗಳಾಗಿ ಪರಿಶೋಭಿಸಿರುವರು. ಇದರಿಂದ ತಿಳಿಯುವುದೇನೆಂದರೆ, ಮಾನವ ಜನಾಂಗ ಹಾಗೂ ನಾಡು ನುಡಿಗಳು ಏಳಿಗೆಯಾಗ ಬೇಕಾದರೆ ಮೊಟ್ಟ ಮೊದಲು ಆಸ್ತಿಕರು ವೀರ್ಯವತ್ತರವಾದ ಬಾಳ್ವೆಯಿಂದ ಕೂಡಿ, ಯಶೋವಂತರೂ. ಧೈರ್ಯ, ಸ್ಥೈರ್ಯ, ವೀರ ಪರಾಕ್ರಮಗಳಿಂದ ಇಹಪರ ಸುಖಸಾಧನೆಗಳನ್ನು ಸಾಧಿಸಿ ಪ್ರಗತಿಪರ ಮಾರ್ಗದಲ್ಲಿ ಮುನ್ನೆಜ್ಜೆಯಿಂದ ಮುಂದುವರೆಯುವವರಾಗಬೇಕೆಂಬ ಅಂಶವನ್ನು ಶ್ರೀ ಮದ್ರಂಭಾಪುರಿ ವೀರ ಸಿಂಹಾಸನದ ಗುರುಪೀಠವು ಆದೇಶವೀಯುವಂತೆ ಪ್ರಕಾಶಿತವಾಗಿರುವುದು. ಯಾಕೆಂದರೆ ದುರ್ಬಲನು ಜಗತ್ತಿನಲ್ಲಿ ಏನನ್ನೂ ಸಾಧಿಸಲಾರನು. ॥ ನಾಯಮಾತ್ಮ ಬಲಹೀನೇನಲಭ್ಯಃ ॥ ಎಂಬ ಉಪನಿಷದ್ವಾಣಿ, ಬಾಹ್ಯೇಂದ್ರಿಯ ಅಂತರೇಂದ್ರಿಯಾದಿಗಳನ್ನು ಜಯಿಸದ ವಿಷಯಲಂಪಟನು ಆತ್ಮ ಸ್ವರೂಪ ಲಾಭವನ್ನು ಹೊಂದಲಾರನೆಂದು ಘೋಷಿಸುತ್ತಲಿರುವುದು "ವೀರ" ಎಂಬ ಶಬ್ದದ ಮೊದಲನೆ "ವಿ" ಎಂಬ ಅಕ್ಷರವು, ಕ್ಷರವಲ್ಲದ ಅಂದರೆ ಶಾಶ್ವತವಾದ ಅಂಶವನ್ನು ಎತ್ತಿ ತೋರಿಸುವಂಥಾ ತತ್ವಾರ್ಥವನ್ನು ಹೊರ ಹೊಮ್ಮಿಸುವಂತೆ ॥ "ವಿ" ಶಬ್ದೇನೋಚ್ಯತೆ ವಿದ್ಯಾ ಶಿವಜೀವೈಕ್ಯಬೋಧಿಕಾ ॥ ಶಿವಜೀವರ ಅರ್ಥಾತ್ ಜೀವಬ್ರಹ್ಮರ ಐಕ್ಯಾನು ಸಂಧಾನವನ್ನು ಕೈಗೂಡಿಸಿ, ನಿತ್ಯಾನಂದ ಪ್ರಾಪ್ತಿಗೆ "ವಿ" ಅಕ್ಷರವು ಸಂಕೇತವೋ ಎಂಬಂತೆ ವಿರಾಜಿತವಾಗಿದೆ. ಇಂತಪ್ಪ ವೀರ್ಯಯುತ ತೇಜೋಬಲವು ಸದ್ಧರ್ಮದಿಂದ ಬೆಳಗಬೇಕಾಗಿದೆ. ॥ ಧರ್ಮೋ

ಧಾರಯತಿ ಜಗತಃಪ್ರತಿಷ್ಠಾ ॥ ಇಡೀ ಜಗತ್ತು ಸೂಕ್ಷ್ಮವಾದ ಧರ್ಮ ಸೂತ್ರಾಧಾರದ ಮೇಲೆ ಸ್ಥಾಪಿತವಾಗಿದೆ. ॥ ಧರ್ಮ ಏವ ಹತೋಹಂತಿ । ಧರ್ಮೋ ರಕ್ಷತಿ ರಕ್ಷಿತಃ ॥ ಅಂದರೆ, ಧರ್ಮಾತ್ಮರನ್ನು ಧರ್ಮವು ರಕ್ಷಿಸುವುದು. ಧರ್ಮದಿಂದಲೇ ಮಾನವಕೋಟಿಗೆ ಸುಖಶಾಂತಿ ಹಿತಕರವು. ॥ ಧರ್ಮಾದರ್ಥಃ ಪ್ರಭವತಿ । ಧರ್ಮಾತ್ಪ್ರಭವತೇ ಸುಖಂ । ಧರ್ಮಾತ್ಪ್ರಭವತೇ ಸರ್ವಂ । ಧರ್ಮಸಾರ ಮಿದಂ ಜಗತ್ ॥ ಧರ್ಮ ಸಾಧನೆಯಿಂದ ಐಶ್ವರ್ಯವೂ, ಸುಖವೂ, ಸರ್ವವೂ ಕೈಗೂಡುವುವು. ಆದ್ದರಿಂದ ॥ ಯತೋಧರ್ಮ ತತೋಜಯಃ ॥ ಎಂಬ ಅಂಶವನ್ನು ಉಜ್ಜಯಿನಿ ಸದ್ಧರ್ಮ ಪೀಠವು ಸರ್ವದಾ ಪ್ರತಿಪಾದಿಸುತ್ತಲಿರುವದು. ಈ ವೀರ, ಧರ್ಮ, ಮಾರ್ಗಾಚಾರಗಳು ಪರಮ ವೈರಾಗ್ಯಯುತದಿಂದ ಬೆಳಗಬೇಕೆಂಬ ಅಂಶನ್ನು ಶ್ರೀ ಮತ್ಕೇದಾರ ಪೀಠವು ನಮಗೆ ಬೋಧಿಸುವ ತೆರದಲ್ಲಿ ಪರಿಶೋಭಿಸುತ್ತಲಿರುವುದು. ಆಸಕ್ತಿಯನ್ನು ಅಡಗಿಸಿ ವಿರಕ್ತಿಯಿಂದ ವಿಷಯಾದಿಗಳನ್ನು ದೂರೀಕರಿಸಿ ಅಲಿಪ್ತ ಭಾವದಿಂದ ಮತ್ತು ಈಶ್ವರಾರ್ಪಿತಬುದ್ಧಿಯಿಂದ "ನಾನು, ನನ್ನದು"ಎಂಬ ಆಹಂಕಾರ ಮಮಕಾರಗಳನ್ನು ವರ್ಜಿಸಿ ರಾಗ ದೂರರಾಗಿ, ಜಗತ್ತಿನ ಪ್ರವೃತ್ತಿ ಮಾರ್ಗವನ್ನನುಸರಿಸಿ ನಿವೃತ್ತಿ ಧರ್ಮಾವಲಂಭನೆಯಿಂದ ಕೂಡಿ ವೊಳಗೂ ಹೊರಗೂ ಏಕಪ್ರಕಾರದ ಪರಿಶುದ್ಧತೆಯಿಂದ ವಿರಾಜಿಸುವ, ವಿಶ್ವದ ವಿರಕ್ತಧರ್ಮಕ್ಕೆ ಮೂಲ ಸ್ಥಂಭಾಯಮಾನವಾಗಿ ಬೆಳಗುವ ಏಕೈಕ ಸನಾತನ ಅಖಂಡ ಮಹಾವೈರಾಗ್ಯ ಚಕ್ರವರ್ತಿ ಸಾರ್ವಭೌಮ ಪೀಠವೆಂದರೆ ಶ್ರೀ ಕೇದಾರ ಪೀಠವೇ ಆಗಿರುತ್ತೆ. ॥ ನಕರ್ಮಣಾ ನ ಪ್ರಜಯಾ ಧನೇನ ತ್ಯಾಗೇನೈಕೆ ಅಮೃತತ್ವಮಾನುಶುಃ ॥ ಎಂಬ ವೇದವಾಣಿಯೂ ಸಹ, ಕೇವಲ ಕರ್ಮದಿಂದಾಗಲಿ ಪ್ರಜಾತಂತುವನ್ನು ಮುಂದುವರಿಸುವುದರಿಂದಾಗಲಿ, (ಮಕ್ಕಳನ್ನು ಪಡೆಯುವುದರಿಂದಾಗಲಿ) ವಿಪುಲ ಧನವನ್ನು ಶೇಖರಿಸುವುದರಿಂದಾಗಲಿ, ಅಮೃತತ್ವವು (ಮೋಕ್ಷವು) ಸಿಗುವುದಿಲ್ಲ. ॥ ತ್ಯಾಗೇನೈಕೇ ಅಮೃತತ್ವಮಾನಶುಃ ॥ ತ್ಯಾಗದಿಂದ ಮಾತ್ರ ಅಮೃತತ್ವವು ಸಿದ್ಧಿಸುವುದು ಎಂದು ಸಾರುತ್ತಿರುವುದು. ತ್ಯಾಗವಾದರೋ ವೈರಾಗ್ಯದ ಹೃದಯದಲ್ಲಿ ಅಂತರ್ಗತವಾಗಿರುವುದು ವೈರಾಗ್ಯದಿಂದ ತ್ಯಾಗವೂ, ತ್ಯಾಗದಿಂದ ತೃಪ್ತಿಯೂ,

ತೃಪ್ತಿಯಿಂದ ಶಿವಾನಂದವೂ ಪರಂಪರಾನುಗತವಾಗಿ ಪ್ರಾಪ್ತವಾಗುವುವು. ಹೀಗೆ ಮಾನವನು ತನ್ನ ಜೀವಿತದ ಹೆಜ್ಜೆಗಳನ್ನು ವೀರ, ಸದ್ಧರ್ಮ, ವೈರಾಗ್ಯ ಭೂಮಿಕೆಗಳಲ್ಲಿ ಸುಭದ್ರವಾಗಿ ಊರಿ, ಮುಂದೆ ಬೆಳಕನ್ನು ಕಾಣಲು ಹವಣಿಸು ವನು. ಆ ಬೆಳಕು, ಸೂರ್ಯ, ಚಂದ್ರ, ನಕ್ಷತ್ರ, ಮಿಂಚು, ಮತ್ತೂ ಅಗ್ನಿ ಗಳೆಂಬ ಹೊರಗಿನ ಪಂಚ ವಿಧದ ಬೆಳಕಾಗಿರದೆ, ಯಾವ ಸ್ವಯಂ ತೇಜಸ್ಸಿನ ಸನ್ನಿಧಿಯಲ್ಲಿ ಮೇಲ್ಕಂಡ ॥ ನತದ್ಭಾಸಯತೇ ಸೂರ್ಯೋ । ನಶಶಾಂಕೋ ನ ಪಾವಕಃ ॥ ಪಂಚ ಪ್ರಕಾಶಗಳು, ದೇದೀಪ್ಯವಾದ ಸ್ವಯಂಜ್ಯೋತಿಯಲ್ಲಿ ಪೂರ್ಣ ತೇಲಿ ಅಡಗುವವೋ ಅಂಥಾ ಮಹಾಮಹಿಮಾನ್ವಿತ ಶ್ರೀ ಮಲ್ಲಿಕಾರ್ಜುನ ಜ್ಯೋತಿರ್ಲಿಂಗದ ದಿವ್ಯಾನುಗ್ರಹದಿಂದ ತನ್ನ ಆತ್ಮ ಪ್ರಕಾಶವನ್ನು ಅರಿತು, ಶ್ರೀ ಗಿರಿರಾಜ ಸೂರ್ಯ ಸಿಂಹಾಸನಾಧಿಪತಿಗಳ ಕೃಪಾಶೀರ್ವಾದಕ್ಕೆ ಪಾತ್ರನಾದ ಮಾನವನು, ಮುಂದೆ ಶ್ರೀ ಕಾಶಿ ವಿಶ್ವೇಶ್ವರ ಮಹಾಲಿಂಗಾವಿರ್ಭೂತ ಶ್ರೀ ವಿಶ್ವಾರಾಧ್ಯ ಗುರು ಸಾಮ್ರಾಟನ ಕೃಪಾ ವಿಶೇಷದಿಂದ ದಿವ್ಯ ಜ್ಞಾನವ ಪಡೆದು ಜ್ಞಾನ ಸಿಂಹಾಸನಕ್ಕೆ ಮಣಿದು ॥ ಜ್ಞಾನೀಚ ಆತೀವಮೇಪ್ರಿಯಃ ॥ ಎಂಬ ಭಗವದ್ವಾಕ್ಯಾನುಸಾರ ಗುರು ಪುತ್ರನಾಗಿ ಬಾಳಿ, ॥ ಜ್ಞಾನಾಗ್ನಿ ದಗ್ಧ ಕರ್ಮಾಣಂ ॥ ಕರ್ಮ ಬೀಜಗಳನ್ನು ಜ್ಞಾನಾಗ್ನಿಯಲ್ಲಿ ಹುರಿದು, ಮತ್ತೆ ಅಂಕು ರಿಸಿ ಬಂಧನವೀಯದಂತೆ ದುರ್ಬಲಗೊಳಿಸಿ, ಅಷ್ಟಕ್ಕೆ ಬಿಡದೆ ॥ ಜ್ಞಾನಾಗ್ನಿ ಸರ್ವಕರ್ಮಾಣಿ । ಭಸ್ಮಸಾತ್ಕುರುತೇತಥಾ ॥ ಅಂದರೆ, ಸಂಚಿತ, ಆಗಾಮಿ, ಪ್ರಾರಬ್ಧ ಕರ್ಮಗಳನ್ನು ಜ್ಞಾನಾಗ್ನಿಯಿಂದ ದಹಿಸಿ ಬೂದಿಮಾಡಿ ನಿರ್ಮಲನೂ ನಿಶ್ಚಿಂತನೂ, ನಿರ್ವಿಕಾರಿಯೂ ಆಗಿ ಪರಮಶಾಂತಿ ದಾಂತಿ ಔದಾರ್ಯಾದಿ ಗುಣಗಳಿಂದ ವಿರಾಜಿತನಾಗಿರುವುದೇ ಜ್ಞಾನ ಮುದ್ರೆಯ ಚಿನ್ಹೆಯಾಗಿದೆ. ಸ್ವಭಾವತಃ ॥ ಜ್ಞಾನಂ ಅಜ್ಞಾನೇನ ಆವೃತಃ ॥ ಹೇಗೆಂದರೆ, "ಧೂಮೇನಾವ್ರಿ ಯತೇವಹ್ನಿಃ" ಹೊಗೆಯಿಂದ ಅಥವಾ ಬೂದಿಯಿಂದ ಆವರಿಸಲ್ಪಟ್ಟ ಕೆಂಡ ದಂತೆ ; ॥ ರ್ಯ ಥಾದರ್ಶೋಮಲೇನಚ ॥ ಕನ್ನಡಿಯನ್ನು ಕೊಳೆ ಮುಚ್ಚಿರು ವಂತೆ, ಹಾಗೂ ॥ ಯಥೋಲ್ಬೇನಾವೃತೋಗರ್ಭಃ ॥ ಗರ್ಭದಲ್ಲಿನ ಶಿಶುವು ಮಲಿನವಾದ ಜಗಾಯುಕೋಶವೆಂಬ ಕಶ್ಮಲದಿಂದ ಆವೃತವಾಗಿರುವಂತೆ,

ನಮ್ಮೊಳಗಿನ ಜ್ಞಾನ ರತ್ನವು ಅಜ್ಞಾನವೆಂಬ ತಮಸ್ಸಿನ ಅಂಧಕಾರದಲ್ಲಿ, ಥಳಥಳಿಸುವ ಆದಿತ್ಯನು ಮೋಡಗಳಿಂದ ಮುಚ್ಚಲ್ಪಟ್ಟು ಕ್ಷಣಕಾಲ ಕಾಣದೆ ಹೋಗುವಂತೆ, ಜ್ಞಾನವು ಅಜ್ಞಾನ ತೆರೆಗಳಿಂದ ಆಗಾಗ್ಗೆ ನಿಬಿಡೀಕೃತವಾಗಿ ಆವೃತವಾಗುವುದು. ಆದುದರಿಂದ ಜ್ಞಾನಸಿಂಹಾಸನಾಧೀಶ್ವರರಾದ ಜಗದ್ಗುರು ಕಾಶೀ ಶ್ರೀ ವಿಶ್ವಾರಾಧ್ಯ ಮಹಾಗುರು ಸಾರ್ವಭೌಮರ ದಿವ್ಯ ಕೃಪಾನುಗ್ರಹ ಬಲದಿಂದ ಅಜ್ಞಾನದ ಮುಸುಕನ್ನು ॥ ಜ್ಞಾನಾಂಜನ ಶಲಾಕಯಾ ॥ ತೀಕ್ಷ್ಣವಾದ ಜ್ಞಾನ ಶಸ್ತ್ರದಿಂದ ಛೇದಿಸಿ ದೂರೀಕರಿಸಿ, "ಸರ್ವಂ ಜ್ಞಾನಪ್ಲವೇನೈವ । ವೃಜಿನಂ ಸಂತರಿಷ್ಯಸಿ ॥ ಎಂಬಂತೆ, ಸರ್ವ ಪಾಪ ಬೀಜಗಳನ್ನು ಸುಟ್ಟು ಜ್ಞಾನವೆಂಬ ಜಹಜಿನಲ್ಲಿ (ಹಡಗಿನಲ್ಲಿ) ತುಂಬಿ ಸಾಗರಕ್ಕೆಸೆದು ಅಜ್ಞಾನಂಧಕಾರವನ್ನು ಸಂಪೂರ್ಣ ನೀಗಿ, ಪರಿಪೂರ್ಣವಾದ ॥ ಪ್ರಜ್ಞಾನಂ ಬ್ರಹ್ಮ ॥ ಎಂಬ ಆತ್ಮಾನುಸಂಧಾನದ ಆನಂದದಲ್ಲಿ ನಿರಂಕುಶ ಪ್ರಭುತ್ವದಿಂದ ಬೆಳಗಲು ಮಾನವನಿಗೆ ಸಾಮರ್ಥ್ಯ ಹಾಗೂ ಸಹಜವಾದ ಬಾಧ್ಯತೆ ಇರುವ ಮಹದಂಶವನ್ನು ಧೀಮಂತರ ಬುದ್ಧಿ ಪಟಲದಲ್ಲಿ ಸ್ಫೂರ್ತಿಗೊಳಿಸಿ ಮಾನವ ಜನಾಂಗದ ಅಖಂಡ ಕಲ್ಯಾಣಕ್ಕಾಗಿ ॥ ಸರ್ವೇಜನಾಃ ಸುಖಿನೋ ಭವಂತು । ಲೋಕಾಸ್ಸಮಸ್ತಾ ಸನ್ಮಂಗಳಾನಿ ಭವಂತು ॥ ಎಂಬ ಧರ್ಮ ಸೂತ್ರದ ಆಧಾರದ ಮೇಲೆ, ಶ್ರೀಮದ್ರೇಣುಕಾದಿ ಪಂಚಾಚಾರ್ಯರ ಪಂಚಧರ್ಮ ಗುರುಸಾರ್ವಭೌಮ ಮಹಾ ಸಿಂಹಾಸನಗಳು, ವೀರ, ಸದ್ಧರ್ಮ, ವೈರಾಗ್ಯ (ಪರಮವಿರಕ್ತ), ಗಿರಿರಾಜ ಸೂರ್ಯ ಮತ್ತು ಜ್ಞಾನ ಸಿಂಹಾಸನಗಳೆಂಬ ಪರಮ ಪೂಜ್ಯ ಹೆಸರುಗಳಿಂದ ಉಜ್ವಲವಾಗಿ ಅನಾದಿ ಕಾಲದಿಂದ ಶಿವಾಗಮಗಳೋಕ್ತಿಯಂತೆ ಭುವನಾಂಡ ಕೋಟಿಗಳ ಮಧ್ಯೆ ದೇದೀಪ್ಯಮಾನವಾಗಿ ಪ್ರಕಾಶಿತವಾಗಿರುವುವು. ಭಗವತ್ಪಾದ ಶ್ರೀ ಮಜ್ಜಗದ್ಗುರು ರೇಣುಕಾದಿ ಪಂಚಾಚಾರ್ಯರ ಅಖಂಡ ಅವಿಚ್ಛಿನ್ನ ಅಮೋಘವಾದ ಗುರುತ್ವಕ್ಕೆ ಸರ್ವಥಾವೊಳಪಟ್ಟಂತೆ, ಇತ್ತೀಚಿನ ಧಾರ್ಮಿಕ ಪ್ರಭೃತಿಗಳೂ, ಮಹೋದಯರೂ, ದೈವಾಂಶ ಸಂಭೂತರೆನಿಸಿದವರೆಲ್ಲರೂ, ಹಾಗೂ ಚಕ್ರವರ್ತಿಗಳೂ, ರಾಜ ಮಹಾರಾಜರುಗಳೂ, ಭಾಷ್ಯಕಾರರುಗಳೂ ಆಗಿ ಹೋಗಿರಬೇಕೆಂದು ಹೇಳಲು ಸಾಕಷ್ಟು ಆಧಾರಗಳು ಕಂಡು ಬರುತ್ತವೆ. ಸಿದ್ಧಾಂತ

ಶಿಖೋಪನಿಷತ್ತು ಮುಂತಾದ ಮಹೋನ್ನತ ಉಪನಿಷದಾದಿಗಳಿಂದ ಇದು ವೇದ್ಯವೇ ಇರುತ್ತೆ. ಅದೂ ಅಲ್ಲದೆ ಪ್ರಭುವಾದ ಶ್ರೀಮತ್ಪರಮೇಶ್ವರನು ಶ್ರೀ ಪಾರ್ವತಿ ಷಣ್ಮುಖರನ್ನುದ್ದೇಶಿಸಿ, ಶ್ರೀಮದ್ರೇಣುಕಾದಿ ಪಂಚಾಚಾರ್ಯರ ಮಹಿಮೆಯನ್ನು ಪ್ರಕಟಗೊಳಿಸಿ ಅವರಿಗೆ ಬೋಧಿಸುತ್ತಾ ॥ ಮದಾದಿಸರ್ವ ಲೋಕಾನಾಂ । ಜಗದ್ಗುರು ವರೋತ್ತಮಾಃ ॥ ಅಂದರೆ—"ಹೇ ಗಿರಿಜೆ! ನನ್ನನ್ನೇ ಮೊದಲು ಮಾಡಿ ಸಮಸ್ತ ಲೋಕಗಳಿಗೂ ॥ ಮಮ ಮುಖೋದ್ಭೂತಾಃ ॥ ನನ್ನ ಮುಖಸಂಭವರಾದ ಶ್ರೀಮದ್ರೇಣುಕಾದಿ ಪಂಚಾಚಾರ್ಯರುಗಳೇ ಜಗದ್ಗುರು ವರೇಣ್ಯರಾಗಿ ವಿರಾಜಿಸುತ್ತಲಿರುವರೆಂದು" ಸುಪ್ರಬೋಧಾಗಮವು ಘಂಟಾಘೋಷವಾಗಿ ಸಾರುತ್ತಿರುವುದು ಪ್ರಾಜ್ಞರಿಗೆ ತಿಳಿದಿರುವ ಅಂಶವೇ ಆಗಿರುತ್ತೆ.

ಈ ಕಾರಣದಿಂದ ಸುಮಾರು ಎಂಟುನೂರು ವರ್ಷಗಳ ಹಿಂದೆ ಆಗಿ ಹೋದ ಕೀರ್ತಿಶೇಷರಾದ ಶ್ರೀ ಅಲ್ಲಮ, ಬಸವಾದಿ ಪ್ರಮಥ ಶ್ರೇಷ್ಠರುಗಳು ಹಾಗೂ ಶಿವಶರಣ ಶರಣೆಯರು ಸಹ ಮೇಲ್ಕಂಡ ಶ್ರೀಮಜ್ಜಗದ್ಗುರು ರೇಣುಕಾದಿ ಪಂಚಾಚಾರ್ಯ ಮಹಾ ಪೀಠಾನುವರ್ತಿಗಳಾಗಿಯೇ ಬಾಳಿ ಬದುಕಿ, ಬೆಳಕನ್ನು ಕಂಡು ಭುವಿಯಲ್ಲಿ ಭಕ್ತಿ ಸಾಮ್ರಾಜ್ಯವನ್ನು ತಮ್ಮಿಂದಾದವರವಿಗೂ ವಿಸ್ತರಿಸಿ ನೆರವಾಗಿ ನಿಂತು ಲೋಕದವರಿಗೆ ಪೂಜ್ಯರೂ ಮಾರ್ಗದರ್ಶಕರೂ ಆಗಿ, ಧರ್ಮೋದ್ಧರಣ ಕಾರ್ಯವನ್ನೆಸಗಿ, ಮಹಾಚಾರ್ಯರ ಘನ ಕೃಪಾಲವ ಲೇಶದಿಂದ ಭಗವಂತನಲ್ಲಿ ಬೈಲಾಗಿರುವರು (ಮುಕ್ತರಾಗಿರುವರು). ಇದು ಸತ್ಯದ ಮಾತು. ಸತ್ಯದ ದಾರಿ ಒಂದೇ ಮಾತೂ ಒಂದೇ ಕೋಟಿ ಕಲ್ಪಗಳು ಉರುಳಿದ್ದರೂ ಸತ್ಯಕ್ಕೆ ಚ್ಯುತಿಯಿಲ್ಲ ಕಳೆಯೂ ಕುಂದದು.

## X

ಶ್ರೀ ಅಲ್ಲಮನು,– ರೇವಣಸಿದ್ಧ ಮಹಾ ಶಿವಯೋಗಿಗಳ ದಿವ್ಯ ವರ ಪ್ರಸಾದದಿಂದ ಜನ್ಮಿಸಿದ ಸೊನ್ನಲಿಗೆಯ ಶ್ರೀ ಸಿದ್ಧರಾಮೇಶ್ವರ ಮಹಾ ಶಿವ

ಯೋಗಿಗಳ ಶಿಷ್ಯನೆಂಬ ಬಗ್ಗೆ ಸತ್ಯ ದರ್ಶನವೊಂದಿದೆ. ಈಗಿನ ಸೊಲ್ಲಾಪುರವನ್ನು ಸೊನ್ನಲಿಗೆಯೆಂದು ಕರೆಯುತ್ತಲಿದ್ದರು. ಸಿದ್ಧರಾಮನ ತಾಯಿ ಶ್ರೀಮತಿ ಸುಗ್ಗಲಾದೇವಿ. ತಂದೆ ಸೊಲ್ಲಾಪುರದ ಹಿರೇಮಠಾಧೀಶರೂ ಸುಪ್ರಸಿದ್ಧ ದೇಸಾಯಿ ಗೌಡ ಮನತನದ ಮುದ್ದಗೌಡರೆಂಬ, ಜಂಗಮ ದಂಪತಿಗಳ ಪುಣ್ಯ ಉದರದಲ್ಲಿ ಕ್ರಿ. ಶ. ೧೧೦೪ ರಲ್ಲಿ ಉದಯಿಸಿದರೆಂದು ಕಂಡು ಬರುತ್ತೆ. ಸಿದ್ಧ ರಾಮನು ಜನ್ಮಿಸಿದ ಆ ಶುಭದಿನದಂದೇ—ಅವನ ಪುಣ್ಯ ಪರಿಪಾಕವದೆಂತಹದೋ ಜಗದ್ಗುರು ಶ್ರೀ ರೇವಣಸಿದ್ಧೇಶ್ವರರೇ ತಮ್ಮ ಅಮೃತ ಹಸ್ತದಿಂದ ಆ ಶಿಶುವಿಗೆ ಮಸ್ತಕದಲ್ಲಿ ಇಷ್ಟಲಿಂಗಧಾರಣೆ ಮಾಡಿ ಅನುಗ್ರಹಿಸಲು, ಮುಂದೆ ಜಗನ್ಮಾತೆ ಶ್ರೀ ಪಾರ್ವತಿಯಿಂದ ಆ ಶಿಶುವಿಗೆ "ಅನಿಮಿಷಯೋಗಿ, ಪ್ರಾಣಯೋಗಿ, ಕಾರಣ ರುದ್ರ, ನಿತ್ಯತೃಪ್ತ, ಮತ್ತೂ ಸಿದ್ಧರಾಮ," ಎಂಬ ಪಂಚನಾಮಕರಣವೆಸಗಿ ಅನುಗ್ರಹಿಸಿ ಅಂತರ್ಧಾನಳಾದಳು. ಮುಂದೆ ಎಂಟನೇ ವರ್ಷದವನಾದರೂ ಮುಗ್ಧನೂ ಮೌನಿಯಾಗಿ ಮಾತನಾಡದೆ, ರೆಪ್ಪೆ ಬಡಿಯದ ದೃಷ್ಟಿಯುಳ್ಳವ ನಾಗಿ ನಿತ್ಯತೃಪ್ತನಾಗಿಯೂ, ನಡೆದರೆ ಹೆಜ್ಜೆಗಳಿಲ್ಲದವನಾಗಿಯೂ, ಇರುವ ಈ ಮಹಾವಿಭೂತಿ ಪುರುಷನನ್ನು ತಾಯ್ತಂದೆಗಳು ದನಕಾಯಲು ಅಡವಿಗೆ ಕಳಿಸಿ ದಾಗ, ಅಲ್ಲಿ ಇವನಿಗೆ ಒಂದು ದಿನ ಶ್ರೀ ಶೈಲಕ್ಷೇತ್ರ ಪ್ರವಿರಾಜಮಾನ ಶ್ರೀ ಮಲ್ಲಿಕಾರ್ಜುನ ದೇವತಾ ಸಾರ್ವಭೌಮನು ಗುರು ರೂಪದಿಂದ ಪ್ರತ್ಯಕ್ಷನಾಗಿ, ಅನಿಮಿಷಯ್ಯನೆಂಬ ಸಿದ್ಧರಾಮ ವಟುವನ್ನು ನೋಡಿ ಕರುಣೆಯಿಂದ ಕಟಾಕ್ಷಿಸಿ, ತನಗೆ ಹಸಿವಾಗಿರುವುದೆಂದೂ, ಅನ್ನದ ಬುತ್ತಿಯನ್ನು ತರಲು ಮನೆಗೆ ಕಳಿಸಿ ದನು. ಬುತ್ತಿಯೊಂದಿಗೆ ಮರಳಿ ಬರುವುದರೊಳಗಾಗಿ ಆ ಮಲ್ಲಯ್ಯನು ಮಾಯವಾಗಿದ್ದನು. ಅದರಿಂದ ಸಂತಪ್ತನಾದ ಸಿದ್ಧರಾಮಬಾಲನು "ಮಲ್ಲಯ್ಯ ! ಮಲ್ಲಯ್ಯ !!" ಎಂದು ಗಟ್ಟಿಯಾಗಿ ಕೂಗುತ್ತಾ ಉರುಳಾಡ ಹತ್ತಿದನು. ಅವನ ಹುಚ್ಚು ಭಕ್ತಿಯನ್ನು ಕಂಡ ಅಲ್ಲಿಯೇ ಶ್ರೀ ಶೈಲಕ್ಕೆ ಮಹಾ ಶಿವರಾತ್ರಿ ಪುಣ್ಯಕಾಲದ ಶ್ರೀ ಬ್ರಮರಾಂಬಾ ಮಲ್ಲಿಕಾರ್ಜುನರ ದಿವ್ಯ ದರ್ಶನ ಪೂಜಾ ಸೇವಾದಿಗಳಿಗೆಂದು ಹೋಗುತ್ತಿದ್ದ ಯಾತ್ರಿಕರು, ಅಂದರೆ ಕಂಬಿಯ ಹೊತ್ತು ಹರಕೆಯುಳ್ಳ ಜಂಗಮರು, "ಅಯ್ಯಾ ಮಗು ಸಿದ್ಧರಾಮ ನಿನ್ನ

ಮಲ್ಲಯ್ಯನನ್ನು ತೋರಿಸುವೆವು" ಎಂದು ಅವನನ್ನು ಸಮಾಧಾನಪಡಿಸಿ, ಸಿದ್ಧ ರಾಮುನನ್ನು ಶ್ರೀಶೈಲ ಮಹಾ ಕ್ಷೇತ್ರಕ್ಕೆ ಕರತಂದು ಅಲ್ಲಿ ವಿರಾಜಿಸುತ್ತಲಿರುವ ಶ್ರೀ ಪರ್ವತಲಿಂಗವೆಂದು ಜಗತ್ ವಿಖ್ಯಾತವಾದ ಶ್ರೀ ಮಲ್ಲಿಕಾರ್ಜುನ ಜ್ಯೋತಿ ರ್ಲಿಂಗವನ್ನು ತೋರಿಸಿದರು. ಮುಕ್ತಿಪ್ರದವಾದ ಮೂರು ಪುಣ್ಯ/ಕ್ಷೇತ್ರಗಳಲ್ಲಿ ‖ ಶ್ರೀ ಶೈಲ ಶಿಖರೇದೃಷ್ಟ್ವಾ ‖ ಅಂದರೆ ಶ್ರೀ ಶೈಲದ ಶಿಖರವನ್ನು ದರ್ಶಿಸಿದ ಮಾತ್ರದಿಂದಲೇ ಮುಕ್ತಿ ಎಂದಿರುವುದು. ‖ ಕಾಶ್ಯಾಂತು ಮರಣಾನ್ಮುಕ್ತಿಃ । ಸ್ಮರಣಾ ದರುಣಾಚಲೇ । ಶ್ರೀ ಶೈಲೇ ಶಿಖರೇದೃಷ್ಟೇ । ಪುನರ್ಜನ್ಮನ ವಿದ್ಯೆತೇ ‖ ಏನೆಂದರೆ ಶ್ರೀ ಕ್ಷೇತ್ರಕಾಶಿಯಲ್ಲಿ ಸತ್ತರೆ ಆಜೀವಾತ್ಮನಿಗೆ ಮುಕ್ತಿ. "ಶ್ರೀ ಮದರು ಣಾಚಲ ಅರುಣಾಚಲ," ಎಂದು ಭಕ್ತಿಯಿಂದ ಸ್ಮರಣ ಮಾತ್ರೇಣ ಮುಕ್ತಿ, ಮತ್ತೂ ಪಾವನವಾದ ಶ್ರೀಶೈಲ ಕ್ಷೇತ್ರದ ಮಹಾ ಶಿಖರವನ್ನು ಭಕ್ತಿಭಾವದಿಂದ ದರ್ಶನ ಮಾಡಿದಮಾತ್ರಕ್ಕೆ ಮುಕ್ತಿ ಮಾನವನಿಗೆ ಪ್ರಾಪ್ತಿಯಾಗುತ್ತಲಿರುವುದು. "ಕೈವಲ್ಯೋಪನಿಷತ್ತಿನಲ್ಲಿ" ಶ್ರೀ ಶೈಲ ದರ್ಶನಾನ್ಮುಕ್ತಿಃ" ಶ್ರೀ ಶೈಲವನ್ನು ಕಂಡ ಮಾತ್ರದಿಂದಲೇ ನರನಿಗೆ ಮುಕ್ತಿ ಹಸ್ತಗತವಾಗುವುದೆಂದು, ಪ್ರಮಾಣವಿರು ವುದು. ಆದಿ ಶ್ರೀ ಶಂಕರಾಚಾರ್ಯರು ‖ ಸೇವೇತ್ ಶ್ರೀಗಿರಿ ಮಲ್ಲಿಕಾರ್ಜುನ ಮಹಾಲಿಂಗಂ ಶಿವಾಲಿಂಗಿತಂ ‖ ಎಂದು ಅಪ್ಪಣೆ ಮಾಡಿರುವರು. ಇಂತಪ್ಪ ದರ್ಶನ ಮಾತ್ರದಿಂದ ಮುಕ್ತಿಪ್ರದವಾದ ಶ್ರೀ ಶೈಲಕ್ಷೇತ್ರದ ಪುಣ್ಯತಮ ಮಹಾ ಶಿಖರವನ್ನು ಈ ಜನ್ಮದಲ್ಲೇ ಕಂಡು ಧನ್ಯರಾಗಬೇಕಲ್ಲವೆ. ಮುಕ್ತಿ ಸ್ಥಳಗಳು ಏಳೆಂದು ಪ್ರತೀತಿಯುಂಟು. ಕಂಚಿ, ಅಯ್ಯೋಧ್ಯಾ, ಮಥುರಾ, ಮಾಯಾ (ಅಂದರೆ ಹರಿದ್ವಾರ್), ಅವಂತಿಕಾ ದ್ವಾರಕ, ಕಾಶಿ, ಮತ್ತು ಇವೂ ಸಹ ಮುಕ್ತಿಪ್ರದವಾದ ದಿವ್ಯ ಕ್ಷೇತ್ರಗಳೆಂದೆನಿಸಿರುವುವು. ಮುಕ್ತಿಪ್ರದ ದಿವ್ಯ ಕ್ಷೇತ್ರ ಗಳಿಗೆಲ್ಲಾ ಮಸ್ತಕಮಣಿಯಂತೆ ವಿರಾಜಿಸುವ ದಿವ್ಯ ಕ್ಷೇತ್ರವೆಂದರೆ-"ಶ್ರೀ ಶೈಲ ಶಿಖರೇದೃಷ್ಟ್ವಾ" ಎಂದಂತೆ ಶ್ರೀ ಶೈಲ ಕ್ಷೇತ್ರವೇ ಆಗಿರುವುದು. ಆ ಸಿದ್ಧರಾಮ ಮುಗ್ಧಮಣಿ ವಟುವು ಶ್ರೀ ಶೈಲ ಶಿಖರವನ್ನೂ ಹಾಗೂ ಶ್ರೀ ಶೈಲನಾಥನಾದ ಶ್ರೀ ಮಲ್ಲಿಕಾರ್ಜುನ ದೇವತಾ ಸಾರ್ವಭೌಮ ಜ್ಯೋತಿರ್ಲಿಂಗವನ್ನೂ ಕಣ್ಮನಂ ಗಳು ದಣಿಯುವಂತೆ ನೋಡಿದರೂ, ಎಲ್ಲಿಯೂ ತಾ ಕಂಡ ಸದ್ಗುರು ಶ್ರೀ ಗಿರಿ

ಮಲ್ಲೇಶನನ್ನು ಪುನಃ ಕಾಣದಿರಲು, "ನನ್ನ ಮಲ್ಲಯ್ಯನಲ್ಲ" ಎಂದು ಗಟ್ಟಿಯಾಗಿ ಚೀರುತ್ತಾ ಕಾಡು ಮೇಡುಗಳಲ್ಲೂ ಗಿರಿ ಗಹ್ವರಗಳಲ್ಲೂ ಹಳ್ಳ ಕೊಳ್ಳಗಳಲ್ಲೂ ಹುಡುಕುತ್ತಾ "ನನ್ನ ಮಲ್ಲಯ್ಯನೆಲ್ಲಿ! ನನ್ನ ಮಲ್ಲಯ್ಯನೆಲ್ಲಿ!! ನನಗೆ ಬುತ್ತಿ ತರಹೇಳಿ ಹಸಿವೆಂದು ನುಡಿದ "ನನ್ನ ಮಲ್ಲಯ್ಯನೆಲ್ಲಿ" ಎಂದು ಅರಚಿಕೊಂಡು ಭಕ್ತಿಯ ಆವೇಶದಿಂದ ಮತ್ತೆ ಮತ್ತೆ ಮಲ್ಲೇಶನ ಮನದಲ್ಲಿ ನೆನೆಯುತ್ತಾ ॥ ಹಸಿದ ಜಂಗಮನೆಂದು ಬುತ್ತಿಯನು ತರಹೇಳಿ। ದಿಶೆಗೆಟ್ಟು ನೀ ಓಡಿಬಂದೆ ಎಂದು, ಪಶುಪತಿಯ। ಸಿದ್ಧರಾಮಣ್ಣನುಣ್ಣಿಸ ಬಂದಿರುವನೋ॥ ಎಂಬಂತೆ, ಶ್ರೀ ಮಲ್ಲೇಶನನ್ನು ಹುಡುಕುತ್ತಾ ಶ್ರೀ ಶೈಲ ಕ್ಷೇತ್ರದ ಶ್ರೀ ಮಲ್ಲಿಕಾರ್ಜುನ ದೇವಾಲಯಕ್ಕೆ ಎಡ ಪಾರ್ಶ್ವದಲ್ಲಿ ಪ್ರಕಾಶಮಾನವಾಗಿರುವ ಮಲ್ಲಿಗೆಯ ಕುಂಡವನ್ನು ಕಂಡು ಸಿದ್ಧರಾಮನು ಕಣ್ ಕಂಬನಿಗಳಿಂದ ಬಿಸಿಸುಯ್ದು ಆ ಸುಂದರವಾದ ಕೊಳವನ್ನು ಸಮೀಪಿಸಿದೊಡನೆ ಮಲ್ಲಯ್ಯ ಸಿಲ್ಲಿರಬಹುದೆಂದು ನಂಬಿ ಭಕ್ತಿ ಭಾವದಿಂದ "ಮಲ್ಲಯ್ಯ ಬಾ ಓ ಎನ್ನಮಲ್ಲಯ್ಯ ಬಾ !" ಎಂದು ಅಬ್ಬರಿಸಿ ಕೂಗಿದನು. ಆಗ ಅಲ್ಲಿ ಆ ಕೂಗಿನ ಪ್ರತಿಧ್ವನಿ ಕೇಳಿಬಂತು. ಒಡನೆ ಸಿದ್ಧರಾಮಣ್ಣನು "ಓಹೋ! ಎನ್ನಯ ಮಲ್ಲಯ್ಯನು ಇಲ್ಲೇಯಿರುವನೆಂದು" ದೃಢಸಂಕಲ್ಪದಿಂದ ನಂಬಿ ಆ ಮನೋಹರವಾದ ಮಲ್ಲಿಗೆಯ ಕೊಳದೊಳಗೆ ತಕ್ಷಣ "ಮಲ್ಲಯ್ಯ" ಎಂದು ಧುಮಿಕಿದನು. ಮುಗ್ಧ ಬಾಲನಾದ ಸಿದರಾಮಣ್ಣನ ಅನನ್ಯ ಭಕ್ತಿಗೆ ಮೆಚ್ಚಿದ ॥ ಭಕ್ತ್ಯಾ ತುಷ್ಯತಿ ಕೇವಲಂ ॥ ಎಂಬಂತೆ ಸಂಪ್ರೀತನಾದ ಶ್ರೀ ಶೈಲಗಿರಿ ಚನ್ನಮಲ್ಲಿಕಾರ್ಜುನ ದೇವನು ಆಗಲೇ ಅಲ್ಲಿಯೇ ಅಲಂಕೃತನಾಗಿ ಸಂಭವಿಸಿ ಪ್ರತ್ಯಕ್ಷನಾಗಿ, ಸಿದ್ಧರಾಮು ಬಾಲ ಭಕ್ತಮಣಿ ಬೀಳದಂತೆ ತನ್ನ ಅಮೃತಹಸ್ತಗಳಿಂದ ಮಲ್ಲಿಗೆಯ ಹೂವಿನ ಸರದಂತೆ ಥಟ್ಟನೆ ಎತ್ತಿಕೊಂಡು, ಅಳುವ ಬಾಲಕನನ್ನು ಸಂತೈಸಿಸಿ ಅಭಯವನ್ನು ನೀಡಿ ಆಶೀರ್ವದಿಸಿ ಸಿದ್ಧರಾಮನ ಮುಗ್ಧಭಕ್ತಿಗೆ ಮನಸೋತು ಮುದ್ದಾಡಿ, ಶ್ರೀ ಚೆನ್ನಮಲ್ಲೇಶನು ಗುರು ರೂಪವನ್ನು ತಾಳಿ ಸಿದ್ಧರಾಮನಿಗೆ—ವಿಧಿವತ್ತಾಗಿ ಶಿವದೀಕ್ಷೆಯನ್ನು ಅನುಗ್ರಹಿಸಿ, "ಮಗು ಸಿದ್ಧರಾಮು! ನೀನು ಮರಳಿ ಸೊನ್ನಲಿಗೆ (ಸೊಲ್ಲಾಪುರಕ್ಕೆ) ಹೋಗು. ನಾನು ಶಿವಲಿಂಗ ರೂಪದಲ್ಲಿ ಅಲ್ಲಿಗೆ ಬಂದು

ನೆಲೆಸುವೆನೆಂದು'' ಸಮಾಧಾನಪಡಿಸಿ ಸ್ವಾಮಿ ಸಿದ್ಧರಾಮನನ್ನು ಸೊನ್ನಲಿಗೆ ವಾಪಸ್ ಕಳುಹಿಸಿಕೊಟ್ಟನು. ಭಕ್ತ ಪರಾಧೀನನಾದ ಶ್ರೀ ಮಲ್ಲಯ್ಯನು ಕೊಟ್ಟ ವಾಗ್ದಾನವಂತೆ-ಸೊಲ್ಲಾಪುರದಲ್ಲಿ ಎಕ್ಕೆಗಿಡದ ಕೆಳಭಾಗದಲ್ಲಿ ಶಿವಲಿಂಗ ರೂಪದಲ್ಲಿ ಅವತರಿಸಿ, ಸಿದ್ಧರಾಮನ ಅಭೀಷ್ಟವನ್ನು ನೆರವೇರಿಸಿದನು.

ಅಲ್ಲಿಂದ ಮುಂದೆ ಶ್ರೀ ಸಿದ್ಧರಾಮನು ಘನಶಿವಯೋಗದಲ್ಲಿ ತಲ್ಲೀನನಾಗಿ ಅನಂತಾನಂತ ಪವಾಡಗಳನ್ನೆಸಗಿ ಭಕ್ತೋದ್ಧಾರ, ಧರ್ಮ ಪ್ರಚಾರ ಶಿಷ್ಟರಕ್ಷಣೆ ಸ್ವಧರ್ಮಾನುಷ್ಠಾನ ಪರನಾಗಿ ೧೦೧ ಸ್ಥಲಗಳಲ್ಲೂ ನಿತ್ಯ ಇದ್ದು ಮಹಾ ಶಿವಾನುಭವಿಗಳಾಗಿ ವಿರಾಜಿಸಿ, ಸಿದ್ಧಿಪಡೆದ ಪ್ರತೀಕವಾಗಿ ೧೦೧ ಸುದೀರ್ಘ ವರ್ಷಗಳವರವಿಗೂ ಭುವಿಯಲ್ಲಿ ಪ್ರಕಾಶಿಸಿ, ಅಖಂಡಮಯವಾದ ಶಿವಯೋ ಗಾನುಷ್ಠಾನ ಸಾಮ್ರಾಜ್ಯದ ಸಾಮ್ರಾಟ್ ಸ್ವರೂಪದಿಂದ ಮಹಾ ಗುಹೆ ಯೊಂದನ್ನು ಪ್ರವೇಶಿಸಿ ಅಲ್ಲಿ ಏಕಾಂತವಾದ ಉನ್ನತಾಸನದ ಮೇಲೆ ಮಂಡಿಸಿ ಗುರು ರೇಣುಕನನ್ನು ಮನಸಾಸ್ಮರಿಸಿ ವಂದಿಸಿ ॥ ಧ್ಯಾನಾವಸ್ಥಿತ ತದ್ಗತೇನ ಮನಸಾ । ಪಶ್ಯಂತಿ ಯಂ ಯೋಗಿನೋ ॥ ಯೆಂಬಂತೆ ತದೇಕಧ್ಯಾನ ನಿಷ್ಠೆ ಯಿಂದ ಯೋಗ ನಿದ್ರೆಯಲ್ಲಿ ಮುದ್ರಿತನಾಗಿದ್ದನು. ಶಿವನಾಮಸ್ಮರಣೆ, ಶಿವ ಪಂಚಾಕ್ಷರೀ ಮಹಾ ಮಂತ್ರಾನುಸಂಧಾನ, ಶಿವಚಿಂತನೆ, ಶಿವಧ್ಯಾನ, ಮತ್ತೂ ಶಿವಯೋಗಾದಿ ಮಹಾವ್ರತಗಳು ಯಂಥಃ ಮುಗ್ಧ, ಮೂಕನನ್ನಾದರೂ ॥ ಮೂಕಂ ಕರೋತಿವಾಚಲಂ । ಪಂಗುಂ ಲಂಘಯತೇ ಗಿರಿಂ ॥ ಯತ್ಕೃಪಾ ತಮಹಂವಂದೇ । ರೇಣುಕಾರ್ಯಂ ಜಗದ್ಗುರುಂ ॥ ವಾಕ್‌ಪಟುತ್ವದಿಂದ ಪ್ರೌಢನನ್ನಾಗಿಸಿ, ಮಹಾ ವೈರಾಗ್ಯಚಕ್ರವರ್ತಿ ಸಾರ್ವಭೌಮನಾದ ಶ್ರೀಮಜ್ಜ ಗದ್ಗುರು ರೇಣುಕ ಗಣೇಂದ್ರನ ದಿವ್ಯ ಕೃಪಾವಿಶೇಷದಿಂದ ಮಹಾ ಶಿವಾನುಭವಿ ಯಾ ೧, ಶಿವಾನುಭಾವದ ಶಿವತೇಜಸ್ಸಿನಿಂದ ಜ್ಞಾನಮಯ ಪ್ರದೀಪನಾಗಿ ಆ ಗುಹೆಯಲ್ಲಿ ಪ್ರಜ್ವಲಿಸುತ್ತಿದ್ದನು.

ಶೂನ್ಯ ಸಿಂಹಾಸನಾಲಂಕೃತ ಪರಮ ವೈರಾಗ್ಯ ಚಕ್ರವರ್ತಿ ಎಂದು ಸ್ತುತ್ಯನಾದ ಅಲ್ಲಮನು ಗುಹೇಶ್ವರನಾದ ಗುರು ಸಿದ್ಧರಾಮನನ್ನು ಸಂಧಿಸಿ ಅವನ ದಿವ್ಯಾನುಗ್ರಹಕ್ಕೆ ಪಾತ್ರನಾದ ಸಂದರ್ಭ ಅತ್ಯಂತ ಸ್ಮರಣೀಯವೇ

ಆಗಿರುವುದು. ದುಃಖದ ಹೃದಯದಲ್ಲಿ ನಿತ್ಯಸುಖದ ಅರಿವು ಪ್ರಚೋದಿತ ವಾಗುವುದೆಂಬ ಮಾತು ಸತ್ಯವೇ ಹೌದು. ವಾಲ್ಮೀಕಿ ತನ್ನ ಕಣ್ಣೆದುರಿನಲ್ಲಿ ಜರುಗಿದ ಘೋರ ಘಟನೆಯ ಪರಿಣಾಮವಾಗಿ ಪರಿತಪಿಸಿ, ಶ್ರೀಮದ್ರಾಮಾ ಯಣವನ್ನು ಬರೆಯಲು ಪ್ರಾರಂಭಿಸಿದ್ದ ಸುಮುಹೂರ್ಥದಲ್ಲಿ ಹೃದಯ ವಿದ್ರಾವಕ ವಿಚಿತ್ರ ದುಃಖಾಬ್ಧಿಯಿಂದ ಮುಳ್ಗಿ ಅತೀವ ಚಿಂತಾಕ್ರಾಂತನಾಗಿ ಬೆಂದು ಮನನೊಂದು ಆಚರಿಂದ ಮುಖಕಮಲವು ಬಾಡಿ, ಭಗ್ನ ಮನೋರಥ ನಾಗಿರುವ ವೇಳೆಯಲ್ಲಿ, ಅವನ ಸುಕೃತೋದಯದ ಭಾಗ್ಯವೇ ಬಾಗಿಲಿಗೆ ಬಂದಂತೆ—

"ಆ ಜಗಾಮತೋತ ಬ್ರಹ್ಮ ಲೋಕಕರ್ತಾ ಸ್ವಯಂ ಪ್ರಭುಃ। ಚತು ರ್ಮುಖೋ ಮಹಾತೇಜಾ ದ್ರುಷ್ಟುಂ ತಂ ಮುನಿಪುಂಗವಂ." ಸೃಷ್ಟಿಕರ್ತನೂ ಪಿತಾಮಹನೂ ಆದ ಚತುರ್ಮುಖಬ್ರಹ್ಮನು ವಾಲ್ಮೀಕಿ ಋಷಿಗಳ ಆಶ್ರಮಕ್ಕೆ ಸಂಪ್ರಾಪ್ತರಾಗಿ, ಅವರ ದುಃಖಕ್ಕೆ ಕಾರಣವಾದ ವಿಷಾದಕರ ಬೀಜವನ್ನು ಸುಟ್ಟು, ಅವರ ಹೃದಯ ಗುಹೆಯ ಪ್ರಜ್ಞಾನವನ್ನು ಪ್ರಚೋದಿಸಿ "ಶ್ಲೋಕ ಶ್ಲೋಕತ್ವ ಮಾಗತಃ" ಅಂದರೆ ಹೇ ವಾಲ್ಮೀಕಿಯೇ ನಿನ್ನ ವಾಂಛಿತಾರ್ಥವು ಫಲಕಾರಿಯಾಗುವಂಥಾ ಸುಮುಹೂರ್ತವು ನಿನ್ನನ್ನು ಸಮೀಪಿಸಿರುವುದರಿಂದ ಲೋಕ ಕಲ್ಯಾಣಾರ್ಥ ನಿನ್ನ ಶ್ಲೋಕದ ಕಡಲಿನಿಂದ ಹೊರಬಿದ್ದ ಶ್ಲೋಕವೇ ಮಂಗಳಮಯ ಶ್ರೀಮದ್ರಾಮಾಯಣ ಮಹಾಕಾವ್ಯ ರಚನೆಗೆ ಮಂಗಳ ಶ್ಲೋಕವಾಗಿ ರಂಜಿತವಾಗಿರುವದೆಂಬ ಅರ್ಥ ಪುಷ್ಟಿಯಿಂದ ತುಂಬಿ ತುಳುಕುವ ಭಾವವನ್ನು ಬ್ರಹ್ಮನು ಸಾಕ್ಷಾತ್ತಾಗಿ ತೋರ್ಪಡಿಸಲು, ಆ ಕ್ಷಣವೇ ಹರ್ಷಚಿತ್ತ ನಾದ ವಾಲ್ಮೀಕಿ ಲೋಕಾಭಿರಾಮನಾನದ ಶ್ರೀ ಸೀತಾರಾಮನ ಚರಿತ್ರೆ ಎಂಬ ಶ್ರೀಮದ್ರಾಮಾಯಣವನ್ನು ಅಮೋಘವಾಗಿ ರಚಿಸಿ, ವಾಲ್ಮೀಕಿ ರಾಮಾಯಣ ವೆಂಬ ಹೆಸರಿನಿಂದ ಜಗತ್ತಿನಲ್ಲಿ ವಿಖ್ಯಾತವಾಗಲು ವಾಲ್ಮೀಕಿಯ ದುಃಖವಲ್ಲವೇ ಇದಕ್ಕೆ ಮೂಲ. ದಾರಿ ಹೋಕರನ್ನು ದರೋಡೆ ಮಾಡಿಕೊಂಡು ಜೀವಿಸುತ್ತ ಲಿದ್ದ ದುಷ್ಟ ಬೇಡರವ, ತಪಸ್ಸ್ವಾಧ್ಯಾಯ ನಿರತರಾದ ಶ್ರೀ ನಾರದರ ಸದುಪ ದೇಶದಿಂದ, ಆ ಬೇಡನ ದುಃಖದ ಬೇಗೆಯಿಂದ ದೂರವಾಗಿ, ಶ್ರೀರಾಮ

ತಾರಕ ದಿವ್ಯ ಮಂತ್ರೋಪದೇಶದಿಂದ ವಾಲ್ಮೀಕಿ ಋಷಿ ಎಂದೆನಿಸಿ ಮುಕ್ತನಾಗಿ ಕೀರ್ತಿ ಶೇಷನಾಗಿರುವನು ಸರಿಯಷ್ಟೆ. ತನ್ನ ಕರುವಿದ್ದೆಡೆಗೆ ಹಸುವು ಹುಡುಕಿ ಕೊಂಡು ಬರುವುದು ಹೇಗೆ ಸತ್ಸಂಪ್ರದಾಯವೋ ಅದರಂತೆ-ತಾಯಿ ಹಸುವಿದ್ದೆಡೆಗೆ ಕರು ಅಬ್ಬರಿಸಿಕೊಂಡು ಬಂದು ಸೇರಿ ಶಾಂತಿ ತೃಪ್ತಿಗಳನ್ನು ಪಡೆಯುವ ಸಂಪ್ರದಾಯವೂ ಸತ್ಸಂಪ್ರದಾಯವೇ ಆಗಿರುವುದು.

ಅಲ್ಲಮನು ಜೀವನದ ಜಂಜಾಟದಲ್ಲಿ ಸಿಕ್ಕಿ ಕಾಲಕರ್ಮ ಸಂಯೋಗದ ಬಿರುಗಾಳಿಯಿಂದ ಅಪ್ಪಳಿಸಲ್ಪಟ್ಟು, ತನ್ನ ಪ್ರಾಣಕಾಂತೆಯಾದ ಕಾಮಲತೆ ಎಂಬ ಕೋಮಲಾಂಗಿಯನ್ನು ಕಳೆದುಕೊಂಡು, ವಿಧಿವಶಳಾದ ಆ ಪತ್ನೀ ವಿಯೋಗದಿಂದ ಅಪಾರ ದುಃಖಕ್ಕೀಡಾಗಿ ಕಾಡು ಮೇಡುಗಳಲ್ಲಿ ಅಲೆದಾಡಿ ರೋಧಿಸಿ, ನೊಂದು ಬೆಂದು ಬೆಂಡಾಗಿ ಬಳಲಿ ಬಿಸುಸುಯಿದು ವನವನಾಂತರಗಳನ್ನು ದಾಟ ಪವಿತ್ರವಾದ ಸೊನ್ನಲಿಗೆಯ ಪುಣ್ಯ ಪ್ರದೇಶದಲ್ಲಿ ಕಾಲಿಟ್ಟನು. ತನ್ನ ಅನೇಕ ಜನ್ಮಗಳ ಪೂರ್ವಾರ್ಜಿತಸುಕೃತ ವಿಶೇಷದಿಂದ, ಶ್ರೀ ಸಿದ್ಧರಾಮ ಶಿವಯೋಗೀಶ್ವರರ ತಪೋ ಭೂಮಿಯಾದ ಸೊನ್ನಲಿಗಿಕ್ಷೇತ್ರ ಪ್ರವಿರಾಜಮಾನ ಗವಿಯಬಳಿ ಬಂದು ಸೇರಿದನು. ಆ ಗವಿ ಹೊರಗಿನಿಂದ ನೋಡುವವರಿಗೆ ಗಾಢವಾದ ಕತ್ತಲಿನಿಂದ ಕೂಡಿ ನಿರ್ಮಾನುಷ್ಯ ಪ್ರದೇಶವಾಗಿದ್ದುದರಿಂದ ಯಾರೂ ಅಲ್ಲಿಗೆ ಹೋಗುತ್ತಿರಲಿಲ್ಲ. ಈ ಗವಿಯ ಆವರಣವನ್ನು ಸಮೀಪಿಸುತ್ತಲೇ ಅಲ್ಲಮನ ಮನಸ್ಸಿಗೆ ಶಾಂತಿ ಏರ್ಪಟ್ಟು ದುಃಖ ಕಣ್ಮರೆಯಾಯಿತು. ಇದರಿಂದ ಚೇತರಿಸಿಕೊಂಡ ಅಲ್ಲಮನು ಚಿತ್ತಸ್ಥೈರ್ಯದಿಂದ ಗುಹೆಯೊಳಗೆ ಪ್ರವೇಶಿಸಿದನು. ಹಾಗೇ ಮೆಲ್ಲ ಮೆಲ್ಲಗೆ ಗುಹೆಯೊಳಗೆ ಸ್ವಲ್ಪ ದೂರ ಹೋದ ಅಲ್ಲಮನಿಗೆ, ಉನ್ನತವಾದ ಪೀಠದಲ್ಲಿ ಜಿಂ ಆಸನದ ಮೇಲೆ ಯೋಗಾಸೀನನಾಗಿದ್ದ ಅನಿಮಿಷ ಯೋಗಿಯಾದ ಶ್ರೀ ಸಿದ್ಧರಾಮ ಶಿವಯೋಗೀಶ್ವರನನ್ನು ಸಂದರ್ಶಿಸಿದ ತಕ್ಷಣವೇ ಅಲ್ಲಮನ ಬಹು ಪೂರ್ವಕೃತ ಕಾಮವಾಸನೆಗಳೆಲ್ಲಾ ಪೂರ್ಣ ನಷ್ಟ ವಡೆದು ಶಿವಭಾವನೆಯು ಉದಯವಾಯಿತು. ಅಲ್ಲಮನು ಶ್ರೀ ಸಿದ್ಧರಾಮನ ಕೃಪಾದರಕ್ಕೆ ಪಾತ್ರನಾಗಿ ಆ ಅನಿಮಿಷ ಮಹಾ ಶಿವಯೋಗಿಯ ಪಾದ ಸೇವೆಯನ್ನೆಸಗುತ್ತಾ ಅಲ್ಲೇ ನಿಂತುಬಿಟ್ಟನು. ಅಲ್ಲಮನು ಶ್ರೀ ಸಿದ್ಧರಾಮ ಶಿವಯೊ

ಗೀಶ್ವರರನ್ನು ವಿನಯಾನ್ವಿತನಾಗಿ ಪ್ರಾರ್ಥಿಸಿಕೊಂಡ ಪ್ರಕಾರ ಅನಿಮಿಷಯ್ಯ ರೆಂಬ ನಾಮಾಂಕಿತರೂ ಆದ ಶ್ರೀ ಸಿದ್ಧರಾಮರು ತಾವಿದ್ದ ಗುಹೆಯಲ್ಲಿಯೇ ಪಂಚಕಳಸ ಸ್ಥಾಪನಪೂರ್ವಕ ಪಂಚಬ್ರಹ್ಮ ಹೋಮವನ್ನೆಸಗಿ ಶ್ರೀಮದ್ರೇಣು ಕಾದಿ ಪಂಚಾಚಾರ್ಯರ ಸ್ಮರಿಸಿ, ಅಲ್ಲಮನಿಗೆ ಲಿಂಗದೀಕ್ಷೆಯನ್ನು ಮಾಡಿದರು. ಈ ಸತ್‌ಸಂಸ್ಕಾರದಿಂದ ಪುನೀತನೂ ಕೃತಕೃತ್ಯನೂ ಆದ ಅಲ್ಲಮನು, ಗುರು ಗುಹೇಶ್ವರನ ಅಡಿಗಡಿಗೆ ಸ್ಮರಿಸಿಕೊಂಡು ಅಲ್ಲಿಂದ ಕಲ್ಯಾಣಕ್ಕೆ ತೆರಳಿದನು. ನಂತರ ಶ್ರೀ ಬಸವಣ್ಣನವರ ಇಚ್ಛಾನುಪ್ರಕಾರ, ಅಲ್ಲಮನು ಚೆನ್ನಬಸವಣ್ಣನನ್ನು ಗುರು ಗುಹೇಶ್ವರರಾದ ಶ್ರೀ ಸಿದ್ಧರಾಮರಲ್ಲಿಗೆ ಕರತಂದು ಚೆನ್ನಬಸವಣ್ಣ ನವರಿಗೂ ಪಂಚಬ್ರಹ್ಮ ಹೋಮ ವಿಧಿಪೂರ್ವಕ ಲಿಂಗದೀಕ್ಷೆಯನ್ನು ಮಾಡಿಸಿ ದನು. ಆಗ್ಗೆ ಚೆನ್ನಬಸವಣ್ಣನಿಗೆ ೮ ವರ್ಷ ವಯಸ್ಸಾಗಿದ್ದಿತೆಂದು ಪ್ರತೀತಿ. ಈ ಮೇಲ್ಕಂಡ ಅಂಶಗಳಿಂದ ಅಲ್ಲಮನು ಗುರು ಅನಿಮಿಷಯ್ಯನೆಂಬ ಶ್ರೀ ಸಿದ್ಧ ರಾಮ ಗುಹೇಶ್ವರನೆಂದು ಸ್ಪಷ್ಟವೇ ಆಯಿತು. ಸಿದ್ಧರಾಮನು ಜಗದ್ಗುರು ರೇವಣಸಿದ್ಧ ಮಹಾ ಯೋಗಿಗಳ ಶಿಷ್ಯ ಎಂಬುದು ಗಮನಾರ್ಹವೇ ಆಗಿದೆ. ಶ್ರೀ ಅಲ್ಲಮ ಚೆನ್ನಬಸವಣ್ಣನವರಿಗೆ ಉಜ್ವಲ ಶಿವಯೋಗಿಗಳೂ, ಜಗದ್ಗುರು ರೇವಣಸಿದ್ಧ ಮಹಾಯೋಗಿಗಳ ದಿವ್ಯ ಕೃಪಾನ್ವಿತರೂ ಆದ ಅನಿಮಿಷಯ್ಯನೆಂಬ ಶ್ರೀ ಸಿದ್ಧರಾಮೇಶ್ವರ ವೈರಾಗ್ಯ ಚಕ್ರವರ್ತಿ ಜಂಗಮ ಶಿವಯೋಗಿಗಳಿಂದ ಸಾಕ್ಷಾತ್ ಲಿಂಗದೀಕ್ಷೆಯಾದ ಕಾರಣ, ಗುರುಗಳಂತೆಯೇ ಅವರ ಶಿವಯೋಗ ಫಲದಿಂದ ಮಹಿಮಾನ್ವಿತರಾಗಿ ಪ್ರಕಾಶಿಸಲು ಅವಕಾಶವಾಯಿತು. ಮನುಷ್ಯನು ಯಾವಾಗಲೂ ಮಹಾ ಪುರುಷರನ್ನೇ ಆಶ್ರಯಿಸಬೇಕೇ ಹೊರತು ಕ್ಷುದ್ರ ಜೀವಿಗಳೊಂದಿಗೆ ಸಹವಾಸ ಮಾಡಬಾರದೆಂದು ಆರ್ಯೋಕ್ತಿ ಇದೆ.

॥ ಕರ್ತವ್ಯಂ ಮಹದಾಶ್ರಯಂ ॥ ಎಂಬುದೇ ನಿದರ್ಶನ. ॥ ಮನುಷ್ಯತ್ವಂ ಮುಮುಕ್ಷುತ್ವಂ ಮಹಾಪುರುಷ ಸಂಶ್ರಯಃ ದುರ್ಲಭಃ ॥ ಮನುಷ್ಯನಾಗಿ ಹುಟ್ಟುವುದೇ ದುರ್ಲಭ. ಅದರಲ್ಲೂ ಮೋಕ್ಷಾಪೇಕ್ಷೆಯುಳ್ಳವನಾಗಿ, ಮಹಾ ಪುರುಷರನ್ನು ಆಶ್ರಯಿಸಿದುವುದೆಂದರೆ ಮತ್ತೂ ದುರ್ಲಭವೆಂದೇ ಜಗದ್ಗುರು ಶ್ರೀ ಶಂಕರಾಚಾರ್ಯರು ನುಡಿದಿರುವರು. ಶ್ರೀ ಸಿದ್ಧರಾಮರು ಶ್ರೀ ರೇವಣ

ಸಿದ್ಧ ಮಹಾ ಯೋಗಿಗಳ ವರಪ್ರಸಾದಿಗಳಾದ್ದರಿಂದ, ರೇಣುಕರ ಶಿಷ್ಯರೇ ಆದರು. ಶ್ರೀ ಅಲ್ಲಮ ಚೆನ್ನಬಸವಣ್ಣ ಮೊದಲಾದವರೂ ಸಹ ರೇವಣಸಿದ್ಧರ ಶಿಷ್ಯರ ಶಿಷ್ಯರೆಂಬೇ ಸ್ಪಷ್ಟವೂ ನಿರ್ವಿವಾದವೂ ಆಗಿರುತ್ತೆ. ಶ್ರೀ ಸಿದ್ಧರಾಮ ಯತಿ ಪುಂಗವರು ೧೧೧ ವರ್ಷ ಭುವಿಯಲ್ಲಿದ್ದರು ಎಂಬ ಬಗ್ಗೆ ಅವರ ಚರಿತ್ರಾ ವೃತದಲ್ಲಿ :—

ನೂರೊಂದು ಸ್ಥಲಗಳೋಳ್ ಜ್ಞಾನ ಶೂನ್ಯಾಂತದಿಂ ।
ಪಾರುಗಾಣುವ ತೆರದಿ ಸಿದ್ಧರಾಮೇಶನಂ ।
ನೂರೊಂದು ವರ್ಷಗಳನಾಯುಷ್ಯದೊಳು ಕಳೆದು
ಶಿವಯೋಗಸಿದ್ಧಿಯೊಳಗೆ ॥
ಪಾರುಗೈದಿದ ತನ್ನ ಜ್ಞಾನ ಕರ್ಮಂಗಳಲ್ಲಿ ।
ಮೇರೆದಪ್ಪಿದ ನೈಜಲಿಂಗಾಂಗ ಸಮರಸವ ।
ಸೂರೆಗೊಳ್ಳುತ ಸುಖದಿ ನೆಲೆಸಿದನು ಶಿವಯೋಗ
ಶಾಂತ ಸುಸಮಾಧಿಯೊಳಗೆ ॥

ಈ ಪದ್ಯದಲ್ಲಿಯ ವಿಷಯವನ್ನು ವಿಚಾರಮಾಡಿ ನೋಡಿದರೆ, ಶ್ರೀ ಸಿದ್ಧ ರಾಮೇಶ್ವರನು ಲಿಂಗಾಂಗ ಸಾಮರಸ್ಯ ರಹಸ್ಯವನ್ನೂ ಜ್ಞಾನಕರ್ಮಗಳ ಸಮು ಚ್ಚಯದ ತಳಹದಿಯುಂತೊಪ್ಪುವ ವೀರಶೈವ ಮತದ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತಾಚರಣೆಯ ಪರಾಕಾಷ್ಠತೆಯನ್ನೂ, ಇವೆಲ್ಲವುಗಳನ್ನೊಳಗೊಂಡ ಚಿದ್ಘನ ಶಿವಯೋಗ ಪ್ರಭಾವವನ್ನೂ ಜಗತ್ತಿಗೆ ಬೀರುವಂತೆ ಶ್ರೀ ಸಿದ್ಧರಾಮೇ ಶನು ೧೧೧ ವರ್ಷ ಭೂಮಿಯ ಮೇಲೆ ಪ್ರಕಟವಾಗಿದ್ದು ಕ್ರಿ ಶ. ೧೧೪೯ ರಲ್ಲಿ ಸರ್ವಭಕ್ತ ಕೋಟಿಗಳ ಸಮಕ್ಷಮ ಶಿವಯೋಗ ಸಮಾಧಿಯಲ್ಲಿ ಕುಳಿತು ಸದೇಹ ಮುಕ್ತರಾದರು. ಈ ಮೇಲ್ಕಂಡ ವಿಷಯಗಳನ್ನು ಪ್ರೌಢಕವಿಗಳಾದ ಶ್ರೀಮಂತ ಪ್ರಸಿದ್ಧ ಜಾಯಪ್ಪದೇಸಾಯಿಯವರೂ, ಹಾಗೂ ತರ್ಕತೀರ್ಥ, ವೇದಾಂತ ವಿಶಾರದ, ಸಾಂಖ್ಯಾಲಂಕಾರ, ನ್ಯಾಯ ವಾಚಸ್ಪತಿ, ಷ॥ ಬ್ರ॥ ಶ್ರೀ ಸಂ॥ ನೀಲಕಂಠ ಶಿವಾಚಾರ್ಯ ಮಹಾಸ್ವಾಮಿಗಳು, ಸಿಂಹಾಸನ ಬೃಹನ್ಮಠ ಹೂಲಿ,

ಇವರೂ ಸಹ ಕಂಠೋಕ್ತವಾಗಿ ಗ್ರಂಥಾಧಾರಗಳಿಂದ ವಿವರಿಸಿರುವರು. ಶ್ರೀ ಸಿದ್ಧ ರಾಮನ ೭೯ನೇ ವಯಸ್ಸಿನಲ್ಲಿ, ಕಲ್ಯಾಣದ ಕ್ರಾಂತಿಕಾಲವಾಗಿದ್ದು, ಆಕ್ರಾಂತಿ ಯಲ್ಲಿ ಎಷ್ಟೋ ಜನ ಶರಣರು ಶ್ರೀ ಸಿದ್ಧರಾಮೇಶ್ವರನ ಆಶ್ರಯದಲ್ಲಿ ಬಂದು ರಕ್ಷಣೆ ಪಡೆದರು. ಅವರಲ್ಲಿ ಎಲೇಶ್ವರ, ಕ್ಯಾತಯ್ಯ ಮೊದಲಾದವರು ಮುಖ್ಯ ರಾಗಿದ್ದರು. ಆ ಸಮಯದಲ್ಲಿ ಬಸವಣ್ಣನು ನೀಲಮ್ಮನನ್ನೂ ಹಡಪದ ಅಪ್ಪಣ್ಣ ನನ್ನೂ ಕೂಡಿಕೊಂಡು ತನ್ನ ಗುರುಕ್ಷೇತ್ರವಾದ ಸಂಗಮೇಶ್ವರಕ್ಕೆ ಬಂದು ಅಲ್ಲಿ ಲಿಂಗೈಕ್ಯನಾದನು. ಅತ್ತ ಅಲ್ಲಮ ಅಕ್ಕಮಹಾದೇವಿ ಮೊದಲಾದವರು ಶ್ರೀ ಸಿದ್ಧ ರಾಮರ ಸ್ಮರಣೆಯೊಂದಿಗೆ ಅವರ ಗುರುಸ್ಥಾನವಾದ ಶ್ರೀಶೈಲಕ್ಕೆ ಹೋಗಿ ಅಲ್ಲಿ ವಿರಾಜಮಾನರಾಗಿದ್ದ ಶ್ರೀ ಗಿರಿರಾಜ ಸೂರ್ಯ ಸಿಂಹಾಸನಾಧಿಪತಿಗಳಾದ ಜಗದ್ಗುರು ಶ್ರೀ ಕಪಿಲಸಿದ್ಧ ಮಲ್ಲಿಕಾರ್ಜುನ ಪಂಡಿತಾರಾಧ್ಯ ದೇಶಿ ಕೇಂದ್ರ ಶಿವಾಚಾರ್ಯ ಮಹಾ ಪಾದಂಗಳರವರ ದಿವ್ಯ ಚರಣಾಶ್ರಯವನ್ನು ಪಡೆದರು. ಶ್ರೀ ಚೆನ್ನಬಸವಣ್ಣನೂ ಸಹ ಗುರು ಶ್ರೀ ಸಿದ್ಧರಾಮ ಯತೀಂದ್ರಯೋಗಿ ವರ್ಯರನ್ನು ಮನದಲ್ಲಿ ಸ್ಮರಿಸುತ್ತಾ ಹತ್ತುಸಾವಿರ ಶಿವಶರಣರೊಂದಿಗೆ ಉಳಿವಿಗೆ ಹೋಗಿ ಅಲ್ಲಿಯೇ ಶಿವೈಕ್ಯನಾದನು. ಶ್ರೀ ಬಸವಣ್ಣನವರ ಅಕ್ಕ ಅಕ್ಕನಾಗ ಮ್ಮನು ಮಡ್ಡಿನಾಗಲಾಪುರದಲ್ಲಿ ಶಿವೈಕ್ಯರಾದರು. ಬಸವಣ್ಣನ ಪತ್ನಿಯಾದ ಗಂಗಾಂಬಿಕೆಯು ಹುಬ್ಬಳ್ಳಿಯಲ್ಲಿಯ ಮುಗಟಖಾನದಲ್ಲಿ ಲಿಂಗೈಕ್ಯರಾದರು. ಅವರವರ ಸಮಾಧಿಗಳನ್ನು ಆಯಾ ಸ್ಥಳಗಳಲ್ಲಿ ಈಗಲೂ ಪ್ರತ್ಯಕ್ಷವಾಗಿ ನೋಡಿದರೆ ಮೇಲೆ ವಿವರಿಸಿದ ಸರ್ವ ವಿಷಯವೂ ಸರ್ವರಿಗೂ ವೇದ್ಯವಾಗು ವುದು. ಈ ಪ್ರಕಾರ ಕಲ್ಯಾಣದ ಕ್ರಾಂತಿ ಹಸ್ತವ್ಯಸ್ತವಾದ ಮೇಲೆ ಸುಮಾರು ೩೨ ವರ್ಷಗಳವರವಿಗೂ ಶ್ರೀ ಸಿದ್ಧರಾಮ ಯೋಗೀಶ್ವರರು ಭುವಿಯ ಮೇಲಿದ್ದು ತದನಂತರ ತಮ್ಮ ೧೧೧ನೇ ವರ್ಷದಲ್ಲಿ ಜೀವನ್ಮುಕ್ತಿ ವಿದೇಹ ಕೈವಲ್ಯವನ್ನು ಹೊಂದಿದರು. ಇವರ ಸಮಾಧಿ ತಮ್ಮ ಯೋಗಭೂಮಿಯಾದ ಸೊನ್ನಲಿಗಿ (ಸೊಲ್ಲಾಪುರ) ಯಲ್ಲಿ ಇಂದಿಗೂ ವಿರಾಜಮಾನವಾಗಿದ್ದು ಭಕ್ತೋದ್ಧಾರ ಕ್ಷೇತ್ರವಾಗಿ ವಿರಾಜಿತವಾಗಿದೆ,

ಗುರುಭಕ್ತಿ ಶಿರೋಮಣಿಯಾದ ಕಲ್ಯಾಣದ ಬಸವಣ್ಣನವರು, ಜಗದ್ಗುರು

ರೇಣುಕನ ಮಹಿಮೆಯುನ್ನು ಸ್ವತಃ ಅರಿತಿರುವುದರೊಂದಿಗೆ ತಮ್ಮ ಆದಿಗುರು ಗಳಾದ ಕಪ್ಪಡಿಕ್ಷೇತ್ರ ಪ್ರವಿರಾಜಮಾನ ಹಿರೆಮಠಾಧೀಶ ಸಂಗಮೇಶ್ವರ ನಾಮಾಂಕಿತರಾದ ಶ್ರೀ ಜಾತವೇದಿ ಮುನಿಗಳ ಮುಖದಿಂದಲೂ ಕೇಳಿ ತಿಳಿದು ಕೊಂಡವರಾಗಿದ್ದರು. ಇದರಿಂದ ಬಸವಣ್ಣನಿಗೆ ಗುರುಲಿಂಗ ಜಂಗಮರ ಭಕ್ತಿ ಎಂದರೆ ಪರಮಾನಂದ. ‖ ನಗುರೋರಧಿಕಂ ‖ ಎಂಬ ಉಪನಿಷತ್ ಮಹಾ ವಾಕ್ಯವನ್ನು ಹೃತ್ಪೂರ್ವಕ ಮನ್ನಿಸಿ, ಬಸವಣ್ಣನು "ಗುರು ಲಿಂಗ ಜಗಮರ" ಸೇವೆಗೆಂದು "ತನು ಮನ ಧನ"ಗಳನ್ನು ಸೂರೆಗೈದು, ನಿರ್ಮೋಹ ನಿರ್ದ್ವಂದ್ವ, ನಿರಾಮಯನಾಗಿ ನಿಂತ ನಿರಂಜನಮೂರ್ತಿ ಬಸವಣ್ಣ. ಕಿಂಕರತ್ವದ ಘನ ಹಿರಿಮೆಯನ್ನು ಕಂಡ ಬಸವಣ್ಣ, ಗುರುವಿನಡಿದಾವರೆಯಲ್ಲಿ ಎರಗಿ ಶರಣಾಗತಿ ಭಾವದಿಂದ ಗುರೋ! ನಿಮ್ಮ ಚರಣ ಸೇವಕನ ಸೇವೆಗೈವ, ಸೇವಕನ ಸೇವಕ ತಾನೆಂದು ಹೇಳಿಕೊಳ್ಳುವುದರಲ್ಲಿ ಹೆಮ್ಮೆಪಟ್ಟು ನಿಂತ ಕಿಂಕರನೆಂದರೆ ಬಸವಣ್ಣ. ‖ ತ್ವದ್ದಾಸಸ್ಯ, ದಾಸಸ್ಯ ದಾಸೋಹಂ ‖ ಅಂದರೆ "ನಿನ್ನ ದಾಸನ ದಾಸನ, ದಾಸನಾಗಿರಿಸಯ್ಯಾ ಲಿಂಗವೇ" ಎಂದು, ಕೂಡಲಸಂಗಯ್ಯನಲ್ಲಿ ಹಲವು ಭಾರಿ ಭಾಷ್ಪಾಂಜಲಿಯಿಟ್ಟು ಬೇಡಿಕೊಂಡಿರುವರು. ಅದೂ ಅಲ್ಲದೆ ಬಸವಣ್ಣನು ಒಮ್ಮೆ ದೊಡ್ಡ ದೇವಾಲಯದ ಬಂಗಾರದ ಕಳಸವು ಗೋಪುರದ ತುದಿಯಲ್ಲಿ ಮೇಲ್ಮುಖವಾಗಿರುವುದನ್ನು ಕಂಡು, ಆ ಕನಕದ ಕಲಶ ಬಹು ಎತ್ತರದಲ್ಲಿದ್ದು ದರಿಂದ, ಹಲವಾರು ಹಕ್ಕಿ ಪಕ್ಷಿಗಳು ಕಲಶದ ಮೇಲೆ ಕುಳಿತು ಜಲಮಲ ವಿಸರ್ಜನೆಮಾಡಿ ಕಲಶದ ಶೋಭೆಗೆ ಭಂಗವನ್ನುಂಟುಮಾಡಿ ಮಲಿನ ಮಾಡಿದ್ದು ದನ್ನು ನೋಡಿ, "ಈ ಕಲಶ ಎಲ್ಲರಿಗಿಂತ ತಾನು ಮೇಲಿರುವೆನೆಂದು ಸೆಟೆದು ಕುಳಿತಿದೆ. ಆದರೆ ಮಲಿನವಾದ ತನ್ನ ದೇಹದ ಅರಿವು ತನಗಿಲ್ಲದಾಗಿದೆ," ಎಂದು ನುಡಿದು, ಮತ್ತೆ ಮುಂದೆ, "ಮೇಲೇರಿ ಮಲಿನತೆ ಪಡೆಯುವುದಕ್ಕಿಂತ ಗುರು ಜಂಗಮರ ಅಡಿದಾವರೆಗಳಲ್ಲಿ ಪಾದರಕ್ಷೆಯಾಗಿ ಸೇವೆಗೈದು ಸವೆದು ಮುಕ್ತಿ ಪಡೆಯುವುದು ಮೇಲೆಂದು" ಮನಸಾ ಅಂದುಕೊಂಡರಂತೆ. ಜಗತ್ತಿನಲ್ಲಿ ಮಹಾತ್ಮರ ಸೌಲಭ್ಯ ಎಷ್ಟು ಹೃದಯ ಸ್ಪರ್ಶಕವಾಗಿರುವುದು. ಜನಾರ್ಧನ ನಾದ ಶ್ರೀ ಕೃಷ್ಣಸ್ವಾಮಿಯು ತಾನು, ಜಗನ್ನಿಯಾಮಕನೆಂಬುದನ್ನು ಬಿಟ್ಟು

ಪಾರ್ಥನ (ಅರ್ಜುನನ) ರಥದ ಸಾರಥಿಯಾಗಿರಲಿಲ್ಲವೇ. ಪಾಂಡವರ ಮನೆಯೊಳಗೆ ಕುದುರೆ ಲಾಯದಲ್ಲಿ, ಕುದುರೆಗಳ ಮೈತೊಳೆದು ಜೇನ್‌ತಟ್ಟಿ, ನೀರ್‌ ಕುಡಿಸಿ ಪರಿಚಾರಕನಾಗಿದ್ದ ಶ್ರೀಕೃಷ್ಣ. ಧರ್ಮರಾಜನ ರಾಜಸೂಯಯಾಗ ಸಂತರ್ಪಣೆಯಲ್ಲಿ ಬ್ರಾಹ್ಮಣರುಂಡ ಎಂಜಲೆಲೆಗಳನ್ನು ತಾನೇ ಸಂತೋಷದಿಂದ ಎತ್ತಿದ ಶ್ರೀಕೃಷ್ಣ. ಬೃಂದಾವನದಲ್ಲಿ ಭಕ್ತಬೃಂದವ ಹಿಂಬಾಲಿಸಿ ಅವರ ಕಾಲೆಜ್ಜೆಯ ರಜವನ್ನು (ಮಣ್ಣನ್ನು) ಕೈಯಿಂದೆತ್ತಿ, ತನ್ನ ಶಿರದಲ್ಲಿಟ್ಟಿದ್ದ ಚಿನ್ನದ ಭರಣಿಯಲ್ಲಿಟ್ಟು ಭಕ್ತಿಯಿಂದ ಪೂಜಿಸಿದ ಶ್ರೀಕೃಷ್ಣ. ಮತ್ತೂ ತಾನು ಅಖಂಡ ಮಹೀಮಂಡಲದ ನಿರ್ಮಾಪಕಸ್ವಾಮಿಯೆಂದೂ ಮತ್ತೂ ಸರ್ವಜ್ಞನೆಂಬ ಭಾವವ ಬಿಟ್ಟು ಕುಚೇಲನೊಂದಿಗೆ, ಹುಡುಗರಲ್ಲಿ ಬಡ ಹುಡುಗನಾಗಿ ಭಗವಂತ ಶ್ರೀಕೃಷ್ಣನು ಸಾಂದೀಪನೀ ಮುನಿಗಳ ಪಾದಸೇವೆಗೈದು ಗುರುಕುಲ ವಾಸದಲ್ಲಿದ್ದು ಎಲ್ಲಾ ವಿದ್ಯೆಗಳನ್ನೂ ಕಲಿತನು. ಗುರು ಶುಶ್ರೂಷೆ ಗುರುವಾಕ್ಯ ಪರಿಪಾಲನೆಗಳಲ್ಲಿ ಶ್ರೀಕೃಷ್ಣನಿಗಿದ್ದ ವಿಶ್ವಾಸ ನಮ್ರತೆಗಳು ಎಂಥವನನ್ನೂ ಮುಗ್ಧಗೊಳಿಸುವುವು. ಒಮ್ಮೆ ಕೃಷ್ಣನು ಕುಚೇಲನೊಂದಿಗೆ ಆ ದಿನದ ಪ್ರಾಥಃಕಾಲದ ಪಾಠವನ್ನು ಮುಗಿಸಿಕೊಂಡು ಗುರುಗಳ ಆಶ್ರಮಕ್ಕೆ ಸೌದೆ ತರಲಿಕ್ಕಾಗಿ ಅರಣ್ಯವನ್ನು ಹೊಕ್ಕನು. ಮಧ್ಯಾಹ್ನದ ವೇಳೆಗೆ ಸಾಕಾಗುವಷ್ಟು ಎರಡು ದೊಡ್ಡ ಹೊರೆಗಳ ಕಟ್ಟಿಗೆಗಳನ್ನು ಜೊತೆಮಾಡಿ, ಕಟ್ಟಿ ತಲೆಯಮೇಲೆ ಹೊತ್ತು ಗುರುಗಳ ಆಶ್ರಮಾಭಿಮುಖವಾಗಿ ಹಿಂತಿರುಗುತ್ತಿರಲು, ಮಾರ್ಗಮಧ್ಯೆ ಆಕಸ್ಮಿಕವಾಗಿ ದೊಡ್ಡ ಮಳೆ ಗಾಳಿ, ಮಿಂಚು, ಗುಡುಗು, ಸಿಡಲುಗಳಿಗೆ ಸಿಕ್ಕಿ ಪೂರ್ಣ ನೆನೆದು ನಿಲ್ಲಲು ಸುತ್ತಲೂ ಎಲ್ಲೂ ಆಶ್ರಯವಿಲ್ಲದ್ದರಿಂದ ಮುಂದೆ ಮುಂದೆ ದೊಡ್ಡ ಹೆಜ್ಜೆಗಳನ್ನು ಹಾಕುತ್ತಾ ಊರ ಹೊರಭಾಗದ ಮುರುಕು ಚಾವಡಿಯಲ್ಲಿ ತುಸ ವಿಶ್ರಮಿಸಿಕೊಂಡು, ಸಂಧ್ಯಾ ಕಾಲದ ಹೊತ್ತಿಗೆ ಸಾಂದೀಪನೀ ಮುನಿಗಳ ಆಶ್ರಮುವನ್ನು ಕೃಷ್ಣ ಕುಚೇಲರು ಸುರಕ್ಷಿತವಾಗಿ ಸೇರಿ ಎರಡು ಹೊರೆ ಕಟ್ಟಿಗೆಗಳನ್ನು ತಂದರೆಂಬ ಘನವೃತ್ತಾಂತ ಶ್ರೀಮದ್ಭಾಗವತ ಪುರಾಣದಿಂದ ವೇದ್ಯವೇಯಿರುತ್ತೆ. ಶ್ರೀ ಕೃಷ್ಣಸ್ವಾಮಿಗೆ ಅದೆಂತ ಗುರುಭಕ್ತಿಯಿದ್ದಿತೆಂಬುದು ಇದರಿಂದ ನಮಗೆ ಗೋಚರವಾಗುತ್ತೆ. ಅಣ್ಣ ಶ್ರೀ ಬಸವಣ್ಣನವರು ತಾವು ಕಪ್ಪಡಿಕ್ಷೇತ್ರ

ಗುರುಕುಲ ವಾಸದಲ್ಲಿದ್ದ ಕಾಲದಲ್ಲಿ ತಮ್ಮ ಗುರುಗಳಾದ ಶ್ರೀ ಜಾತವೇದಿ ಮುನಿಗಳಲ್ಲೂ ಅಪಾಗವಾದ ಅಚಲ ಗುರುಭಕ್ತಿಯನ್ನಿಟ್ಟಿದ್ದರು. ತತ್ಪರಿಣಾಮ ವಾಗಿ ಶಿವಭಕ್ತಿಯು ಅವರ ಹೃದಯ ಭೂಮಿಯಲ್ಲಿ ಅಂಕುರಿಸಿ, ಪಸರಿಸಿ, ಪ್ರಾದುರ್ಭಾವಗೊಂಡು ದೊಡ್ಡ ವೃಕ್ಷವಾಗಿ ಫಲ ಪುಷ್ಪಭರಿತದಿಂದ ಕಂಗೊಳಿಸಿ ಅಂದಿನಿಂದಲೂ ಇಂದಿನ, ಮುಂದಿನ ಜನಸಮುದಾಯಕ್ಕೆ ವಚನವಾಙ್ಮಯ ಶಾಸ್ತ್ರ ಭಂಡಾರ, ಭಕ್ತಿಜ್ಞಾನ ವೈರಾಗ್ಯಗಳ ಆಗರವಾಗಿ ಬೆಳಗಿ ಆಕರ್ಷಣೀಯ ವಾಗಿರುವುದು.

ವೇದ ಶಿವಾಗಮೋಪನಿಷದಾದಿಗಳಲ್ಲಿ ಗುರುಭಕ್ತಿಗಿಂತ ಅಧಿಕಭಕ್ತಿ ಯಿಲ್ಲೆಂದು ಮುಕ್ತಕಂಠದಿಂದ ॥ ನ ಗುರೋರಧಿಕಂ ನಗುರೋರಧಿಕಂ ॥ ಎಂಬ ಒಂಭತ್ತು ಬಾರಿ ಘಂಟಾ ಘೋಷವಾಗಿ ಸಾರಿರುತ್ತೆ. ಶಿವನೇ ಲೋಕಾನು ಗ್ರಹಾರ್ಥ ಲಿಂಗವಾಗಿಯೂ, ಗುರುವಾಗಿಯೂ, ಜಂಗಮನಾಗಿಯೂ ಅವತರಿ ಸುವನು.

॥ ಏಕ ಏವ ಶಿವಸಾಕ್ಷಾತ್ ಸರ್ವಾನುಗ್ರಹ ಕಾರಕಃ ।
ಗುರು ಜಂಗಮ ಲಿಂಗಾತ್ಮಾವರ್ತತೇ ಭಕ್ತಿ ಮುಕ್ತಿದಃ ॥
ಯಥಾ ಗುರೌ ಯಥಾಲಿಂಗೇ ಭಕ್ತಿಮಾನ್ ಪರಿವರ್ತತೇ
ಜಂಗಮೇಚ ತಥಾನಿತ್ಯಂ ಭಕ್ತಿಂಕುರ್ಯಾದ್ವಿಚಕ್ಷಣಃ ॥

ಅದ್ವಿತೀಯನೂ ನಿರವಯವನೂ ಅಪ್ರಮೇಯನೂ ಆದ ಸ್ವಯಂ ಪರಂ ಜ್ಯೋತಿ ಪರಶಿವನು ಸರ್ವಲೋಕಾನುಗ್ರಹಾರ್ಥವಾಗಿ, ತನ್ನಿಚ್ಛೆಯಿಂದ ಸ್ವಯಮೇ "ಗುರು ಲಿಂಗ ಜಂಗಮ" ರೂಪದಲ್ಲಿ ಆವಿರ್ಭವಿಸಿ ಮೂರು ಪ್ರಕಾರ ಗಳಿಂದಲೂ ಲೋಕದಲ್ಲಿ ಭಕ್ತಕೋಟಿಗಳ ಮಧ್ಯೆ ಲೀಲಾಮಾನುಷ ವಿಗ್ರಹ ದಿವ್ಯ ದೇಹಧಾರಿಯಾಗಿ ಸಂಚರಿಸಿ, ಅಲ್ಲಲ್ಲಿನ ಭಕ್ತ ಭಾಗವತ ಬೃಂದಕ್ಕೆ ದರ್ಶನ ಕೃಪಾಶೀರ್ವಾದ, ತೀರ್ಥಪ್ರಸಾದ ಹಾಗೂ ತತ್ವ ಬೋಧಾಮೃತಗಳಿಂದ ಚೇತನಗೊಳಿಸಿ, ಸದ್ಧರ್ಮ ಸ್ಥಾಪನೆಯನ್ನು ಸ್ವಚ್ಛಂದದಿಂದ ಮಾಡುವನೆಂದು ಪ್ರೋಕ್ತವಾಗಿದೆ. ಗುರುವೇ ಬೇರೆ ಲಿಂಗವೇ ಬೇರೆ ಜಂಗಮನೇ ಬೇರೆಂದು

ಗುರು ಲಿಂಗ ಜಂಗಮರಲ್ಲಿ ಭೇದವನ್ನು ಹೇಳಿಲ್ಲ. ಗುರು ಲಿಂಗ ಜಂಗಮ ಎಂಬ ಶಬ್ದಭೇದ ಕಂಡು ಬಂದರೂ ವಸ್ತುತಃ ಈ ಮೂರು ಒಂದೇ ತತ್ವದಲ್ಲಿ ಅಭಿನ್ನವಾಗಿ ವಿರಾಜಿಸುತ್ತಲಿರುವುವು. ಉಪಾಸಕರ ಅಭಿರುಚಿಗನುಸಾರ ಪರಮಾತ್ಮನು ॥ ಉಪಾಸಕಾನಾಂ ಕಾರ್ಯಾರ್ಥಂ । ಬ್ರಹ್ಮಣೋ ರೂಪ ಕಲ್ಪನಾ ॥ ಎಂಬಂತೆ ಗೋಚರಿಸಿ ಭಕ್ತಾನುಗ್ರಹ ಕಾರ್ಯವನ್ನು ಅವಿಚ್ಛಿನ್ನ ವಾಗಿ ಎಸಗುತ್ತಿರುವನು. ॥ ಅಭಯಂ ಸರ್ವಭೂತೇಭ್ಯೋ ದ ಧಾವ್ಯೇತದ್ ವ್ರತಂಮಮ ॥ ಶರಣಾಗತ ಜನರನ್ನು ರಕ್ಷಿಸುವುದೇ ತನ್ನ ವ್ರತವೆಂದು ಅಭಯ ಕಂಕಣವನ್ನು ಕೈಗೆ ತೊಟ್ಟು ಸ್ವಾಮಿ ತನ್ನ ಅಮೃತ ಹಸ್ತವನ್ನು (ಭಯಪಡ ಬೇಡಿ ನನ್ನ ಕಡೆ ಮನಸ್ಸು ಮಾಡಿ ಬನ್ನಿ ಎಂದು) ನೀಡಿ ಕರೆಯುವಂತೆ ಪ್ರತಿಜ್ಞೆ ಮಾಡಿರುವನು. ಶಿವಾಗಮಗಳು ಗುರು-ಲಿಂಗ-ಜಂಗಮ ತತ್ವವನ್ನು ವಿವರಿ ಸುತ್ತಾ— ॥ ಏಕಮೂರ್ತಿ ಸ್ತ್ರಯೋಭಾಗಂ । ಗುರು ರ್ಲಿಂಗಂತು ಜಂಗಮಃ॥ ಒಬ್ಬನೆ ಆದ ಪರಶಿವನು ಲೋಕ ಸಂರಕ್ಷಣಾರ್ಥ ಮೂರು ಪ್ರಕಾರವಾಗಿ ವಿಭಾಗ ಗೊಂಡನು. ಶಿವಲಿಂಗವು ಗುರು ಜಂಗಮರಿಗೆ ಆವಾಸಸ್ಥಾನವಾಗಿದ್ದರೂ ಜಂಗಮನು ಗುರು ತತ್ವದಲ್ಲಿ ತಲ್ಲೀನವಾಗಿರಲು, ಗುರುವು ಲಿಂಗ ಜಂಗಮ ತತ್ವಗಳನ್ನು ಸಲ್ಲೀಲೆಯಿಂದ ಭಕ್ತಕೋಟಿಗೆ ಬೋಧಿಸುತ್ತ ಪರಶಿವನ ವ್ಯಕ್ತ ದಿವ್ಯಸ್ವರೂಪ ಸದೃಶನಾಗಿ ವಿರಾಜಿತನಾಗಿರುವನು. ಗುರು ಜಂಗಮರನ್ನು ಶಿವಲಿಂಗವು ಸದಾ ಸ್ವಶಕ್ತಿಯಿಂದ ಆಕರ್ಷಿಸುತ್ತಲಿರುವುದು. ಗುರುವು ॥ ಗುರು ಸಾಕ್ಷಾತ್ ಪರಬ್ರಹ್ಮ ॥ ಎಂಬಂತೆ ಪರಶಿವನೇ ಆಗಿರುವನು. ಶಿವಾಗಮದಲ್ಲಿ ಗುರುವಿನ ಸ್ಥಾನವನ್ನು ಪ್ರತಿಪಾದಿಸುತ್ತಾ—

ಸರ್ವ ಲೋಕೋಪಕಾರಾಯ ।<br>
ಯೋದೇವಃ ಪರಮೇಶ್ವರಃ ॥<br>
ಚರತ್ಯತಿಥಿರೂಪೇಣ ।<br>
ನಮಸ್ತೇ ಜಂಗಮಾತ್ಮನೇ ॥<br>
॥ ಪಾದಾಗ್ರ ರೇಣವೋಯತ್ರ । ಪತಂತಿ ಶಿವಯೋಗಿನಃ ।<br>
ತದೇವ ಸದನಂ ಪುಣ್ಯಂ । ಪಾವನಂ ಶಿವಮಂದಿರಂ ॥

ಅಂದರೆ ಲೋಕೋದ್ಧಾರಕ್ಕಾಗಿ ಲಿಂಗರೂಪಿ ಪರಮೇಶ್ವರನು ಗುರು ಮೂರ್ತಿ ರೂಪದಲ್ಲಿ ಜಗತ್ತಿನಲ್ಲಿ ಪವಾಡ ಪುರುಷನಾಗಿ ಸಂಚರಿಸುತ್ತಾ, ಸ್ಥಾವರ ಜಂಗಮಾತ್ಮಕವಾದ ಇಡೀ ವಿಶ್ವವನ್ನು ಪಾವನಗೊಳಿಸುವನು. ಅವನ ದಿವ್ಯಾನುಗ್ರಹ ಬಲದಿಂದ ಮಾನವನು ಧನ್ಯನಾಗುವನು. ಮಾನವನು ಗುರುವಿನುಪದೇಶ ಪ್ರಭಾವದಿಂದ, ॥ ದೇಹೋ ದೇವಾಲಯ ಪ್ರೋಕ್ತಃ । ಜೀವೋ ದೇವಃ ಸನಾತನಃ ॥ ತ್ಯಜೇತ್ ಮಜ್ಞಾನ ನಿರ್ಮಾಲ್ಯಂ । ಸೋಽಹಂ ಭಾವೇನ ಭಾವಯೇತ್ ॥ ಈ ದೇಹವೇ ದೇವಾಲಯವೆಂದೂ, (ದೇಹವಿದು ನೀನಿರುವ ಗುಡಿ ಎಂದು ತಿಳಿದು, ಗುಡಿಸುವೆನು ದಿನದಿನವು ದೇವದೇವ; ಬುದ್ಧಿಯಿದು ಗುಡಿಯೊಳುರಿಯುವ ದೀಪವೆಂದು, ಅಮಲಚಿಂತೆಯ (ಶಿವಚಿಂತೆ) ತೈಲವನು ತುಂಬುವೆ) ಜೀವನು ಇದರೊಳಗೆ ಪ್ರಜ್ವಲಿಸುವ ಸನಾತನ ದೇವನೆಂದೂ ಈ ತತ್ವ ಮನಗಾಣಲು ॥ ತ್ಯಜೇತ್ ಅಜ್ಞಾನ ನಿರ್ಮಾಲ್ಯಂ ॥ ಅಜ್ಞಾನವೆಂಬ ನಿರ್ಮಾಲ್ಯವನ್ನು (ಮಲಿನತೆಯನ್ನು) ದೂರೀಕರಿಸಿ, ಗುರೂಪದಿಷ್ಟ ಮಂತ್ರ ವನ್ನು ಜಪಿಸಿ, ಧ್ಯಾನಿಸಿ, ನಿಶ್ಯಾನುಸಂಧಾನದಿಂದ ಸಿದ್ಧಿಗೊಳಿಸಿಕೊಂಡರೆ ಆಗ "ಗುರು ಲಿಂಗ ಜಂಗಮ" ತತ್ವದ ತಿರುಳು ವೇದ್ಯವಾಗುವುದು. ಯಾವ ಗುರುದೇವನು ಶ್ರೀ ಸೋಮನಾಥ ಶಿವಲಿಂಗ ಮುಖದಿಂದ ಉದ್ಭವಿಸಿದನೋ, ಯಾವ ಗುರುದೇವನ ಏಕೈಕ ಸತ್ಯಸಂಕಲ್ಪ ಮಾತ್ರದಿಂದ ಕ್ಷಣಾರ್ಧದಲ್ಲಿ ಮೂರು ಕೋಟಿ ಶಿವಲಿಂಗಗಳು ಆವಿರ್ಭವಿಸಿ ಒಂದೊಂದು ಶಿವಲಿಂಗದೆದುರು ಒಬ್ಬೊಬ್ಬ ಗುರು ಶ್ರೀ ರೇಣುಕನಾಗಿ ಪ್ರಕಟಗೊಂಡ ಸರ್ವಶಕ್ತನಾದ ಗುರು ರೇಣುಕನು, ಕೂಡಲ ಸಂಗಮೇಶ್ವರ ಲಿಂಗದಲ್ಲೂ ಅಂತರ್ಯಾಮಿಯಾಗಿ ವಿರಾಜಿತನಾಗಿರುವನು. ಹೇಗೆಂದರೆ—ಶಿವನ ಸದ್ಯೋಜಾತ ಮುಖೋ ದ್ಭೂತನೂ ಮತ್ತೂ ॥ ಸಚ್ಚಿದಾನಂದ ರೂಪಸ್ಯ । ಶಿವಸ್ಯಾಸ್ಯ ಸಮುದ್ಭವಂ ॥ ಎಂದು ಪ್ರಮಾಣವಿರುವುದರಿಂದ, ಎಲ್ಲಾ ಶಿವಲಿಂಗಗಳೂ ಒಬ್ಬನೇ ಆದ ಶಿವನ ಸ್ವರೂಪ ಸಾಕ್ಷಾತ್ಕಾರವಾಗಿರುವುದರಿಂದ, ಶಿವಲಿಂಗೋದ್ಭವನಾದ ರೇಣುಕನು ಕೂಡಲ ಸಂಗಯ್ಯನಲ್ಲೂ ಪ್ರಕಾಶಿತನಾಗಿರುವನು. "ಗುರು ಲಿಂಗ ಜಂಗಮರು" ಅಭೇದ್ಯರೂ ಅದ್ವಿತೀಯರೂ ಆಗಿರುವುದರಿಂದ ಮೇಲ್ಕಂಡ ನಂಬಿಕೆಗೆ ಸ್ಥಳವಿದೆ.

ಎಡಡನೆಯದಾಗಿ ಶ್ರೀ ಸಂಗಮನಾಥನ ಸೇವಾನಿರತರಾಗಿದ್ದ ಆಚಾರ್ಯ ಪುಂಗವರಾದ ಶ್ರೀ ಜಾತವೇದಿ ಮುನಿಗಳು, ಶ್ರೀಮದ್ರಂಭಾಪುರೀ ವೀರ ಸಿಂಹಾಸನದ ಶಾಖಾ ಮಠದ ಉಪಾಚಾರ್ಯರಾಗಿ ರೇಣುಕ ಗುರು ಸಾರ್ವ ಭೌಮನ ಸತತ ಚಿಂತನೆ ಆರಾಧನೆಯಲ್ಲಿ ಆಸಕ್ತಿಯುಳ್ಳವರಾಗಿದ್ದರು. ಇವರ ಶಿಷ್ಯ ಬಸವಣ್ಣ ಅಂದ ಬಳಿಕ, ಬಸವಣ್ಣ ಆಶಿಸಿದಂತೆ, ಶ್ರೀ ರೇಣುಕ ಪರಂ ಜ್ಯೋತಿಯ ಶಿಷ್ಯನ ಶಿಷ್ಯ ಕಲ್ಯಾಣದ ಬಸವಣ್ಣ ಎಂಬುದು ನಿರ್ವಿವಾದವೂ ಪ್ರಮಾಣಬದ್ಧವೂ ಆಯಿತಷ್ಟೆ.

ಇಂಥಾ ಗುರುಭಕ್ತಿ ಸಂಪನ್ನನಾದ ಶ್ರೀ ಬಸವಣ್ಣನು ಗುರುಕುಲ ವಾಸ ವಲ್ಲಿ ಅದ್ವಿತೀಯ ವಿದ್ಯಾಪಾಂಡಿತ್ಯದಲ್ಲಿ ನೈಪುಣ್ಯವನ್ನು ಗಳಿಸಿ, ಶುಕ್ಲಪಕ್ಷದ ಚಂದ್ರನಂತೆ ಅವನ ಕೀರ್ತಿ ನಾಲ್ಕು ದಿಕ್ಕುಗಳಲ್ಲೂ ಹರಡಲಾರಂಭಿಸಿತು ಆ ವೇಳೆಗೆ ಬಸವಣ್ಣನವರ ಸೋದರಮಾವ ಬಲದೇವ ಮಂತ್ರಿ ತನ್ನ ಕಡೆಯವರ ಹಸ್ತ, ಶ್ರೀ ಕಪ್ಪಡಿಕ್ಷೇತ್ರಕ್ಕೆ ಒಂದು ಪತ್ರವನ್ನು ಬರೆದು, ತಮ್ಮ ಕುಮಾರ್ತಿ ಪ್ರೌಢ ವಯಸ್ಕಳಾದ ಗಂಗಾಂಬಿಕೆಯನ್ನು ತಮ್ಮ ಸೋದರಳಿಯನಾದ ಬಸವಣ್ಣನಿಗೆ ಕೊಟ್ಟು, ಇವರ ಲಗ್ನವನ್ನು ನೆರವೇರಿಸಬೇಕೆಂಬ ಇಚ್ಛೆ ತಮ ಗಿರುವುದೆಂದೂ, ಶ್ರೀ ಜಾತವೇದಿ ಮುನಿಗಳ ದಿವ್ಯ ಚರಣಕಮಲಗಳಲ್ಲಿ ನಿವೇದಿಸಿಕೊಂಡು, ಸೋದರಳಿಯ ಬಸವಣ್ಣನನ್ನು ತಮ್ಮಲ್ಲಿಗೆ ಕೂಡಲೇ ಕಳುಹಿಸಿಕೊಡಬೇಕೆಂದು ಪ್ರಾರ್ಥಿಸಿಕೊಂಡಿದ್ದನು. ಆ ದಿವಸ ಪ್ರಾತಃಕಾಲದ ಪಾಠ ಮುಗಿದೊಡನೆ ಬಸವಣ್ಣನನ್ನು ಪ್ರತ್ಯೇಕವಾಗಿ ಕರೆದು ಗುರುಗಳು ಮೇಲ್ಕಂಡ ಸೋದರಮಾವ, ಬಲದೇವ ಮಂತ್ರಿ ಬರೆದಿದ್ದ ಕುಶಲ ಪತ್ರವನ್ನು– "ಓ ಬಸವಣ್ಣ ! ನಿನಗೊಂದು ಲಗ್ನ ಪತ್ರಿಕೆ ಬಂದಿರುತ್ತೆಂದು" ಹೇಳಿ ಓದೆಂದು ಕೊಟ್ಟರು. ಓದಿದ ಬಳಿಕ ಖಿನ್ನ ವದನನಾಗಿ "ಭೋ ! ಗುರುವರ್ಯ, ಇದು ಲಗ್ನ ಪತ್ರಿಕೆಯಲ್ಲ. ಸತತ ನಿಮ್ಮ ಪಾದಸೇವೆಯಲ್ಲಿ ನಿರತನಾಗಿರುವ ನನ್ನನ್ನು, ನಿಮ್ಮಿಂದ ಅಗಲಿಸಲಿಕ್ಕಾಗಿ ಬಂದಿರುವ ವಿಘ್ನಪತ್ರಿಕೆ"ಎಂದು ಗದ್ಗದ ಸ್ವರದಿಂದ ನುಡಿಯುತ್ತ ಕಣ್ಕಂಬನಿಗಳಿಂದ ಕೂಡಿ, ಇದು ನನ್ನನ್ನು ಭವಸಾಗರದಲ್ಲಿ ತಳ್ಳುವಂತಿರುವುದೆಂದು ತಲ್ಲಣಗೊಂಡನು. ಬಸವಣ್ಣನಲ್ಲಿ ಸಹಜವಾಗಿ

ಪ್ರಕಾಶಿತವಾದ ಗುರುಭಕ್ತಿ ಎಷ್ಟೊಂದು ಗಾಢವಾಗಿ ಮನೆ ಮಾಡಿಕೊಂಡಿತ್ತೆಂಬ ಅಂಶವನ್ನು ಜಗತ್ತಿಗೆ ಎತ್ತಿ ತೋರಿಸುತ್ತಲಿರುವುದು. ಬಸವನ ಅಭಿಮತವನ್ನು ಕಂಡ ಶ್ರೀ ಸಂಗಮೇಶ್ವರ ಶಿವಾಚಾರ್ಯರು ಹರ್ಷಿಸಿದರಾದರೂ, ಬಸವಣ್ಣನಿಗೆ ಕಾಲೋಚಿತವಾದ ಬುದ್ಧಿವಾದವನ್ನು ಹೇಳುತ್ತಾ, "ವತ್ಸಾ! ಬಸವಣ್ಣಾ!! ನೀನು ಇಲ್ಲಿಯವರೆವಿಗೆ ಅಂದರೆ ಸುಮಾರು ಹದಿನೆಂಟು ವರ್ಷಗಳತನಕ ಗುರುಕುಲ ವಾಸದಲ್ಲಿದ್ದು ಪ್ರೌಢ ವಿದ್ಯಾವಿನಯ ಸಂಪನ್ನನಾಗಿರುವೆ. ನಿನ್ನ ಬ್ರಹ್ಮಚರ್ಯಾಶ್ರಮದ ಕಾಲವು ಈಗ ಗತಿಸಿ, ಗೃಹಸ್ಥಾಶ್ರಮ ಧರ್ಮಾಚರಣೆಯನ್ನು ಕೈಕೊಳ್ಳುವ ಸುಮಂಗಲವು ತಾನಾಗಿ ನಿನಗೆ ಪ್ರಾಪ್ತವಾಗಿದೆ. ಮನುಷ್ಯನಾಗಿ ಹುಟ್ಟಿದ ಬಳಿಕ ಅವನ ವಯಸ್ಸಿಗೆ ತಕ್ಕ ಚತುರಾಶ್ರಮ ಧರ್ಮಗಳನ್ನು ಪ್ರತಿಯೊಬ್ಬೊಬ್ಬನೂ ಅನುಸರಿಸಲೇಬೇಕು. ಇನ್ನು ಮುಂದೆ ನೀನು ಸದ್ಗೃಹಸ್ಥನೂ ಸತ್ಪ್ರಜೆಯಾಗಿ ಬಾಳಿ ವಿವಾಹಿತನಾಗಿ ಧರ್ಮಪತ್ನಿಯಿಂದೊಡಗೂಡಿ ॥ ಪ್ರಜಾತಂತುಂ ಮಾ ವ್ಯವಚ್ಛೇತ್ಸೀ ॥ ಅಂದರೆ. ಇದು ವೇದ ವಿಧಿ. ಸದ್ಗೃಹಸ್ಥನಾದ ಬಳಿಕ, ಅನಾದಿ ಕಾಲದಿಂದ ಪರಂಪರಾನುಗತವಾಗಿ ಬರುತ್ತಲಿರುವ "ಪ್ರಜೋತ್ಪತ್ತಿ" ಎಂಬ ಪವಿತ್ರವಾದ "ತಂತುವನ್ನು" (ಆ ನೂಲಿನ ಎಳೆಯನ್ನು) ತುಂಡು ಮಾಡದೆ, ಅಥವಾ ತುಂಡು ಮಾಡಿದ ಆ ಪಾಪಕ್ಕೆ ಗುರಿಯಾಗದೆ (ಅರ್ಥಾತ್ ಅಪುತ್ರವಂತನಾಗದೆ)—॥ ಚಿರಮಭಿವರ್ಧತಾಂ ಯದುಕುಲ ಸಂತಾನ ಶ್ರೀಃ ॥ ಎಂಬ ನಮ್ಮಗಳ ಹಾರೈಕೆಯಂತೆ, ಸಂತಾನಾಭಿವೃದ್ಧಿ ಎಂಬ ದಿವ್ಯ ಸೂತ್ರವನ್ನು ನಮ್ಮ ಪಾಲಿನ ಕರ್ತ್ತವ್ಯವೆಂದು ಕೈಕೊಂಡು ಪ್ರಜೋತ್ಪತ್ತಿ ನೂಲನ್ನು ಎಳೆದು ವಂಶೋದ್ಧಾರಕನಾದ ಸತ್ಪುತ್ರ ರತ್ನನನ್ನು ಪಡೆದು ಸದ್ಗತಿಗೆ ಭಾಗಿಯಾಗಿ, ವೇದ ಪ್ರೋಕ್ತವಾದ ಪ್ರಜಾತಂತುವೆಂಬ ಮಂಗಳ ಸೂತ್ರವನ್ನು ಮುಂದುವರಿಸಿ, ಧರ್ಮಸಂಗ್ರಹದಿಂದ ತಾನು ಬ್ರಹ್ಮಚರ್ಯಾಶ್ರಮಿಯಾಗಿರುವಾಗ ಕಲಿತ ವಿದ್ಯೆಯ ತತ್ವವನ್ನು: ಗೃಹಸ್ಥಾಶ್ರಮವಾಸ ಕಾಲದಲ್ಲಿ ಲೋಕ ಹಿತಕ್ಕಾಗಿ ಸಮಾಜದ ಉದ್ಧಾರಕ್ಕಾಗಿ ಪ್ರಯೋಗಮಾಡಿ, ತನ್ನ ಉದ್ಧಾರಕ್ಕೆ ಅವಶ್ಯಕವಾದ ಧರ್ಮ, ಅರ್ಥ, ಕಾಮ ಮತ್ತೂ ಮೋಕ್ಷಗಳೆಂಬ ಚತುರ್ವಿಧ ಫಲ ಪುರುಷಾರ್ಥಗಳನ್ನು ನಿಷ್ಕಾಮ

ಯೋಗ ಬಲದಿಂದ ಸಾಧಿಸಿ, ಇಂತಪ್ಪ ಧರ್ಮೋದ್ಧಾರ ಜೀರ್ಣೋದ್ಧಾರ ಕಾಯ ಕದ ಮೂಲಕ ಲೋಕೋದ್ಧಾರ ಮಹಾಕಾರ್ಯದಲ್ಲಿ ಭಾಗಿಯಾಗಿ ಕೀರ್ತಿವಂತ ನಾಗಿ ಮಾನವನಾಗಿ ಹುಟ್ಟಿದ ಬಳಿಕ ಸಾಧಿಸಬೇಕಾದ ಗುರಿ. ಗೃಹಸ್ಥಾ ಶ್ರಮವು ಮಾನವನ ಜೀವಿತದ ಹಾದಿಯಲ್ಲಿ ದೊಡ್ಡ ಶಕ್ತಿಯುತವಾದ ಒಂದು ಜಂಕ್ಷನ್ *(Benaras Terminus, Central Station)* ಸ್ಟೇಷನ್ನಿನಂತೆ, ಸಾಧಕರ ಬಹುವಿಧ ಸಾಧನೆಗಳಿಗೆ ಆಶ್ರಯವನ್ನು ನೀಡುವಂಥಾ ಮಹತ್ತರ ಸ್ಥಾನವಾಗಿದೆ. ಈ ಪವಿತ್ರವಾದ ಗೃಹಸ್ಥಾಶ್ರಮವು ಬ್ರಹ್ಮಚಾರಿಯ ಕ್ಷೇತ್ರ ವನ್ನು ಪ್ರಕಾಶಗೊಳಿಸಿ, ವಿವಾಹಿತನಾಗುತ್ತಲೇ ಗೃಹಸ್ಥನನ್ನು ಶಕ್ತಿಯುತ ನನ್ನಾಗಿ ಮಾಡಿ ಜ್ಞಾನಕರ್ಮಗಳ ಸಮ್ಮಿಲನಾತ್ಮಕ ಕ್ರಿಯಾ ವಿಶೇಷದಿಂದ ಇಹಪರಗಳ ಸುಖಸಾಧನೆಯ ಅಭ್ಯುದಯಗಳನ್ನು ಸೂರೆಗೈದು, ನಿಸ್ಪೃಹ ಭಾವದಿಂದ ದಿಗಂತ ವಿಶ್ರಾಂತವಾದ ಶಾಶ್ವತ ಕೀರ್ತಿಕಾಯದಿಂದ ಬೆಳಗಬೇಕೆಂಬ ಮಾಣಿಕ್ಯ ರತ್ನಗಳಂಥಾ ಬುದ್ಧಿಮತಿಗಳಿಂದ ಶ್ರೀ ಜಾತವೇದಿ ಮುನಿಗಳು, ಲಗ್ನಪತ್ರಿಕೆಯನ್ನೋದಿ ತಲ್ಲಣಗೊಂಡಿದ್ದ ಬಸವಣ್ಣನವರ ಚಿತ್ತಕ್ಕೆ ಶಾಂತಿ ಸಮಾಧಾನೋಕ್ತಿಗಳಿಂದ ಸಂತೈಸಿಸಿ, ಶ್ರೀಮದ್ರೇಣುಕಾದಿ ಪಂಚಾಚಾರ್ಯರ ಪ್ರತೀಕದಂತೆಸೆವ ಪಂಚ ಗಣಾಧೀಶರನ್ನು ಜೊತೆಮಾಡಿ, ಬಲದೇವ ಮಂತ್ರಿಯ ಕಡೆಯವರೊಂದಿಗೆ ಬಸವಣ್ಣನನ್ನು ಶುಭಾಶೀರ್ವಾದಗಳಿಂದ ಅನುಗ್ರಹಿಸಿ ಮಂಗಳಕರದಿಂದ ಕಳುಹಿಸಿಕೊಟ್ಟರು.

ಶ್ರೀ ಬಸವಣ್ಣನನ್ನು ಹಿಂಬಾಲಿಸಿದ ಈ ಪಂಚಗಣಾಧೀಶರು ಮದು ಮಗಳಾದ ಗಂಗಾಂಬಿಕೆ ಎಂಬ ವಧುವಿಗೆ, ಶ್ರೀ ಮತ್ಪಂಚಾಚಾರ್ಯರುಗಳ ಹೆಸರಿನಲ್ಲಿ ವಿಧಿವತ್ತಾಗಿ ಸ್ಥಾಪಿಸಿದ ಪಂಚಕಳಸ ಪೂಜಾವಂದನ ಪೂರ್ವಕ ಶಿವ ದೀಕ್ಷೆಯನ್ನಿತ್ತು ಪರಮವೀರಶೈವ ಸನಾತನ ಸಂಪ್ರದಾಯಾನುಸಾರ ಶಿವಲಿಂಗ ಧಾರಣ ಮಹೋತ್ಸವಾನಂತರ, ಸರ್ವಲಕ್ಷಣ ಲಕ್ಷಿತಳಾದ ವಿಚಕ್ಷಣ ಸಂಪನ್ನೆ, ಪವಿತ್ರವಾದ ದೇವಗಂಗೋದಕದಂಥ ಮನೋಭಾವವುಳ್ಳ ಗಂಗಾಂಬಿಕೆಯನ್ನು, ಶಮದಮಾದಿ ಸದ್ಗುಣ ಸಂಪನ್ನನಾದ ಬಸವಣ್ಣನೆಂಬ ಮದು ಮಗನಿಗೆ (ವರನಿಗೆ) ಕೊಟ್ಟು ವೀರಶೈವ ವಿಧಿಗನುಸಾರ ಪಂಚಕಲಶ ಪ್ರತಿಷ್ಠಾಪನ

ಪೂರ್ವಕ ಹರಗುರು ಜಂಗಮರ ಕೃಪಾಬಲದಿಂದ, ಇವರ ವಿವಾಹ ಮಹೋತ್ಸವ ವನ್ನು ಬಲದೇವ ಮಂತ್ರಿಯು, ಇಂದ್ರ ಶಚೀದೇವಿಯರ ದೇವಲೋಕದ ವಿವಾಹದ ವೈಭವದಂತೆ ಅತ್ಯಂತ ವೈಭವದಿಂದ ಮಗಳ ವಿವಾಹವನ್ನು ನೆರವೇರಿಸಿದನು.

ಗೃಹಸ್ಥಾಶ್ರಮವನ್ನು ಗುರುವಾಜ್ಞೆಯಂತೆ ಪ್ರವೇಶಿಸಿ ಸದ್ಗೃಹಸ್ತ ಧರ್ಮವನ್ನು ಕೈಕೊಂಡ ಬಸವಣ್ಣ, ತನ್ನ ಬ್ರಹ್ಮಚರ್ಯ ಗುರುಕುಲವಾಸದ ಕಾಲದಲ್ಲಿ ಸಂಪಾದಿಸಿದ ವಿದ್ಯಾವಿನಯಾದಿ ಸಂಪತ್ತನ್ನು ವಿಸ್ತರಿಸಿ ಬಹು ಮುಖದಿಂದ ಜನೋಪಕಾರಾರ್ಥ, ಸ್ವಾರ್ಥವತ್ಯಜಿಸಿ ಕಾರ್ಯಗತ ಮಾಡಲು, ಕಾಯಕವೊಂದನ್ನು ಅಂದರೆ ಕರಣಿಕ ಕಾಯಕವನ್ನು ಕೂಡಲೇ ದಕ್ಷತೆಯಿಂದ ಕೈಕೊಂಡನು. ಮೃಗರಾಜನಾದ ಗಂಡು ಸಿಂಹವು ಗುಹೆಯಿಂದ ಹೊರಬರು ವಂತೆ ಗುರುಕುಲ ವಾಸದ ವಿದ್ಯಾ ವ್ಯಾಸಂಗವನ್ನು ಬ್ರಹ್ಮಚಾರಿಯುಮುಗಿಸಿ— ಗಂಭೀರವಾಗಿ ಜಗತ್ತಿನಲ್ಲಿ ಹೊರಬಿದ್ದು, ಗೃಹಸ್ಥಾಶ್ರಮಿಯಾಗಿ ಸದ್ಗೃಹಸ್ಥ ನೆಂದು ಕೀರ್ತಿ ಪಡೆದು, ವಿಖ್ಯಾತನಾಗಿ ಬಾಳಿ ಇಹಪರಗಳ ಸಂಪತ್ ಸೌಭಾಗ್ಯ ಗಳನ್ನು ಸೂರೆಗೊಳ್ಳಬೇಕು. ಆಗಲೇ ಮಾನವನಾಗಿ ಹುಟ್ಟಿದ್ದಕ್ಕೆ ಸಾರ್ಥಕ ವಾಗಿ ಹರ ಗುರು ಜಂಗಮರ ಪ್ರೀತಿಗೆ ಪಾತ್ರನಾಗುವಂಥವನಾಗುವನು ಶ್ರೀ ಬಸವಣ್ಣನವರಾದರೋ ಈ ಮಾರ್ಗದಲ್ಲಿ ಸಿಂಹರಾಜನಂತೆ ಬಸವರಾಜ ನಾಗಿ ಬಾಳಿ ಪ್ರಕಾಶಿತರಾಗಿರುವರು. ಸೋಮಾರಿಗಳಾಗಿ ಯಾರೂ ಇರಬಾರ ದೆಂಬುದೇ ಅವರ ಉದಾತ್ತವಾದ ಭಾವನೆ. ಹೊಟ್ಟೆ ಬಟ್ಟೆಗಳ ಪಾಡಿಗೆಂದು ಗೈಯ್ಯುವ ಯಾವ ಕಾಯಕವೇ ಆಗಿರಲಿ ಅವು ಕೇವಲ ಭುಕ್ತಿಗಾಗಿ ಎಂದು ಭಾವಿಸದೆ, ಅವುಗಳ ಮೂಲಕ ಭಕ್ತಿ ಮುಕ್ತಿಗಳನ್ನು ಸಾಧಿಸುವ ಹೆದ್ದಾರಿ ಯಲ್ಲಿ ಜಾಣ್ಮೆಯಿಂದ ಮಾನವನು ಮುನ್ನೆಡೆದು ತನ್ನ ಆತ್ಮೋದ್ಧಾರಗೈದು ಕೊಂಡು ಅನ್ಯರ ಉದ್ಧಾರಕಕ್ಕೂ ಮಾರ್ಗದರ್ಶಕನಾಗಿರಬೇಕೆಂಬುದೇ ಶ್ರೀ ಬಸವಣ್ಣನವರ ಧ್ಯೇಯವಾಗಿತ್ತು.

"ನಾನು—ನನ್ನದು" ಎಂಬ ಎರಡು ಪೆಡುಂಬೂತಗಳಾದ ಅಹಂಕಾರ ಮಮಕಾರಗಳನ್ನು ನೀಗಿ ವೀರಮಾಹೇಶ್ವರರಾದ ಗುರು ಲಿಂಗ ಜಂಗಮರಿಗೆ—

## ಪ್ರಸ್ತಾವನೆ

ತನು ಮನ ಧನಗಳನ್ನು ಈಶ್ವರಾರ್ಪಿತ ಬುದ್ಧಿಯೋಗದಿಂದ ಅರ್ಪಿಸಿ, ಅಂದರೆ– ಗುರುವಿನಡಿದಾವರೆಗಳಲ್ಲಿ ತನುವನ್ನೂ ಶಿವಲಿಂಗದ (ಇಷ್ಟಲಿಂಗದ) ದಿವ್ಯ ಜ್ಯೋತಿಯಲ್ಲಿ ಮನವನ್ನೂ, ಜಂಗಮರಿಗೆ ಧನವನ್ನೂ ಸಮರ್ಪಿಸಿ, ಗುರು ಜಂಗಮರನ್ನು ಇಷ್ಟಲಿಂಗದಲ್ಲಿ ಏಕಭಾವದಿಂದ ಅಂತರ್ಗತರಾಗಿರುವ ದೃಶ್ಯ ವನ್ನು ದೃಢವಾಗಿ ಕಂಡನು. ಭಾವೈಕ್ಯವಾದ ಪೂಜ್ಯ ಶರಣ ಸ್ಥಿತಿಯಲ್ಲಿ ॥ ನಿರ್ಮಮೋ ನಿರಹಂಕಾರಃ । ಸ ಶಾಂತಿಮಧಿಗಚ್ಛತಿ ॥ ಎಂಬ ಭಗವಂತನ ಅಣತಿಯಂತೆ ಮಮತಾ ಶೂನ್ಯನಾಗಿ ಅಹಂಕಾರವನ್ನು ದೂರ ವರ್ಜಿಸಿ, ಎಲ್ಲಾ ಕಾಮ್ಯ ಕೋರಿಕೆಗಳನ್ನು ಬಿಟ್ಟು ಯಾವಾತನು ಲೌಕಿಕರ ಮಧ್ಯೆ ಸಂಚರಿಸುವನೋ ಅಂಥವನು ಮಾನವರಲ್ಲಿ ದೇವಮಾನವನಾಗಿ ॥ ಶಾಂತಿ ಮದಿಗಚ್ಛತಿ ॥ ಲಿಂಗಾಂಗ ಸಾಮರಸ್ಯ ಮೋಕ್ಷಸುಖ ಶಾಂತಿಗಳನ್ನು ಹೊಂದು ತ್ತಾನೆಂಬುದೇ ಶ್ರೀ ಬಸವಣ್ಣನವರ ವಚನ ಶಾಸ್ತ್ರದ ತಿರುಳು. ಇದೇ ಸಕಲ ವೇದಾಗಮೋಪನಿಷತ್ತುಗಳ ಸಾರ. ವೀರಶೈವ ಮಹಾತತ್ವ ಪ್ರಚಾರ ಧರ್ಮೋದ್ಧಾರಕನಾದ, ಸತ್ಯಪ್ರಿಯನೂ ಭಕ್ತಿ ಭಂಡಾರಿ ಅಣ್ಣ ಶ್ರೀ ಬಸವಣ್ಣ ನನ್ನು, ವೀರಶೈವ ಮತಸ್ಥಾಪನಾಚಾರ್ಯರೆಂದಾಗಲಿ, ಜಗದ್ಗುರುವೆಂದಾಗಲಿ, ಅವನೊಲ್ಲದ ಅಸಂಬದ್ಧವಾದ ಬಿರುದುಗಳನ್ನು ಅವನ ನೆತ್ತಿಯ ಮೇಲೆ ಹೊರೆ ಹೊರಿಸುವುದು ಅಂಧಾಭಿಮಾನದ ಕೃತಿ ಎನಿಸಿ ಬಸವಣ್ಣನು ಅವು ಯಾವನ್ನೂ ಹೊಲ್ಲನು ಒಪ್ಪನು. ಯಾಕೆಂದರೆ ತನ್ನ ವಚನವೊಂದರಲ್ಲಿ ಶ್ರೀ ಬಸವಣ್ಣನು "ಎನ್ನಲ್ಲಿ ಭಕ್ತಿ ಸಾಸಿವೆಯ ಷಡ್ಭಾಗದನಿತಿಲ್ಲ ಎನ್ನ ಭಕ್ತನೆಂಬರು । ಎನ್ನ ಸಮಯಾಚಾರಿ ಎಂಬರು ನಾನೇನು ಪಾಪವ ಮಾಡಿದೆನೋ ! ? ॥ ಕೂಡಲ ಸಂಗಮದೇವನಲ್ಲಿ ಇಂತು ಮೊರೆಯಿಟ್ಟುಕೊಂಡಿರುವರು. ತನಗೆ ಯಾವ ಬಿರುದನ್ನೂ ಸಹಿಸನು ಬಸವಣ್ಣ. ಜಗತ್ತಿನಲ್ಲಿ ಜನರು ಕಾರಣಾಂತರಗಳಿಂದ ತಮಗೆ ಪ್ರಾಪ್ತವಾಗುವ, ವಿದ್ಯಾ ಭೂಷಣ, ವಿದ್ಯಾ ವಾಚಸ್ಪತಿ ಇತ್ಯಾದಿ ಅನೇಕ ವಿಧವಾದ ಪಟ್ಟವಲ್ಲರಿಗಳಿಂದ ಹಾಗೂ ಉನ್ನತ ಸ್ಥಾನಮಾನಗಳಲ್ಲಿನ ಅಭಿಮಾನ ಅಭಿನಿವೇಶಾದಿ ಮನಮೋಹಕ ॥ ಮೋಹ ಕಲಿಲಃ ॥ ಅನಂತ ಬಿರುದಾವಳಿಗಳು, ಕೆಲವರಲ್ಲಿ ಅಂಧಾಭಿಮಾನ ವನ್ನುಂಟುಮಾಡಿ ನರನನ್ನು

Acc. No.........
JANANA SIMHASAN JNANAMANDIR LIBRARY
Jangamwadi Math, VARANASI



ಅನಂತಾನಂತ ಜನ್ಮಗಳನ್ನೀಯುವಂಥಾ ಬಂಧನಗಳೆಂಬ ಮಾಯಾ ಮೋಹ ಜಾಲದಲ್ಲಿ ಸಿಕ್ಕಿ ಆಶಾನಾಮ ಸಾಗರದಲ್ಲಿ ಗೊತ್ತು ಗುರಿಗಳಿಲ್ಲದಂತೆ ತೇಲುವ ಸ್ಥಿತಿಯಲ್ಲಿ ಅಪಾರ ಬಳಲಿಕೆಯನ್ನುಂಟುಮಾಡುವುದರೊಂದಿಗೆ, ಈ ಜೀವಾತ್ಮರು ಮುಮ್ಮಲಗಳಲ್ಲಿ ಮತ್ತಷ್ಟು ಅಂಟಿಕೊಂಡು ಮುಕ್ತಿಗೆ ಬಹುದೂರರಾಗುವರೆಂಬ ಅಂಶ ಗಮನಾರ್ಹವೇ ಆಗಿರುವುದು. ಕ್ಷುದ್ರವಾದ ಬಯಿಕೆಗಳಿಂದ ದೂರರಾಗಿ ನರರು ,ಇನ್ನಾದರೂ ಅಖಿಲ ವರ ಪ್ರಶಸ್ತ ಹಸ್ತಾನ್ವಿತನೂ. ಅಪ್ರಮೇಯನೂ, ಪಾಶದೂರನೂ ಅಮೃತಮಯನೂ, ಅನಂತನೂ, ಅಕ್ಷರನೂ, ಅಭಯಪ್ರದನೂ ಆಗಿ ವಿರಾಜಿಸುವ ಪರಮಾತ್ಮನನ್ನು ಮೊರೆ ಹೊಕ್ಕು ವೀರವೈರಾಗ್ಯ ವಿರಕ್ತಿಯಿಂದ ತನು ಮನ ಧನಗಳನ್ನು ವೀರಮಾಹೇಶ್ವರಾದಿ ಗುರು ಲಿಂಗ ಜ ಂ ಗ ಮ ರಿ ಗೆ ಅರ್ಪಿಸಿ ॥ ಸರ್ವ ಧರ್ಮಾನ್ ಪರಿತ್ಯಜ್ಯ । ಮಾಮೇಕಂ ಶರಣಂ ವ್ರಜ । ಅಹಂತ್ವಾ ಸರ್ವ ಪಾಪೇಭ್ಯೋ । ಮೋಕ್ಷ ಯಿಷ್ಯಾಮಿ ಮಾಶುಚಃ ॥ ಎಂಬಂತೆ, "ಹೇ ವತ್ಸ ! ಕರ್ತೃತ್ವ ಭೋಕ್ತೃತ್ವಾದಿ ನಿನ್ನ ಎಲ್ಲಾ ಧರ್ಮಗಳನ್ನೂ ಬಿಟ್ಟು, ಅನನ್ಯ ಭಾವೇನ ನನ್ನಲ್ಲೇ ನೆಟ್ಟ ನಿಷ್ಠೆಯುಳ್ಳವನಾಗಿ ಶರಣಾಗತನಾದರೆ, ಸರ್ವ ಪಾಪಗಳಿಂದಲೂ ನಿನ್ನನ್ನು ಬಿಡುಗಡೆ ಮಾಡಿ ಮುಕ್ತನನ್ನಾಗಿಸುವೆನು, ದುಃಖಿಸಬೇಡ"ವೆಂದು ಸ್ವಾಮಿ ರಕ್ಷಾಕವಚದಂತೆ ಅಭಯವನ್ನಿತ್ತಿರುವನು. ನಿತ್ಯಬ್ರಹ್ಮಚಾರಿ ಹಾಗೂ ನಿತ್ಯೋಪಾಸಿಗಳೆಂಬ ಒಗಟುಗಳ ಅರ್ಥಕ್ಕನುಗುಣವಾಗಿ ಸರ್ವಸಂಗ ಪರಿತ್ಯಾಗವನ್ನು ಮಾಡಿದಂಥವನಾಗಿ ಯಾವ ವಿಧವಾದ ಆಸಕ್ತಿ ಕೋರಿಕೆ ಬಯಕೆಗಳಿಗೂ ಗುಲಾಮನಾಗಿ ಅಂಟಿರದೆ, ॥ ನಳಿನೀದಳ ಮಂಬುವತ್ ॥ ಎಂಬಂತೆ ತಾವರೆ ಎಲೆಯನ್ನು ನೀರು ನೆನೆಯಿಸದೇ ಇರುವಂತೆ -ಅಂದರೆ, "ಸರೋಜ ಪತ್ರದೊಳುರುಳ್ದ ಜಲಂ ಪೊಸ ಮುತ್ತೆ ನಿಪ್ಪುದು" ಹಿಮಗಾಲದಲ್ಲಿ ಒಂದುಹನಿ ನೀರು ತಾವರೆಯ ಕೋಮಲವಾದ ಎಲೆಯ ಮೇಲೆ ಬಿದ್ದು ಮುದ್ದಾದ ಮುತ್ತಿನಂತೆ ರಂಜಿಸುವುದಷ್ಟೆ. ದೂರ ದೃಷ್ಟಿಗೆ ಆ ಹನಿ ನೀರು ಎಲೆಗೆ ಅಂಟರುವಂತೆ ತೋರಿದರೂ ನಿಜವಾಗಿ ಆ ಬಿಂದು ಅಂಟಿಯೂ ಅಂಟದಹಾಗೆ ವಿರಾಜಿತವಾಗಿರುವುದು. ಅದರಂತೆ ಮಾನವನು

SRI JAGADGURU VISHWARADHYA JNANA SIMHASAN JNANAMANDIR LIBRARY
Jangamwadi Math, VARANASI
Acc. No.........

ಸಂಸಾರದಲ್ಲಿದ್ದರೂ ಇಲ್ಲದವನಂತೆ, ಅಂಟಿಯೂ ಅಂಟದೆ ಯಾವ ಬಿರುದು, ಪ್ರಭುತ್ವ ಹಾಗೂ ದಂಬ ದರ್ಪಗಳಿಗೆ ಮರುಳಾಗಿ ಮನಸೋಲದೆ, ಚಿತ್ತ ಸ್ಥೈರ್ಯ ಗಾಂಭೀರ್ಯೌದಾರ್ಯಾದಿ ಸುಹೃದ್ಗುಣ ಗಣಗಳಿಂದ ಜಗದಾದರ್ಶ ಪುರುಷ ಶ್ರೀ ಬಸವಣ್ಣನವರಂಥಾ "*Simple living and high thinking*" ಮಾರ್ಗದಲ್ಲಿ ನಾವು ಮುಂದುವರೆದರೆ ನಿಜವಾದ ಶ್ರೇಯಸ್ಸುಂಟಾಗುವುದು.

ಇಲ್ಲವಾದರೆ ಜಗತ್ತಿನಲ್ಲಿ ಮಾನವನು ಯವ್ವನಬಲ, ಧನ ಜನ ಬಲ ಪ್ರಭುತ್ವದ ಬಲ, ಬಾಹುಬಲ ವಿದ್ಯಾಬಲಗಳಿಂದ ಅಹಂಭಾವಿತನಾಗಿ ಸಂಭಾವಿತನೆಂದು ಭಾವಿಸಿ ॥ ಮೂಜಗಮಂ ಪುಲ್ಗೆಣಿಪ್ಪಂ ॥ ಮೂರು ಲೋಕವನ್ನೂ ಹುಲ್ಲಿಗೆ ಸಮಾನವಾಗಿ ಎಣಿಸಿ, ॥ ಸಂಸಾರಮೇ ಸಾರಮೆಂಬೀ ಬಗೆಯಿಂ ಮೂದಲಿಪ್ಪಂ ॥ ಸಂಸಾರವೇ ಸಾರವೆಂದು ಬಗೆದು ಅಂದೋ! ಅನ್ಯಾಯವಾಗಿ, ಅತ್ತಿಯ ಹಣ್ಣು ಕೆಂಪಗೆ ಸುಂದರವಾಗಿದ್ದರೂ, ಮುರಿದರೆ ಅದರೊಳಗೆ ನೂರಾರು ಹುಳುಗಳು ಮಿಲಿಮಿಲಿ ಎನ್ನುವಂತೆ, ತಾನು ಸುಂದರ ಪುರುಷನೆಂದೋ ಅಥವಾ ಸ್ತ್ರೀಯೆಂದೋ ಭಾವಿಸಿದರೆ, ತಮ್ಮ ಹೊಟ್ಟೆಯಲ್ಲಿ ॥ ಕ್ರಿಮಿಜಾಲ ಸಂಕುಲಃ ॥ ಸಾವಿರಾರು ಕ್ರಿಮಿಗಳು ಮಿಲಿಮಿಲಿ ಎಂದು ಒದ್ದಾಡುತ್ತಿರುವ ದುರ್ಗಂಧದ ಮಡುವಿನಲ್ಲಿ ಯಾರು ತಾನೆ ಸುಖ ಶ್ರೇಯಸ್ಸಿದೆ ಎನ್ನುವರು. ॥ ಯವ್ವನಂ ಧನಸಂಪತ್ತಿ ಪ್ರಭುತ್ವಂ ಅವಿವೇಕತಾಂ । ಏಕೈಕ ಮಪ್ಯನರ್ಥಾಯ ಕಿಂಯತ್ರ ಚತುಷ್ಟಯಂ ॥ ಒಬ್ಬ ಮನುಷ್ಯನನ್ನು ನಾಶಗೊಳಿಸಬೇಕಾದರೆ, ಮದೋನ್ಮತ್ತವಾದ ಯವ್ವನ, ಅನೀತಿಯಿಂದ ಆರ್ಜಿಸಿದ ಧನ, ಅಧಿಕಾರಲಾಲಸತೆ (ದರ್ಪ, ಉದಾಸೀನತೆ) ಮತ್ತೂ ಅವಿವೇಕತನದ ಪ್ರಚಂಡತನ ಅಥವಾ ಮೂರ್ಖತನ ಯಿವುಗಳು ಪರಮ ಶತೃಗಳಂತಿರುವುವು ಈ ಒಂದೊಂದೂ, ಮನುಷ್ಯನನ್ನು ಹಾಳು ಮಾಡುವುದರಲ್ಲಿ ಸಾಕಷ್ಟು ಬಲಿಷವಾಗಿರುವಲ್ಲಿ ನಾಲ್ಕೂ ಗುಣಗಳ ಒಟ್ಟುಗೂಡುವಿಕೆಯಿಂದಾಗಲಿರುವ ಅನರ್ಥ ಪರಂಪರೆಯನ್ನು ಪ್ರತ್ಯೇಕ ಹೇಳತಕ್ಕದ್ದೇನಿದೆ.

ಕೇವಲ ಲೌಕಿಕ ಆಸಕ್ತಿಯಲ್ಲಿ ಮಿಂದು ಮುಳ್ಗಿ ಮಮಕಾರಕ್ಕೆ ಮರು

ಳಾದ ಮಾನವನು, ಮಾಯಾ ಪ್ರಪಂಚದ ಮೋಹಬಲೆಗೆ ಸಿಕ್ಕಿ ಮಂಕುತನ ದಿಂದ ಕಂಡ ಕಂಡದ್ದನ್ನೆಲ್ಲಾ ಬಣ್ಣಿಸಿ ಬವಣೆಗೊಂಡು, ಆತ್ಮವಿದ್ಯೆಗೆ ದೂರವಾದ ಅನ್ಯವಿದ್ಯೆ (ಪಶುವಿದ್ಯೆ)ಗೆ ಜೆರಗಾಗಿ ಬಾಯಿಬಿಡುತ್ತಾ ಬೇಡಿ ಕಾಡುವ ಸ್ಥಿತಿ ಗಿಳಿದು ನಷ್ಟವಾಗುತ್ತಲಿರುವನು.

॥ ಅನ್ಯ ವಿದ್ಯಾಪರಿ ಜ್ಞಾನಂ ।
ಅವಶ್ಯಂ ನಶ್ವರಂ ಭವೇತ್ ॥
ಬ್ರಹ್ಮ ವಿದ್ಯಾಪರಿ ಜ್ಞಾನಂ ।
ಬ್ರಹ್ಮ ಪ್ರಾಪ್ತಿಕರಂ ಸ್ಥಿತಂ ॥

ಅವಿದ್ಯೆ ಮುಕ್ತಿ ಪಥದಿಂದ ದೂರ ಸೆಳೆದುಕೊಂಡು ಹೋಗಿ,

॥ ಪುನರಪಿ ಮರಣಂ ಪುನರಪಿ ಜನನಂ ।
ಪುನರಪಿ ಮರಣಂ ಜನನೀ ಜಠರೇ ಶಯನಂ ॥
ಇಹಸಂಸಾರೇಖಲು ದುಸ್ತಾರೇ ।
ಪಾಹಿ ಮುರಾರೇ ಕೃಪಯಾಸಾರೇ ॥

ಜನನ ಮರಣಗಳೆಂಬ ಭಯಂಕರವಾದ, ನೀಗದ ರೋಗಕ್ಕೆ ಗುರಿಮಾಡಿ (*Chronic type of incurable discease*) ಮೋಹ ಜಾಲದಲ್ಲಿ ತಳ್ಳು ವಂಥಾ ಬಯಕೆ, ಬಿರುದುಗಳ ಹವ್ಯಾಸ, ಆತ್ಮ ಕಲ್ಯಾಣಕ್ಕೆ ಹಾನಿಕರವೆಂಬುದು ಶತಸಿದ್ಧವಾದ ಅಂಶವಾಗಿರುತ್ತೆ. ಕರ್ಮ ಬಂಧನದ ಈ ರಹಸ್ಯವನ್ನು ಮನಗಂಡ ಮಹಾನುಭಾವರಾದ ಬಸವಣ್ಣನವರು "ತನ್ನ ಬಣ್ಣಿಸಬೇಡ ಇತರರ ಹಳಿಯಲು ಬೇಡ"ವೆಂದು ಜನತೆಗೆ ಕೊಟ್ಟ ದಿವ್ಯ ಸಂದೇಶದಿಂದ ಅವರು ಅಮರರಾಗಿ, ಹಿರಿಯ ಗುರುತ್ವದ ಆಧಿಪತ್ಯಕ್ಕೋ ಅಥವಾ ತಾವು ಮನವೊಲುಮೆಯಿಂದ ಅಂಗೀಕರಿಸಿದ ವೀರಶೈವ ಸನಾತನ ಧರ್ಮದ ಸ್ಥಾಪನಾಚಾರ್ಯರೆಂಬ ಮೋಹಕ್ಕೋ ಕನಸಿನಲ್ಲೂ ಎಳ್ಳಷ್ಟೂ ಸೋಕಿಸಿಕೊಳ್ಳದ, ಪವಿತ್ರವಾದ *Service for service sake* ಕಾಯಕವೇ ಕೈಲಾಸವೆಂಬಂತೆ ಸರಳ ನಿಸ್ಪೃಹ ಜೀವಿಗಳಾಗಿ ಭುವಿಯಲ್ಲಿ ಪ್ರಕಾಶಿತರಾದ, ಅಣ್ಣ ಬಸವಣ್ಣನ ಕೀರ್ತಿ

ಸತತ ಬೆಳಗುವಂತಹದೇ ಆಗಿರುವುದು. ಅವರ ಅಂತರಂಗದ ಪರಿಪಾಕ ಎತ್ತ ನಮ್ಮ ವಿಷಯಲಂಪಟತ್ವದ ಜಂಜಾಟವೆತ್ತ? ಎತ್ತು ನೀರಿಗೆಳೆದರೆ ಕೋಣ ಕೆಸರಿಗೆಳೆಯಿತು ಎಂಬಂತೆ ನಮ್ಮ ವರ್ತನೆಯಾಗಿದೆ.

## XI

ಶ್ರೀ ಬಸವಣ್ಣನವರು ಪೂರ್ಣ ದೈವೀಸಂಪತ್ ಸಾಮ್ರಾಜ್ಯ ಸುಖವ ಕಂಡು ಅನುಭವಿಸಿದಂತ ಹಿರಿಯ ಅನುಭಾವಿಗಳು ಹಾಗೂ ತತ್ವ ಬೋಧಕರು. ಇವರು ಪರಮ ಸನಾತನವೂ ವೇದ ವೇದಾಂತ ಸಿದ್ಧಾಂತ ಆಗಮೋಪ ನಿಷತ್, ಪುರಾಣ ಇತಿಹಾಸಾದಿ ಕಾವ್ಯಗಳಲ್ಲಿ ಸ್ತುತ್ಯವಾದ ವೀರಶೈವ ಮತ ಧರ್ಮಕ್ಕೂ, ಅಖಂಡ ಕರ್ಣಾಟಕಕ್ಕೂ, ಚೆಲುವಿನ ಕನ್ನಡ ಭಾಷೆಗೂ, ಇಡೀ ದೇಶಕ್ಕೂ ಹಾಗೂ ಅಖಿಲ ಮಾನವ ಜನಾಂಗಕ್ಕೂ ಪರಿಪರಿ ವಿಧದಲ್ಲಿ ಫಲಾ ಪೇಕ್ಷೆ ಕೋರದೆ ಸಲ್ಲಿಸಿರುವ ಘನಸೇವೆ ಚಿರಸಂಸ್ಮರಣೀಯವಾಗಿ ಕನ್ನಡವೆಂಬ ಕಸ್ತೂರಿ ಪರಿಮಳದಂತೆ ಪರಿಶೋಭಿಸುತ್ತಲಿರುವ ಅಂಶ ನಿಜಕ್ಕೂ ಸ್ತುತ್ಯಾ ರ್ಹವೂ ಶ್ಲಾಘನೀಯವೂ ಹೌದು. ಇವರ ಅವತಾರ ವಿಷಯದಲ್ಲಿ ಪ್ರಾಜ್ಞರು ಭಕ್ತಿಭಾವದಿಂದ ಶ್ರೀ ಬಸವಪುರಾಣದ ಪ್ರಾರಂಭದಲ್ಲಿ ಪೂಜ್ಯವಾದ ಒಂದಂಶ ವನ್ನು ವ್ಯಕ್ತಪಡಿಸುತ್ತಾ—

॥ ಪಾಹಿಮಾಂ ಶರಣು ಬಸವ ಪಾಹಿಮಾಂ ಶರಣು ಬಸವ ।
ಪಾಹಿಮಾಂ ಶರಣು ಬಸವ ಬಸವ ಪಾಹಿಮಾಂ ॥
ಆದಿಯಲ್ಲಿ ನಂದಿನಾಮ ಅನಾದಿಯಲ್ಲಿ ವೃಷಭನಾಮ ।
ಮೇಧುನೀ ಕಲ್ಯಾಣದಲ್ಲಿ ಬಸವನಾಮದಿ ॥ ಪಾಹಿಮಾಂ ॥

ಎಂಬುದಾಗಿ ಆದಿಯಲ್ಲಿ "ನಂದಿ" ಎಂಬ ಹೆಸರಿನಿಂದಲೂ ಅನಾದಿಯಲ್ಲಿ "ವೃಷಭ"ನೆಂಬ ನಾಮದಿಂದಲೂ, ಮೇಧುನೀ ಕಲ್ಯಾಣದಲ್ಲ "ಬಸವ" ಎಂಬ ನಾಮದಿಂದಲೂ, ಮೂರು ಪ್ರಕಾರವಾಗಿ ಪ್ರಕಾಶಿತನಾದ ಮಹಾಪುರುಷ

ನೆಂದು ಕೊಂಡಾಡಿರುವುದು ಸರಿಯಷ್ಟೆ. ಶ್ರೀ ನಂದಿ ಅಂಶವೇ ತಾನಾದ ಕಲ್ಯಾಣದ ಬಸವನೆಂದು ಪ್ರಸಿದ್ಧನಾಗಿ ಶ್ರೀ ಸದ್ಗುರುವಿನನುಗ್ರಹದಿಂದಲೂ ಶ್ರೀ ಸಂಗಮೇಶ್ವರನ ಕೃಪಾಬಲದಿಂದಲೂ ಬಸವಣ್ಣನವರು ತಮ್ಮ ಅಖಂಡ ಜೀವಿತದ ಘನಸೇವೆಯನ್ನು ಮೇಲುದಹರಿಸಿದಂತೆ ಗುರುಲಿಂಗ ಜಂಗಮರಿಗಾಗಿ ಮುಡುಪಿಟ್ಟು, ಸತ್ಸೇವೆಯಲ್ಲಿ ಶ್ರೀಗಂಧದ ಚೆಕ್ಕೆಯಂತೆ ಶ್ರಮಿಸಿ, ನಿಸ್ಪೃಹವಾದ ಕಿಂಕರ ಭಾವದ ಘನಸೇವೆಯಿಂದೆ ಶಂಕರತ್ವದ ಔನ್ನತಿಯ ಅರಿವಿನೊಂದಿಗೆ ವಿರಾಜಿಸಿ ಬೆಳಗಿ ಶಿವಶರಣಾಗ್ರಣಿಯೆಂದೂ, ನೆನೆದರೆ "ಶರಣ" ಮರೆತರೆ ಮಾನವ ಎಂಬ ಮಹದಂಶದಿಂದ ಪ್ರಕಾಶಿತನಾಗಿರುವುದು ಸರ್ವರಿಗೂ ವೇದ್ಯವೇ ಅಷ್ಟೆ.

ಶಿವಾಗಮಾಮ್ನಾಯಾದಿಗಳಲ್ಲಿ ಪಾರಂಗತರಾದ ಶ್ರೀ ಬಸವಣ್ಣನವರಿಗೆ ಶಿವಶರಣರ ಸೇವೆಯೇ ಶಿವಕಾಯಕವಾಗಿತ್ತು. ಅವರು ತಮ್ಮ ಸರ್ವಸ್ವವನ್ನೂ ಫಲಾಪೇಕ್ಷೆಯಿಲ್ಲದೆ ಶಿವಕಾಯಕಕ್ಕೆ ಧಾರೆ ಎರೆದು ಮುಕ್ತಾಫಲದಂತೆ ಬೆಳಗಿದರು. ಸಾಧು ಸಂತರ, ಶಿವಶರಣರ ಮತ್ತೂ ಗುರುಗಳ ಸೇವೆ ಎಂದರೆ "ಜೀವನಂ ಸಜ್ಜನಾನಾಂ" ಬಸವಣ್ಣನವರ ದಿವ್ಯ ಜೀವನದ ಬಂಡವಾಳವಾಗಿತ್ತು. ಜಗತ್ತಿನಲ್ಲಿ ಇಂದು ಶ್ರೀ ಬಸವಣ್ಣನವರ ಘನವ್ಯಕ್ತಿತ್ವಕ್ಕೂ ಮತ್ತೂ ಅವರ ಜ್ಞಾನ ಪ್ರಚೋದಿತ ಮಧುರ ವಚನಾಮೃತಗಳಿಗೂ, ಅಪಾರತರ ಆದರ ಆಸಕ್ತಿ ಗೌರವ ಭಕ್ತಿ ವಿಶ್ವಾಸಗಳು ಅಚ್ಚಳಿಯದೆ, ಭಕ್ತ ಕೋಟಿಗಳ ಸನ್ ಹೃನ್ಮಂದಿರಗಳಲ್ಲಿ ಸತತ ಪರಿಶೋಭಿಸುತ್ತ ಪೂಜನೀಯವಾಗಿರುವುವೆಂದರೆ, ಅದೆಲ್ಲಾ ದಯಾಳುವಾದ ಶ್ರೀ ಬಸವಣ್ಣನವರ ನಿಸ್ಪೃಹ ನಿಜಭಾವದ ಘನ ಸೇವೆಯ ಪ್ರತೀಕವೇ ಆಗಿರುವುದು. ಅವಿಶ್ರಾಂತವಾಗಿ ಅಖಿಲ ಜೀವಕೋಟಿಗಳ ಕಲ್ಯಾಣಕ್ಕಾಗಿ ದುಡಿಯುವ ಮನೋಪ್ರವೃತ್ತಿ, ಮನೋಭಾವವೇ ಅವರ ಜೀವನದ ಮುಖ್ಯ ತತ್ವವಾಗಿತ್ತು. ಇದರಿಂದ, ತಾವು ಹರಗುರು ಜಂಗಮರ ಹಾಗೂ ಶಿವಶರಣರ ಕಿಂಕರನೆಂದೇ ಮನಬಿಚ್ಚಿ ನುಡಿದಿರುವರು. ಸ್ಥೂಲವಿಚಾರ ದೃಷ್ಟಿಯಲ್ಲಿ "ಬಸವ" ಎಂದರೆ ದುಡಿ, ದುಡಿಮೆ ಎಂಬರ್ಥ ಸೂಚಿಸುವುದೆಂದರೆ ತಪ್ಪಾಗಲಾರದು. ಗಂಗಾಂಬಿಕೆಯ ವಿವಾಹಾನಂತರ, ಮಂತ್ರಿವರ್ಯನಾದ ಬಲದೇವ ಮಾವನ ಮನೆಯಲ್ಲಿ, ಮೃಷ್ಟಾನ್ನ ಪಾನಂಗಳಿಂದ ಸುಖವಾಗಿ

ಹಂಸತೂಲಿಕಾತಲ್ಪದಲ್ಲಿ ವಿರಾಜಿಸಬಹುದಾಗಿತ್ತು. ಆದರೆ ಅದು ಕನಿಷ್ಠಜೀವನವೆಂದು ಹಾಗಿರಲು ಬಸವಣ್ಣನವರು ಒಪ್ಪಲಿಲ್ಲ. ॥ ಮಡದಿ ಹುಟ್ಟಿದ ಮನೆಯಲ್ಲಿರುವಾತ ಮೂರ್ಖ ॥ ಹೆಂಡತಿ ಹುಟ್ಟಿದ ಮನೆಯಲ್ಲಿ ಯಾವಜ್ಜೀವವೂ ಇರುವಾತ ಮೂಢನೆಂಬ ಅಂಶ ಜಗತ್ತಿಗೆ ತಿಳಿದ ವಿಷಯವೇ ಆಗಿರುವುದು.

ಬಸವಣ್ಣನವರು ಶ್ರೀ ಜಾತವೇದಿ ಗುರುಗಳ ಉಪದೇಶದಂತೆ ಸ್ವತಂತ್ರ ಸಾಧೂ ಜೀವನವನ್ನು ಪ್ರತ್ಯೇಕವಾಗಿ ಹೂಡಿ ಕರಣಿಕ ಹುದ್ದೆಯಿಂದ ಗೃಹಸ್ಥ ಧರ್ಮಾವಲಂಭಿಗಳಾಗಿ ಆದರ್ಶಪ್ರಾಯ ಮಹಾ ವ್ಯಕ್ತಿಯಾಗಿ ಪ್ರಕಾಶಿತರಾಗಿದ್ದರು. ಅವರ ತತ್ವ ಪ್ರತಿಯೊಬ್ಬರೂ ಸ್ವತಂತ್ರ ಜೀವನಾವಲಂಭಿಗಳಾಗಿ ದುಡಿದು, ಧರ್ಮರೀತಿಯ ಸ್ವಯಾರ್ಜಿತ ದ್ರವ್ಯದಿಂದ ಸಾಧೂ ಜೀವನವನ್ನು ನಡೆಯಿಸಿ, ಸತತ ಹರಗುರು ಜಂಗಮರ ಸೇವೆಯಿಂದ ಧರ್ಮಿಷ್ಠರೂ ದೈವಭಕ್ತಿ ಸಂಪನ್ನರೂ, ಶಮದಮಾದಿ ಅಂದರೆ ಬಾಹ್ಯೇಂದ್ರಿಯ ಅಂತರೇಂದ್ರಿಯಗಳ ನಿಗ್ರಹಿಸಿ ಶಾಂತಿ, ಸಹಿಷ್ಣುತೆ, ಸಹಬಾಳ್ವೆ, ತಾಳ್ಮೆಯಿಂದ ಬದುಕಿ ಬಾಳಬೇಕೆಂಬುದೇ ಅವರ ಉದಾತ್ತ ಸಂದೇಶವೂ ಧ್ಯೇಯವೂ ಆಗಿತ್ತು. ಧಾರ್ಮಿಕ ಸಾಮಾಜಿಕ ಮಟ್ಟದಲ್ಲಿ ಅವರು ಅವಿಚ್ಛಿನ್ನವಾಗಿ ಸಲ್ಲಿಸಿದುವ ಘನಸೇವೆ ಅನಂತ, ಅಪಾರ, ಚಿರಸ್ಮರಣೀಯ. ನಾವು ಅವರಿಗೆ ಸರ್ವವಿಧದಿಂದಲೂ ಚಿರಋಣಿಗಳಾಗಿರುವೆವು.

ಹನ್ನೆರಡನೆಯ ಶತಮಾನಕ್ಕೆ ತತ್ಪೂರ್ವ, ಸಾಧ್ವೀಮಣಿಯಾದ ಸುಪ್ರಭಾದೇವಿಯೊಡೆಯ ಸಚ್ಛೀಲ ಸಂಪನ್ನನಾದ ಶಿಲಾದಮುನಿಗೆ, ಉದಯಿಸಿದ ಸತ್ಸುಜಾತ ಸುಪುತ್ರನೇ ನಂದಿ. ನಂದಿಯು ತಪಸ್ವಿಗಳಾದ ಮಾತಾಪಿತೃಗಳಿಗೆ ಯೋಗ್ಯ ಪುತ್ರರತ್ನದಂತೆಸೆದು ಶುಕ್ಲಪಕ್ಷದ ಚಂದ್ರನೋಪಾದಿ ಬೆಳೆಯತೊಡಗಿದನು. ಸದ್ವಂಶದ ದೀಪವನ್ನು ಉಜ್ವಲಗೊಳಿಸಿ ಯಾವ ಪುತ್ರನು ಹೆತ್ತ ತಾಯ್ತಂದೆಗಳನ್ನು ॥ ಪುನ್ನಾಮ ನರಕಾತ್ತ್ರಾಯತೀತಿ ಪುತ್ರಃ ॥ ಎಂಬ ಶಾಸ್ತ್ರೋಕ್ತಿಯಂತೆ, "ಪುಂಸ್" ಎಂಬ ನರಕಕೂಪದಿಂದ ಉದ್ಧರಿಸಿ, ಸ್ವರ್ಗಗಾಮಿಗಳನ್ನಾಗಿ ಮಾಡುವನೋ ಅವನನ್ನೇ ನಿಜಕ್ಕೂ ಪುತ್ರನೆಂದು ಪರಿಗಣಿಸಲ್ಪಡುವುದು. ॥ ಆತ್ಮಾ ವೈ ಪುತ್ರೋ ನಾಮಾಃ ॥ ತನ್ನ ನಿಜ ಆತ್ಮನ ಚಿದಂಶದ

ಯತ್ಕಿಂಚಿತ್ ಶಕ್ತಿಸ್ಫುರಣವೇ ಪುತ್ರನಾಗಿ, ಮಾತಾಪಿತೃಗಳ ಶುಕ್ಲಶೋಣಿತ ಸಂಬಂಧದಿಂದ ಕೂಡಿ, ಜನನಿಯ ಗರ್ಭಾಂಬುಧಿಯಲ್ಲಿ ಈಶ್ವರೇಚ್ಛೆಯಂತೆ ರೂಪಗೊಂಡು ನವಮಾಸಗಳ ಪರ್ಯಂತರ ಬೆಳೆದು, ಪ್ರಸೂತವಾಯುವಿ ನಿಂದ ತಾಡಿತನಾಗಿ (ಅಪ್ಪಳಿಸಲ್ಪಟ್ಟು) ಯಂತ್ರಕ್ಕೆ ಸಿಕ್ಕಿದ ಕಬ್ಬಿನಂತೆ, ಗಾಣಕ್ಕೆ ಸಿಕ್ಕಿದ ಎಳ್ಳಿನಂತೆ ರೋಚ್ಚಿದ್ದು ಮೂರ್ಛಿತನಾಗಿ ಭೂಪತನವಾಗುವನು. ಕೂಡಲೇ ಸರ್ವತ್ರ ವ್ಯಾಪಿಸಿರುವ ವೈಷ್ಣವೀ ಮಾಯೆಯಿಂದ ಆ ವೃತವಾದ ಆ ಕೋಮಲ ಶಿಶುವು "ಕ್ವಾ ಕ್ವಾ" ಎಂದು ಅಳಲು ಪ್ರಾರಂಭಿಸುವುದು. ಇವನು ಈಶ್ವರಾನುಗ್ರಹದಿಂದ ಬದುಕಿ ಬೆಳೆದು ಬಾಳಿ ಜನನೀ ಜನಕರನ್ನು ಸದ್ಗತಿಗೀಡುಮಾಡುವಂಥಾ ಸುಪುತ್ರರತ್ನನಾಗಿ ಯಶಸ್ಸಂಪನ್ನನಾಗಬೇಕು. ‖ ಅಪುತ್ರಸ್ಯ ಗತಿರ್ನಾಸ್ತಿ" ಎಂದು ಶಾಸ್ತ್ರಾರ್ಥಾಂವಿದೆ. ಪೂರ್ವದಲ್ಲಿ ಮೃಕಂಡು ಎಂಬೊಬ್ಬ ಮಹರ್ಷಿ ಆತ್ಮಜ್ಞಾನಿ ಸ್ವರ್ಗವನ್ನು ಸೇರಲು, ಪುತ್ರಹೀನನಾದುದ ರಿಂದ, ‖ ಪ್ರಜಾ ತಂತುಂ ಮಾವ್ಯವಚ್ಛೇತ್ಸೀ ‖ ಎಂಬ ವೇದದ ನಿಯಮಕ್ಕ ನುಗುಣವಾಗಿ, ಮೃಕಂಡು ಋಷಿಯು ಪ್ರಜೋತ್ಪತ್ತಿ ರೂಪ ನೂಲಿನ ಎಳೆ ಯನ್ನು ಮುಂದುವರಿಸದೆ ತುಂಡುಮಾಡಿ ದೂಷಿತನಾದುದರಿಂದ, ಇವನಿಗೆ ಸ್ವರ್ಗದಲ್ಲಿ ಸ್ಥಳವಿಲ್ಲವೆಂದು, ಅರ್ಧ ಚಂದ್ರಾಕೃತಿ ಪ್ರಯೋಗದಿಂದ ಮರ್ತ್ಯ ಲೋಕಕ್ಕೆ ತಳ್ಳಿದರೆಂಬ ಚರಿತ್ರೆ ಪ್ರಸಿದ್ಧವೆ ಇರುವುದು. ಮೃಕಂಡುವು ತಪಸ್ಸ ನ್ನೆಸಗಿ ಮಾರ್ಕಂಡೇಯ ನಾಮ ಸುಪುತ್ರ ರತ್ನನನ್ನು ಪಡೆದು ಪುನಃ ಸ್ವರ್ಗವ ನ್ನೇರಿದನೆಂಬ ವಿಷಯ ಸರ್ವರಿಗೂ ವೇದ್ಯವೇ ಅಷ್ಟೆ. ತಾಯ್ತಂದೆಗಳಿಗೆ ಸತತ ಸಂತಾಪವನ್ನು ತಂದೊಡ್ಡುವ ಮಕ್ಕಳು ಹುಟ್ಟಿದರೇನು ಫಲ. ಬೇವಿನ ಸಸಿಗೆ ನೀರೆರದಂತೆ ‖ ಕಿಂಜಾತೈಃ ಬಹುಭಿಃ ಪುತ್ರೈಃ ಶೋಕ ಸಂತಾಪಕಾರ ಕೈಃ ‖ ಅಂದರೆ, ಗಾಂಧಾರಿ ಹೆರಲಿಲ್ಲವೇ ನೂರೊಂದು ಮಕ್ಕಳ ಎಂಬಂತೆ ಕೌರವರಂಥ ದುಷ್ಟ ಪುತ್ರರಿದ್ದೇನು ಸುಖ. ಸಗರ ಚಕ್ರವರ್ತಿಗೆ ಅರುವತ್ತು ಸಾವಿರ ಗಂಡು ಮಕ್ಕಳಿದ್ದು ಸುಖವಿಲ್ಲದಾಯಿತೆಂದು ತಿಳಿದುಬರುತ್ತಲಿದೆಯಾದ್ದ ರಿಂದ ಚಕ್ರವರ್ತಿಯಾಗಿದ್ದರೂ ದುಷ್ಟ ಪುತ್ರರಿಂದ ಅವನಿಗೆಲ್ಲಿಹುದು ಸದ್ಗತಿ? ಸಗರನ ವಂಶದಲ್ಲಿ ಭೀಷ್ಮ ಮನೋರಥನಾದ ಭಗೀರಥನು ಹುಟ್ಟಿಯಲ್ಲವೆ, ಶಿವನ

ಜಟಾಮುಕುಟದಲ್ಲಿ ಅಲಂಕೃತಳಾದ ದೇವಗಂಗೆಯನ್ನು ಭುವಿಗಿಳಿಸಿ "ಗಂಗಾವತರಣ" ಗೊಳಿಸಿ ತನ್ನ ಪೂರ್ವಜರನ್ನು ಸ್ವರ್ಗಸ್ಥರನ್ನಾಗಿಮಾಡಿ, ಪಾವನವಾದ ಗಂಗೆ ಮೂರು ಲೋಕದ ಜೀವಕೋಟಿಗಳನ್ನು ಉದ್ಧಾರಮಾಡುವಂಥಾ ಮಹಾ ಪುಣ್ಯಕ್ಕೆ ಭಾಗಿಯಾಗಿ ಭಗೀರಥನೆಂಬ ಅನ್ವರ್ಥನಾಮಕ್ಕನುಗುಣವಾಗಿ ಬೆಳಗಿ ಅಮರನಾಗಿರುವನು.

॥ ಏಕೇನಾಪಿ ಸುಪುತ್ರೇಣ ವಿದ್ಯಾಯುಕ್ತೇನ ಸಾಧು ನಾ ।
ಆಹ್ಲಾದಿತಂ ಕುಲಂ ಸರ್ವಂ ಯಥಾ ಚಂದ್ರೇಣ ಶರ್ವರಿ ॥

ಅಂದರೆ, ಆಕಾಶದಲ್ಲಿ ರಾತ್ರಿವೇಳೆ ಕೋಟಿಗಟ್ಲೆ "ಮಿಣುಗಲೆ ಮಿಣುಗಲೆ ನಕ್ಷತ್ರ" ಎಂಬಂತೆ ಸಣ್ಣ ಪುಟ್ಟ ನಕ್ಷತ್ರಗಳು ಮಿಣುಗಿದ ಮಾತ್ರಕ್ಕೆ ಏನುಪ್ರಯೋಜನ. ಶೋಡಷ ಕಲೆಗಳಿಂದ ಪರಿಪೂರ್ಣನಾಗಿ ಬೆಳಗುವ ಪೌರ್ಣಮಿ ಚಂದ್ರನೊಬ್ಬನಿದ್ದರೆ, ಗಗನಾಂಬೆಯನ್ನು ಬೆಳಗಿಸಿ ಭೂಲೋಕದ ಜೀವಕೋಟಿಗಳನ್ನೂ ತನ್ನ ಅಮೃತ ಕಿರಣಗಳಿಂದ ಸಂತೈಸಿಸಿ ಸತ್ವಶೀಲರನ್ನಾಗಿ ಮಾಡಿ ಆನಂದ ಸಾಗರದಲ್ಲಿ ಮುಳುಗಿಸುವನು. ಸರ್ವರಿಗೂ ಆಹ್ಲಾದವನ್ನುಂಟುಮಾಡುವಂತೆ, ಸಾಧುವೂ ವಿದ್ಯಾವಿನಯ ಸಂಪನ್ನನೂ ಆದ ॥ ಏಕೇನಾಪಿ ಸುಪುತ್ರೇಣ ॥ ಸುಪುತ್ರನು ವಂಶಕೊಬ್ಬನೇ ಆದರೆ ತಾನೇನು ಸಾಕು. ಅವನಿಂದ ಸದ್ವಂಶವಲ್ಲರಿಯು ಬೆಳೆದು ಕವಲೊಡೆದು, ಮಘಮಘಿಪ ಪುಷ್ಪರಾಜಿಗಳಿಂ ಕೂಡಿ ಫಲವೀಯುವ ತೆರದಿ, ಇಹಪರಗಳ ಸುಖಸಾಧನೆಗೆ ಮೂಲಕಾರಣನಾಗಿ ಬಾಳಿ ಸರ್ವರಿಗೂ ಆನಂದದ ಬೆಳಕನ್ನೀಯುವನು.

॥ ಪುಟ್ಟಿದನೋರ್ವನೆ ಧೃವಂ । ಉಢುವ್ರಜವ ನಡೆಯಿಪ್ಪ ಕಾರಣಂ ।
ಪುಟ್ಟಿದನೋರ್ವನೆ ಕಮಠನು । ವೀರ್ಯನಾಂತಕಾರಣಂ ।
ಪುಟ್ಟಿದರೇಂ ಪರೋಪ ಕೃತಿಗೈಯ್ಯದೆ ಸತ್ತವರ್ ಪುಟ್ಟವೇ ಸಾಯುವೇ
ಜಗ । ದೊಳತ್ತಿಯ ಪಣ್ಣೊಳ್ ಎನಿತ್ತೋ ಜಂತುಗಳ್ ॥

ಅತ್ತಿ ಹಣ್ಣು ನೋಡಲಿಕ್ಕೆ ಕೆಂಪಗೆ ಮಾಗಿ ಆಕರ್ಷಣೀಯವಾಗಿದೆ ಎಂದು ಆಸೆಯಿಂದೆತ್ತಿ ಮುರಿದು ಒಳಗಡೆ, ಮಿಲಿಮಿಲಿಯೆಂದು ಪೊದ್ದಾಡುತ್ತಿರುವ "ಕ್ರಿಮಿಜಾಲ ಸಂಕುಲಂ" ಹುಳುಗಳ ಸರಣಿಯನ್ನು ಕಂಡು ಚಕಿತನಾಗಿ

ಅಸಹ್ಯಭಾವದಿಂದ ಕೆಳಗೆ ವೊದರುವಂತೆ, ಮಾನವನು ಹುಟ್ಟಿ ಕನಿಷ್ಟ ಕ್ರಿಮಿಯಂತೆ ಜೀವಿಸಿ, ದಾನ-ಧರ್ಮ-ಪರೋಪಕಾರಗಳನ್ನು ಎಳ್ಳಷ್ಟೂ ಮಾಡುವ ಮನೋಭಾವವೂ ಇಲ್ಲದೆ, ಹರಗುರುದೈವ ಹಿರಿಯರ ಸೇವೆಯನ್ನು ತಿರಸ್ಕರಿಸುತ್ತ ಅಲೆದು ಹಂಬಲಿಸಿ ಸತ್ತವನು ಪುನಃ ಮನುಷ್ಯನಾಗಿ ಹುಟ್ಟಿದರೇನು ಪ್ರಯೋಜನ.

॥ ಪುಟ್ಟಿದರೇಂ ಪರೋಪ ಕೃತಿಗೈಯ್ಯದೆ ಸತ್ತವರ್। ಪುಟ್ಟವೇ ಸಾಯವೇ
ಜಗದೊಳತ್ತಿಯ ಪಣ್ಣೊಳ್ ಎನಿತ್ತೋ ಜಂತುಗಳ್ ॥

ಜಗತ್ತಿನಲ್ಲಿ ಅತ್ತಿಯ ಹಣ್ಣಿನಂಥ ಜೀವಕೋಟಿಗಳು ಹುಟ್ಟುತ್ತಲೂ ಸಾಯುತ್ತಲೂ ಇರುವುವು. ಅವುಗಳಿಂದ ಹೇಗೆ ಯಾವ ಪ್ರಯೋಜನವೂ ಇಲ್ಲವೋ ಅದರಂತೆ, ಮನುಷ್ಯನು ರೂಪವಂತನೂ ವಿದ್ಯಾವಂತನೂ ಹಣವಂತನೂ ಆಗಿದ್ದು, ಅವನು ॥ ಶ್ರೇಷ್ಠತ್ವಂ ಗುಣಮುಚ್ಯತೆ ॥ ಎಂಬಂತೆ ಸನ್ಮಾನ್ಯವಾದ ಶೀಲ, ಶ್ರದ್ಧೆ, ನಮ್ರತೆ, ದಯೆ, ದಾನ, ಭಕ್ತಿ, ಜ್ಞಾನ, ವೈರಾಗ್ಯಾದಿ ದೈವೀ ಸಂಪದ್ಗುಣವಿಶಿಷ್ಟನಾಗಿರದಿದ್ದಲ್ಲಿ, ಅವನ ಜನ್ಮ ಅತ್ತಿಹಣ್ಣಿನಂತೆ ತಿರಸ್ಕೃತವೂ, ಹೇಯವೂ, ವರ್ಜಿತವೂ ಆಗುವುದೆಂಬುದು ಸ್ಪಷ್ಟವೇ ಇರುತ್ತೆ.

ಅಮೃತವನ್ನು ಪಡೆಯುವ ಆಸೆಯಿಂದ ದೇವಾಸುರರು ಮೇರು ಪರ್ವತವನ್ನೇ ಮಂತಾಗಿಸಿ ಕ್ಷೀರಸಾಗರದಲ್ಲಿ ಹಾಕಿ, ಆದಿಶೇಷನನ್ನೇ ಹಗ್ಗವಾಗಿಮಾಡಿಕೊಂಡು ಕಡೆಯಲುಪ್ರಾರಂಭಿಸಲು, ಮೇರುವು ಸಮುದ್ರದ ತಳವನ್ನು ಸೇರಿ ಮೇಲೆ ತೇಲದೆ ಮುಳಿಗಿತು. ಆಗ ದೇವಾಸುರರು ಲೋಕ ಸಂರಕ್ಷಣ ಮೂರ್ತಿಯಾದ ಮಹಾವಿಷ್ಣುವನ್ನು ಸಹಾಯಾರ್ಥ ಪ್ರಾರ್ಥಿಸಲು, ಶ್ರೀಮನ್ನಾರಾಯಣನು, ಕಮಠ ಅಂದರೆ ಕೂರ್ಮ ಅರ್ಥಾತ್ ಆಮೆ ರೂಪವನ್ನುತಾಳಿ ಸಮುದ್ರದ ಅಡೆಯಲ್ಲಿ ಸೇರಿ, ಭದ್ರವಾದ ತನ್ನ ಬೆನ್ನಿನಿಂದ ಮೇರುಪರ್ವತವನ್ನೆತ್ತಲು, ಆಗ ಕ್ಷೀರಸಾಗರದಲ್ಲಿ ತೇಲುವ ಆ ಪರ್ವತವನ್ನು ಆದಿಶೇಷನೆಂಬ ಹಗ್ಗದಿಂದ ಮೂರು ಸುತ್ತು ಸುತ್ತಿ ಕಡೆಯಲುದ್ಯುಕ್ತರಾದರು. ಆಮೆಯ ಜನ್ಮವನ್ನು ಪರೋಪಕಾರಾರ್ಥ ಶ್ರೀ ಹರಿತಾಳಿದ್ದಕ್ಕೆ ಸಾರ್ಥಕವಾಯಿತು. ಇದರಂತೆಯೇ

‖ ಪುಟ್ಟದ ನೋರ್ವನೇ ಧೃವಂ । ಉಡುವ್ರಜವ ನಡೆಯಿಪ್ಪಕಾರಣಂ ‖ ಉತ್ತಾನಪಾದ ಮಹಾರಾಜನ ಮಗ ಧೃವನು ಸುನಿತಿ ಗರ್ಭದಲ್ಲಿ ಹುಟ್ಟಿ ಜನತೆಯ ಹಾಗೂ ಜನಾರ್ಧನನ ಸೇವೆಗೈದು ತತ್ಫಲವಾಗಿ ನಕ್ಷತ್ರ ಮಂಡಲಕ್ಕೆ ಉಡುರಾಜ (ನಕ್ಷತ್ರ ರಾಶಿಗಳಿಗೆಲ್ಲಾ ಪ್ರಭು) ನಾಗಿ ಬೆಳಗುತ್ತಾ ಇಂದಿಗೂ ಲೋಕೋಪಕಾರಿಯಾಗಿಯೇ ಪ್ರಕಾಶಿತನಾಗಿರುವನು. ಧರಣೀಪತಿಯಾಗಿ ಬಾಳಿ ಪರೋಪಕಾರವೆಸಗಿ ಧರ್ಮದಿಂದ ರಾಜ್ಯ ಪರಿಪಾಲನೆಮಾಡಿ ಜನಪ್ರಿಯನೂ ಆದರ್ಶ ಮಹಾ ವ್ಯಕ್ತಿಯೂ ಆಗಿ ಸತತ ಪುಣ್ಯ ಶ್ಲೋಕನಾದ ಧ್ರುವನಂತೆ ಶ್ರಮಿಸಿದರೆ ಆಗ ಮನುಷ್ಯ ಜನ್ಮದಸಾರ್ಥಕತೆ ಆನಂದದಾಯಕವಾಗಿದ್ದು ಸಮಸ್ತರಿಗೂ ಸಂತೋಷಕರವಾಗಿರಬಲ್ಲುದು.

ಶ್ರೀಮತ್ಪರಮೇಶ್ವರನ ನಿತ್ಯಮಂಗಳ ವಾಹನವಾಗಿ ವಿರಾಜಿತನಾದ ವೃಷಭೇಶ್ವರನಂಶದಿಂದ ಅವತರಿಸಿದ ಶ್ರೀ ನಂದಿಕೇಶ್ವರನು, ಹೆಸರಿಗೆ ತಕ್ಕಂತೆ ಹೆತ್ತ ತಾಯ್ತಂದೆಗಳಿಗೂ, ಬಂಧು ಬಳಗದವರಿಗೂ, ಗುರುಹಿರಿಯರಿಗೂ, ಅತಿಥಿ ಅಭ್ಯಾಗತರಿಗೂ, ಕುಲವಂಶೀಕರಿಗೂ, ದೇಶಕ್ಕೂ ಪ್ರಜೆಗಳಿಗೂ ಅಖಿಲರಿಗೂ ಮೋಹದ ಮುತ್ತಿನಂತಿದ್ದು ಆನಂದವನ್ನುಂಟುಮಾಡುತ್ತಿದ್ದನು. ‖ ಲೋಕಾನ್ ನಂದಯ ತೀತಿ ನಂದಿಃ ‖ ಲೋಕದವರನ್ನು ತನ್ನ ಹಾವ ಭಾವ ವಿಲಾಸಾದಿಗಳಿಂದ ಹಾಗೂ ಸಚ್ಛೀಲ ಸನ್ಮಾರ್ಗ ಸದ್ಭಕ್ತಿ ಗರ್ಭಿತ ಆಚಾರ ವಿಚಾರಗಳಿಂದ ಮುದಗೊಳಿಸಿ ಸುಖಿಗಳನ್ನಾಗಿ ಮಾಡುವುದರಲ್ಲಿ ಯಶಸ್ವಿಯಾದುದರೀಂದ "ನಂದಿ" ಎಂಬ ಹೆಸರು ಸಮಸ್ತರಿಗೂ ಜ್ಞಾನ ಜ್ಯೋತಿಯಂತೆ ಪ್ರೇಮಾದರಣೀಯವಾಗಿತ್ತು. ಶ್ರೀಮತ್ಕೈಲಾಸದಲ್ಲೂ ನಂದಿಕೇಶ್ವರನು, ಪರಶಿವನ ಪಂಚವ್ಯೂಹ ಮೂರ್ತಿಗಳಂತೆಸೆವ ಶ್ರೀ ಮದ್ರೇಣುಕಾದಿ ಪಂಚಾಚಾರ್ಯರ ಸೌಜ್ಞಾನುವರ್ತಿಯಾಗಿ,ಸಕಲ ಪ್ರಮಥಗಣಾಧೀಶ್ವರರ ಸೇವೆಯಲ್ಲಿ ನಿರುತನಾಗಿ, ಕೈಯೋಳ್ ಪಿಡಿದಿರ್ಪ ಬೆಳ್ಳಿಯ ಛಡಿಯನ್ನು ಬೀಸುತ್ತ ಶ್ರೀ ಉಮಾ ಮಹೇಶ್ವರರ ದಿವ್ಯ ದರ್ಶನಕ್ಕಾಗಿ ಮುನ್ನುಗ್ಗುತ್ತಿರುವ ದೇವತಾ ಸಂದಣಿಯನ್ನು ಸಂತೈಸಿಸಿ, ಒಬ್ಬೊಬ್ಬರನ್ನಾಗಿ ಒಳಗೆ ಸ್ವಾಮಿ ದರ್ಶನಕ್ಕೆ ಬಿಡುವ ಉದ್ಯಮದಲ್ಲಿ ಸಂತುಷ್ಟಿಯನ್ನು ಪಡೆಯುತ್ತಲಿದ್ದನು. ಅದರಂತೆಯೇ ಭೂಲೋಕದಲ್ಲೂ

ಮಾನವಕೋಟಿಗಳ ಮಧ್ಯೆ ಶಿವಭಕ್ತಿ ಶಿವವ್ರತ ಶಿವಧ್ಯಾನ, ಶಿವಜ್ಞಾನ, ಶಿವ ಮಂತ್ರ, ಶಿವಪೂಜಾ ಪರಾಯಣನಾಗಿ ಸರ್ವರನ್ನೂ ಶಿವಯೋಗದಲ್ಲಿ ರಮಿಸು ವಂಥಾ ಶಿವಾದ್ವೈತ ತತ್ವಬೋಧೆಯಿಂದ ದೇಶವ ಸಂಚರಿಸಿ ಮಹಾ ಮಹಿಮ ನಾಗಿ ಶಿವಕಾಯಕದಿಂದ ದಿಗಂತ ವಿಶ್ರಾಂತವಾದ ಕೀರ್ತಿಯೊಂದಿಗೆ ಇಂದಿಗೂ ನಂದಿನಾಮ, ಭಗವದ್ಭಕ್ತ ವೃಂದಕ್ಕೆ ನಂದಾದೀಪದಂತೆ ಪ್ರಜ್ವಲಿಸಿ ಆನಂದ ವನ್ನು ನೀಡುತ್ತಲಿರುವುದು. ನನ್ನ ಇಷ್ಟದೇವತಾ ಸಾರ್ವಭೌಮರಾದ ಶ್ರೀ ಉಮಾ ಮಹೇಶ್ವರರಿಗೆ ವಾಹನವಾಗಿ ವಿರಾಜಿಸುವ "ವೃಷಭ" ಎಂಬಕ್ಷರತ್ರ ಯವು, ಶೌಚ, ಸತ್ಯ, ಧರ್ಮಗಳ ನೆಲವೀಡಾಗಿ ಶಿವಶಕ್ತಿಯರು ವೃಷಭಾರೂಢರಾ ಗಿದ್ದು ಅವರ ದಿವ್ಯ ಪಾದ ಸ್ಪರ್ಶದಿಂದ ಪುನೀತನಾಗಿ ಪ್ರಕಾಶಿಸುವ ವೃಷಭನು, ಶಿವಶಕ್ತಿಯರ ಘನಸೇವೆಯಿಂದ ಚಿದ್ಘನಾನಂದ ಸ್ವರೂಪಿಯಾಗಿ, ಶರಣಾಗತಿ ಭಾವದಿಂದಲೂ ನಿರಂತರ ಸೇವೆಯಿಂದ, ॥ ಅಭಯದಂ ಕರುಣಾ ಭರಣಂ ಶಿವಂ। ಭಜತರೇ ಮನುಜಾ ಗಿರಿಜಾಪತಿಂ ॥ ಅಭಯವನ್ನು ಪಡೆದು ದ್ವಿಶಂಭುವೆನಿಸಿ ರುವನು. ಶರಣಾಗತ ವತ್ಸಲನಾದ ಭಗವಂತನು ತನ್ನಲ್ಲಿ ಅನನ್ಯ ಭಕ್ತಿಭಾವ ದಿಂದ ಶರಣಾಗತರಾದವರ ಪಾಲಿಗೆ ॥ ಚಿಂತಾಮಣಿಃ ಪ್ರಪನ್ನಾನಾಂ। ಶ್ರೀಕಂಠಃ ಪರಮೇಶ್ವರಃ ॥ ದೇವಲೋಕದ ಕಾಮಧೇನು, ಕಲ್ಪವೃಕ್ಷ ಚಿಂತಾ ಮಣಿಗಳಂತೆ ಕೋರಿದ ಅಭೀಷ್ಟಗಳನ್ನೀಯುವುದರಲ್ಲಿ, ಸರ್ವ ಸಮರ್ಥನಿರುವನು. ॥ ಯಸ್ಯ ಜ್ಞಾನ ದಯಾ ಸಿಂಧೋ। ರಗಾಧಸ್ಯಾನಘಾಗುಣಾಃ। ಸೇವ್ಯತಾ ಮಕ್ಷಯೋಧಿರಾಃ ಸಶ್ರಿಯೈಚಾಮೃತಾಯಚ ॥ ಎಂಬಂತೆ ಯಾವನು ರಾಗಾದಿಗಳಿಂದ ದೂರನೂ ಪುಣ್ಯ ಶ್ಲೋಕನೂ ಆಗಿ, ಜ್ಞಾನ ದಯೆ ಕರುಣೆಗೆ ಆಗರದಂತೆ (ದೇವಾಮೃತ ಸಾಗರನಾಗಿ) ವಿರಾಜಿತನಾಗಿರುವನೋ, ಅಂಥಹ ಪ್ರಣವ ಸ್ವರೂಪಿಯಾದ ಸಚ್ಚಿದಾನಂದ ಪರಶಿವನಲ್ಲಿ ಚಿತ್ತೈಕ್ಯತೆ ಯಿಂದ ಸಮಾಧಿಸ್ತರಾಗಿ (ಬುದ್ಧಿಯೋಗಕ್ಕೆ ಶರಣಾಗತರಾಗಿ— ॥ ಬುದ್ಧೌ ಶರಣ ಮನ್ವಿಚ್ಛ ॥) ಅದರಿಂದ ಪ್ರಾಪ್ತವಾಗುವ ಶಾಶ್ವತ ಸಂಪತ್ತನ್ನೂ ಶ್ರೇಯಿಸ್ಸನ್ನೂ, ಅಖಿಲೈಶ್ವರ್ಯವನ್ನೂ, ಅಕ್ಷಯವಾದ, ಎಂದೆಂದಿಗೂ ನಾಶವೆಂಬುದಿಲ್ಲದ "ಧೃವ" ಪದವನ್ನು ॥ ಧೀರಾಃ ॥ ಧೀರರು, "ನಾಯ

ಮಾತ್ಮಾ ಬಲಹೀನೇನ ಲಭ್ಯಃ" ಎಂದಿರುವುದರಿಂದ ಅಂತರ್ ಬಾಹ್ಯೇಂದ್ರಿಯ ಗಳನ್ನು ಜಯಿಸಿದಂತ ವಿರಕ್ತ, ವೈರಾಗ್ಯ ಶಿಖಾಮಣಿಗಳು, ಸಿದ್ಧ ಮಹಾ ಪುರು ಷರು ಶ್ರೀಕಂಠನಾದ ॥ ಉಮಾ ಸಹಾಯಂ ಪರಮೇಶ್ವರಂ ಪ್ರಭುಂ । ನೀಲ ಕಂಠಂ ಪ್ರಶಾಂತಂ ತಮಸಃ ಪರಸ್ತಾತ್ ॥ ಎಂದರೆ ಶ್ರೀ ಉಮಾ ಕಾಂತನೂ, ಪ್ರಭುವೂ, ನೀಲಕಂಠನೂ, ಪ್ರಶಾಂತನೂ ಅಜ್ಞಾನ ಧ್ವಂಸಕನೂ "ತಮಸ್" ಎಂಬ ಅಂಧಕಾರಕ್ಕತೀತನಾಗಿ, ಸ್ವಯಂ ಜ್ಯೋತಿಯಿಂದ ವಿರಾಜಿಸುವ ಜ್ಯೋತಿರ್ಲಿಂಗ ಸ್ವರೂಪವನ್ನೇ ॥ ಸಬ್ರಹ್ಮಾ ಸಶಿವಃ ಸಹರಿಃ ಸ್ಸೇಂದ್ರಃ । ಸೋಕ್ಷರಃ ಪರಮ ಸ್ವರಾಟ್ ॥ ಬ್ರಹ್ಮನೆಂದೂ, ಶಿವನೆಂದೂ, ಹರಿಯೆಂದೂ, ಇಂದ್ರನೆಂದೂ, ಅಕ್ಷರ ಸ್ವರೂಪಿ ಎಂದೂ ಮತ್ತು ಪರಾತ್ಪರ ವಿರಾಟ್ ಸ್ವರೂಪಿ ಯಾದ ಹಿರಣ್ಯ ಗರ್ಭನೆಂದೂ, ವಿಶ್ವೇಶ್ವರನೆಂದೂ, ಮನಗಂಡು,

॥ ಪರಂಬ್ರಹ್ಮ ಪರಂಧಾಮ ಪವಿತ್ರಂ ಪರಮಂ ಭವಾನ್ ।

ಪುರುಷಂ ಶಾಶ್ವತಂ ದಿವ್ಯಂ ಆದಿ ದೇವ ಮಜಂ ವಿಭುಂ ॥ ಎಂಬುದಾಗಿ

ಸ್ತುತಿಗೈದು, ವೈರಾಗ್ಯಮೂರ್ತಿಗಳಾದ "ಧೀರಾಃ" ಧೀರರು, "ಅಮೃ ತಾಯಚ" ಅಮೃತತ್ವವನ್ನು (ಲಿಂಗಾಂಗ ಸಾಮರಸ್ಯ) ಮೋಕ್ಷ ಸುಖವನ್ನು ಹೊಂದುವರು. ಜಗತ್ತಿನ ತಾಯಿ ತಂದೆಗಳಾದ ಪಾರ್ವತೀ ಪರಮೇಶ್ವರರನ್ನು ತನ್ನ ಬೆನ್ನ ಮೇಲೆ ಹೊತ್ತಿರುವ "ವೃಷಭ" ಎಂಬ ಅಕ್ಷರತ್ರಯಂಗಳ ಲಕ್ಷ್ಯಾ ರ್ಥದ ಕಡೆ ನಮ್ಮ ವಿಚಾರ ಧಾರೆಯನ್ನು ಹರಿಸಿದಲ್ಲಿ; ಆ ಅಕ್ಷರತ್ರಯಂಗಳಿಗೆ ಕ್ರಮವಾಗಿ "ಸತ್ಯ ಶೌಚ ಶೀಲ" ಎಂಬ ಅರ್ಥಗಳು ಪ್ರಕಾಶಿತವಾಗಿರುವುವೆಂ ಬುದು ಗಮನಾರ್ಹ. ಪ್ರಭುವಾದ ಪರಂಜ್ಯೋತಿಯನ್ನು (ಪರಶಿವನನ್ನು) ನಮ್ಮ ಅಂತಃಕರಣದಲ್ಲಿ ನಾವು ಕಾಣಬೇಕಾದರೆ ಸತ್ ಸಂಸ್ಕೃತಿ ನಮ್ಮಲ್ಲಿ ಮೂಡಬೇಕು.

॥ ಸತ್ಯ ಮೇಕ ಪದಂ ಬ್ರಹ್ಮ । ಸತ್ಯೇ ಧರ್ಮ ಪ್ರತಿಷ್ಠಿತಃ ।

ಸತ್ಯ ಮೂಲಾನಿ ಸರ್ವಾಣಿ । ಸತ್ಯಾನ್ನಾಸ್ತಿ ಪರಂಪದಂ ॥

ಎಂಬಂತೆ ॥ ಸತ್ಯಮೇ ವೋದ್ಧರಾಮ್ಯಹಂ ॥ ಎಂಬ ಭೀಷ್ಮ ಪ್ರತಿಜ್ಞೆಯಿಂದ ವೊಳಗೂ ಹೊರಗೂ ಏಕಪ್ರಕಾರವಾದ ಸತ್ಯಸಂಧತೆ ನಮ್ಮಲ್ಲಿ ಅಚಲವಾಗಿರ ಬೇಕು. ಇದು ಪ್ರಥಮ ಸಂಸ್ಕಾರ.

ಭಗವಂತನು "ಸತ್" ಸ್ವರೂಪದಿಂದ ವಿರಾಜಿತನಾಗಿರುವನು. "ಚಿತ್" ಮತ್ತೂ "ಆನಂದಗಳು" ಅವನ ವಿಲಾಸದ ಲಹರಿಯಾಗಿ ಅವನಲ್ಲಿ ಅದ್ವಿತೀಯ ಅಂಶಗಳಿಂದ ರಂಜಿತಗಳಾಗಿರುವುವು. ಇಂತಪ್ಪ ಪರಮಾತ್ಮನು ನಮ್ಮ ಹೃದಯ ವೇದಿಕೆಯಲ್ಲಿ ಸಾಕ್ಷಾತ್ಕರಿಸಿ ಮಂಡಿಸಿ, ವಿರಾಜಿತನಾಗಬೇಕಾದರೆ, ನಮ್ಮಲ್ಲಿ ಶೌಚ ಮತ್ತು ಶೀಲಗಳು ಸಲ್ಲಕ್ಷಣದಿಂದ ಮನೆಮಾಡಿಕೊಂಡಿರಬೇಕು. ಇದ ರಿಂದ ಕಂಡುಬರುವುದೇನೆಂದರೆ ಯಾರು ಶೀಲವಂತರೋ, ಯಾರು ಶೌಚಾದಿಗ ಳಿಂದ ಅಂತರಂಗ ಶುದ್ಧಿ ಬಹಿರಂಗ ಶುದ್ಧಿಯುಳ್ಳವರೋ ಮತ್ತೂ ಸತ್ಯವಂತರೋ ಅಂಥವರ ಹೃನ್ಮನಂಗಳಲ್ಲಿ ಲಿಂಗರೂಪಿ ಪರಶಿವನು ತಾನೇತಾನಾಗಿ ವಿರಾಜಿಸುವ ನೆಂಬ ತತ್ವಾರ್ಥ ಪ್ರತಿಪಾದನೆಗೆ ಪ್ರತೀಕದಂತೆ "ವೃಷಭ" ಶಬ್ದಾರ್ಥ ಗರ್ಭಿತ ವಾಗಿರುವುದು.

ಕೈಲಾಸದಲ್ಲೂ ಹಾಗೂ ಎಲ್ಲೆಲ್ಲೂ ಶಿವನ ಸಮ್ಮುಖದಲ್ಲಿ ಬಸವನೆಂಬ ನಂದಿ ಅರ್ಥಾತ್ ವೃಷಭನು, ಶ್ರೀ ಉಮೇಶ್ವರರ ಸೇವೆ ಸಲ್ಲಿಸುತ್ತಿರುವುದನ್ನು ನಾವು ಕಾಣುತ್ತಿರುವೆವು. ಕೈಲಾಸದಲ್ಲಿ ಶ್ರೀ ಉಮಾ ಮಹೇಶ್ವರರು ಸಂಪ್ರೀತ ರಾಗಿ ಮಂಡಿಸಿರುವ ಉಯ್ಯಾಲೆ ಪೀಠವು (ತೂಗುಮಣೆಯು) ಅಚ್ಚ ಅಪರಂಜಿ ಯಿಂದ ವಿರಾಜಿಸಿ ವಜ್ರ, ವೈಢೂರ್ಯ, ಮಾಣಿಕ್ಯ, ಮರಕದ, ಪುಷ್ಯರಾಗ, ಗೋಮೇದಕ, ನೀಲಾಖಚಿತ, ಮೌಕ್ತಿಕ, ಪ್ರವಾಳಗಳೆಂಬ ನವರತ್ನಗಳಿಂದ ಖಚಿತವಾಗಿ, ಬಂಗಾರದ ಸರಪಣಿಗಳಲ್ಲಿ ಅಲ್ಲಲ್ಲಿ ಮುತ್ತು ಹವಳ ಕೆಂಪುಗಳಿಂದ ಶೋಭಿತವಾದ ಸರಗಳು ಮಿಣುಗುತ್ತಿರಲು, ಶ್ರೀ ಉಮೇಶ್ವರರು ಅಲಂಕೃತವಾ ವಾಗಿರುವ ರನ್ನದ ತೂಗುಮಣೆ ಸುತ್ತಲೂ, ಸುರಗಿ, ಸಂಪಿಗೆ, ಬಕುಳ, ಪುನ್ನಾಗ, ಸೇವಂತಿ, ಮರುಗ, ಮಲ್ಲಿಗೆ, ಜಾಜಿ, ಪಾರಿಜಾತ, ರೋಜಾ ಕುಸುಮ ಸುಗಂಧ ಪರಿಮಳಯುಕ್ತ ಕೋಮಲ ಪುಷ್ಪ ರಾಜಿಗಳಿಂದ ಅಲಂಕೃತ ಮಾಗಿ ಪರಿಶೋಭಿಸುತ್ತಿರಲು; ಒಂದು ಕಡೆ ಯೋಗಿಗಳು ಒಂದು ಕಡೆ ಭೋಗಿ ಗಳು, ಒಂದು ಕಡೆ ನಾರದ, ತುಂಬುರ, ಭೃಂಗಿ, ಗಣೇಶ, ಸ್ಕಂದಾದಿ ದೇವಗಣ ಗಳು ಮತ್ತೊಂದು ಕಡೆ ಹರಿಬ್ರಹ್ಮೇಂದ್ರಾದಿ ಗಂಧರ್ವ ಗಾಯಕರು, ರಂಭೆ, ತಿಲೋತ್ತಮೆ, ಮೇನಕೆ, ಊರ್ವಶಿ, ಘೃತಾಚೀ, ಸುಕೇಶೀ, ಮಂಜುಘೋಷ

ಇವರೇ ಮೊದಲಾದ ಸಪ್ತ ಅಪ್ಸರ ಸ್ತ್ರೀಯರೂ, ಋಷಿಮಹರ್ಷಿಗಳೂ ಒಕ್ಕೊರಳಿನಿಂದ ಋಕ್, ಯಜುರ್, ಸಾಮವೇದ ಮಂತ್ರಗಳಿಂದಲೂ, ಅಂದ ಚಂದದ ವಾದ್ಯ ವೃಂದಗಳಿಂದ ಸ್ತುತಿಸಿ ಬದ್ಧಾಂಜಲಿ ಪುಟರಾಗಿ ಆನಂದ ತುಂದಿಲ ಹೃದಯ ಸ್ವಾಂತ ಭರಿತರಾಗಿ "ಜಯೀಭವ ದಿಗ್ವಿಜಯೀಭವ" ಎಂದು ಘೋಷಿಸುತ್ತಿರಲು, ಶ್ರೀಮಜ್ಜಗದ್ಗುರು ರೇಣುಕಾದಿ ಪಂಚಾಚಾರ್ಯರು ಪರಶಿವನ ಸುತ್ತಲೂ ಪ್ರಣವಾಕಾರದ ಚಿದ್ಘನ ತೇಜಸ್ಸೋಜಸ್ಸುಗಳತೆರದಲ್ಲಿ ವ್ಯೂಹ ರಚನೆಯಿಂದ ಬೆಳಗಿ, ಶಿವಾಗಮಾಮ್ನಾಯಾದಿಗಳ ತಿರುಳನ್ನು ಪಠಿಸುತ್ತ, ಭೋ! ಭೋ! ಪಾರ್ವತಿರಮಣ ಗಂಗಾಧರ, ಅರ್ಧೇಂದು ಶೇಖರ ! ॥ ನೀ ಶಿವನು, ನೀನಾದ್ಯ, ನೀನೇಕನಕ್ಷರನು। ನೀ ಶಕ್ತಿಯುತನು, ಭಯರೂಪನೆನಿಸುತ॥ ಈಶ! ನಿನ್ನನು ಪೊಗಳುತಿರುವುವೀ ವೇದಗಳು। ಆಶುತೋಷನೆ, ಕೃಪೆನೀಡು ದಯದಿಂ॥ ಎಂದೂ, ಮತ್ತೂ ॥ ವೇದಾಃಸ್ತುವಂತಿ ಸ್ಮೃತಿಯಃ ಪ್ರತಿಪಾದಯಂತಿ। ತ್ವಾಮಕ್ಷರಂ ಶಿವಮನಂತ ಮನೇಕರೂಪಂ ॥ ಶಕ್ತ್ಯಾ ವಿಶಿಷ್ಟ ಮುಭಯಾತ್ಮಕ ಮೇಕಮಾದ್ಯಂ। ಶ್ರೀ ಮಲ್ಲಿಕಾರ್ಜುನವಿಭೋ! ತವ ಸುಪ್ರಭಾತಂ ॥ ಎಂದು ಸ್ತುತಿಸುತ್ತಿರಲು, ಮಹಾದೇವನ ಎದುರಿನಲ್ಲಿ ಶಿವನ ವಾಹನಮೂರ್ತಿ ವೃಷಭೇಶ್ವರನು ತನ್ನ ಸ್ವಶಕ್ತಿರೂಪ ಉಶ್ವಾಸ ನಿಶ್ವಾಸಗಳೆಂಬ ಕರದ್ವಯುಗಳಿಂದ, ದೇವತಾ ಸಾರ್ವಭೌಮರು ಮಂಡಿಸಿರುವ ಉಯ್ಯಾಲೆಯನ್ನು ಮಂದಸ್ಮಿತನಾಗಿ ಮೆಲ್ಲಗೆ ತೂಗುತ್ತ, ಮಂಜುಳ ಘೋಷದಿಂದ ಸೇವೆಗೈಯ್ಯುತ್ತಿರಲು, ಗಿರಿಜಾ ರಮಣನು ಸಂಪ್ರೀತನಾಗಿ, ಸುಮುಖದಿಂ ಸಮಸ್ತರಿಗೂ ಮಂಗಳವನ್ನು ಕೋರುತ್ತ; ಎಲೈ ಭಕ್ತ ವರ್ಯರೇ—

॥ ಮಾಡುವುದು ಶಿವಪೂಜೆಯನು ಸಲೆ।
ಪಾಡುವುದು ಶಿವನಾಮವನು ಕೊಂಡಾಡು
ವುದು ಶಿವಭಕ್ತಿ ಭರಿತ ಸ್ವಾಂತ ಸಂತತಿಯಂ ॥
ಸೂಡುವುದು ಶಿವ ಮಾಲ್ಯವನು ಮಾತಾಡು।
ವುದು ಶಿವತತ್ವ ವಿದರಲಿ ನೀಡುವುದು।
ಶಿವಯೋಗಿ ಗಳ್ಗಿದೆ ಧರ್ಮತಾನೆಂದಂ ॥ ೧ ॥

॥ ಉತ್ತಮಾಂಗದೆ ಲಿಂಗವನು ತಳೆ ।
ಯುತ್ತೆ ಮಂತ್ರ ಪವಿತ್ರ ಭಸ್ಮವ ।
ಮೆತ್ತೆ ಮೆಯ್ಯೊಳು ವಿಮಲ ಪಂಚಾಕ್ಷರಿಯ ಜಪಿಸುತಲಿ ॥
ಮತ್ತೆ ಮೆರೆವ ಶಿವಾಗಮೋಪನಿ
ಷತ್ತುಗಳ ಪುರುಳರಿದು ಭಕ್ತಿಯ
ಬಿತ್ತರಿಪುದೆಲೆ ಧರ್ಮ ಕರ್ಮವು ಮರ್ಮವಿದೆಯೆಂದಂ ॥ ೨ ॥

ಎಂಬ ದಿವ್ಯ ಸಂದೇಶದಿಂದ ಶಿವನು ಆಶೀರ್ವದಿಸಲು, ಸರ್ವರೂ ಶುದ್ಧಾಂತಃಕರಣಗಳಿಂದ ಈಶನನ್ನು ಸ್ತುತಿಸುತ್ತಾ --

॥ ನಮೋ ನಮಸ್ತೇಖಿಲ ಕಾರಣಾಯ ।
ನಿಷ್ಕಾರಣಾಯಾದ್ಭುತ ಕಾರಣಾಯ ॥
ಸರ್ವಾಗಮಾಮ್ನಾಯ ಮಹಾರ್ಣವಾಯ ।
ನಮೋಪವರ್ಗಾಯ ಪರಾಯಣಾಯ ॥ ೧ ॥

॥ ನಮಸ್ತೇ ಭಕ್ತ ಸಂರಕ್ಷಾ ।
ನಮಸ್ತೇ ಪುರುಷೋತ್ತಮಾ ॥
ನಮಸ್ತೇ ಸರ್ವಲೋಕಾತ್ಮಾ ।
ನಮಸ್ತೇ ಪರಮೇಶ್ವರ ॥ ೨ ॥

ಎಂಬುದಾಗಿ ಕೊಂಡಾಡುತ್ತ ಅವರವರ ಸ್ವಸ್ಥಾನಂಗಳಿಗೆ ತೆರಳಲು, ವೃಷಭೇಶ್ವರನ ಅವಿಚ್ಛಿನ್ನವಾದ ಘನಸೇವೆಯನ್ನು ಮೆಚ್ಚಿದ ಶ್ರೀ ಉಮಾಮಹೇಶ್ವರರು ಅವನನ್ನು ಆಶೀರ್ವದಿಸಿ ಹರಸಿದರು.

ಧರ್ಮವೇ ಚತುಷ್ಪಾದಗಳಿಂದ ರೂಪಗೊಂಡು ವೃಷಭಾಕಾರವಾಗಿ ಅವತರಿಸಿ, ಸರ್ವಧರ್ಮ ಸ್ವರೂಪಿಯಾದ ಪರಶಿವನ ವಾಹನವಾಗಿರುವುದು. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಫಲಪುರುಷಾರ್ಥಗಳೇ ವೃಷಭನ ಚತುಷ್ಪಾದಗಳು. ಮತ್ತೀಪಾದಗಳನ್ನೇ ಸತ್ಯ, ಶೌಚ, ದಯೆ, ದಾನ ಎಂಬ ಹೆಸರುಗಳಿಂದಲೂ ಕರೆಯುವುದುಂಟು. ಕೃತಯುಗದಲ್ಲಿ ಧರ್ಮ ನಾಲ್ಕು ಪಾದಗಳಿಂದಲೂ, ತ್ರೇತಾಯುಗದಲ್ಲಿ ಮೂರು ಪಾದಗಳಿಂದಲೂ, ದ್ವಾಪರದಲ್ಲಿ

ಎರಡು ಪಾದಗಳಿಂದ ವಿರಾಜಿಸಿ, ಈ ಕಲಿಕಾಲದಲ್ಲಿ ಧರ್ಮದೇವತೆಯು ಕೇವಲ ಒಂಟು ಕಾಲಿನಲ್ಲಿದ್ದು, ಅದಕ್ಕೂ ಧಕ್ಕೆ ಏರ್ಪಟ್ಟಿರುವಾಗ, ಜನ ಮನದಲ್ಲಿ ಧರ್ಮದ ನೆರಳು ಮಾತ್ರ ಇರಬಹುದೆಂದು ಊಹಿಸಲು ಅವಕಾಶವಿರುತ್ತೆ.

ಈ ಮೇಲಿನ ಸದ್ವೃತ್ತಾಂತದಿಂದ ವೃಷಭ, ನಂದಿ, ಬಸವ ನಾಮಗಳಿಂದ ವಿರಾಜಿತನಾದ ಕಲ್ಯಾಣದ ಶ್ರೀ ಬಸವಣ್ಣ, ಇಹಪರಗಳೆರಡರಲ್ಲೂ—ಹರಗುರುಗಳ ಹಾಗೂ ಶಿವಶರಣರ ಮತ್ತೂ ಪ್ರಮಥಾದಿ ಶಿವಗಣಾಧೀಶ್ವರರ ಸೇವೆಗಾಗಿಯೇ ಕಿಂಕರಭಾವದಿಂದ ಜಗಜ್ಯೋತಿಯಾದುದು ಸ್ಪಷ್ಟವೇ ಇರುತ್ತೆ. (*It is by dint of selfless, continued and staunch service that a man becomes really a great person*) ಎಂಬುದು ಶ್ರೀ ಬಸವಣ್ಣನವರ ಜೀವಿತದಿಂದ ವ್ಯೇದ್ಯವೇ ಆಗಿರುತ್ತೆ.

ಶ್ರೀ ಬಸವಣ್ಣನವರು ಹಿರಿಯ ವ್ಯಕ್ತಿಗಳಾಗಿ ಮಹಾ ಪ್ರಕಾಶಿತರಾಗಲು ಅವರಲ್ಲಿದ್ದ ಅಚಲ ಹಾಗೂ ಅಪಾರವಾದ ಗುರುಭಕ್ತಿಯೇ ಕಾರಣವೆಂಬ ಅಂಶ ಸ್ಮರಣೀಯವಾದುದು.

॥ ಗುರುಭಕ್ತಿ ವಿಹೀನಸ್ಯ । ಶಿವಭಕ್ತಿ ರ್ನಜಾಯತೇ ॥ ಎಂಬ ಶಿವಾಗಮಗಳ ಹೃದಯವನ್ನು ಚೆನ್ನಾಗಿ ಅರಿತಿದ್ದರು. ಅಂದರೆ, ಗುರುಭಕ್ತಿಯಿಲ್ಲದಾತಂಗೆ ಶಿವಭಕ್ತಿ ಅಥವಾ ಶಿವನ ಕೃಪಾ ಅಲಭ್ಯವೆಂದರ್ಥ ॥ ಹರಮುನಿದರೆ ಗುರು ಕಾಯ್ವ । ಗುರು ಮುನಿದರೆ ಹರಕಾಯಲಾರ ॥ ಒಮ್ಮೆ ಮಾನವನು ದೇವರ ಕೋಪಕ್ಕೆ ಪಾತ್ರನಾದರೂ ಗುರುಕರುಣೆ ಎಂಬ ವಜ್ರಕವಚದಿಂದ ರಕ್ಷಿಸಲ್ಪಡುವನು. ಆದರೆ ಅವನೇ ಸದ್ಗುರುವಿನ ಕೋಪಾಗ್ನಿಗೆ ಸಿಕ್ಕರೆ ಹರನು ಇವನನ್ನು ಕೈಬಿಡುವನು. ಆದ್ದರಿಂದ ದಯಾಮಯನಾದ ಪರಶಿವನ ದಿವ್ಯಾನುಗ್ರಹಕ್ಕೆ ಪಾತ್ರನಾಗಲು ಮಾನವನಿಗೆ ಗುರುಸ್ಥಾನ ಗುರುಕರುಣೆ ಮೊಟ್ಟಮೊದಲಿನ ಅವಶ್ಯಕವಾದ ತಾಯಿಯಂಥ ಆಶ್ರಯಸ್ಥಾನವೆಂಬುದನ್ನು ಎತ್ತಿತೋರಿಸುವಂತೆ, ॥ ಶಿವಪಥವ ನರಿಯಲು । ಗುರುಪಥವೇ ಮೊದಲು ॥ ಎಂದು ಸುಸ್ಪಷ್ಟವಾಗಿ ಅರಿತವರಾಗಿ ಆ ಸನ್ಮಾರ್ಗವನ್ನೇ – ಲೋಕದವರಿಗೆ ವಜ್ರಕವಚವೂ, ಕೈದೀವಿಗೆಯಾಗಿರುವಂತೆ ಬಸವಣ್ಣನವರು ಬೋಧಿಸಿರುತ್ತಾರೆ. ಕಾರಣವೇನೆಂದರೆ—॥

॥ ಯಥಾ ಜಾತಾಂಧಸ್ಯ ಸ್ವರೂಪಜ್ಞಾನಂ ನವಿದ್ಯತೇ । ತಥಾ ಗುರೂಪದೇ ಶೇನವಿನಾ । ಕಲ್ಪಕೋಟಿ ಶತೈರಪಿ ತತ್ವಜ್ಞಾನಂ ನಜಾಯತೇ ॥ (ಮಹಾ ನಾರಾಯಣೋಪ ನಿಷತ್) ಅಂದರೆ, ಹೇಗೆ ಹುಟ್ಟುಕುರುಡನಿಗೆ ತನ್ನ ಸ್ವರೂಪಜ್ಞಾನವಾಗಲಿ ಪ್ರಪಂಚದ ಪದಾರ್ಥಗಳ ಸ್ವರೂಪಜ್ಞಾನವಾಗಲಿ ನೇರವಾಗಿ ಕಂಡನುಭವಿಸಲು ಸಾಧ್ಯವಿಲ್ಲವೋ, ಆದರಂತೆ ಶ್ರೀ ಸದ್ಗುರೂಪ ದೇಶವಿಲ್ಲದ ಮಂದ ಭಾಗ್ಯನಿಗೆ ಅರ್ಥಾತ್ ಶ್ರೀ ಗುರುವಿನ ಕರುಣೋಪದೇಶದ ವಿನಃ, "ಕಲ್ಪಕೋಟಿ ಶತೈರಪಿ" ನೂರಾರು ಕೋಟಿ ಕಲ್ಪಗಳು ಉರುಳಿದರೂ ಜೀವಾತ್ಮನಲ್ಲಿ ಅನಾದಿಕಾಲದಿಂದ ಅಂಟಿಕ್ಕೊಂಡಿರುವ ಆಣವಾದಿ ಮುಮ್ಮ ಲಗಳು, ಅವಿಧ್ಯೆ, ಅಜ್ಞಾನಾಂಧಕಾರಾದಿಗಳು ಇವನನ್ನು ಬಿಡಲೊಲ್ಲವು. ತಾಮ್ರಕ್ಕೆ ಕಿಲುಬು ಹೇಗೆ ಸಹಜವೋ ಹಾಗೆ ಜೀವಾತ್ಮನಲ್ಲಿ ಆಸುರೀ ಸಂಪತ್ತು ಅಂದರೆ ಕಾಮಕ್ರೋಧಾದಿ ಅಸೂಯೆ ಅಂಧಕಾರಗಳು ಸಹಜವೇ ಇರುತ್ತೆ. ಇಂತಪ್ಪ ಅಜ್ಞಾನ ತಿಮಿರಾಂಧತೆಯನ್ನು (ಶಿಷ್ಯನ ಚಿತ್ತಾಪಹಾರಕ ನಾದ ಸದ್ಗುರುವು) ಜ್ಞಾನಾಂಜನ ಶಲಾಖೆಯಿಂದ ದೂರೀಕರಿಸಿ ಶಿಷ್ಯನನ್ನು, ಚಿನ್ಮಯಗೊಳಿಸುವನಾದ್ದರಿಂದ, ಈ ತತ್ವನನ್ನರಿತ ಶ್ರೀ ಬಸವಣ್ಣನವರು ಸದ್ಗುರು, ಜಗದ್ಗುರು ಶ್ರೀ ರೇಣುಕಾದಿ ಪಂಚಾಚಾರ್ಯರಲ್ಲಿ ಅಸದೃಶವಾದ ಭಕ್ತಿ ನಮ್ರತೆಯುಳ್ಳವರಾಗಿಯೂ ಇದ್ದರೆಂದರೆ ಅವರ ಕೀರ್ತಿ ಕುಸುಮವು ಕೇವಲ ಮೃಣ್ಮಯ ಪ್ರಪಂಚ ಮಾತ್ರವಲ್ಲದೆ, ದಶದಿಕ್ಕುಗಳ ಮಹಾ ವ್ಯಾಪ್ತಿ ಯನ್ನು ಮೀರುವಷ್ಟು ಪ್ರಭಾವಾನ್ವಿತವಾಗಿ ಪ್ರಕಾಶಿಸುವುದು. ನಿಜಾಂಶಕ್ಕೆ ದೂರರಾಗಿ ಅಂದಾಭಿಮಾನದಿಂದ ಪೀಡಿತರಾಗಿ ತಾವು ಹಿಡಿದ ಮೊಲಕ್ಕೆ ಮೂರೇ ಕಾಲು ಎಂದು ವಿತಂಡವಾದ ಹೂಡುವಂಥವರನ್ನು ಭರ್ತೃಹರಿ ತನ್ನ ನೀತಿಶತಕದಲ್ಲಿ ॥ ಸರ್ವಸ್ಯೌಷಧ ಮಸ್ತಿ ಶಾಸ್ತ್ರವಿಹಿತಂ। ಮೂರ್ಖಸ್ಯನಾಸ್ತ್ಯೌ ಶಧಂ ॥ ಎಂದಿರುವನು. ಶ್ರೀ ಅಗಸ್ತ್ಯ ಮಹರ್ಷಿಗಳಿಂದ ಪ್ರಣೀತವಾಗಿರುವ ವೈದ್ಯ ಶಾಸ್ತ್ರದಲ್ಲಿ, ಮಾನವಕೋಟಿಗೆ 4,44,444 (ನಾಲ್ಕು ಲಕ್ಷದ ನಲವತ್ತು ನಾಲ್ಕು ಸಾವಿರದ ನಾನ್ನೂರ ನಲವತ್ತು ನಾಲ್ಕು) ವ್ಯಾಧಿಗಳಲ್ಲಿ ಒಂದಲ್ಲವಂದು ಸದಾ ಕರ್ಮಾನುಗುಣವಾಗಿ ಪ್ರಾಪ್ತವಾಗುವುವೆಂದೂ, ಅವಷ್ಟಕ್ಕೂ ಯಥೋ

ಚಿತವಾದ ಔಷಧಿಗಳನ್ನು ನಿರೂಪಣಮಾಡಿರುವುದಾಗಿಯೂ ಆದರೆ ಮೂರ್ಖ ತನವೆಂಬ ಮಹಾವ್ಯಾಧಿಗೆ ಔಷಧಿ ಇಲ್ಲವೆಂದು ಬರೆದಿರುವರು.

ಪರಮ ಪವಿತ್ರರೂ ಪರಿಶುದ್ಧರೂ ಆದ ಪುಣ್ಯಶ್ಲೋಕಿ, ಶ್ರೀ ಬಸವಣ್ಣನ ವರ ಹೆಸರಿನಲ್ಲಿ ನೀರಸವಾದ ಪಂಥಗಳ ಕಂತೆಗಳ ಕಟ್ಟಿ, ನೂತನವಾಗಿ ಸೃಷ್ಟಿಸಿ, ರೂಪಗೊಳಿಸಿ, ಅಶಾಸ್ತ್ರೀಯ ಅಸಂಬದ್ಧ ಧಾಳಿಗಳಿಂದ ಭಗವದ್ಭಕ್ತ ಕೋಟಿಗಳ ಮಧ್ಯೆ ವೃಥಾ ಆಂದೋಳನವನ್ನೆಬ್ಬಿಸುವಂಥಾ ಕಾರ್ಯಾಚರಣೆಗಳು ಸಾಧುವಾದವುಗಳಲ್ಲ. "ಎನ್ನಲ್ಲಿ ಭಕ್ತಿ ಸಾಸಿವೆಯ ಷಡ್ಭಾಗದನಿತಿಲ್ಲ ಎನ್ನ ಭಕ್ತನೆಂಬರು, ಎನ್ನ ಸಮಯಾಚಾರಿ ಎಂಬರು ನಾನೇನು ಪಾಪವ ಮಾಡಿದೆನೋ ?" ಎಂದು ಬಸವಣ್ಣನವರು ನುಡಿದಿರುವುದು ಅವರ ತಾಳ್ಮೆಯ ಮಹೋನ್ನತವಾದ ಭಾವವನ್ನು ಎತ್ತಿತೋರಿಸುವುದು. ಮೇಲ್ಕಂಡ ಬಸವಣ್ಣನವರ ಮಣಿವಚನ, ಸಂಯುಕ್ತ ಕರ್ಣಾಟಕ ದಿನಚರಿ ಪತ್ರಿಕ ದಿನಾಂಕ 5–5–65 ರ ಕೋಲ್ಮಿಂಚು ಎಂಬ ಶಿರೋನಾಮೆಯಲ್ಲಿ ಪ್ರಚುರವಾಗಿರುವುದು ಸ್ತುತ್ಯಾರ್ಹವೇ ಸರಿ. ಹಿರಿಯ ಗುರುಭಕ್ತರೂ, ವೀರಮಾಹೇಶ್ವರಾದಿ ಜಂಗಮ ಪ್ರಿಯರೂ, ಪತಿತೋದ್ಧಾರಕರೂ, ಸತ್ಯವಾದಿಗಳೂ ಆದ ಭಕ್ತಿ ಭಂಡಾರಿ ಅಣ್ಣ ಶ್ರೀ ಬಸವಣ್ಣನವರು ಸತ್ಯಕ್ಕೆ ದೂರವಾದ ಹಾಗೂ ತಮಗೆ ಅಪ್ರಿಯವಾದ ವಿಷಯಗಳನ್ನು ಯಾರು ಎಷ್ಟು ದೊಡ್ಡ ಪಂಡಿತರೇ ಹೇಳಲಿ ನಿರ್ದಾಕ್ಷಿಣ್ಯದಿಂದ ನಿರಾಕರಿಸುವರೇ ಹೊರತು ಒಪ್ಪತಕ್ಕವರಲ್ಲ.

॥ ಸತ್ಯಂ ಬ್ರೂಯಾತ್ । ಹಿತಂ ಬ್ರೂಯಾತ್ ।
ನಬ್ರೂಯಾತ್ ಸತ್ಯಮಪ್ರಿಯಂ ॥

ಹಿತವಾದುದನ್ನೇ ತಿಳಿಸು ಸತ್ಯವನ್ನೇ ನುಡಿ, ಅಪ್ರಿಯವಾದ ವಿಷಯವನ್ನು ಎಂಥ ಸಂದರ್ಭದಲ್ಲೂ ನುಡಿಯದಿರು ಎಂಬ ಭಾವ ಬಸವಣ್ಣನವರಲ್ಲಿ ಮನೆಮಾಡಿಕೊಂಡಿತ್ತು.

ಬಸವಣ್ಣ ಹುಟ್ಟಿದೊಡನೆ ಅವನ ತಾಯ್ತಂದೆಗಳು ॥ ಕುವರಂ ವಂಶಕೆ ಭೂಷಣಂ ॥ ಎಂಬಂತೆ ವಂಶೋದ್ಧಾರಕನಾದ ಸುಪುತ್ರನು ಹುಟ್ಟಿದನೆಂದು ಹೆಮ್ಮೆಯಿಂದ ಪುಳುಕಾಂಕಿತರಾಗಿರಲು, ಆದನ್ನು ಕಂಡ ಜಾತವೇದಿ ಗುರುಗಳು

(ಜಾತವೇದಿಯೆಂದರೆ–ವೇದ, ವೇದಾಂಗ, ವೇದಾಂತ, ಶಿವಾಗಮೋಪ ನಿಷದಾ ದಿಗಳ ಹಾಗೂ ಸಕಲ ಶಾಸ್ತ್ರ ಪಾರಂಗತರೂ, ವೇದ್ಯರೂ ಎಂದರ್ಥ. ಅದಕ್ಕನುಗುಣವಾಗಿ ಪ್ರಾಜ್ಞರೂ ದಿವ್ಯ ಜ್ಞಾನಿಗಳೂ, ತಪೋಧನರೂ ಆಗಿ ದ್ದರು.) ಮಂಡಗಿ ಮಾದರಸ ಮಾದಲಾಂಬಿಕೆಯರುಗಳನ್ನುದ್ದೇಶಿಸಿ, "ಅಮ್ಮಾ! ನಿಮ್ಮ ಮಗನೆಂದು ಸದ್ಯಃ ಮುದ್ದಾಡುತ್ತಿರುವ ಈ ಕೋಮಲ ಶಿಶು ಬಸವಣ್ಣ ನಂದೀಶ್ವರನ ಅಂಶ. ನಿಮ್ಮಲ್ಲಿ ಎಂಟು ವರ್ಷಗಳ ತನಕ ಇರುವನು. ಅಲ್ಲಿಯ ವರೆವಿಗೂ ನಿಮ್ಮ ಮಗ. ಅಲ್ಲಿಂದಾಚೆ ಶ್ರೀ ಬಸವಣ್ಣ ಲೋಕ ಕಲ್ಯಾಣಕ್ಕಾಗಿ ಅವತರಿಸಿರುವುದರಿಂದ ಇವನು ಲೋಕದ ಮಹಾ ಪುರುಷನೇ ಆಗಿ ವಿರಾಜಿಸುವ ನೆಂದು" ಇವನ ತತ್ವವನ್ನು ಸಂಗ್ರಹವಾಗಿ ವಿವರಿಸಿರುವರು. ಅದರಂತೆ ನಂತರ ಜರಿಗಿತು. ಇದರಿಂದ ನಾವು ತಿಳಿದು ಕೊಳ್ಳಬೇಕಾದುದೇನೆಂದರೆ, ಅಣ್ಣ ಬಸವಣ್ಣನು ಕೇವಲ ಒಂದು ಪಂಥದ, ಒಂದು ಗುಂಪಿನ, ಅಥವಾ ಒಂದು ಕೋಮಿನ ವಿಧಾಯಕವಾದ ಅಲ್ಪ ಚೌಕಟ್ಟಿನಲ್ಲಿ ಸಿಕ್ಕಿ ಸೆರೆಬಿದ್ದ ವ್ಯಕ್ತಿಯೆಂದು ಭಾವಿಸದೆ, ಲಿಂಗಧಾರಿಗಳಾದ ವಿಶಿಷ್ಟರಿಗೂ ಹಾಗೂ ಜಗತ್ತಿನ ಆಸ್ತಿಕವೃಂದ ಕ್ಕೂ ಪ್ರಿಯತಮನಾದ ಮಹಾಪುರುಷನೆಂಬುದನ್ನು ಸ್ಮರಿಸಿಕೊಂಡರೆ ಸಂಕುಚಿ ತಭಾವಕ್ಕೆ ಸ್ಥಳವಿಲ್ಲವಷ್ಟೆ. ಇಂತಪ್ಪ ವಿಶ್ವಮೂರ್ತಿ ಬಸವಣ್ಣನ ಹೆಸರಿನಲ್ಲಿ ಅಸತ್ಯವೂ ಅಪ್ರಿಯವೂ ಆದ ಆರೋಪಣೆಗಳಿಂದ ಅವನನ್ನು ಪಂಥೀಯ ದೃಷ್ಟಿ ಕೋನದಿಂದ ಸ್ತುತಿಸಿ ಹೊಗಳಿದರೆ ಆಬಂಧನಗಳಿಂದ ಬಸವಣ್ಣನು ಕುಪಿತನಾ ಗುವನೇ ಹೊರತು ಎಂದಿಗೂ ಅಂಥಾ ಪ್ರಲಾಪಗಳನ್ನು ಆಶ್ವಾಸಿಸನು. ಆದುದ ರಿಂದ ಅವನ ಹೆಸರಿನಲ್ಲಿ ಪಂಥಕಟ್ಟಿ ಬಾಳುವಂಥವರು, ಶ್ರೀ ಬಸವಣ್ಣನವರಲ್ಲಿ ಕ್ಷಮಾಪಣೆ ಬೇಡಿಕೊಳ್ಳಬೇಕೆಂದು ತಿಳಿಸಲು ಬಯಸುತ್ತೇನೆ. ॥ ತಪ್ಪೆನ್ನದು ಕ್ಷಮೆನಿಮ್ಮದು ॥ ಎಂದು ಕೂಡಲ ಸಂಗಯ್ಯನಲ್ಲಿ, ಮಹಾ ಜಗಜ್ಯೋತಿ ಶ್ರೀ ಬಸವಣ್ಣನವರೇ ಬಾಯಿಬಿಟ್ಟು ಹೃದಯವನ್ನು ಬಿಚ್ಚಿ ಕ್ಷಮೆಯನ್ನು ಕೋರಿರು ವಾಗ ಬಾಕಿ ವುಳಿದವರ ಪಾಡೇನು. ॥ ಎಡದ ಪಾದದಲೊದ್ದರೆ ಬಲದ ಪಾದವ ಹಿಡಿವೆ । ಬಲದ ಪಾದದಲೊದ್ದರೆ ಎಡದ ಪಾದವ ಹಿಡಿವೆ ॥ ತ್ರಾಹಿ! ತ್ರಾಹಿ!! ತಪ್ಪೆನ್ನದು ಕ್ಷಮೆ ನಿಮ್ಮದು । ಕೂಡಲ ಸಂಗಮದೇವ ನಿಮ್ಮ

ಕರುಣದ ಕಂದ ನಾನು ॥ ಎಂದು ಶ್ರೀ ಬಸವಣ್ಣನವರು ನುಡಿದು ಅನುಸರಿಸಿದ ನಮ್ರತೆ, ಸರಳಭಾವ, ನಿಸ್ಪೃಹತೆ, ನಿರ್ಮಮತೆ, ನಿರಹಂಕಾರ, ದಯೆ, ತುಂಬಿ ಹೊಳೆಯಾಗಿ ಹರಿಯುವ ಚಿತ್ತವೃತ್ತಿ ಸ್ತುತ್ಯಾರ್ಹವಾಗಿದೆ.

ಯಾರಲ್ಲಿ ತಪ್ಪುಮಾಡುತ್ತೇವೆಯೋ ಅವರಲ್ಲೇ ಕ್ಷಮೆ ಕೇಳಿಕೊಳ್ಳಬೇಕು. ಕಾಕಾಸುರನು ಶ್ರೀ ರಾಮ ಪತ್ನಿಯಲ್ಲಿ ಅಪಚಾರಮಾಡಿ ಶ್ರೀ ರಾಮನ ಕುಶಾಸ್ತ್ರಕ್ಕೆ ಹೆದರಿ, ಭೂಲೋಕದಲ್ಲಿ ತನಗೆ ಯಾರೂ ರಕ್ಷಕರಿಲ್ಲವೆಂದು ದೇವೇಂದ್ರನಲ್ಲಿ ಮೊರೆಯಿಟ್ಟನು. ಅರಣ್ಯದಲ್ಲಿ ಒಂದು ದಿನ ಸೀತಾ ತೊಡೆಯ ಮೇಲೆ ಶ್ರೀರಾಮನು ಮಲಗಿ ನಿದ್ರಿಸುತ್ತಲಿದ್ದನು. ಆ ವೇಳೆಯಲ್ಲಿ ರಾಕ್ಷಸನೊ ಬ್ಬನು ಕಾಗೆ ರೂಪದಿಂದ ಬಂದು ತನ್ನ ಕೊಕ್ಕಿನಿಂದ ಸೀತೆಯ ಸ್ಥನವೊಂದನ್ನು ಕುಕ್ಕಿದ ಪರಿಣಾಮವಾಗಿ ರಕ್ತ ಬರಲು ಪ್ರಾರಂಭಿಸಿತು. ಪತಿಗೆಲ್ಲಿ ನಿದ್ರಾಭಂಗ ವಾಗುವುದೋ ಎಂದು ಆ ಸಾಧ್ವಿ ಆ ಬಾದೆಯನ್ನು ಸೈರಿಸಿಕೊಂಡು ಕದಲದೆ ಕುಳಿತಿದ್ದಳು. ಆದರೆ ತಾನೇನು, ರಕ್ತವು ಹರಿದು ಶ್ರೀ ಕೋದಂಡಪಾಣಿಯಾದ ರಾಘವನ ಭುಜವನ್ನು ಸ್ಪರ್ಶಿಸಿದೊಡನೆ ಎಚ್ಚೆದ್ದ ಸ್ವಾಮಿ ನೆತ್ತರವನ್ನು ಕಂಡು, ಸೀತೆಯಿಂದ ವೃತ್ತಾಂತವನ್ನು ತಿಳಿದು ಕುಪಿತನಾಗಿ, ಕಾಕಾಸುರನ ಮೇಲೆ ದರ್ಭಾಸ್ತ್ರವೊಂದನ್ನು ಅಭಿಮಂತ್ರಿಸಿ ಪ್ರಯೋಗಿಸಿದನು. ಆದರ್ಭಾಸ್ತ್ರವು ಭಯಂಕರವಾದ ಬೆಂಕಿಯನ್ನು "ಭುಗಿಲ್ ! ಭುಗಿಲ್ !!" ಎಂದು ಕಾರುತ್ತ ಕಾಕಾಸುರನನ್ನು ಬೆನ್ನಟ್ಟಿತು. ಶ್ರೀ ರಾಮ ಪತ್ನಿಗೆ ಅಪರಾಧವೆಸಗಿದ ರಾಮ ದ್ರೋಹಿಗೆ ಇಂದ್ರನು ರಕ್ಷಣೆಯಿಲ್ಲವೆಂದು ತಳ್ಳಲು, ಪಿತಾಮಹನಾದ ಬ್ರಹ್ಮನಲ್ಲಿ ಪ್ರಾಣದಾನಕ್ಕಾಗಿ ಪ್ರಾರ್ಥಿಸಲು, ವಿವರವನ್ನರಿತ ಚತುರ್ಮುಖನು ಕಾಕಾಸುರ ನನ್ನು ತಿರಸ್ಕರಿಸಲು ; ಲೋಕಪ್ರಭುವೂ ಪಶುಪತಿಯೂ ಆದ ಕೈಲಾಸಪತಿ ಯಲ್ಲಿ ಮೊರೆಯಿಡಲು, ಶ್ರೀ ಸೀತಾದೇವಿಗೆ ಅಪರಾಧವೆಸಗಿ ಶ್ರೀ ರಾಮ ದ್ರೋಹಿಯಾದ ನಿನಗೆ ರಕ್ಷಣೆ ನೀಡಲು ಸಾಧ್ಯವಿಲ್ಲೆಂದು ತಳ್ಳಲ್ಪಟ್ಟ ಕಾಕಾಸು ರನು ಕಂಗೆಟ್ಟಿರಲು ಗುರುಗಳಿಗೆ, ಸಾಧು ಸಂತರಿಗೆ, ಶಿವಶರಣರಿಗೆ, ಪತಿವ್ರ ತೆಯರಾದ ನಾರೀ ಜನರಿಗೆ ಹಿಂಸಿಸಿ ಮಹಾಪರಾಧವೆಸಗಿದ ಜನರಿಗೆ— ಮೂರು ಲೋಕಗಳಲ್ಲೂ ಮತ್ತೆಲ್ಲೆಲ್ಲೂ ಅಭಯವೋ ರಕ್ಷಣೆಯೋ ಸರ್ವಥಾ

ಸಿಗುವುದಿಲ್ಲವೆಂಬ ಅಂಶ ಸತ್ಯವೇ ಆಗಿರುವುದು. ಶ್ರೀ ರಾಮಚಂದ್ರನಿಂದ ಪ್ರಯೋಗಿಸಲ್ಪಟ್ಟ ಕುಶಾಸ್ತ್ರವಾದರೋ, ಕಾಕಾಸುರನನ್ನು ಬಿಡದೆ ಬೆನ್ನುಹತ್ತಿ ಭಯಂಕರವಾದ ಅಗ್ನಿ ಜ್ವಾಲೆಗಳಿಂದ ಜ್ವಲಜ್ವಲಾಯಮಾನವಾಗಿ ಉಜ್ವಲ ಗೊಂಡು ಝಳಾತ್ಕರಿಸಿ ತನ್ನ ಮೇಲೆ ಹಾರಿಕೊಂಡು ಸಮೀಪಿಸುತ್ತಿರುವುದನ್ನು ಕಂಡ ಕಾಕಾಸುರನು, ಜರ್ಝರಿತವಾದ ದೇಹದಿಂದ ಬಳಲಿ, ಬೆಂದು, ಬೆಂಡಾಗಿ, ಬೇಸತ್ತು, ರಕ್ಷಕರನ್ನು ಕಾಣೆನಲ್ಲಾಯೆಂದು ಬಾಯಿಬಿಟ್ಟು ರೋಧಿ ಸುತ್ತ ಆತ್ಮ ರಕ್ಷಣೆಗಾಗಿ ಮುಂದು ಮುಂದೆ ಹಾರಿ ಹಾರಿ ನೆಗೆಯುತ್ತ ಹಾರುತ್ತ ಬ್ರಹ್ಮಮಾನಸ ಪುತ್ರರಾದ ಶ್ರೀ ನಾರದರನ್ನು ಕಂಡು ತನ್ನ ಪ್ರಾಣ ರಕ್ಷ ಣೆಗಾಗಿ ಅವರಲ್ಲಿ ಕಣ್ಣೀರಿಟ್ಟು ಸೆರಗೊಡ್ಡಿ ಬೇಡಿಕೊಂಡನು. ಪೂರ್ವಾಪರಗಳ ನ್ನೆಲ್ಲಾ ಪೂರ್ಣ ಅರಿತ ಶ್ರೀ ನಾರದರು, ತಮ್ಮಿಂದಲೂ ಕಾಕಾಸುರನನ್ನು ರಕ್ಷಿ ಸಲು ಸಾಧ್ಯವಿಲ್ಲವೆಂದು ನುಡಿದು, ಅವನಿಗೆ ಸಾಧುವಾದ ಉಪಾಯವೊಂದನ್ನು ಅರುಹಿದರು. ಎಲವೋ! ನೀನು ಯಾರಲ್ಲಿ ಅಪರಾಧವೆಸಗಿ ಯಾರ ಕೋಪಾ ಗ್ನಿಗೆ ಪಾತ್ರನಾಗಿ ತತ್ತಳಿಸುತ್ತಿರುವಿಯೋ ಆ ಮಹಾ ಪತಿವ್ರತಾ ತಿಲಕಳಾದ ಶ್ರೀ ಸೀತಾ ಮಾತೆಯಲ್ಲಿ ಹಾಗೂ ಅವಳ ಪ್ರಾಣ ಕಾಂತನಾದ ಶ್ರೀ ಕೋದಂಡ ದೀಕ್ಷಾ ಗುರುವಾದ ಮತ್ತು ಆರ್ತತ್ರಾಣ ಪರಾಯಣನೂ ಶರಣಾಗತ ಜನ ರಕ್ಷಕನೂ ಆದ ಶ್ರೀ ರಾಮಚಂದ್ರನ ಚರಣ ಕಮಲಾಲಯದಲ್ಲಿ ಹೋಗಿಬಿದ್ದು, "*To err is human, forgiveness is God's bounty*" ಅಂದರೆ, "ತಪ್ಪೆನ್ನದು ಕ್ಷಮೆ ನಿಮ್ಮದು" ಎಂದು ಮೊರೆಯಿಟ್ಟುಕೊಂಡರೆ ಆಗ, ಪ್ರಭು ಶ್ರೀ ಸೀತಾ ರಮಣನು ನಿನ್ನನ್ನು ರಕ್ಷಿಸುವನು. ತಪ್ಪೊಂದೆಡೆಯಲ್ಲೆಸಗಿ ಕ್ಷಮಾಪಣೆಯನ್ನು ಮತ್ತೊಂದೆಡೆಯಲ್ಲಿ ಕೋರಿದರೆ ಏನು ಫಲ. ಎಂಬುದಾಗಿ ನಾರದರು ಕಾಕಾಸುರನಿಗೆ ವಿವೇಕವನ್ನು ಬೋಧಿಸಿದೊಡನೆ, ನೇರವಾಗಿ ಅಲ್ಲಿಂದ ಬಂದ ಕಾಕಾಸುರನು ಶ್ರೀ ಸೀತಾರಾಮರ ಚರಣ ಕಮಲಗಳಲ್ಲಿ ರಪ್ಪೆಂದು ಬಿದ್ದು ಮಹಾಪರಾಧವೆಸಗಿದ ತನ್ನನ್ನು ॥ ತ್ರಾಹಿ ತ್ರಾಹಿಮಾಂ ಪ್ರಭೋ! ॥ ಎಂದು ಪ್ರಾರ್ಥಿಸಿಕೊಂಡನು. ದೀನ ದಯಾಪರನಾದ ಸ್ವಾಮಿಯು ॥ ಚಿಂತಾಮಣಿಃ ಪ್ರಪನ್ನಾನಾಂ ॥ ಎಂಬಂತೆ, ಕೇಡುತೀರಿಸಿಕೊಳ್ಳುವ ಮನೋಭಾವವಾಗಲಿ,

ಕ್ರೋಧವಾಗಲಿ ಅಥವಾ ಯಾವ ವಿಧವಾದ ಪ್ರತಿಭಟನೆಯಾಗಲಿ ಏನೊಂದೂ ಇಲ್ಲದ ನಿರ್ಮಲ ಹೃದಯದಿಂದ ಅಭಯವಿತ್ತು ಪ್ರಾಣ ಭಿಕ್ಷೆಯನಿತ್ತು ರಕ್ಷಿಸಿದನಾದರೂ, ಅಪರಾಧಕ್ಕೆ ದಂಡನೆವುಂಟೆಂಬ ಅಂಶವನ್ನು ಎತ್ತಿ ತೋರಿಸಲೋಸುಗ ಮರುಮಾತಾಡುವಷ್ಟರೊಳಗೆ, ರಾಮಬಾಣ ವ್ಯರ್ಥವಾಗುವಂಥದಲ್ಲವಾದ್ದರಿಂದ, ರಾಮಾಜ್ಞೆಯಂತೆ ಕಾಕಾಸುರನ ಒಂದು ಕಣ್ಣನ್ನು ನಷ್ಟಗೊಳಿಸಿತು. ಅಂದಿನಿಂದ ಕಾಗೆಗಳಿಗೆ ಒಂಟುಗಣ್ಣು ಏರ್ಪಟ್ಟು ಮಹಾತ್ಮರಲ್ಲಿ ಮಾಡಿದ ಒಬ್ಬನ ತಪ್ಪಿಗಾಗಿ ಆ ಕುಲವೇ ಶಾಪಗ್ರಸ್ತಕ್ಕೊಳಗಾಗಿ ನಿರಂತರ ಅನುಭವಿಸಬೇಕಾಯಿತು. ಕಾಗೆಗಳು ಒಂದೇ ಕಣ್ಮಣಿಯನ್ನು ಯಾವ ಕಡೆ ಬೇಕೆಂದರೆ ಆ ಕಡೆ ತಿರುಗಿಸಿ ಒಂಟೆಗಣ್ಣಿನಿಂದಲೇ ಜೀವಿಸುತ್ತಿರುವುವು.

ಶ್ರೀ ಬಸವಣ್ಣನವರು ಈ ಗ್ರಂಥಕರ್ತನ ಮನೆತನದ ದೇವರು. ಇವರು ಶ್ರೀ ಬಸವೇಶ್ವರರಲ್ಲೂ, ಶ್ರೀ ನಂದಿಕೇಶ್ವರರಲ್ಲೂ ಮತ್ತೂ ಶ್ರೀ ವೃಷಭೇಶ್ವರರಲ್ಲೂ ಏಕಪ್ರಕಾರ ಭಕ್ತಿಯುತರಾಗಿರುವುದರೊಂದಿಗೆ ಜಗದ್ಗುರು ಶ್ರೀ ರೇಣುಕಾದಿ ಪಂಚಾಚಾರ್ಯರ ದಿವ್ಯ ಅಡಿದಾವರೆಗಳಲ್ಲೂ ಅನನ್ಯ ಭಕ್ತಿಭಾವದಿಂದ ಶರಣಾಗತರಾಗಿರುವರು. "ಶಿವಪಥವನರಿಯಲು ಗುರುಪಥವೇ ಮೊದಲು" ಎಂದಿರುವ ಶ್ರೀ ಬಸವಣ್ಣನವರ ದಿವ್ಯ ಸಂದೇಶವೇ ಇದಕ್ಕೆ ಕಾರಣ. ಅದರೊಂದಿಗೆ ಶ್ರೀಕಲ್ಯಾಣದ ಬಸವಣ್ಣನವರ ಆತ್ಮೀಯ ಗುರುಗಳಾದ ಶ್ರೀ ಜಾತವೇದಿ ಮುನಿಗಳು ಆದಿಯಿಂದಲೂ ಶ್ರೀಮಜ್ಜಗದ್ಗುರು ಭಗವತ್ಪಾದ ರೇಣುಕಾಚಾರ್ಯ ಪರಂಪರಾಗತ ನಿಜ ಶಿಷ್ಯ ಮನೆತನಕ್ಕೆ ಸೇರಿದ ಗುರುವಂಶಜರು. ಇವರು ಪವಿತ್ರವಾದ ಶ್ರೀ ಕೂಡಲ ಸಂಗಮ ಕ್ಷೇತ್ರದಲ್ಲಿ ಗುರುಗಳಾಗಿ ಸುತ್ತಮುತ್ತಲಿನ ಪ್ರಾಂತ್ಯ ಪ್ರದೇಶಗಳಿಗೆಲ್ಲಾ ಹೆಸರಾಂತ ಆಚಾರ್ಯದೇವರಾಗಿ ವಿಖ್ಯಾತರಾಗಿದ್ದರು. ಇವರು ವೀರಶೈವಾಚಾರ ಸಂಪನ್ನರೂ, ದಿವ್ಯಜ್ಞಾನಿಗಳೂ ಪರಮ ವೈರಾಗ್ಯ ಮೂರ್ತಿಗಳೂ, ಮಠಾಧೀಶ್ವರರೂ ಆಗಿರುವುದರೊಂದಿಗೆ ಶ್ರೀಮದ್ರೇಣುಕಾದಿ ಪಂಚಾಚಾರ್ಯರುಗಳಿಂದ ಯುಗಾಂತರಗಳ ಹಿಂದೆಯೇ ಸ್ಥಾಪಿಸಿ ಪ್ರತಿಪಾದಿಸಲ್ಪಟ್ಟ ಶಿವಾದ್ವೈತ ಮತವನ್ನು ಪ್ರಚಾರಮಾಡುವ ಹೊಣೆಯನ್ನು ಹೊತ್ತು ಅದಕ್ಕಾಗಿ ಹಗಲಿರುಳು ಶ್ರಮಿಸುತ್ತಲಿದ್ದರು. ಸುಸಂಸ್ಕಾರ ಸಂಪನ್ನ

ರಾದವರಿಗೆ ವಿದ್ಯಾದಾನ, ಶಿವದೀಕ್ಷಾ ಸಂಸ್ಕಾರ, ಸದುಪದೇಶಗಳಿಂದ ಕಾಯಿಕ, ಮಾನಸಿಕ, ಹಾಗೂ ವಾಚಕ ತಪಶ್ಚರ್ಯೆಗಳ ಬೋಧೆಯನ್ನೆಸಗುತ್ತಾ ಹಿರಿಯ ಗುರುಕುಲವಾಸ ಸಂಸ್ಥೆಯನ್ನೇ ನಿರ್ಮಾಣಮಾಡಿ ಅದಕ್ಕೆ ಅಧಿಪತಿಗಳಾಗಿ, ಆಶ್ರಮವಾಸಿಗಳೂ ಆಗಿ ರಾರಾಜಿಸಿದ ಶ್ರೇಷ್ಠ ಶ್ರೋತ್ರೀಯ ಬ್ರಹ್ಮನಿಷ್ಠರೂ ಸಂಯಮಿಗಳೂ ಆಗಿದ್ದರು. ಶ್ರೀ ಬಸವಣ್ಣನವರ ಗುರುಗಳಾದ ಶ್ರೀ ಜಾತವೇದ ಮುನಿಗಳೆಂಬ ಸಂಗಮೇಶ್ವರ ಶಿವಾಚಾರ್ಯರು ವೀರಗೋತ್ರದ ಪಡ್ವಿಡಿ ಸೂತ್ರಕ್ಕೆ ಸೇರಿದವರು. "ಪಡ್ವಿಡಿ", ಭೂಮಿತತ್ವವನ್ನು ಪ್ರತಿನಿಧಿಸುತ್ತಲಿದೆ. ಪೃಥ್ವಿತತ್ವವು "ನ" ಬೀಜಾಕ್ಷರದ ಆಧಾರದ ಮೇಲೆ ನಿಂತಿವೆ. ಈ ಬೀಜಾಕ್ಷರವು ಸ್ಥೂಲ ಪಂಚಾಕ್ಷರೀ ಮಹಾ ಮಂತ್ರದ ಪ್ರಥಮ ಬೀಜಾಕ್ಷರವಾಗಿರುವುದರೊಂದಿಗೆ ಪರ ಮೇಶ್ವರನ ಪಂಚಮುಖಗಳಲ್ಲೊಂದಾದ ಪ್ರಥಮ ಮುಖ ಅಂದರೆ, ಸದ್ಯೋ ಜಾತ ಮುಖವನ್ನು ಪ್ರತಿನಿಧಿಸಿರುತ್ತೆ. ॥ ಬೀಜಂ ಮಾಂ ಸರ್ವಭೂತಾ ನಾಂ ॥ ಎಂಬ ಭಗವಂತನ ದಿವ್ಯವಾಣಿ ಅಮರ ವಾಣಿಯಲ್ಲವೆ. ಇದನ್ನು ಜಗತ್ತಿನವ ರಿಗೆ ತೋರ್ಪಡಿಸಲು ಕೊಲನು ಪಾಕಿ ಕ್ಷೇತ್ರದಲ್ಲೂ ಹಾಗೂ ದಕ್ಷಿಣದ ಶಿವ ಕಂಚಿ ಕ್ಷೇತ್ರದಲ್ಲೂ ಸ್ವಾಮಿ, "ನ" ಬೀಜಮಯ ಪೃಥ್ವಿಲಿಂಗ ರೂಪಿಯಾಗಿ, ಶ್ರೀ ಸೋಮನಾಥನೆಂತಲೂ ಶ್ರೀ ಏಕಾಂಬರೇಶ್ವರ ಲಿಂಗಗಳ ರೂಪದಲ್ಲಿ ಜಗ ತ್ತನ್ನುದ್ಧರಿಸುತ್ತಿರುವುದು ವಿಶ್ವಕ್ಕೆ ಗೋಚರವೇ ಅಷ್ಟೆ. ಶಿವಪ್ರಸಾದ ಪಂಚಾ ಕ್ಷರೀ ಮಹಾ ಮಂತ್ರದ ಪ್ರಥಮ ಬೀಜಾಕ್ಷರ ಸದೃಶರಾಗಿದ್ದು, ಸದಾಶಿವನ ಪ್ರಥಮಾಸ್ಯೋದ್ಭವರಾದ ಜಗದ್ಗುರು ಶ್ರೀ ರೇಣುಕನು, ಭುವಿಯಲ್ಲಿ ವಿರಾಜಿ ಸುವ "ನ" ಸೂಕ್ಷ್ಮ ಬೀಜಾಕ್ಷರಮಯ ಶ್ರೀ ಸೋಮನಾಥ ಮಹಾಲಿಂಗದಿಂದ ಅವತರಿಸಿ, ಸ್ಥೂಲಬೀಜಾಕ್ಷರವೆನಿಸಿದ "ನ" ಶಿವ ಪಂಚಾಕ್ಷರಿಯ ಮಹಾಮಂತ್ರ ಮಯನಾಗಿ ರಾರಾಜಿಸುವ ಕಾಂಚಿ ಕ್ಷೇತ್ರ ಪ್ರವಿರಾಜಮಾನ ಶ್ರೀ ಏಕಾಂಬರೇ ಶ್ವರನನ್ನು ಸಂದರ್ಶಿಸಿ, ಪೃಥ್ವಿ ಲಿಂಗಗಳಾದೀ ಎರಡು ಸೂಕ್ಷ್ಮ ಹಾಗೂ ಸ್ಥೂಲ ಶಿವ ಪಂಚಾಕ್ಷರಿಯ "ನ" ಬೀಜ ಮಂತ್ರಮಯ ಲಿಂಗಗಳ ಸತತ ಸಂಪರ್ಕದಿಂದ ಜಗದ್ಗುರು ರೇಣುಕನು ಭಾಸಮಾನನಾಗಿರಲು; ಅಪ್‌ತತ್ವಕ್ಕೊಡೆಯನಾದ ಜಗ ದ್ಗುರು ದಾರುಕಾಚಾರ್ಯನು ಅಪ್‌ಲಿಂಗಂಗಳಾದ ಸೂಕ್ಷ್ಮ, ಸ್ಥೂಲ ಬೀಜಾ

ಕ್ಷರ "ಮ" ಕಾರಮಯ ಉಜ್ಜಯಿನಿಯ ಶ್ರೀ ಸಿದ್ಧೇಶ್ವರ, ಮತ್ತೂ ತಿರುಚಿರಾ ಪಳ್ಳಿಯ ಶ್ರೀರಂಗಕ್ಕೆ ಹೋಗುವ ಮಾರ್ಗ ಮಧ್ಯೆ ವಿರಾಜಿಸುವ ತಿರುವಾನೈ ಕಾವಲ್ ಕ್ಷೇತ್ರ ಪ್ರವಿರಾಜಮಾನ ಶ್ರೀ ಜಂಬುಲಿಂಗೇಶ್ವರ ಲಿಂಗಗಳ ಸಂಪರ್ಕ ದಿಂದಲೂ; ಅದರಂತೆ ಮಿಕ್ಕುಳಿದ ಜಗದ್ಗುರು ಏಕೋ ರಾಮಾರಾಧ್ಯರು "ಶಿ" ಕಾರಾಗ್ನಿಮಯ ಲಿಂಗವಾದ ದ್ರಾಕ್ಷಾರಾಮ ಕ್ಷೇತ್ರ ಪ್ರವಿರಾಜಮಾನ ಶ್ರೀ ರಾಮನಾಥ ಹಾಗೂ ತಿರುವಣ್ಣಾಮಲೆ ಕ್ಷೇತ್ರ ಪ್ರವಿರಾಜಮಾನ ಶ್ರೀ ಅರುಣಾ ಚಲ ಲಿಂಗಗಳ ಸತತ ಸಂಪರ್ಕದಿಂದ ಅಗ್ನಿ (ತೇಜಸ್) ತತ್ವಕ್ಕೆ ಒಡೆಯರಾ ಗಿಯೂ; "ವ"ಕಾರ ಬೀಜಾಕ್ಷರವನ್ನಾಶ್ರಯಿಸಿರುವ ವಾಯು ತತ್ವಕ್ಕೆ ಅಧಿಪತಿ ಗಳಾದ ಜಗದ್ಗುರು ಶ್ರೀ ಪಂಡಿತಾರಾಧ್ಯರು ವಾಯು ಲಿಂಗಂಗಳಾದ ಶ್ರೀಶೈಲ ಕ್ಷೇತ್ರ ಹಾಗೂ ಕಾಳಹಸ್ತಿ ಕ್ಷೇತ್ರ ಪ್ರವಿರಾಜಮಾನ ಶ್ರೀಮಲ್ಲಿಕಾರ್ಜುನ ಲಿಂಗ (ಪರ್ವತಲಿಂಗ) ಹಾಗೂ ಶ್ರೀ ಕಾಳಹಸ್ತೀಶ್ವರ ಲಿಂಗಗಳ ಸತತ ಸಂಪರ್ಕ ದಿಂದಲೂ; "ಯ"ಕಾರಮಯ ಆಕಾಶತತ್ವವನ್ನು ವೊಳಗೊಂಡ ಶ್ರೀ ಕಾಶಿ ವಿಶ್ವನಾಥ ಹಾಗು ಚಿದಂಬರ ಕ್ಷೇತ್ರ ಪ್ರವಿರಾಜಮಾನ ಶ್ರೀ ಚಿದಂಬರೇಶ್ವರ ಲಿಂಗಗಳ, ಈ ಎರಡೂ ಲಿಂಗತತ್ವಗಳು ಸಮಾವೇಶಗೊಂಡಂತೆ ಪ್ರಕಾಶಿತವಾದ ಸೂಕ್ಷ್ಮಾಕಾಶ ತತ್ವಕ್ಕೆ ಬೀಜಾಕ್ಷರವೆನಿಸಿದ "ಯ"ಕಾರ ಶಿವಪಂಚಾಕ್ಷರೀ ಮಹಾ ಮಂತ್ರಮಯ ಶ್ರೀ ಕೇದಾರೇಶ್ವರ ಲಿಂಗಗಳ ಸತತ ಸಂಪರ್ಕದಿಂದ ಜಗದ್ಗುರು ಶ್ರೀ ವಿಶ್ವಾರಾಧ್ಯರು ಆಕಾಶ ತತ್ವಕ್ಕೆ ಅಧಿಗತಿಗಳಾಗಿ, ಸದಾಶಿವನ ವಾಮದೇವ, ಅಘೋರ, ತತ್ಪುರುಷ, ಈಶಾನ ಮುಖಗಳನ್ನು ಪ್ರತಿನಿಧಿಸಿ ಪ್ರಜ್ವಲಿತರಾದ್ದರಿಂದ, ಶ್ರೀಮದ್ರೇಣುಕಾದಿ ಪಂಚಾಚಾರ್ಯರು ಪೃಥ್ವಿ ಅಪ್, ತೇಜಸ್, ವಾಯು ಮತ್ತು ಆಕಾಶ ತತ್ವಗಳಿಗೆ ಒಡೆಯರಾಗಿ, ಶಿವಪಂಚಾಕ್ಷರೀ ಮೂಲ ಮಹಾ ಮಂತ್ರದ ಪಂಚಜೀವಾಕ್ಷರ ದಿವ್ಯ ಸ್ವರೂಪದಿಂದ ವಿರಾಜಿತ ರಾಗಿ, ಪರಶಿವನ ಸದೃಶರಾದ್ದರಿಂದ, ಇವರು ॥ ಗುರೂಣಾಂ ಗುರುಃ ॥ ಎಂಬ ಗುರುತರ ಸ್ಥಾನದಿಂದ ಬೆಳಗಿದ ಅಂಶ, ಋಷಿ ಕುಲತಿಲಕರಾದ ಅಗಸ್ತ್ಯ, ದಧೀಚಿ, ವ್ಯಾಸ, ಸಾನಂದ, ದೂರ್ವಾಸ, ಗೌತಮಾದಿಗಳೂ, ಅದ್ವೈತ ಮೂಲಪೀಠಾಚಾರ್ಯರಾದ ಆದಿ ಶ್ರೀ ಶಂಕರಾಚಾರ್ಯರಂಥ ಉಜ್ವಲ

## ॥ ಪ್ರಸ್ತಾವನೆ ॥

ಮಹೋದಯ ಯತಿಪುಂಗರೇ ಮೊದಲಾದ ಕೋಟಿಗಟ್ಲೆ ಶಿವಶರಣ ಶರಣೆಯರೂ, ರಾಜ ಮಹಾರಾಜರೂ, ಚಕ್ರವರ್ತಿಗಳೂ, ಭಾಷ್ಯಕಾರರಿಗೂ ವೇದ್ಯವೇಯಿದ್ದು, ಜಗದ್ಗುರು ಸಾರ್ವಭೌಮ ಶ್ರೀ ಪಂಚಾಚಾರ್ಯರುಗಳ ದಿವ್ಯ ಪಾದಾರವಿಂದಂಗಳಲ್ಲಿ ಅನನ್ಯ ಭಾವೇನ ಶರಣಾಗತರಾಗಿ ಮುಕ್ತರಾಗಿರುವ ಅಂಶ ಭಾನುಕೋಟಿ ಪ್ರಕಾಶಮಾನವಾಗಿ ಶಿವಾಗಮಗಳೇ ಮೊದಲು ಮಾಡಿ ಅನೇಕಾನೇಕ ಪ್ರಾಚೀನ ಧರ್ಮಗ್ರಂಥಗಳಿಂದಲೂ, ಶಾಸ್ತ್ರಾಧಾರಗಳಿಂದಲೂ ಮಹಾ ಕಾವ್ಯಗಳಿಂದಲೂ ಸುಪ್ರಸಿದ್ಧವೇಯಿರುತ್ತೆ.

ಶ್ರೀ ರೇಣುಕರ ಧ್ಯಾನ--

॥ ಸದ್ಯೋಜಾತಮುಖೋದ್ಭೂತಂ । ಸದ್ಯೋ ವೈಭವದಾಯಕಂ ।
ಸಿದ್ಧಿದಂ ಸಿದ್ಧವೃಂದಸ್ಯ ವಂದೇ ಶ್ರೀ ರೇಣುಕಂಗುರುಂ ॥ ॥ ೧ ॥

ನಾಗೇಂದ್ರಹಾರಾಯ ಪುರಾಂತಕಾಯ। ಸ್ಮರಾಂಗರಾಗಾಯ ಮಹೇಶ್ವರಾಯ॥
ದೇವಾದಿದೇವಾಯ ದಿಗಂಬರಾಯ । ತಸ್ಮೈ "ನ" ಕಾರಾಯ ನಮಃಶಿವಾಯ॥

ಶ್ರೀ ದಾರುಕರ ಧ್ಯಾನಃ--

॥ ಯಸ್ಯ ನಾಮಾಮೃತಂ ಪೀತ್ವಾ । ದಧೀಚ್ಯಾದಿಮಹರ್ಷಯಃ ।
ಲೇಭಿರೇ ಪರಮಂಧಾಮ ವಂದೇ । ತಂ ದಾರುಕಂಗುರುಂ ॥ ॥ ೨ ॥

ಮತ್ತೇಭ ಚರ್ಮಾಂಬರ ಭೂಷಿತಾಯ । ಸಮಸ್ತ ಗೀರ್ವಾಣಗಣಾರ್ಚಿತಾಯ ॥
ತ್ರೈಲೋಖ್ಯನಾಥಾಯ ಸುರೇಶ್ವರಾಯ । ತಸ್ಮೈ "ಮ" ಕಾರಾಯ
ನಮಃಶಿವಾಯ ॥

ಶ್ರೀ ಏಕೋ ರಾಮಾರಾಧ್ಯರ ಧ್ಯಾನಃ—

ಅಘೋರ ಮುಖಸಂಭೂತ । ಮಘೋರ ಚರಿತಾವೃತಂ ।
ಏಕೋರಾಮಶಿವಾಚಾರ್ಯ । ಶೋಕಘಂ ಶರಣಂ ವ್ರಜೇ ॥ ೩ ॥

ಶಿವಾಯ ಗೌರೀವದನಾರವಿಂದ । ಸೂರ್ಯಾಯ ದಕ್ಷಾಧ್ವರ ನಾಶನಾಯ ।
ಚಂದ್ರಾರ್ಕವೈಶ್ವಾನರಲೋಚನಾಯ । ತಸ್ಮೈ "ಶಿ" ಕಾರಾಯನಮಃ
ಶಿವಾಯ ॥

ಶ್ರೀ ಪಂಡಿತಾರಾಧ್ಯರ ಧ್ಯಾನ—

॥ ತತ್ಪುರುಷ ಮುಖೋದ್ಭೂತಂ । ಸತ್ಪುರುಷೌಘವಂದಿತಂ ।
ಸ್ತುತ್ಯಂ ಶ್ರೀ ಪಂಡಿತಾರಾಧ್ಯಂ । ಸಂಸ್ತುವೀಮೀಪ್ಸಿತಾಪ್ತಯೇ ॥ ॥ ೪ ॥
ವಸಿಷ್ಠ ಕುಂಭೋದ್ಭವಗೌತಮಾದಿ। ಮುನೀಂದ್ರ ವಂದ್ಯಾಯಮುನೀಶ್ವರಾಯ ॥
ಶ್ರೀನೀಲಕಂಠಾಯ ವೃಷಧ್ವಜಾಯ । ತಸ್ಮೈ "ವ" ಕಾರಾಯ ನಮಃಶಿವಾಯ॥

ಶ್ರೀ ವಿಶ್ವಾರಾಧ್ಯರ ಧ್ಯಾನಃ—

॥ ಈಶಾನೇಶಾನ ವಕ್ತ್ರಾಬ್ಜ । ಸಂಭವಂ ಪ್ರಮಥಪ್ರಿಯಂ ।
ಕೈಲಾಸೇ ವಿಶ್ವಕರ್ಣಾಖ್ಯಂ । ಕೃತೇ ಪಂಚಾಕ್ಷರಾಹ್ವಯಂ ।
ಸರ್ವಲೋಕೇಷುಸಂಚಾರ್ಯ । ಸ್ಥಾಪಇತ್ವಾ ಶಿವಾಗಮಾ ।
ಜಗದ್ಗುರು ತ್ವಮಾಪನ್ನಂ । ಜಗದ್ರಕ್ಷಣ ಕಾರಣಂ ॥ ॥ ೫ ॥
ಯಜ್ಞೇಶರೂಪಾಯ ಜಟಾಧರಾಯ । ಪಿನಾಕಹಸ್ತಾಯ ಜನಾಶ್ರಿತಾಯ ।
ನಿತ್ಯಾಯ ಶುದ್ಧಾಯ ನಿರಂಜನಾಯ । ತಸ್ಮೈ "ಯ" ಕಾರಾಯ
ನಮಃಶಿವಾಯ ॥

ಓಂಕಾರಬಿಂದು ಸಂಯುಕ್ತಂ । ನಿತ್ಯಂ ಧ್ಯಾಯಂತಿ ಯೋಗಿನಃ ।
ಕಾಮದಂ ಮೋಕ್ಷದಂ ತಸ್ಮೈ । ಓಂಕಾರಾಯ ನಮೋನಮಃ ॥

**॥ ಓಂ ನಮಃ ಶಿವಾಯ । ಶಿವಾಯ ನಮಃ ಓಂ ॥**

ಶ್ರೀಮಜ್ಜಗದ್ಗುರು ಪಂಚಾಚಾರ್ಯರ ಸ್ತೋತ್ರ—

ಶ್ರೀಕಂಠಾನನ ವಾರಿಜನ್ಮ ಜನಿತಾ, ಶ್ರೀಕಂಠ ದೇಹೋಪಮಾನ್ ।
ಭೂಕೈಲಾಸ ಹಿಮಾಲಯಾದಿ ವಿಲಸಚ್ಛ್ರೀ ಪೀಠಸಂಸ್ಥಾಪಕಾನ್ ॥

ಸಾನಂದಾದಿಯಮಿಾಂದ್ರ ವಂದ್ಯಚರಣಾನ್, ಚಕ್ರೇಶಸಂಪೂಜಿತಾನ್ ।
ಪಂಚಾಚಾರ್ಯ ಜಗದ್ಗುರೂನ್ ಗಣವರಾನ್, ವಂದೇ ದಯಾಸಾಗರಾನ್ ॥

ಕೊಲ್ಲೀಪಾಕ್ಯಭಿದೇಪುರೇ ಸುವಿಮಲೇ ಸೋಮೇಶಲಿಂಗಾಚ್ಚುಭಾ ।
ದಾವಿರ್ಭೂಯ ತತೋಗತೋಗಗನತೋ ಅಗಸ್ತ್ಯಾಶ್ರಮಂ ಪಾವಯನ್ ॥

ಯಸ್ತಸ್ಮೈ ವಿನತಾಯ ವೇದವಿಹಿತಂ ಸಿದ್ಧಾಂತಮಾಬೋಧಯತ್ ।
ಸ ಶ್ರೀ ರೇಣುಕಯೋಗಿರಾಡ್ವಿತನುತಾಂ ಸಾನಂದಮುರ್ವೀತಲಂ ॥ ॥ ೧ ॥

ಯೋ ಯೋಗೀ ಕರುಣಾಮಯಃ ಶಿವವಟಕ್ಷೇತ್ರೀಯಸಿದ್ಧೇಶ್ವರಾ ।
ದುತ್ಪತ್ತಿಂ ಸಮುವೇತ್ಯಲೋಕನಿವಹೇ ಸುಚಾರ್ಯಸಲ್ಲೀಲಯಾ ॥

ಸಿದ್ಧಾಂತಾಂಕುರಮಾದಿಭಕ್ತಹೃದಯೇ ಸಿಕ್ಷಿಪ್ತವಾನ್ ಸಾದರಂ ।
ಸಶ್ರೀಮನ್ ಮರುಲಾರ್ಯದೇಶಿಕವರಃ ಪಾಯಾದಪಾಯಾಜ್ಜನಾನ್ ॥ ೨ ॥

ದ್ರಾಕ್ಷಾರಾಮಶಿವಾಭಿಧಾನ ಕಲಿತಕ್ಷೇತ್ರಸ್ಥರಾಮೇಶ್ವರಾ ।
ಜ್ಜನ್ಮಪ್ರಾಪ್ಯಸಮಸ್ತ ಸಂಯಮಿ ಗಣಂ ಸಂಬೋಧ್ಯತತ್ವಂಪರಂ ॥

ಯಶ್ಚಕ್ರೇನಿಜಧರ್ಮ ಪೀಠರಚನಾಂ ಶೀತಾದ್ರಿಸಾನೌಮುದಾ ।
ಏಕೋರಾಮಗುರೂತ್ತಮಃ ಸನಿಖಿಲಾಂಪಾಯಾದ್ಧರಾಮನ್ವಹಂ ॥ ೩ ॥

ಶ್ರೀಶೈಲಸ್ಥಿತ ಮಲ್ಲಿಕಾರ್ಜುನ ಮಹಾಲಿಂಗಾಚ್ಚಲಬ್ಧ್ವಾಜನಿಂ ।
ಸಿದ್ಧಾಂತಂನಿಗಮಾಗಮಾದಿಗದಿತಂ ಯೋಗೀಂದ್ರಸಂಸೇವಿತಂ ॥

ಯೋಲೋಕೇ ಪ್ರಸಸಾರತಾಪಸಗುರುಃ ಶ್ರೀಶೈಲಪೀಠಾಧಿಪಃ ।
ಸಶ್ರೀಪಂಡಿತದೇಶಿಕೋವಿತನುತಾಂ ಸೌಖ್ಯಂಸದಾಭೂತಲೇ ॥ ೪ ॥

ಕಾಶೀಕ್ಷೇತ್ರವಿರಾಜಮಾನ ಭಗವದ್ವಿಶ್ವೇಶಗರ್ಭೋದಯಂ ।
ಯಃಸಂಪ್ರಾಪ್ಯಮಹೀತಲೇ ಶಿವಮಯೀಂಭಕ್ತಿಂತತಾನಾಮಲಾಂ ॥

ಗರ್ಜದ್ದುರ್ಮತವಾದಿವಾರಣಲಸತ್ಕಂಠೀರವಃಶ್ರೀಕರೋ ।
ವಿಶ್ವಾರಾಧ್ಯಗುರೂತ್ತಮಃ ಸಜಗತೀಮವ್ಯಾದಪಾಯಾಚ್ಚಿರಂ ॥ ೫ ॥
(ಗಂಗಾಧರ ಶಿವಾಚಾರ್ಯ ಕೃತಂ).

ಶ್ರೀಶನನು ಕಾಂಚಿಯೊಳು ನುಡಿಸಿ ಚೋಳಂಗೆಕ ।
ನ್ಯಾಸಮೂಹದ ಬಂಧನವ ಬಿಡಿಸಿ ಬಿಜ್ಜಳನು ।
ಹೀಶನಿಂ ಪೂಜೆಗೊಂಡಾದಿ ಶೈವಾಚಾರ್ಯನಾಗಿ ಲಂಕಾಪುರದೊಳು ॥

ಈಶತ್ರಿಕೋಟಿಯಂ ಹದಿಟಿಗೆಯ್ದೊಲವಿಂ ವಿ ।
ಭೀಷಣನ ಪಾಲಿಸಿದ ವೀರಶೈವ ಪ್ರಥಮ ।
ದೇಶಿಕಂ ರೇವಣಾ ಸಿದ್ಧೇಶನೆಮಗೀಗೆ ಭಾಸುರ ಸದಾನಂದಮಂ ॥

ಶಿವಸಿದ್ಧಕುಲಚಕ್ರವರ್ತಿ ನಿರ್ಮಳಕೀರ್ತಿ । ಧವನ ವಿರಳಬ್ರಹ್ಮಮೂರ್ತಿ ವಿಖ್ಯಾತ ।
ಶಾಂಭವ ತತ್ತ್ವಕುಶಲನು ಶಿವಾದ್ವೈತ । ಕೋವಿದನುಶಿವಮತ ಶ್ರೀಗಧಿಪನು ॥
ರವಿಕೋಟಿಧಾಮನುದ್ಧಾಮ ನಕಳಂಕಮತಿ । ಶಿವಲಿಂಗಸಂಭವನು ರೇವಣಾ ಸಿದ್ಧೇಶ ।
ನೆಮಗೆಕರುಣಿಸುಗೆ ಶಿವಭಕ್ತಿ ವಿಜ್ಞಾನ । ದುತ್ಸವವನಾನಂದದಿಂದೆ ॥ ಶಂಭೋ ॥

ಅರಿಯದಂತೇಳ್ನೂರು ವತ್ಸರಂ ಭುವನದೊಳ । ಗರಿವಂತಿರೇಳ್ನೂರು ವರ್ಷಮುಂ ಸುಖವಿರ್ದು।ನೆರೆ ವೀರಶೈವೋಪದೇಶಮಂ ಸಕಲ ಸಜ್ಜನ ಸಂತತಿಗೆ ಕರುಣಿಸಿ ॥ ಮಿರುಗುವ ಪರಂಜ್ಯೋತಿಯಿಂತಿವೆಂದರಿಹಿ । ಕಣ್ದೆರಹುಮಾಡಿದ ರೇವಣಾಸಿದ್ಧ ಗುರುನಾಥ। ಗೆರಗುವೆಂನಾಡೆ ಶಿವತತ್ವ ವಿದ್ಯಾಪ್ರೌಢಿಯೆನಗೆ ಸಂಭವಿಸುಗೆಂದು ॥

ಹೇಮನುಜಾ ! ರೇ ಜಿಹ್ವೇ !! ಓಮನಸಾ !!!

॥ ಶ್ರೀ ವೀರಶೈವ ಸದ್ಧರ್ಮಸ್ಥಾಪಕಾನ್ ಸತತಂ ಭಜೇ ।
ರೇಣುಕಾದಿ ಶಿವಾಚಾರ್ಯಾನ್ ನಿಗಮಾಗಮ ವಿಶ್ರುತಾನ್ ॥ ೧ ॥

ಸರ್ವೇತ್ಯಾದಿ ಶೃತಿಪ್ರೋಕ್ತಾಃ ಪುರುಷಾಸ್ಸಂತಿ ಪಂಚಧಾ ।
ತಾನೇವ ಶ್ರೀಗುರೂನ್ನೌಮಿ ಶಿವವ್ಯೂಹಾನ್ ಸನಾತನಾನ್ ॥ ೨ ॥

ಲೋಕಮೇತಂ ಸಮುದ್ಧರ್ತುಂ ಲಿಂಗಪಂಚಕನಿರ್ಗತಾನ್ ॥
ಸರ್ವಶಕ್ತಿಯುತಾನ್‌ವಂದೇ ಪಂಚಾಚಾರ್ಯಾನ್ ಜಗದ್ಗುರೂನ್ ॥ ೩ ॥

ಪಂಚಲಿಂಗಗಳೊಳುದ್ಭವಿಸಿದ ಶಿವಾಚಾರ್ಯ । ಪಂಚಕವು ಧರೆಯ ಜನಕೊಲಿದು ದಯೆಯಿಂದೀಪ್ರ । ಪಂಚಜಲಧಿಯ ದಾಂಟಿಸುವ ವೀರಶೈವ ಮತವಂ ತಿಳುಪಿ, ನೆಲೆಗೈದಿತು ॥

ಯುಗಯುಗದೊಳುಂ ಜಗದ್ಗುರು ಶಿವಾಚಾರ್ಯರೀ । ಜಗದೊಳವ ತರಿಸಿ ಜನನಿವಹವುದ್ಧರಿಸಲೋ । ಸುಗ, ಸಕಲವರ್ಣಾಶ್ರಮದವರಿಂಗವರವರಿಗಿ ಹಧಿಕಾರದ ಬಗೆಯಲಿ ॥ ಬಗೆಗಾಣಿಸಂತೆ ಬೋಧಿಸುತಲಿಹರಳಿಯದಿಹ ಸೊಗವನೀಯುವ ಧರ್ಮತತ್ವಗಳ ನಾನೆಂತು । ಪೊಗಳುವೆಂಬಣ್ಣಿಸುವೆನೀ ಪಂಚಸಿಂಹಾಸನಾಧೀಶ್ವರರ ಮಹಿಮೆಯ ॥

ಜನಿಯಿಸಿ ಪಂಚಲಿಂಗದೊಳನಂತ ಮಹತ್ವವ
ತೋರುತು ಜಗ । ಜ್ಜನರನು ರಾಗಮಂ ಪಡೆದು
ಲೋಕದೆಪರ್ಬಿಸಿ ವೀರಶೈವದಾ ॥
ಘನತರ ಚಿತ್ಕ್ರಿಯಾತ್ಮಕದ ತತ್ವಗಳಂ ಮೆರೆದಾಮ
ಹೋನ್ನತರ್ । ಘನ ಮಹಿಮರ್ ಜಗದ್ಗುರುವರೇ
ಣ್ಯರೆ ಭೂಸುರಗೇಯ ರಾವಗಂ ॥

ಮೇಲಿನ ಮಂಗಳ ಸರಣಿಯಿಂದ ಶಿವಾನಭುವ ಮಂಟಪದ ದ್ಯೋತಕ ವಾಗಿ ರಂಜಿಸುವ ಪಂಚಾಕ್ಷರಮಯ್ನ ಪಂಚರತ್ನಗಳಲ್ಲಿ, ಮಾಣಿಕ್ಯವಾದ “ನ” ಬೀಜಾಕ್ಷರ ವೀರರಸದಿಂದ ಸದಾಶಿವನ ಸದ್ಯೋಜಾತ ಮುಖ ಕಮಲವು ವಿಕಾಸಗೊಂಡಿರಲು ಈ ದಿವ್ಯ ಮುಖದಿಂದ ಪ್ರಾದುರ್ಭವಿಸಿದ. ಶಿವಪಂಚಾ ಕ್ಷರದ ಪ್ರಥಮಾಕ್ಷರ ಸ್ವರೂಪಿ ರೇಣುಕ ಭಗವತ್ಪಾದರು, ಯಾವ “ನ”ಕಾರ

ಮಯ ಬೀಜಾಕ್ಷರದ ಆಧಾರದಮೇಲೆ ಪೃಥ್ವಿತತ್ವವು ನಿಂತಿದೆಯೋ, ಕೊನೆಯಲ್ಲಿ ಮತ್ತಿನ್ಯಾವ ತತ್ವದಲ್ಲಿ ವಿಲೀನಗೊಳ್ಳುವುದೋ ಅಂತಪ್ಪ ಪೃಥ್ವಿಗೆ ಒಡಯುದು ಅಂದರೆ ಜಗದ್ಗುರು ಸಾರ್ವಭೌಮ ಶ್ರೀ ರೇಣುಕನು ಒಡೆಯನಾಗಿಹನು. ಒಂದು ಸಾವಿರದ ನಾನ್ನೂರು ವರ್ಷಗಳು ಧರಣಿಯಲ್ಲಿ ವಿರಾಜಿಸಿ ತಾವು ಆವಿರ್ಭವಿಸಿದ ಸೂಕ್ಷ್ಮ "ನ" ಬೀಜಮಂತ್ರಾಕ್ಷರಮಯ ಕೊಲನುಪಾಕಿಯ ಪೃಥ್ವಿಲಿಂಗದಲ್ಲಿ ವಿಲೀನರಾಗುವ ಮುನ್ನ, ತಮ್ಮ ಶ್ರೀ ಮದ್ರಂಭಾಪುರೀ ವೀರಸಿಂಹಾಸನದ ಉತ್ತರಾಧಿಕಾರಿಯೊಬ್ಬರನ್ನು ಕಾಣದವರಾಗಿ ; ಸ್ಥೂಲ "ನ" ಬೀಜಮಂತ್ರಾಕ್ಷರಮಯ ಶ್ರೀ ಕಂಚಿ ಏಕಾಂಬರೇಶ್ವರ ಪೃಥ್ವಿಲಿಂಗವನ್ನು ರೇಣುಕನು ಸಂದರ್ಶಿಸಿ, ತಮ್ಮ ವಾಂಛಿತಾರ್ಥವನ್ನು ಬಿನ್ನೈಸಿಕೊಳ್ಳಲು, ಶಿವ ಕಂಚಿ ಶ್ರೀ ಏಕಾಂಬರೇಶ್ವರನ, ॥ ಶ್ರೀಶನನು ಕಾಂಚಿಯೊಳು ನುಡಿಸಿ ॥ ಎಂಬಂತೆ ಅವನ ಪ್ರೇರಣೆಯಿಂದ ಶ್ರೀ ಏಕಾಂಬರೇಶ್ವರನನ್ನು ಮನದೋಳ್ ಕಣ್ಮುಡಿ ಧ್ಯಾನಿಸಿ, ಶಿವಪಂಚಾಕ್ಷರೀ ಮಹಾಮಂತ್ರವನ್ನುಚ್ಚರಿಸುತ್ತ ಶ್ರೀ ಸ್ವಾಮಿಯ ಸನ್ನಿಧಿಯಲ್ಲಿ ಭೂಮಿಯನ್ನು ತಮ್ಮ ಅಮೃತ ಹಸ್ತದಿಂದ ಸ್ಪರ್ಶಿಸಿದೊಡನೆ "ಆಶ್ಚರ್ಯ ! ಮಹದಾಶ್ಚರ್ಯ !! " ಭೂಗರ್ಭದೀದ ಶಿವನಿಚ್ಛೆಯಂತೆ, ಕೋಟಿದ್ಯುಮಣಿ ಪ್ರಕಾಶದಿಂದ—

ಲಿಂಗಂಮಸ್ತಕದೋಳ್ ಜಟಾಮುಕುಟ । ಭೂಷಂಶೀರ್ಷದೋಳ್
ಫಾಲದೋಳ್ । ತುಂಗ ಶ್ರೀ ಭಸಿತತ್ರಿಪುಂಡ್ರ । ಮನಲಾಕ್ಷಿ
ಸ್ಫಾರ ಭ್ರೂಮಧ್ಯದೋಳ್ ॥ ಮಾಂಗಲ್ಯಾಕ್ಷಸರಂ ಮಹಾಗಲ
ದೊಳಿಂತು । ತೋರುತಂ ಶ್ರೀ ಸಾಂಬನ ಸನ್ನಿಧಿಯೋಳ್ ।
ಶೃಂಗಾರಾನ್ವಿತನಾಗಿ ಭೂವಲಯಮಂ ಶ್ರೀ ರೇಣುಕಾಧೀಶ್ವರಾ ॥

ಶಿವಪಂಚಾಕ್ಷರದ ಪ್ರಥಮಃ ಬೀಜ ಮಹಾಮಂತ್ರವು ಭೂಗರ್ಭದಿಂದ ಅಂಕುರಿಸಿ ಕವಲೊಡೆದು ಹೊರಹೊಮ್ಮಿದಂತೆ ಶಿರಸ್ಸಿನ ಜಟಾಭಾರದಲ್ಲಿ ಇಷ್ಟಲಿಂಗವು ಜ್ವಲಿಸುತ್ತಿರಲು, ಮುಮ್ಮಲಗಳನ್ನು ಸುಟ್ಟು ಉಜ್ವಲಗೊಂಡ ಮೂರುರೇಖೆ ವಿಭೂತಿ ( ಭಸ್ಮ , ಹಣೆಯಲ್ಲಿಮಿನುಗುಟ್ಟುತ್ತಿರಲು, ಭ್ರೂಮಧ್ಯ

ದೋಳ್ ಫಾಲಾಕ್ಷದಕಾಂತಿಯಂತೆ ತ್ರಿಪುಂಡ್ರದಚುಕ್ಕೆ ಥಳಥಳಿಸುತ್ತಿರಲು, ಕುತ್ತಿಗೆಯಲ್ಲಿ ಖುದ್ರಾಕ್ಷಿ ಸರಗಳು ಶೋಭಿಸುತ್ತಿರಲು—

ಜಗಜಗಿಸೆ ಫಣೆಯೊಳಗೆ ಭಸ್ಮವು ।
ಸೊಗಯಿಸಲು ಕೊರಲೊಳಗೆ ಖುದ್ರಾ ।
ಕ್ಷಗಳ ಸರವದು, ಕನಕದೀಪ್ತಿಯು ಜಡೆಗಳೊಪ್ಪಿರಲು ॥
ಬಗೆಗೊಳಿಸೆ ಮಸ್ತಕದೆ ಲಿಂಗವು ।
ಪಗಲೆರೆಯನನು ಪಳಿವ ಪೊಗರದು ।
ಮಿಗಿಲೆನಿಸಿ ಬಿಸವಂದ ಮುಣ್ಮಿಸೆ ಮುಗುವು ಚೆಲ್ವಾಯ್ತು ॥

ಕಾವಿ, ಕಮಂಡಲ, ಶಿವಯೋಗದಂಡದಿಂದ ಕೂಡಿ ಶಿವಪಂಚಾಕ್ಷರೀ ಮಹಾಮಂತ್ರವನ್ನು ಮುಖಕಮಲದಿಂದುಚ್ಚರಿಸುತ್ತ, ಕರಕಮಲಗಳನ್ನು ಶಿರಸ್ಸಿನಲ್ಲಿ ಜೋಡಿಸಿ ಶ್ರೀ ಏಕಾಂಬರೇಶ್ವರನನ್ನು ನಮಸ್ಕರಿಸಿ ರೇಣುಕಾಚಾರ್ಯ ರನ್ನೂ ವಂದಿಸಿ ಶಿವಧ್ಯಾನಾರೂಢನಾಗಿ ನಿಂತಿದ್ದ ಬ್ರಹ್ಮವಟುವನ್ನು, ಸಾಂಬ ನಾಜ್ಞಾನುಸಾರ ರೇಣುಕನು ಮುದದಿಂ. ॥ ರೇಣುಕ ಗುರು ಸಂಭ್ರಮದ ಶಿಶುವನು । ರುದ್ರಮುನಿದೇವಾಖ್ಯೆಯಿಂ ಕರೆದಂ ॥

ಮಹಿಳೆಯೊಡನಾರಾಣಿವಾಸದೆ ।
ವಿಹರಿಸುತೆ ನಿಜತನಯ ಲೀಲಾ ।
ಪಹೃತ ಮನನಾಗಿರ್ದ ಚೋಳಧರೇಂದ್ರನವಕೇಳಿ ॥
ಆಹಹ! ಮದ್ಗುರುವರ್ಯ ರೇಣುಕ ।
ಮಹಿಮೆ ಕಡುವಿರಿದೆಂದು ಪುರಜನ ।
ಸಹಿತವಾಚರಿಸಿದನು ಜನ್ಮೋತ್ಸವವ ಸಂಭ್ರಮದೆ ॥

ಶ್ರೀ ರುದ್ರಮುನಿದೇವನ ಸಂದರ್ಶನೋತ್ಸವದ ನೂಕುನುಗ್ಗಲು ದೇವ ಸ್ಥಾನದೊಳಗೆ ಹಿಡಿಯಲಾರದಷ್ಟು ಆಗಿ ॥ ಪುರದೊಳಿರ್ದಾ ಬಾಲವೃದ್ಧರು । ಭರದೊಳೇಕಾಮ್ರೇಶಭವನದ । ಪರಿಸರಕೆ ಸಾರ್ತಂದು ನಿಂದರು ಪೇಳಲೇ

ನದನು ॥ ವರ್ಣನಾ ತೀತವಾದ ಭಕ್ತಿಭಾವದಿಂದ ತುಂಬಿ ತುಳುಕುತ್ತಲಿತ್ತು. ರುದ್ರಮುನಿ ಶಿವಾಚಾರ್ಯನನ್ನು ಶ್ರೀಮದ್ರಂಭಾಪುರೀ ವೀರ ಪೀಠಕ್ಕೆ ಕರೆ ತಂದು, ಸ್ವಲ್ಪಕಾಲಾನಂತರ ರೇಣುಕಜಗದ್ಗುರುವರೇಣ್ಯರು ರುದ್ರಮುನಿ ಯನ್ನು ಸಂಭೋಧಿಸಿ, ಹೇ ಕುವರಾ !

॥ ಕುವರನೀಂ ಶಿವನಂಶದೊಗೆದಿಹೆ ।
ಶಿವನೊಳೇ ಭವದೀಯಮಾನಸ ।
ಮವಿರತವುನೆಲಸಿಹುದು, ವಾರಿಜವನದೊಳಂ

ಜಿವೊಲು ॥ ಶಿವನಜಾನಿಪೆ ಶಿವನಪೂಜಿಪೆ ।
ಶಿವನಯೋಗದೆ ವಿಹರಿಸುತ್ತಿಹೆ ।
ಶಿವನ ತತ್ವವ ನೊರೆವೆನಾದೊಡಮಿಂದು ನಿನಗೆಂದಂ ॥

ಇಂದು ಭುವಿಗೆ ಭಾಗ್ಯೋದಯದ ಸಮಯವು ಪ್ರಾಪ್ತವಾಗಿದೆ. ಈ ಶುಭಲಗ್ನದಲ್ಲಿ ವಿಧ್ಯುಕ್ತ ರೀತಿಯಲ್ಲಿ ನಿನಗೆ ಶಿವದೀಕ್ಷೋಪನಯನವನ್ನು ಇತ್ತು ಅಷ್ಟಾವರಣ, ಪಂಚಾಚಾರ ಹಾಗೂ ಷಟ್‌ಸ್ಥಳಗಳ ಮಹತ್ತರ ರೂಪವನ್ನು ಸಂಭ್ರಮದಿಂದ ನಿನಗೆ ಬೋಧಿಸುವೆನೆಂದು ಅಪ್ಪಣೆ ಕೊಟ್ಟರು. ಮುಂದು ವರಿದು— ಹೇ ವತ್ಸಾ !

ವರಯಜುರ್ವೇದವದು ವೇದಸಿ ।
ಕರದೆ ಮಿಗಿಲದರಲ್ಲಿ ರುದ್ರವು ।
ಪರಮ ಪಂಚಾಕ್ಷರಿಯದರಲಿ ಮಿಗಿಲು ಭಾವಿಸಲು ॥

ಮೆರೆವ ದೇವತೆಗಳಲಿ ನ್ಸಾಲ್ಮೊಗ ।
ನುರುಮಿಗಿಲು ಹರಿಯವಗೆ ಮಿಗಿಲ್ಲೈ ।
ತರಳ ಮಿಗಿಲ್ಲೈ ರುದ್ರನೆಲ್ಲರ್ಗರಿಯ ನೀನಿದನು ॥

ಆದ್ದರಿಂದ, ಜಗತ್ತಿನಲ್ಲಿ ಮೇಲ್ಕಂಡ ಪಾಶವಿಮೋಚಕ, ಭವಭಯ

ಹರಣ ತತ್ವಸುಧೆಯನ್ನು ದಿಟದಿಂ ಬೋಧಿಸುವ ಗುರುವೇ "ಮಿಗಿಲು" ದೊಡ್ಡವ ನೆಂದು ಬೋಧಿಸಿ ; ಭೂಜಾತ ರುದ್ರಮುನಿಗೆ ಶ್ರೀಮದ್ರಂಭಾಪುರಿಯ ವೀರ ಸಿಂಹಾಸನಾರೋಹಣ ಪಟ್ಟಾಭಿಷೇಕ ಮಹೋತ್ಸವಕ್ಕೆ ರೇಣುಕನು ಮುದ ದಿಂದೇರ್ಪಡಿಸಲು, ಭೂಕೈಲಾಸದಂತೆಸೆವ ಮಣಿಮಯ ಆ ದಿವ್ಯ ಕನಕ ಮಂಟಪದೊಳ್—

॥ ಮೆರೆಯೆ ವಿಶ್ವಾರಾಧ್ಯ ನೊಂದೆಡೆ ।
ಮೆರೆಯೆ ಮರುಲಾರಾಧ್ಯನೊಂದೆಡೆ ।
ಮೆರೆಯು ಲೇಕೋರಾಮ, ಪಂಡಿತಗುರುವರರು ಕೆಲದೆ ॥
ಮೆರೆಯೆ ಪಾಂಡ್ಯ ಮಹೇಂದ್ರ ಚೋಳೇಂದ್ರ ।
ರು ಮೆರೆಯೆ ನೇಪಾಳ ಕೇರಳ । ದರಸರುಂ ಕಣ್ದೆರೆದು
ರೇಣುಕ ಕಂಡನೆಲ್ಲವನು ॥

॥ ಒಡನೆ ಸಿಂಹಾಸನವದೆಸೆದುದು । ಸಡಗರಿಪ ವಂದಿಗಳ ಕವಿಗಳ । ಗಡಣ ವೊಪ್ಪಿದುದಲ್ಲಿ ಶೈಪರ್ಷಿಗಳು ಶಿಷ್ಯಯುತರ್ ॥ ಎಡಬಲದೆ ಕಂಗೊಳಿಸಿದರು ಪಳ । ನುಡಿಯು ನುಗ್ಗಡಿಸಿದರು ಗಗನವ ॥ ನಡರೆ ಮಂಗಳವರೆಯ ಮೊಳಗುಂ ಜಯ ಜಯಧ್ವನಿಯುಂ ॥

ಕರವಿಡಿದು ರುದ್ರಮುನಿದೇವನ । ಕರೆತರುತ್ತಲಿ ಪಟ್ಟಸಂಸ್ಕೃತಿ ।
ವಿರಚಿಸುತೆ ಸಿಂಹಾಸನದೆ ಕುಳ್ಳಿರಿಸಿ ನಲವಿಂದೆ ॥
ಗುರುವರೇಣ್ಯನು ಮಣಿಕಿರೀಟವ । ನಿರಿಸೆ ಶಿರದಲಿ ಮರಲಸರಿಯುದು ।
ಕರೆಯೆ ಪಂಚಾಚಾರ್ಯರುಂ । ತಾನೊಲ್ದು ಪರಸಿದರು ॥
ನಲವಿನುರ್ವೀಪಾಲರೆಲ್ಲರು । ಸಲಿಸೆ ವಸ್ತ್ರಾಭರಣ ಮೊದಲಹ ।

ಸುಲಲಿತಾಮುಲ ವಸ್ತುಜಾಲವ ಕಾಣ್ಕೆಯೆಸಗುತಲಿ ॥ ತೊಳಗಿದನು ರುದ್ರಮುನಿದೇವನು । ಬೆಳಗುವಾ ಕೈಲಾಸದಲಿ ಬಗೆ । ಗೊಳುವ ಭದ್ರಾಸನದೆ ಮಂಡಿಸಿದ ಭವನಂತೆವೊಲು ॥

ಶ್ರೀ ರುದ್ರಮುನಿ ಶಿವಾಚಾರ್ಯರಿಗೆ ಪಟ್ಟವನ್ನುಕಟ್ಟಿ ಜಗದ್ಗುರು ಸಾರ್ವಭೌಮ ರೇಣುಕನು ಇನ್ನು ಕೈಲಾಸಕ್ಕೆ ಹಿಂತಿರುಗುವ ನಿಮಿತ್ತ ತಾವು ಅವತರಿಸಿದ ಕುಲನುಪಾಕಿ ಶ್ರೀ ಸೋಮನಾಥ ಜ್ಯೋತಿರ್ಲಿಂಗದಲ್ಲಿ

ಲೀನೇತಸ್ಮಿನ್ ಶಾಂಕರೇ ಸ್ವಪ್ರಕಾಶೇ । ದಿವ್ಯಾಕಾರೇ
ರೇಣುಕೇಸಿದ್ಧನಾಥೇ । ಸರ್ವೋಲೋಕೋವಿಸ್ಮಿತೋ
ಭೂತ್ತದಾನೀಂ । ಶೈವೀಭಕ್ತಿಃಸಪ್ರಮಾಣಾಬಭೂವ ॥

ಎಂಬಂತೆ ತೇಜೋಮಯ ದಿವ್ಯ ಶರೀರಧಾರಿಯೂ, ಸಿದ್ಧಕುಲ ಚಕ್ರ ವರ್ತಿಯೂ ಆದ ಶ್ರೀ ರೇಣುಕ ಪರಂಜ್ಯೋತಿಯು, ಸ್ವಯಂಜ್ಯೋತಿ ಸ್ವಪ್ರಕಾಶ ಮಯ ಶ್ರೀ ಸೋಮನಾಥ ಜ್ಯೋತಿರ್ಲಿಂಗದಲ್ಲಿ ಅಂತರ್ಧಾನನಾಗಲು (ವಿಲೀನ ಅಥವಾ ಅಡಗಲು), ಸಮಸ್ತ ಮುನಿನಿಕರ ಋಷಿಜನ, ಬ್ರಹ್ಮಜನ, ದೇವಜನ, ಮುನಿಜನ, ಸಿದ್ಧಜನ, ಭಕ್ತವಿರಕ್ತಸ್ತೋಮ "ಜಯೀ ವಿಜಯೀ ಭವ ! ದಿಗ್ವಿಜಯೀಭವ !!" ಎಂದೂ ಮತ್ತೂ "ಭೋ ಭೋ ! ಜಗದ್ಗುರು ಸಾರ್ವಭೌಮ ರೇಣುಕ ಗುರುವರೇಣ್ಯ !! ನಮಸ್ತೇ ನಮಸ್ತೇ ನಮೋನಮಃ।" ಎಂದು ಒಂದುಕಡೆ ಸ್ತುತಿಸುತ್ತಿರಲು ; ಮತ್ತೊಂದುಪಾರ್ಶ್ವದಲ್ಲಿ ಸಾಧು ಸಂಯಮಿಗಳು ಅಂಜಲಿಪುಟರಾಗಿ, ಆನಂದಭಾಷ್ಪಗಳಿಂದ ತೋಯ್ದು, ಬಲ ಮುರಿ ಶಂಖಿನ ಪ್ರಣವನಾದದಂತೆ "ಓಂಕಾರ" "ಐಂಕಾರ" "ಹ್ರೀಂಕಾರ" "ಶ್ರೀಂಕಾರ" ಮತ್ತು "ಕ್ಲೀಂಕಾರ" "ಮಹಾಬೀಜಾಕ್ಷರ ಶಕ್ತಿಸ್ವರೂಪಾ" ಎಂದೂ, ಭೋ ಪ್ರಭೋ ! ಭಜತಾಂ ಕಲ್ಪವೃಕ್ಷಾಯ, ನಮತಾಂ ಕಾಮಧೇನವೇ !!" ಎಂದೂ, ಈ ಪ್ರಕಾರ ಅರೆಗಣ್ ನೋಟದ ನಾಸಾಗ್ರ ದೃಷ್ಟಿಯ ನಿಷ್ಠೆಯಲ್ಲಿ ಮುಳುಗಿ ತದೇಕಧ್ಯಾನ ಪರವಶರಾಗಿರುವಲ್ಲಿ "ಗುರು ಸಾಕ್ಷಾತ್ ಪರಬ್ರಹ್ಮ" ಎಂಬ ಶೃತಿವಾಣಿಯಂತೆ ರೇಣುಕಜಗದ್ಗುರುವು, ಶುದ್ಧ ಬ್ರಹ್ಮ ಪರಾತ್ಪರ ಪರಶಿವ ಜ್ಯೋತಿ ಸ್ವರೂಪದಲ್ಲಿ ಪರಾಕಾಶಸ್ವಯಂಜ್ಯೋತಿ ಯಾಗಿ ಬೆಳಗಿ ಬಯಲಾದನು. ಹರಃ ಓಂ !.

ಬ್ರಹ್ಮಾಂಡಕೋಟಿಗಳಿಗೆಲ್ಲಾ ಏಕೈಕ ಅದ್ವಿತೀಯ ಜಗದ್ಗುರು ಸಾರ್ವಭೌಮ ವೀರಸಿಂಹಾಸನ ಮಹಾಪೀಠದ, ಉಪಾಚಾರ್ಯರೂ, ಶ್ರೀ ಬಸವಣ್ಣನವರ ಆಜನ್ಮಗುರೂತ್ತಮರಾದ ಶ್ರೀ ಜಾತವೇದಿಮುನಿಗಳು ಶ್ರೀಮದ್ರಂಭಾಪುರಿ ವೀರಸಿಂಹಾಸನದ ಶಾಖಾನು.ಶಾಖೆಗಳಲ್ಲೊಂದಾದ ಶ್ರೀ ಕಪ್ಪಡಿ ಕ್ಷೇತ್ರ ಪ್ರವಿರಾಜಮಾನ ಹಿರೆಮಠಾಧ್ಯಕ್ಷರಾಗಿ ಶ್ರೀ ಕೂಡಲಸಂಗಮೇಶ್ವರನ ದಿವ್ಯ ಸನ್ನಿಧಿಯಲ್ಲಿ ಸೇವೆ ಸಲ್ಲಿಸುತ್ತಾ ಉದಾರಿಗಳೂ ಕರುಣಾಮಯರೂ ಶಾಂತರೂ ಆಗಿರುವುದರೊಂದಿಗೆ, ಆಶ್ರಮವಾಸಿಗಳೂ ತಪೋಧನರೂ ಆಗಿ ವಿರಾಜಿಸುತ್ತಲಿದ್ದರು. ವಿಶಾಲಾರ್ಥಗರ್ಭಿತವಾದೀ ವೀರಶೈವ ತತ್ವ ಒಂದುಕಾಲದ, ಒಂದು ಜನಾಂಗದ ಒಂದು ಕೋಮಿನವರ ಸಂಕುಚಿತ ಭಾವನೆಗೆ ಪೊಳಪಟ್ಟೋ ಅಥವಾ ಖಂಡಾಂತರವೋಪಕ್ಷಾಂತರವೋ ಆಗಿರದೆ, ಇಡೀ ವಿಶ್ವದ ಮಾನವ ಕಲ್ಯಾಣಕ್ಕಾಗಿ ಸಕಲ ಮಾನವೀಯತೆಯ ಧರ್ಮಪ್ರಸಾರದಿಂದ ಗ್ರಾಹ್ಯವೂ ಗಣನೀಯವೂ ಆಗಿರುವುದರೊಂದಿಗೆ ಆಧ್ಯಾತ್ಮಿಕ ಆತ್ಮ ಪ್ರಕಾಶವನ್ನು ಅನಂತ ಪ್ರಕಾರವಾಗಿ ಆಕರ್ಷಿಸುವ ಮಹಾಸಾಗರದಂತೆ ವಿರಾಜಿಸಿ ಸರ್ವಧರ್ಮ ಸಮನ್ವಯಧರ್ಮದ್ರುಮದಂತೆ ಶಾಶ್ವತವೂ ಆಪ್ಯಾಯನಕರವೂ ಆಗಿ ವಿರಾಜಿತವಾಗಿರುವುದು. ವೇದಾಗಮೋಪನಿಷದಾದಿಗಳಲ್ಲಿ ಪ್ರೋಕ್ತವಾದಂತೆ ಶಿವಾದ್ವೈತ ತತ್ವವು, ॥ತತ್ವಾನಾಂ ಮಹದಾ ದೀನಾಂ॥ ಎಂಬಂತೆ, ಆದಿಗಾದಿ ಮಹದಾದಿ ತತ್ವನೆಂದು ಶಾಸ್ತ್ರಸಮ್ಮತವಾನ ಅಂಶವೇ ಆಗಿರುತ್ತೆ. ಶಿವಾದ್ವೈತ ತತ್ವದ ಗರ್ಭದಲ್ಲಿ ಅಖಿಲ ಸನಾತನ ವೈದಿಕ ತತ್ವಗಳ ನಿಜ ಇರುವಿಕೆ ॥ಮಯೂರಾಂಡರಸ ನ್ಯಾಯದಂತ ॥ ಗಂಭೀರತೆಯಿಂದ ಅಂತರ್ಗತವಾಗಿರುವುವು.

ವಿಜಯವಾಟಿಕಾ ಪುಣ್ಯಕ್ಷೇತ್ರ ಪ್ರವಿರಾಜಮಾನಮಹೋದಯರೂ, ಶ್ರೀಕರ ಭಾಷ್ಯಕರ್ತರೂ, ಶ್ರೀ ಪತಿಪಂಡಿತೇಂದ್ರಯತಿ, ನಿರಾಭಾರ ವೀರಶೈವ ಯತಿವ್ರಜಪರಿವೃಢ (ಅಂದರೆ, ವೀರಶೈವನಿರಾಭಾರಯತಿಗಳೆನಿಸಿದ ಚರಪಟ್ಟದ ಜಂಗಮಯತಿಶ್ರೇಷ್ಟ ಪುಂಗವರೆಂದರ್ಥ), ಶ್ರೀ ಪಂಡಿತಾರಾಧ್ಯಮುನಿ, ಶ್ರೀ ಪಂಡಿತರು, ಇಂತಿವೇ ನಾಮ:ಗಳಿಂದ ವಿಖ್ಯಾತರಾಗಿ, ಭುವನಾಚಾರ್ಯ

ವರೇಣ್ಯರೂ ಆಗಿ ವಿರಾಜಿಸಿದ ಶ್ರೀಮದ್ಗಿರಿರಾಜ ಸೂರ್ಯಸಿಂಹಾಸನಾಧಿಪತಿಗಳಾದ ಶ್ರೀಮಜ್ಜಗದ್ಗುರು ಶ್ರೀಪತಿ ಪಂಡಿತಾರಾಧ್ಯ ಶಿವಾಚಾರ್ಯರು ತಮ್ಮಿಂದ ರಚಿತವಾದ ಶ್ರೀಕರ ಭಾಷ್ಯದಲ್ಲಿ ಪರಮ ವೀರಶೈವಮತದ ನಿಜ ಸ್ವರೂಪವನ್ನು ಮನಮುಟ್ಟುವಂತೆ ಶೃತಿ, ಸ್ಮೃತಿ, ಯುಕ್ತಿ ಅನುಭವಗಳಿಗನುಗುಣವಾಗಿ ವಿವರಿಸುತ್ತಾ :—

ದ್ವೈತಾದ್ವೈತ ಮತೇಶುದ್ಧೇ । ವಿಶೇಷಾ ದ್ವೈತಸಂಜ್ಞಕೇ ।
ವೀರಶೈವೈಕಸಿದ್ಧಾಂತೇ । ಸರ್ವಶೃತಿಸಮನ್ವಯಃ ॥

ಎಂದೂ ಮತ್ತು—

ದ್ವೈತಾದ್ವೈತಮತಂ ವೀರಶೈವಂ ಮೋಕ್ಷೈಕ ಕಲ್ಪಕಂ ।
ಸರ್ವವೇದಾಂತಸಿದ್ಧಾಂತಸಾರಂ ಸರ್ವಾರ್ಥಸಿದ್ಧಿದಂ ॥

ಎಂದೂ ಸ್ಪಷ್ಟಪಡಿಸಿರುವರು. ಈ ಹಿಂದೆ ವಿವರಿಸಿರುವಂತೆ ಈ ಮತವು, ದ್ವೈತಾದ್ವೈತ, ಮತ್ತೂ ವಿಶೇಶಾದ್ವೈತ ತತ್ವ ರತ್ನಗಳಿಂದ ಸಹಜವಾಗಿ ಪ್ರಕಾಶಿಸಿ, ಸರ್ವಶೃತ್ಯರ್ಥಸಮನ್ವಯ ಸಿದ್ಧಾಂತದಿಂದ ಬೆಳಗಿ ಕಂಗೊಳಿಸುತ್ತಲಿರುವುದರಿಂದ, ವೀರಶೈವಧರ್ಮ ವಿಶ್ವಧರ್ಮವಾಗಿ ವಿರಾಜಿತವಾಗಿರುವುದು. ವೀರಶೈವಸಿದ್ಧಾಂತವನ್ನು ಆಗಮಾಮ್ನಾಯಾದಿಗಳ ತಿರುಳಿಂದು ಶ್ರೀಪತಿ ಪಂಡಿತಾರಾಧ್ಯರು ಶ್ರೀಕರಭಾಷ್ಯದಲ್ಲಿ ಘಂಟಾಘೋಷವಾಗಿ ಜಗತ್ತಿಗೆ ಸ್ಪಷ್ಟಪಡಿಸಿರುವರು. ಇಷ್ಟ ಪ್ರಾಣ ಭಾವಲಿಂಗಗಳ ನಿಶ್ಯಾನುಸಂಧಾನ ಸಂಪರ್ಕಗಳಿಂದ ಮಾನವನು ಷಟ್‌ಸ್ಥಲಾಚರಣೆಯ ಮೂಲಕ ಮುಕ್ತಿಯನ್ನು ಹೊಂದಲು ಕಲ್ಯಾಣಕಲ್ಪತರುವೇ ಆದ ಈ ಮತತತ್ವಗೋಪ್ಯ ಚಿಂತಾಮಣಿಯಂತೆ ಶೋಭಿತವಾಗಿರುವುದು.

ವೀರಶೈವವು ದ್ವೈತ ತತ್ವವನ್ನು ನಿಗಮಾಗಮಗಳ ಆಧಾರಗಳಿಂದ ಪ್ರತಿಪಾದಿಸುತ್ತೆ ಎಂಬ ಅಂಶವನ್ನು ಸಪ್ರಮಾಣವಾಗಿ ವಿವರಣೆಕೊಟ್ಟು ವಿಸ್ತರಿಸಿ ನಿರೂಪಿಸಿದ ಶ್ರೀಪತಿ ಪಂಡಿತರು, ವಿಶೇಷಾದ್ವೈತವೆಂಬ ಪದವು

"ವಿ+ಶೇಷ+ಅದ್ವೈತ=ವಿಶೇಶಾದ್ವೈತ" ಅಂದರೆ "ವಿ" ಶಬ್ಧವು "ವಿಶಬ್ಧೇ ನೋಚ್ಯತೇ ಶ್ಯಂಭುಃ" ಎಂತಲೂ ಮತ್ತೂ ॥ ವಿ ಶಬ್ಧೇನೋಚ್ಯತೇವಿದ್ಯಾ । ಶಿವಜೀವೈಕ್ಯಬೋಧಿಕಾ ॥ ಎಂಬಂತೆ ಪರಶಿವನನ್ನೂ, ಶೇಷಶಬ್ಧವು "ಶೇಷ ಶಬ್ಧೇನ ಶಾರೀರೋ" ಶೇಷಶಬ್ಧವು ಜೀವನನ್ನೂ, ಅದ್ವೈತಪದವು ಶಿವ ಜೀವರುಗಳ ಸಾಮರಸ್ಯ ಅಥವಾ ಐಕ್ಯವನ್ನು ಬೋಧಿಸುತ್ತಿದೆ— ನಿರಂತರ ಶಿವಧ್ಯಾನಧಾರಣೋಪಾಸನೆಗಳಿಂದ ಭೇದ ಕ್ರಮವಾಗಿ ತೊಲಗಿ, ಜೀವನು ॥ಶಿವಪೂಜೆಯಿಂದಲೇ ಜೀವ ಶಿವನಾಗುವನು । ಅವನಿಯೊಳಗೀಮಾರ್ಗ ಸುಲಭ ವೆನುತ, ಸುವಿಚಾರಿ ಶಂಕರಾಚಾರ್ಯ ನುಡಿಯುತಬಂದ॥ ಅಂದಹಾಗೆ, ತನ್ನ ವಾಸ್ತವವಾದ ಅಭೇದಸ್ಥಿತಿಯನ್ನು ಅನುಭವಿಸಬಲ್ಲನು. ಭೇದ ಅಭೇದ ವೆರಡರ ಪಾರಮಾರ್ಥಿಕತೆಯನ್ನು ತಿಳಿಸಲಿಕ್ಕಾಗಿ ವೀರಶೈವ ಸಿದ್ಧಾಂತವನ್ನು ಶಕ್ತಿವಿಶಿಷ್ಟಾದ್ವೈತವೆಂದು ಕರೆಯಲಾಗಿದೆ.

## XII

ಹದಿಮೂರನೆಯ ಶತಮಾನದಲ್ಲಿದ್ದ ಶ್ರೀ ಮದಾನಂದತೀರ್ಥ ಭಗವತ್ಪಾದ ಶ್ರೀಮನ್ ಮಧ್ವಾಚಾರ್ಯರು, ಭೇದವಾದವೆಂಬ ದ್ವೈತಸಿದ್ಧಾಂತವನ್ನು ಬೋಧಿಸಿ ಜೀವಾತ್ಮ ಪರಮಾತ್ಮರುಗಳು ಭಿನ್ನರೇ ಇರುವರು ಎಂದು ಸಾರಿರು ವರು. ಯಜಮಾನ ಭೃತ್ಯರಹಾಗೆ, ದಣಿದಾಸನಂತೆ ಪ್ರಭು-ದೀನನಂತೆ, ಭಗ ವಂತಭಕ್ತನಂತೆ, ಜೀವಾತ್ಮ ಪರಮಾತ್ಮರುಗಳು ಪೂರ್ಣಭಿನ್ನರಿರುವರು. ಭಕ್ತನು ಭಗವಂತನಾಗಲಾರ ಎಂಬ ಅಂಶವನ್ನು ಪ್ರತಿಪಾದಿಸಿರುವರು. ಆದರೆ ಭಕ್ತನು ಭಕ್ತಿವಿಶೇಷದಿಂದ, ಸದ್ಭಕ್ತಿಭಾವವನ್ನು ಬೆಳಸಿ ಭಗವಂತನ ಕೃಪಾವಿಶೇಷದಿಂದ ಭಗವಂತನನ್ನು ಕಾಣಬಹುದು. ಅವನನುಗ್ರಹದಿಂದ "ಸಾಲೋಕ್ಯ ಸಾಮೀಪ್ಯ" ಗಳೆಂಬ ಮೋಕ್ಷಸುಖವನ್ನು ಹೊಂದಿ ನಿರತಿಶಯಾನಂದವಾದ ಮುಕ್ತಸ್ಥಿತಿ ಯನ್ನು ಪಡೆಯುವುದೇ ಪರಂಧಾಮತ್ವವೆಂದು ಘೋಷಿಸಿರುವರು ಪ್ರಭು-ದಾಸ ಭಾವ ದ್ವೈತವೇ ಹೊರತು ಅದ್ವೈತವಾಗಲಿಕ್ಕಿಲ್ಲವೆಂಬುದೇ ಸರ್ವಜ್ಞಾಚಾರ್ಯ ರಾದ ಶ್ರೀಮನ್ಮಧ್ವಾಚಾರ್ಯರ ಅಭಿಮತ. ಇವರಿಗೆ ಪೂರ್ಣ ಪ್ರಜ್ಞರೆಂಬ

ಬೇರೊಂದು ಅಭಿದಾನವೂ ವುಂಟು. ಎಂದೆಂದಿಗೂ ದಾಸನು ದಾಸನೇ ಹೊರತು ದೇವನಾಗಲಿಕ್ಕೆ ಶಕ್ಯವಿಲ್ಲ ಎಂಬುದೇ ದಾಸಪಂಥದ ದ್ವೈತಸಿದ್ಧಾಂತ. ಶ್ರೀಮನ್ಮಧ್ವಾಚಾರ್ಯಾಯತೇ ನಮಃ.

ಸುಮಾರು ಈಗ್ಗೆ ಎರಡುಸಾವಿರವರ್ಷಗಳ ಹಿಂದಿದ್ದ ಅದ್ವೈತಮತ ಸ್ಥಾಪನಾಚಾರ್ಯ ಶ್ರೀಮಜ್ಜಗದ್ಗುರು ಆದಿ ಶ್ರೀ ಶಂಕರಾಚಾರ್ಯರು ತಮ್ಮ ತತ್ವಾಮೃತವನ್ನು ಅಖಂಡವಾಗಿ ಪ್ರತಿಪಾದಿಸುತ್ತಾ – ಜೀವಾತ್ಮನು ಪರಮಾತ್ಮ ನಿಂದ ಅನ್ಯನಲ್ಲ. ಜೀವನು ಶಿವನ ಅಂಶವೇ ಆಗಿರುವನು. ||ಜೀವೋಬ್ರಹ್ಮೈವ ನಾಪರಃ|| ಎಂಬ ಅದ್ವೈತ ಸಿದ್ಧಾಂತವನ್ನು ಧರಣಿಮಂಡಲ ಮಧ್ಯದೊಳಗೆ ಸ್ಥಾಪಿಸಿರುವರು. ಶ್ರೀ ಶಂಕರಾಚಾರ್ಯರು ಜೀವಬ್ರಹ್ಮೈಕ್ಯ ರಹಸ್ಯದ ಸಾರ ಸರ್ವಸ್ವವನ್ನು ಪ್ರತಿಪಾದಿಸುತ್ತಾ ದ್ವೈತವೆಂಬುದಿಲ್ಲ, ಸ್ಥಾವರಜಂಗಮಾತ್ಮಕ ವಾದ ಪ್ರಪಂಚಮಿಥ್ಯೆ. ಜೀವೇಶ್ವರರು ಸತ್ಯ. ನಾನು ಶಿವಸ್ವರೂಪಿ. "ಅಹಂ ಬ್ರಹ್ಮಾಸ್ಮಿ", "ಅಯಮಾತ್ಮಾಬ್ರಹ್ಮ", "ತತ್ವಮಸಿ"; "ಪ್ರಜ್ಞಾನಂಬ್ರಹ್ಮ" ಮತ್ತೂ "ಶಿವೋಹಂ" ಎಂಬಿವೇ ಚತುರ್ವೇದ ಬೀಜ ಮಹಾವಾಕ್ಯಗಳನ್ನು ಹಾಗೂ ಮಕುಟಪ್ರಾಯವಾದ ಮಹಾ ಮಂತ್ರಗಳನ್ನು ನಿತ್ಯಾನುಸಂಧಾನ ಮಾಡುತ್ತಿರುವ ನಿತ್ಯ ತೃಪ್ತಸ್ಥಿತಿಯೇ ಮೋಕ್ಷವೆಂದು ಸ್ಪಷ್ಟಪಡಿಸಿರುವರು. "ಬ್ರಹ್ಮವಿತ್ ಬ್ರಹ್ಮೈವ ಭವತಿ" ಎಂಬ ಉಪನಿಷದ್ವಾಕ್ಯಕ್ಕನುಗುಣವಾಗಿ ಬ್ರಹ್ಮ ದರ್ಶನದಿಂದ ಅಂದರೆ ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಿದ ಮುಕ್ತಜೀವನು "ಶಿವೋಹಂ" ಎಂಬ ಮಹಾ ವಾಕ್ಯಾನುಸಂಧಾನದಿಂದ ಶಿವಾನುಗ್ರಹವನ್ನು ಹೊಂದಿ ತನ್ಮೂಲಕ ಜೀವಾತ್ಮನು ಪರಮಾತ್ಮನಲ್ಲಿ ವಿಲೀನನಾಗುವನು. ನೀರು ನೀರಲ್ಲಿ ಕಲತಂತೆ, ಹಾಲು ಹಾಲಲ್ಲಿ ಬೆರತಂತೆ ಜೀವಾತ್ಮನು ಪರಮಾತ್ಮನಲ್ಲಿ ಏಕೀಭವಿಸಿ ಐಕ್ಯನಾಗುವನು. ಇದೇ ಅದ್ವೈತಾನಂದದಲ್ಲಿ ಕಾಣುವ ಪರಮ ಪದ, ಮುಕ್ತಿ. ಇದನ್ನು ಸಾಯುಜ್ಯ ಮುಕ್ತಿ ಎನ್ನುವರು. ಶ್ರೀಮತೇ ಶ್ರೀ ಶಂಕರಾಚಾರ್ಯಾಯತೇ ನಮಃ.

ಹನ್ನೊಂದನೆ ಶತಮಾನದ ಆದಿಯಲ್ಲಿದ್ದ ವಿಶಿಷ್ಟಾದ್ವೈತಮತಸ್ಥಾಪನಾಚಾರ್ಯ ಭಗವತ್ಪಾದ ಶ್ರೀ ರಾಮಾನುಜಾಚಾರ್ಯರು, ತಮ್ಮ ಘನ ತತ್ವವನ್ನು ಪ್ರತಿಪಾದಿಸುತ್ತಾ ಜೀವಾತ್ಮ ಪರಮಾತ್ಮರುಗಳ ಸಮರಸ ಅಥವಾ ಪೂರ್ಣಐಕ್ಯ ಎಂಬ ಸ್ಥಿತಿಯನ್ನು ವೊಪ್ಪದಿದ್ದರೂ ; ಮಧ್ವಾಚಾರ್ಯರ ಕೇವಲ ದ್ವೈತವೆಂಬ ಸಿದ್ಧಾಂತದ ನಿಲುವನ್ನು ದಾಟಿ ಮುಂದೆ ಸಗಿದು, ಜೀವಾತ್ಮನು ದಾಸ ಭಾವದಲ್ಲೇ ನಿಂತು ಕೊನೆಗಾಣದೆ, ಭಗವಂತನ ಕೃಪೆಯಿಂದ ಪ್ರಪತ್ತಿ ಮಾರ್ಗವನ್ನು ಹಿಡಿದು ಭಕ್ತಿ ಭಾವದಿಂದ ಶರಣಾಗತನಾಗಿ ಭಜಿಸಿದರೆ, ದೇವನ ಒಲುಮೆ ಸುಲಭವೂ ಶೀಘ್ರವೂ ಆಗುವುದೆಂದು ಎತ್ತಿ ಹೇಳಿರುವರು. ಅದ್ವೈತಾಚಾರ್ಯರಂತಲ್ಲದೆ ಶ್ರೀ ಮನ್ಮಧ್ವ ಹಾಗೂ ಶ್ರೀ ರಾಮಾನುಜಾಚಾರ್ಯರುಗಳು ಜಗತ್ ಸತ್ಯವೆಂದೂ ಪರಮಾತ್ಮನ ಸತ್‌ಸಂಕಲ್ಪದಿಂದ ಅವನ ವಿನೋದಕ್ಕಾಗಿ ನಿರ್ಮಿತವಾದುದೆಂದೂ ನಿಗಮಾಗಮಗಳ ಪ್ರಮಾಣಾನುಸಾರ ನಿರ್ಣಯಿಸಿರುವರು. ಜಗತ್ ಸತ್ಯವೆಂಬ ನಿಲುವು ದ್ವೈತ ವಿಶಿಷ್ಟಾದ್ವೈತ ಮತಸ್ಥಾಪನಾಚಾರ್ಯರ ಮಧ್ಯೆ ಒಮ್ಮತದಿಂದ ಶಾಸ್ತ್ರಾಧಾರಗಳ ನಿರ್ಧಾರದ ಮೇಲೆ ಏಕೀಭವಿಸಿ ಪ್ರಕಾಶಿತವಾಗಿರುವ ಅಂಶ ಗಮನಾರ್ಹ. ವಿಶಿಷ್ಟಾದ್ವೈತದಲ್ಲಿ ಮುಕ್ತನು "ಸಾಲೋಕ್ಯ ಸಾಮೀಪ್ಯ" ಎಂಬ ಮುಕ್ತಿ ಮಂದಿರದ ದಿವ್ಯ ಸೋಪಾನಗಳನ್ನು ಹತ್ತಿ ಮೇಲೆ ಹೋಗಿ, ಅಲ್ಲಿಂದ ಉರ್ಧ್ವಗತಿಯಲ್ಲಿ ವಿರಾಜಿಸುವ "ಸಾರೂಪ್ಯ" ವೆಂಬ ನಿರತಿಶಯಾನಂದವನ್ನು ಹೊಂದುವನು. ಈ ಮುಕ್ತ ಸ್ಥಾನದಲ್ಲಿ ಮುಕ್ತರೆಲ್ಲರೂ ಮುಕುಂದನ ಕೃಪಾವಿಶೇಷದಿಂದ ಹಾರ ಕೇಯೂರಾದಿ ವಿಭೂಷಿತರೂ ಸುಂದರ ಸ್ವರೂಪರೂ, ಚತುರ್ಭುಜರೂ ಕಟಕ ಕುಂಡಲ ಧಾರಿಗಳೂ ನಿತ್ಯಸೂರ್ಯರಂತೆ ವಿರಾಜಿತರಾಗಿ ಪರಮಾತ್ಮನ ದಿವ್ಯ ಮಂಗಳಸ್ವರೂಪದಲ್ಲಿ ಅಂಟಿಕೊಂಡು ನಿರತಿಶಯಾನಂದಭರಿತರಾಗಿರುವರು. ಈ ಸ್ಥಿತಿಯಲ್ಲಿ ಐಕ್ಯವೆಂಬುದಿಲ್ಲದೆ ಪೃಥಕ್ ವ್ಯಕ್ತಿತ್ವವನ್ನು ಮುಕ್ತರಾದ ಜೀವಾತ್ಮರುಗಳು ಉಳಿಸಿಕೊಂಡು ಪ್ರಕಾಶಿತರಾಗಿರುವರೆಂದೇ ಶ್ರೀ ರಾಮಾನುಜಾಚಾರ್ಯರ ಅಭಿಮತ. ಅದು ಹೇಗೆ ಸಾಧ್ಯವೆಂಬುದಕ್ಕೆ ಈ ಕೆಳಗಿನ ಉದಾಹರಣೆ

ಗಳಿಂದ ಮನ ಮುಟ್ಟುವಂತೆ ಕಾಣಬಹುದು. ಸತಿಪತಿಗಳು ಹಾಗೂ ತಾಯಿ ಮಕ್ಕಳು ಅಪ್ಪಿಕೊಂಡಿರುವಂತೆ, ಜಗತ್ಪತಿ ಜಗತ್ಪಿತನಾದ ಜಗದೀಶ್ವರನನ್ನು ಮುಕ್ತ ಜೀವಾತ್ಮರುಗಳು ಅಪ್ಪಿ ನಿರಂತರ ಅವಲಂಭಿಸಿರುವರು. ವಿಶಿಷ್ಟಾದ್ವೈತದ ಮೋಕ್ಷ ಸ್ಥಿತಿಯನ್ನು ಇನ್ನೂ ಸ್ಪಷ್ಟಗೊಳಿಸಬೇಕಾದರೆ, ದಾಳಿಂಬರೆಹಣ್ಣು ಹಲಸಿನಹಣ್ಣು ಸೀತಾಫಲ ಮತ್ತು ಬೇಲದಹಣ್ಣು, ಇತ್ಯಾದಿಗಳು ಒಂದೊಂದು ಹಣ್ಣೆಂದು ಪರಿಗಣಿಸಿದರೂ ಆ ಹಣ್ಣುಗಳೊಳಗೆ ಅನೇಕ ಮಧುರವಾದ ಹಣ್ಣಿನ ಬೀಜಗಳೂ, ತೊಳೆಗಳೂ ಪೃಥಕ್ ಭಾವದಿಂದ ವಿರಾಜಿಸುವಂತೆ ಸತ್ ಚಿತ್ ಆನಂದ ಫಲ ಸ್ವರೂಪಿಯಾದ ॥ಸತ್ಫಲಂ ಚಿತ್ ಸ್ವರೂಪಂ॥ ಶಿವನೆಂಬ ಅಥವಾ ಶ್ರೀಮನ್ ನಾರಾಯಣನೆಂಬ ದಿವ್ಯ ಹಣ್ಣಿನಲ್ಲಿ ಹಲಸಿನ ಹಣ್ಣಿನೊಳಗಣ ಮಧುರ ತೊಳೆಗಳಂತೆ ಮುಕ್ತರು ಅಂಟಿರುವರೆಂಬುದೇ ವಿಶಿಷ್ಟಾದ್ವೈತದಲ್ಲಿನ ಸಾರೂಪ್ಯ ಮುಕ್ತಿ. ಹಣ್ಣೊಂದರೊಳಗಿನ ನೂರಾರು ತೊಳೆಗಳು ತಂತಮ್ಮ ವ್ಯಕ್ತಿತ್ವಗಳನ್ನುಳಿಸಿಕೊಂಡು ಇರುವಂತೆ ಹಾಗೂ ಆಕಾಶ ಮಂಡಲದಲ್ಲಿ ಸೂರ್ಯ ನಾರಾಯಣನ ಪ್ರಕಾಶದ ವ್ಯಾಪ್ತಿಯಲ್ಲೂ ಸಣ್ಣ ಪುಟ್ಟ ಲಕ್ಷಾಂತರ ನಕ್ಷತ್ರ ಗಳು ಸ್ವಯಂ ವ್ಯಕ್ತಿತ್ವಗಳನ್ನುಳಿಸಿಕ್ಕೊಂಡು ದಿನಮಣಿಯ ಪ್ರಭೆಯಲ್ಲಿ ಅಡ ಗಿರುವಂತೆ ಮುಕ್ತಾವಸ್ಥೆಯಲ್ಲೂ ಜೀವಾತ್ಮರುಗಳು ಶ್ರೀಮನ್ನಾರಾಯಣನ ದೇದೀಪ್ಯವಾದ ದಿವ್ಯ ಮಂಗಳ ಸ್ವರೂಪದಲ್ಲಿ ವಿಲೀನವಾಗದೆ ಪುಥಕ್ ಭಾವ ದಿಂದ ನಿತ್ಯಸೂರ್ಯರಾಗಿ ವಿರಾಜಿತರಾಗಿರುವರೆಂಬ ಸಿದ್ಧಾಂತ ಶ್ರೀ ರಾಮಾ ನುಜರ ವಿಶಿಷ್ಟಾದ್ವೈತ ಸಿದ್ಧಾಂತ. ಶ್ರೀಮತೆ ರಾಮಾನುಜಾಯ ನಮಃ ಹನ್ನೊಂದನೇ ಶತಮಾನದ ಆದಿಯಲ್ಲಿದ್ದ ಶ್ರೀಕಂಠ ಭಾಷ್ಯಕರ್ತರಾದ ಶ್ರೀಕಂಠಾಚಾರ್ಯರೂ ನಂತರ ಇವರನ್ನನುಸರಿಸಿದ ಶ್ರೀ ಅಪ್ಪಯ್ಯದೀಕ್ಷಿತರೂ, ಶೈವಪರವಾದ ವಿಶಿಷ್ಟಾದ್ವೈತಿಗಳೇ ಆಗಿರುವರು.

ಇನ್ನು ಶೈವ ಸಿದ್ಧಾಂತ ಮತಸ್ಥಾಪನಾಚಾರ್ಯರುಗಳಾದ, ದಕ್ಷಿಣ ಭಾರತದ ಚತುರಾಚಾರ್ಯರುಗಳೆಂಬ ಶ್ರೀ ಅಪ್ಪರ್, ಶ್ರೀ ಸುಂದರರ್, ಶ್ರೀ ತಿರುಜ್ಞಾನಸಂಬಂದರ್ ಮತ್ತು ಶ್ರೀ ಮಾಣಿಕ್ಯವಾಚಗರ್ ಎಂಬ

ವಿಖ್ಯಾತರಾದ ನಾಲ್ಕು ಶೈವಸಮಯಾಚಾರ್ಯರುಗಳೂ ಮತ್ತು ೬೩ ನಾಯಿನ್ ಮಾರ್‌ಗಳೂ (ಶೈವ ಪುರಾತನರೂ) ಕೇವಲ ದ್ವೈತಗಳೇ ಇರುವರು. ಐಕ್ಯ ಸಿದ್ಧಾಂತವನ್ನು ಇವರು ಅಂಗೀಕರಿಸರು. ಆಂಡವನ್-ಅಡಿಮೈ (ದೇವರು-ದಾಸ ಭಾವ) ಎಂಬ ದ್ವೈತಸಿದ್ಧಾಂತ ಇವರದು. "ಎಂಡ್ರುನೀ ಅಂಡ್ರುನಾನ್ ಉನ್ನಡಿ ಮೆಯಲ್ಲವ್ರೋ". ಓ ದೇವ ! ಎಂದಿನಿಂದ ನೀನಿರುವೆಯೋ ಅಂದಿನಿಂದಲೂ ನಾನು ನಿನ್ನ ದಾಸ ಎಂಬ ದ್ವೈತಸಿದ್ಧಾಂತ ಶೈವ ಸಿದ್ಧಾಂತ. ಶ್ರೀಮತೆ ಚತುರಾಚಾರ್ಯಾಯ ನಮಃ.

ದ್ವೈತ, ಶೈವಸಿದ್ಧಾಂತ, ಅದ್ವೈತ, ವಿಶಿಷ್ಟಾದ್ವೈತಗಳಂತೆ ಶಿವಾದ್ವೈತವೂ ಪ್ರಥಮ ಸ್ಥಾನವನ್ನು ಗಳಿಸಿ ನಿಗಮಾಗಮಗಳಲ್ಲಿ ಪ್ರೋಕ್ತವಾದ ಸನಾತನ ಮತವೇ ಆಗಿದ್ದರೂ, ಮೇಲುದಹರಿಸಿದ ನಾಲ್ಕು ಮತಗಳಿಗಿಂತಲೂ ಶಿವಾದ್ವೈತವು ಬಹು ಪ್ರಾಚೀನವಾಗಿದ್ದು ಮಿಕ್ಕುಳಿದವುಗಳಿಗೆ ಮಾತೃ ಸ್ಥಾನದಂತೆ ಕಂಗೊಳಿಸುತ್ತಲಿರುವುದು. ಶಿವಾದ್ವೈತ ತತ್ವವು ಎಲ್ಲಾ ಆಧ್ಯಾತ್ಮಿಕ ತತ್ವಗಳಿಗಿಂತಲೂ "ತತ್ವಾನಾಂ ಮಹದಾದೀನಾಂ" ಎಂಬಂತೆ ಅತ್ಯಂತ ಪುರಾತನವಾದುದಾಗಿ ಪರಿಶೋಭಿತವಾಗಿರುವುದು.

॥ ಶೈವಾಗಮೇಷು ಸರ್ವೇಷು । ಪುರಾಣೇಷ್ವ ಖಿಲೇಷುಚ ।
ಪುರಾದೇವೇನ ಕಥಿತಂ । ದೇವ್ಯೈ ತನ್ನಂದನಾಯಚ ॥

ತತ್ಸಂ ಪ್ರದಾಯಸಿದ್ಧೇನ । ರೇಣುಕೇನ ಮಹಾತ್ಮನಾ ।
ಗಣೇಶ್ವರೇಣ ಕಥಿತ । ಮಗಸ್ತ್ಯಾಯ ಪುನಃಕ್ಷಿತೌ ॥ (ಸಿ.ಶಿ.)

ಷಟ್ಸ್ಥಲ ಧರ್ಮ ಪ್ರತಿಪಾದಕವಾದ ಶಿವಾದ್ವೈತ ತತ್ವವನ್ನು ಅಖಿಲ ಶಿವಾಗಮಗಳಲ್ಲಿ ಪ್ರೋಕ್ತವಾದಂತೆ ಮೊಟ್ಟಮೊದಲು ಪರಮೇಶ್ವರನು ತನ್ನ ಅರ್ಧಾಂಗಿಯಾದ ಪಾರ್ವತಿಗೂ ತದನಂತರ ಜ್ಞಾನಪಂಡಿತ ಸ್ವಾಮಿಯಾದ ತನ್ನ ಮಗ ಷಣ್ಮುಖನಿಗೂ ಬೋಧಿಸಿದುದಾಗಿ ಪ್ರತೀತಿಯಿದೆ. ಆ ಸನಾತನ

ವಾದ ಆಧ್ಯಾತ್ಮಿಕ ದಿವ್ಯ ಸಂಪ್ರದಾಯವನ್ನನುಸರಿಸಿಯೇ ಭುವಿಯಲ್ಲಿ ಭುವನಾಚಾರ್ಯ ಸಾರ್ವಭೌಮ ಜಗದ್ಗುರು ಶ್ರೀ ರೇಣುಕರು ಕುಂಭ ಸಂಭವನಾದ ಆದಿ ಶ್ರೀ ಅಗಸ್ತ್ಯಮಹರ್ಷಿಗೆ ಪುನಃ ಲೋಕಕಲ್ಯಾಣಾರ್ಥ ಪ್ರತಿಪಾದಿಸಿರುವರು ಈ ಅಂಶವನ್ನು ಈಗ್ಗೆ ಸುಮಾರು ಎರಡು ಸಾವಿರವರ್ಷಗಳಿಗಿಂತಲೂ ಪೂರ್ವದಲ್ಲಿದ್ದ, ಆಚಾರ್ಯಕುಲಸಂಜಾತರೂ ಸಿದ್ಧಾಂತ ಶಿಖಾಮಣಿ ನಾಮ ಉದ್ಗ್ರಂಥಕರ್ತರೂ ಆದ ಶ್ರೀ ಶಿವಯೋಗಿ ಶಿವಾಚಾರ್ಯರು ಮುಕ್ತ ಕಂಠದಿಂದ ಉಲ್ಲೇಖಿಸಿರುವ ವಿಷಯ ಸನಾತನ ಪಂಡಿತಪ್ರಪಂಚಕ್ಕೆ ವೇದ್ಯವೇ ಇರುತ್ತೆ. ಅಸ್ತು. ಶಿವಾದ್ವೈತವು ವೀರಶೈವ ಧರ್ಮದ ನಿಜ ತತ್ವವನ್ನು ಪ್ರಕಾಶಗೊಳಿಸುವ ಮತ. ದ್ವೈತ ವಾದಿಗಳು ಈ ಮತವನ್ನು ಅಂಗೀಕರಿಸದಿರಲು ಕಾರಣವೇನೆಂದರೆ ಶಿವಾದ್ವೈತವು ಐಕ್ಯದಲ್ಲಿ ಪರಿಪೂರ್ಣತೆಯನ್ನು ಹೊಂದುವುದೇ ಆಗಿರುತ್ತೆ. ಜೀವಬ್ರಹ್ಮೈಕ್ಯವೋ ಲಿಂಗಾಂಗಸಾಮರಸ್ಯವೋ ದ್ವೈತಿಗಳಿಗೆ ದೂರವಾದ ವಿಷಯ. ಅವರ ಸಿದ್ಧಾಂತಕ್ಕೆ "ಐಕ್ಯ" ಅನ್ವಯಿಸುವುದಿಲ್ಲ. ಎರಡನೆಯದಾಗಿ ಅದ್ವೈತಿಗಳು ಶಿವಾದ್ವೈತಕ್ಕೆ ಭಿನ್ನ ಪಟ್ಟಂತೆ ಇರಲು ಕಾರಣವೇನೆಂದರೆ—ಶಿವಾದ್ವೈತ ಪ್ರಾರಂಭದೆಶೆಯಲ್ಲಿ ದ್ವೈತ ಭಾವದಿಂದ ಅಂಕುರಿಸಿ, ಪಲ್ಲವಿಸಿ, ಶುಕ್ಲಪಕ್ಷದ ಚಂದ್ರನಂತೆ ಮನೋಹರವಾಗಿ ವೃದ್ಧಿಗೊಂಡು ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗಗಳ ಅರ್ಚನೆ ಆರಾಧನೆ ಧ್ಯಾನಾದಿಗಳ ಮೂಲಕ, ಸ್ಥೂಲ ಸೂಕ್ಷ್ಮ ಕಾರಣಗಳೆಂಬ ದೇಹತ್ರಯಂಗಳ ಇಂಗಿಸಿ, ತನುಕರಣಗಳನ್ನು ಶಿವಾನುಗ್ರಹದಿಂದ ಶಿವಕರಣಗಳಾಗಿಸಿ ಶಿವನಲ್ಲಿ ವಿಲೀನನಾಗಿ ಶಿವಸಾಯುಜ್ಯವನ್ನು ಹೊಂದುವುವೇ ಆಗಿರುತ್ತೆ. ಅದ್ವೈತ ಸಿದ್ಧಾಂತಕ್ಕೆ ದ್ವೈತದ ಅಂಕುರಾಯಮಾಣವಿಲ್ಲವಾದ್ದರಿಂದ, ದ್ವೈತವನ್ನು ಯಾವ ಸ್ಥಿತಿಯಲ್ಲೂ ಯಂಥಾ ಕಾರಣದಿಂದಲೂ ಅದ್ವೈತಿಗಳು ಮನ್ನಿಸುವುದಿಲ್ಲ. ಜಗನ್ಮಿಥ್ಯೆ ಎಂಬ ಅರಿವು ಅದ್ವೈತಿಗಳ ತಿರುಳು. ಶಿವಾದ್ವೈತವು ಜಗನ್ಮಿಥ್ಯಾವಾದವನ್ನು ಸನಾತನವಾದ ಶಾಸ್ತ್ರೋಕ್ತ ಪ್ರಮಾಣಗಳಿಂದ ಪ್ರತಿಭಟಿಸಿ, ಖಂಡಿಸಿ, "ಜೀವಸತ್ಯಂ ಜಗತ್ಸತ್ಯಂ ಜಗದೀಶ್ವರಸತ್ಯಂ" ಎಂಬ ಮಹೋನ್ನತವಾದ ನಿಜ ತತ್ವವನ್ನು ಶಿವಾಗಮಗಳ

ಹೃದಯದಿಂದ ಹೊರಗೆಡಹಿರುವುದರಲ್ಲಿ, ಅದ್ವಿತೀಯ ಸ್ಥಾನವನ್ನು ಹೊಂದಿ ಬೆಳಗುತ್ತಲಿರುವುದರಿಂದ ಅದ್ವೈತಿಗಳಿಗೆ ಪರಮ ಸನಾತನವಾದ ಪರಿಣಾಮ ವಾದದಿಂದ ಬೆಳಗುವ ಶಿವಾದ್ವೈತ ವಿರಸವಾಗಿರುವುದು.

ಪರಮ ಸನಾತನವಾದೀ ವೀರಶೈವ ಧರ್ಮವು ಜಗದಾದಿಯಿಂದ ಪ್ರಕಾಶಿತ ವಾಗಿದ್ದು ಭಕ್ತನು ಪ್ರಾರಂಭದೆಶೆಯಲ್ಲಿ—ಪೂಜ್ಯಪೂಜಕ ಭಾವಲೀಲಾತ್ಮಕ ದ್ವೈತ ಭಕ್ತಿಭಾವದಿಂದ ಕೂಡಿ, ಈ ದ್ವೈತ ಭಾವವು ಭಕ್ತಿ ಪ್ರಭಾವದಿಂದ ಖೇಂದ್ರೀಕೃತಗೊಂಡು ಸತ್ಫಲನೀಯಲು ಹೈತುಕವಾಗಿರುವ, ಇಷ್ಟಲಿಂಗ ಧಾರಣ, ಶಿವಪೂಜಾನು ಸಂಧಾನಾದಿ ನಿತ್ಯನೈಮಿತ್ತಿಕ ಸತ್ಕರ್ಮದಿಂದ ಆರಂಭ ವಾಗುವುದೆಂಬ ಅಂಶ ಅತ್ಯಂತ ಗಮನಾರ್ಹ-ವೇ ಆಗಿರುವುದು.

ಶಿವಾರಾಧನಾತ್ಮಕವಾದ ಇಷ್ಟಲಿಂಗಾರ್ಚನ ಜ್ಞಾನ ಮಹಾಯಜ್ಞವನ್ನು ಲಿಂಗಧಾರಿಯು ಅನುದಿನ, ದ್ವಿಸಂಧ್ಯಾಕಾಲಗಳಲ್ಲಿ ಗಂಗಾಸಾಗರ ಸಂಗಮ ಭಕ್ತಿಯಂತೆ ದೃಢಸಂಕಲ್ಪದಿಂದ ಅವಿಚ್ಛಿನ್ನವಾಗಿ ಮುಂದುವರಿಸಿಕೊಂಡುಬಂದರೆ, ಆ ಶಿವಯೋಗದ ಪ್ರಭಾವದಿಂದ ಜ್ಞಾನ ಕರ್ಮಗಳ ಸಮನ್ವಯ ಸಂಗಮ ಯೋಗವು "ಯೋಗಃ ಕರ್ಮಸು ಕೌಶಲಂ" ಎಂಬ ಗೀತೋಕ್ತಿಯಂತೆ ಸಿದ್ಧಿಸಿ, ಕೀಟಭ್ರಮರನ್ಯಾಯಾನುಸಾರೇಣ ಜೀವನು ಶಿವಮಯನಾಗಿ ಸಮರಸ ಭಾವ ದಿಂದ (ಜೀವ ಬ್ರಹ್ಮೈಕ್ಯ) ಅಥವಾ ಲಿಂಗಾಂಗ ಸಾಮರಸ್ಯವೆಂಬ ಐಕ್ಯಸ್ಥಿತಿ ಯಲ್ಲಿ ವಿಲೀನವಾಗುವನು. ಇದನ್ನೇ "ತತ್ವಮಸಿ" ಮಹಾವಾಕ್ಯದ ತಾದಾತ್ಮ್ಯ ಭಾವ ಮುಕ್ತಿ ಎಂದು ಪರಿಗಣಿಸಲ್ಪಟ್ಟಿರುವುದು. "ತದೇವಾಹಂ" ಎಂಬ ಅನು ಸಂಧಾನವೇ ಶಿವಾದ್ವೈತದ ತಿರುಳು. ಈ ಉಚ್ಚ್ರಾಯ ಸ್ಥಿತಿಯಲ್ಲಿ "ಜ್ಞಾತೇ ದ್ವೈತಂನವಿದ್ಯತೆ" ಅಂದರೆ ವಿಚಾರಮಾಡಿ ನೋಡಿದರೆ ಆತ್ಯಂತಿಕ ಎರಡೆಂಬುದು ಇಲ್ಲವೇ ಇಲ್ಲ. ಆದ್ದರಿಂದ ಪರಿಪಕ್ವಾಂತಃಕರಣನಾದ ಶಿವಶರಣಂಗೆ— ॥ ತದೇವಾಹಂ ತದೇವಾಹಂ । ಬಹ್ಮೈವಾಹಂ ಸನಾತನಂ ॥ ಎಂಬುದೇ ಹೃದಯಾಂತರಾಳದ ಸಾರಸರ್ವಸ್ವ "ಬ್ರಹ್ಮೈವಾಹಂ" ಎಂಬ ಶಬ್ಧಕ್ಕೆ ಶಿವಾ

ದ್ವೈತಪರವಾಗಿ ॥ ಲಿಂಗಂ ಚಿದಾತ್ಮಕಂಬ್ರಹ್ಮ ॥ ಎಂದು ನಿರ್ದೇಶಿಸಿರುವುದರಿಂದ ಪೂಜ್ಯ ಇಷ್ಟ ಭಾವ ಲಿಂಗಾತ್ಮವಾದ ಮಹಾಲಿಂಗ ಅಥವಾ ಆತ್ಮಲಿಂಗವೆಂದೇ ಸ್ಪಷ್ಟಾರ್ಥ. "ತದೇವಾಹಂ" ಎಂಬ ಮಹಾ ವಾಕ್ಯವನ್ನು ವಿಸ್ತರಿಸಿ ಶಕ್ತಿ ವಿಶಿಷ್ಟಾದ್ವೈತ ತತ್ವವನ್ನು ಅಳವಡಿಸಿಕೊಂಡ ರೀತಿಯಲ್ಲಿ ॥ ಅಹಂ ಪರಶಿವ ವಿಮರ್ಶಾಭಿನ್ನೋಽಸ್ಮಿ ॥ ಎಂದೂ ಸ್ಫುಟಪಡಿಸಿರುವರು ಆಧ್ಯಾತ್ಮಿಕ ಮೂಲ ತತ್ವಕ್ಕೆ ಮಸ್ತಕಮಣಿಯಂತಿಸೆವ ಮೇಲ್ಕಂಡ ಮಹಾ ವಾಕ್ಯಾನುಸಂಧಾನ ವನ್ನು ಶಿವಶರಣನು ಸದಾ ಉಚ್ಚರಿಸಿ ಅನುಸಂಧಾನ ಮಾಡುತ್ತಾ ಬಂದರೆ ॥ ದುರಿತಾಂಕುರದ ಬೇರಿಗೆ ಬೇಗೆ ಎಂದನಾ ಮುನಿಪ ॥ ಅಂದಂತೆ ಸಕಲಭವ ಪಾಶಗಳು ನಶಿಸಿ ಗುರುಕಾರುಣ್ಯದಿಂದ ಜೀವಾತ್ಮನು (ಅಂಗನು) ಮುಕ್ತ ನಾಗುವನು. "ಮುಕ್ತಃ ಶಿವಸಮೋಭವೇತ್" ಎಂಬುದು ಶಿವಾದ್ವೈತ ಸಿದ್ಧಾಂತದ ತಿರುಳು. ಆದಕಾರಣ ವೀರಶೈವಮತ ಸನಾತನವಾದ ಭೇದಾ ಭೇದ ಮತವೆಂದು ಪರಿಗಣಿಸಲ್ಪಟ್ಟಿರುತ್ತೆ. ದ್ವೈತ, ಅದ್ವೈತ, ಭೇದ ಅಭೇದ ವೆಂಬ ಮತಗಳೆಲ್ಲಾ ಶಿವದ್ವೈತ ಸಿದ್ಧಾಂತಕ್ಕೆ ಇತ್ತೀಚಿನವುಗಳಾಗಿ ಅವಿನಾ ಭಾವ ಸಂಬಂಧದಿಂದ ಶಿವಾದ್ವೈತದಲ್ಲಿ "ಮಯೂರಾಂಡರಸ ನ್ಯಾಯದಂತೆ" ಅಂತರ್ಗತವಾಗಿ ಒಂದೊಂದು ಭಾಗಗಳಂತೆ ಇರುವುದಾಗಿ ಪರಿಗಣಿಸಲ್ಪಟ್ಟು ಶಿವಂಗಾರಾನ್ವಿತದಿಂದ ಪರಿಶೋಭಿಸುತ್ತಲಿರುವುವು.

ಶಿವಲಿಂಗೋದ್ಭವ ದಿವ್ಯ ದೇಹಧಾರಿಗಳಾದ ಶ್ರೀಮಜ್ಜಗದ್ಗುರು ರೇಣು ಕಾದಿ ಪಂಚಾಚಾರ್ಯರುಗಳು ಶಿವನಾಣತಿಯಂತೆ ಪ್ರತಿಯುಗಾರಂಭಗಳಲ್ಲೂ ಭುವಿಯಲ್ಲಿ ಅವತರಿಸಿ, ಶಿವಾದ್ವೈತ ಸಿದ್ಧಾಂತವನ್ನು ವೈಲಕ್ಷಣ್ಯವಾಗಿ ಪ್ರತಿ ಪಾದಿಸುತ್ತಲಿರುವುದು ಸರ್ವವಿದಿತವೇ ಇರುವುದು. ಶಿವಾದ್ವೈತವು ಶಿವನ ಮುಖಕಮಲದಿಂದ ಹೊರಹೊಮ್ಮಿ ಇಪ್ಪತ್ತೆಂಟು ಶಿವಾಗಮಗಳಲ್ಲಿ ಪ್ರತಿ ಪಾದಿತವಾದಂತೆ ಪ್ರಜ್ವಲಿಸಿ ಅಖಿಲ ಸಿದ್ಧಾಂತಗಳಿಗೆ ಶಿಖಾಮಣಿ ಪ್ರಾಯವಾಗಿ ರುವುದು. ಶ್ರೀಮತೆ ಜಗದ್ಗುರು ಶ್ರೀ ರೇಣುಕಾದಿ ಪಂಚಾಚಾರ್ಯಾಯನಮಃ.

ಕ್ರಿ. ಶ. ಎಂಟನೇ ಶತಮಾನದಲ್ಲಿ ಪ್ರಸಿದ್ಧರಾದ ಹಾಗೂ ಪ್ರಸ್ಥಾನತ್ರಯಂಗಳಿಗೆ ವೀರಶೈವದರ್ಶನಪರ ಭಾಷ್ಯಕರ್ತರಾದ ಶ್ರೀ ನೀಲಕಂಠಶಿವಾಚಾರ್ಯರು ನೀಲಕಂಠ ಭಾಷ್ಯವನ್ನು ಶ್ರೀಮಜ್ಜಗದ್ಗುರು ರೇಣುಕಾದಿ ಪಂಚಾಚಾರ್ಯರುಗಳು ವಿರಚಿಸಿದ ಗಂಭೀರವಾದ ಪ್ರಸ್ಥಾನತ್ರಯಭಾಷ್ಯಂಗಳ ಪರಮಾಧಾರದಮೇಲೆ, ಭೇದಾಭೇದ ಮತಸಿದ್ಧಾಂತವನ್ನು ಸ್ವಚ್ಛಂದವಾಗಿ ನಿರೂಪಿಸಿರುವರು. ಕ್ರಿ.ಶ. ಒಂಭತ್ತನೇ ಶತಮಾನದಲ್ಲಿದ್ದ ಭಾಷ್ಯಕರ್ತರಾದ ಭಟ್ಟಭಾಸ್ಕರರೂ ಭೇದಾಭೇದವನ್ನು ಒಪ್ಪಿ ಆ ಸಿದ್ಧಾಂತಕ್ಕೆ ಅನ್ವಯಿಸಿದವರಾಗಿದ್ದರೂ, ವೀರಶೈವಸಿದ್ಧಾಂತದಲ್ಲಿ ಅಳವಡಿಸಿಕ್ಕೊಂಡಿರುವ ಭೇದಾಭೇದ ಸಿದ್ಧಾಂತ ಅತ್ಯಂತ ಭಿನ್ನವಾಗಿದ್ದು ಭಟ್ಟ ಭಾಸ್ಕರರ ಭೇದಾ ಭೇದಕ್ಕೆ ವಿಲಕ್ಷಣವಾಗಿರುವುದು ಎಂಬ ಅಂಶ ಗಮನಾರ್ಹ. ಶ್ರುತಿಯಲ್ಲಿ ಹೇಳಿರುವಂತೆ ಜೀವ-ಬ್ರಹ್ಮರಿಗೂ, ಜಗತ್-ಬ್ರಹ್ಮರಿಗೂ ಭೇದ ಮತ್ತು ಅಭೇದ ಎರಡನ್ನೂ ಒಪ್ಪಿದರೂ, ಜಗತ್-ಬ್ರಹ್ಮಗಳಿಗೆ ಭೇದ ಮತ್ತು ಅಭೇದ ಎರಡೂ ಸ್ವಾಭಾವಿಕ ಎಂದು ಹೇಳಿ, ಭಟ್ಟ ಭಾಸ್ಕರರು ಜೀವಬ್ರಹ್ರಹ್ಮರಿಗೆ ಮುಕ್ತಿಯಲ್ಲಿಮಾತ್ರ ಅಭೇದವನ್ನು ಸ್ವಾಭಾವಿಕವೆಂದೂ ಸಂಸಾರದ ದೆಶೆಯಲ್ಲಿ ಭೇದವನ್ನು ಔಪಾದಿಕವೆಂದು ಹೇಳಿದ್ದಾರೆ. ಜೀವನು ಬ್ರಹ್ಮಾಂಶನೇ ಆದರೂ ದೇಹದ ಉಪಾಧಿಯಿಂದಾಗಿ ಬ್ರಹ್ಮದಿಂದ ಭಿನ್ನನಾಗಿದ್ದು ಉಪಾಸನೆಯಿಂದ ಶಿವಾನುಗ್ರಹದಿಂದ ಮುಕ್ತಿಯಲ್ಲಿ ಬ್ರಹ್ಮದೊಂದಿಗೆ ತನ್ನ ಸಹಜಾನಂದವನ್ನು ಅನುಭವಿಸುವನೆಂದು ಭಟ್ಟಭಾಸ್ಕರರ ಅಭಿಮತ. ಈ ದೇಹಾದಿ ಪ್ರಪಂಚಗಳು ಭಟ್ಟಭಾಸ್ಕರರ ದೃಷ್ಟಿಯಲ್ಲಿ ಉಪಾಧಿ ಎನಿಸಿದರೂ. ಶ್ರೀ ಶಂಕರಾಚಾರ್ಯರ ಮಿಥ್ಯಾವಾದಕ್ಕೆ ಕಿಂಚಿತ್ತೂ ಸಂಬಂದಿಸಿಲ್ಲ. "ಅವ್ಯಕ್ತಾದೀನಿಭೂತಾನಿ। ವ್ಯಕ್ತಮಧ್ಯಾನಿಭಾರತ" ಎಂಬ ಗೀತಾಚಾರ್ಯನ ನುಡಿಯಂತೆ, ಸೃಷ್ಟಿಗೆ ಮೊದಲು ಪರಬ್ರಹ್ಮದಲ್ಲಿ ಅವ್ಯಕ್ತವಾಗಿ ಕೊನೆಯಲ್ಲಿ ಹಿಂದಿನ ಅವ್ಯಕ್ತ ಸ್ಥಿತಿಯಲ್ಲಿ, ಆಮೆಯು ಬೇಕೆಂದಾಗ ತನ್ನ ಕೈಕಾಲು ಮೊದಲಾದ ಅವಯುವಗಳನ್ನು ಹೊರಗೆ ಚಾಚಿ ಕ್ರೀಡಿಸಿ ಬೇಡವಾದಾಗ ತನ್ನ ಅವಯುವಗಳನ್ನು ಒಳಗಡೆ ಎಳೆದುಕೊಳ್ಳುವಂತೆ, "ಇಚ್ಛಾಮಾತ್ರ

ಪ್ರಭೋಸ್ಸೃಷ್ಟಿ" ಎಂಬಂತೆ ಪರಮಾತ್ಮನು ಸಮಗ್ರ ಶಕ್ತಿ ವಿಶಿಷ್ಟನಾಗಿ ಪ್ರಕಾಶಿತನಾಗಿರವ ಅಂಶ ಕಂಡುಬರುತ್ತೆ. ಭಾಸ್ಕರ ಭಾಷ್ಯವು ಜೀವಬ್ರಹ್ಮರಿಗೆ ಭೇದವನ್ನು ಔಪಾದಿಕವೆಂದೂ ಅಭೇದವನ್ನು ಸ್ವಾಭಾವಿಕವೆಂದೂ ಬೋಧಿಸುವುದು. ಭೇದಾಭೇದ ಸಮನ್ವಯ ಸಿದ್ಧಾಂತವೇ ವೀರಶೈವ. ಶಿವಜೀವರಿಗೆ ಭೇದ ಅಭೇದ ಇವೆರಡೂ ಪಾರಮಾರ್ಥಿಕವೂ ಸ್ವಾಭಾವಿಕವೂ ಆಗಿರುವುವು ಮಾಯಾಶಕ್ತಿ ಸಂಬಂದದಿಂದ ಜೀವರಲ್ಲಿ ಪರಸ್ಪರವಾಗಿಯೂ ಮತ್ತು ಶಿವನಿಂದಲೂ ಸಹಜವಾದ ಭೇದವಿರುವುದಾದರೂ, ಶಿವನ ನಿರಂತರೋಪಾಸನೆಯಿಂದ ಆ ಭೇದವು ಕ್ರಮವಾಗಿ ಕಣ್ಮರೆಯಾಗಿ ಜೀವನು ತನ್ನ ವಾಸ್ತವವಾದ ಅಭೇದವನ್ನು ಶಿವದೀಕ್ಷಾ ಸಂಸಾರದಿಂದ ಈ ಪ್ರಸಾದಕಾಯದಲ್ಲಿಯೇ ಅನುಭವಿಸಬಲ್ಲನು. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೇನೆಂದರೆ— ಜೀವನು ಮಾಯಾಶಕ್ತಿ ವಿಶಿಷ್ಟನಾಗಿರುವನು ಶಿವನು, ಅವಿನಾಭಾವ ಸಂಬಂದದಿಂದ ಪ್ರಕಾಶಿತವಾದ ಚಿತ್‌ಶಕ್ತಿ ವಿಶಿಷ್ಟನಾಗಿ ಇರುವಲ್ಲಿ ಜೀವ ಶಿವರಿಗೆ ಭೇದವು ಸ್ವಾಭಾವಿಕವಾಗಿರುವುದು. ಶಿವನು ಚಿತ್‌ಶಕ್ತಿವಿಶಿಷ್ಟನು. ಶಕ್ತಿ ವಿಶಿಷ್ಟಜೀವರಿಗೆ ಶಿವನಲ್ಲಿ ವಾಸ್ತವವಾದ ಅಭೇದವು ಷಟ್‌ಸ್ಥಲೋಪಾಸನ ಮಾರ್ಗದಿಂದ ಪ್ರಾಪ್ತಿಯಾಗುವುದು. ಚಿತ್‌ಶಕ್ತಿ ಶಿವನಲ್ಲಿ ತದಾತ್ಮ್ಯ ಅವಿನಾಭಾವದಿಂದ ಪ್ರಾಣದಂತೆ ನೆಲಸಿರುವ ಮಹದಂಶ ಶಿವಾಗಮಗಳಲ್ಲಿ ಉಲ್ಲಿಖಿತವಾಗಿರುವುದು ಸತ್ಯವೇ ಇರುತ್ತೆ. ಜೀವನು ಮಾಯಾಶಕ್ತಿ ವಿಶಿಷ್ಟನಾಗಿರುವುದರಿಂದ ಅಜ್ಞಃ, ಕರ್ಮಿ ಮತ್ತೂ ಭೋಗಿ ಎನಿಸಿರುವನು. ಚಿತ್‌ಶಕ್ತಿ ವಿಶಿಷ್ಟನಾದ ಲಿಂಗರೂಪಿ ಶಿವನು ಸರ್ವಜ್ಞಃ, ಸಾಕ್ಷಿಬೂತ ಮತ್ತೂ ಅಲಿಪ್ತನೂ ಆಗಿರುವನು. ಹೀಗಿದ್ದರೂ ಇಬ್ಬರೂ ಸನಾತನರೇ ಆಗಿ ಚೇತನರೂ ಆಗಿರುವರು ಎಂಬ ಅಂಶ ಶ್ರೀ ವ್ಯಾಸಾಚಾರ್ಯರೂ ಸಹ ಪ್ರತಿಪಾದಿಸಿರುವರು. ಶಿವಜೀವರು ದೇಹವೆಂಬ ಗುಡಿಯ ಮೂಲ ಸ್ಥಾನವಾದ ಹೃದಯ ಮಂದಿರದಲ್ಲಿ ನೆಲಸಿರುವರೆಂದು ಶೃತಿವಾಣಿ ಸಾರುತ್ತಲಿರುವುದು. ಶ್ರೀ ಕೃಷ್ಣನು ಗೀತೆಯಲ್ಲಿ "ಮಮೈವಾಂಶೋ ಜೀವಲೋಕೇ । ಜೀವಭೂತಃ ಸನಾತನಃ" ಎಂದು ಸ್ಪಷ್ಟಪಡಿಸಿ,

ಹೃದ್ದೇಶೇ ತಿಷ್ಠತಿ ಅರ್ಜುನ" ಎಂದಿರುವನು. ಭೇದ ಅಭೇದ ಅಂದರೆ ದ್ವೈತ ಅದ್ವೈತ ಅವರವರ ಪಾರಮಾರ್ಥಿಕತೆಯನ್ನು ಜಗತ್ತಿಗೆ ತಿಳಿಸಲಿಕ್ಕಾಗಿಯೇ ಶಕ್ತಿ ವಿಶಿಷ್ಟಾದ್ವೈತ ದರ್ಶನವೆಂಬ ವೀರಶೈವ ಸಿದ್ಧಾಂತ ಜಗದಾದಿಯಿಂದಲೂ ಪ್ರಕಾಶಿತವಾಗಿರುವುದು. ಶಿವ ಜೀವರಿಬ್ಬರೂ ಶಕ್ತಿ ವಿಶಿಷ್ಟರೆಂಬ ಅಂಶ ಶೃತ್ಯಾಗಮಗಳಿಂದ ವೇದ್ಯವೇಯಿರುತ್ತೆ ಶಿವ ಜೀವರಲ್ಲಿ ಶಕ್ತಿ ಸಂಬಂದ ಭೇದವಿದ್ದರೂ,

॥ ಯಥಾ ನದ್ಯಃ ಸ್ಯಂದಮಾನಾ ಸ್ಸಮುದ್ರೇ ।
ಅಸ್ತಂ ಗಚ್ಛಂತಿ ನಾಮರೂಪೇ ವಿಹಾಯ ॥
ತಥಾ ವಿದ್ವಾನ್ ನಾಮರೂಪಾದ್ವಿಮುಕ್ತಃ ।
ಪರಾತ್ಪರಂ ಪುರುಷಮುಪೈತಿ ದಿವ್ಯಂ॥

ಎಲ್ಲಾ ನದಿಗಳೂ "ಸಿಂಧೋಃ ಸರಿದ್ವಲ್ಲಭಂ" ಎಂಬಂತೆ ಪತಿಯಾದ ಸಮುದ್ರದಲ್ಲಿ ಸಂಗಮವಾದ ನಂತರ ವ್ಯೆಯಕ್ತಿಕವಾದ ನಾನಾ ಭೇದ ನಾಮ ರೂಪಗಳನ್ನು ಕಳೆದುಕೊಂಡು ಅಭೇದವಾಗಿ ಸಮುದ್ರದಲ್ಲಿ ವಿಲೀನವಾಗುವ ತೆರದಲ್ಲಿ, ಜೀವರುಗಳು ಶಿವೋಪಾಸನ ಧಾರಣ ಧ್ಯಾನಾದಿಗಳಿಂದ ಶಿವಾನುಗ್ರಹಕ್ಕೆ ಪೂರ್ಣ ಪಾತ್ರರಾಗಿ, ದೇಹ ಪ್ರಪಂಚಾದಿ ಅಭಿಮಾನವನ್ನು ಪೂರ್ಣ ನೀಗಿ, ನಿಸ್ತ್ರೈಗುಣ್ಯ ಭಾವಾತ್ಮಕರಾಗಿ ಭೇದವ ತೊಲಗಿಸಿ ಅವಿಚ್ಛಿನ್ನವಾದ "ಶಿವೋಹಂ" ಸದ್ಭಾವನೆಯಿಂದ ಶಿವಸಮುದ್ರಲ್ಲಿ ಸಂಗಮಗೊಂಡು ಶಿವಾನಂದವನ್ನು ಅಭೇದ ಸ್ಥಿತಿಯಲ್ಲಿ ನಿರಂತರ ಅನುಭವಿಸುವರು. ಆದ್ದರಿಂದ ಶೃತಿಯ ಏಕದೇಶವನ್ನು ಮಾತ್ರ ನಿರಂತರ ಅವಲಂಭಿಸಿಕೊಂಡು ಬೆಳದಿರುವ ಎಲ್ಲಾ ಆಧ್ಯಾತ್ಮಿಕ ಮತಗಳಿಗಿಂತಲೂ, ಶೃತಿಯನ್ನು ಪರಿಪೂರ್ಣವಾಗಿ ಸಮನ್ವಯಿಸಿಕೊಂಡು ವೈದಿಕವೆನಿಸಿ ಅನಂತ ಕಾಲದಿಂದ ಸ್ವಯಂ ಪ್ರಕಾಶಿತವಾಗಿರುವ ಪರಮ ವೀರಶೈವ ಮತವನ್ನು ಉತ್ಕೃಷ್ಟವೆಂದು ಆದಿ ಜಗದ್ಗುರು ಶ್ರೀ ರೇವಣಸಿದ್ಧ ಭಗವತ್ಪಾದರು ಆದಿ ಅಗಸ್ತ್ಯಮಹರ್ಷಿಗಳಿಗೆ ರೇಣುಕ ಗೀತೆಯಲ್ಲಿ ಹೃದಯಂಗಮವಾಗಿ ಉಪದೇಶಿಸಿರುವರು.

ಶ್ರೀ ಶೃಂಗೇರಿ ಅದ್ವೈತ ಮೂಲ ಪೀಠಾಚಾರ್ಯ ಪರಂಪರೆಯಲ್ಲಿ ಅದ್ವಿತೀಯ ಪಾಂಡಿತ್ಯ ವಿಭೂಷಿತರೂ ಭಾಷ್ಯಕರ್ತ್ತರೂ, ಮಹಿಮಾ ಸಂಪನ್ನರೂ ಮತ್ತೂ ಮಹಾ ತಪಸ್ವಿಗಳೂ ಆದ ಎರಡನೇ ಶ್ರೀ ಶಂಕರಾಚಾರ್ಯರು, ಎಂಟನೆ ಶತಮಾನದಲ್ಲಿ ಪ್ರಸ್ಥಾನತ್ರಯಂಗಳಿಗೆ ವೀರಶೈವಪರ ಭಾಷ್ಯ ರಚಿಸಿದ "ನೀಲ ಕಂಠಭಾಷ್ಯ" ಕರ್ತ್ತರಾದ ಶ್ರೀ ನೀಲಕಂಠ ಶಿವಾಚಾರ್ಯರ ಸಮಕಾಲೀನರೆಂದು ಕಂಡುಬರುತ್ತೆ.

ಕ್ರಿ. ಶ. ಎಂಟನೆಯ ಶತಮಾನದಲ್ಲಿ ಶ್ರೀ ಶೃಂಗೇರಿ ಅದ್ವೈತ ಮೂಲ ಪೀಠಾರೋಹಣಗೈದಿದ್ದ ಅಂದರೆ, (ಆದಿ ಶ್ರೀ ಶಂಕರಾಚಾರ್ಯರಿಂದ ಮೊದಲುಮಾಡಿ ಆ ಜಗದ್ಗುರು ಪೀಠವನ್ನು ಗುರು ಪರಂಪರಾನುಗತವಾಗಿ ಅಲಂಕರಿಸಿಕ್ಕೊಂಡು ಬಂದ ಅನುಕ್ರಮಣಿಕೆಯಲ್ಲಿ ಮೂವತ್ತೆಂಟನೆಯವರೆನಿಸಿದ ಆಚಾರ್ಯರು) ಪ್ರತಿಭಾವಂತರೂ ಮಹಾ ತಪಸ್ವಿಗಳಾದ ಎರಡನೆ ಶ್ರೀ ಶಂಕರಾಚಾರ್ಯರನ್ನೇ ಜಗದ್ಗುರು ಆದಿ ಶ್ರೀ ಶಂಕರಾಚಾರ್ಯರೆಂದು ಭ್ರಮಿಸಿ ಜನರು ಹಾಗೂ ಆಧುನಿಕ ವಿದ್ವಾಂಸರೂ ಸಹ ಭಾವಿಸಿರುವುದಾಗಿ ಕಂಡು ಬರುತ್ತೆ. ಇದು ಸೋಜಿಗವೇ ಸರಿ. ವಿದ್ವನ್ಮಣಿಗಳೂ ಭಾಷ್ಯಕರ್ತ್ತರೂ ಆದ ಈ ಎರಡನೇ ಶ್ರೀ ಶಂಕರಾಚಾರ್ಯರನ್ನು ಅವರ ಸಮಕಾಲೀನರೂ ಭಾಷ್ಯ ಕರ್ತ್ತರೂಆದ ಶ್ರೀ ನೀಲಕಂಠಶಿವಾಚಾರ್ಯ ದೇಶಿಕೇಂದ್ರರು ಪರಸ್ಪರ ಸಂಧಿಸಿ, ಗಗನಾಂಗಣದಲ್ಲಿ ಒಮ್ಮೊಮ್ಮೆ ಸೂರ್ಯಚಂದ್ರರು ಏಕ ಕಾಲದಲ್ಲಿ ಬೆಳಗಿನ ಜಾಮದಲ್ಲಿ ಸಂದರ್ಶನನೀಯುವಂತೆ-ತೇಜೋರಾಶಿಯಿಂದ ಬೆಳಗಿ ಪ್ರಫುಲ್ಲಿತ ಭಾವದಿಂದ ವಿರಾಜಿಸಿದರು. ಈ ಉಭಯಾಚಾರ್ಯರುಗಳು ಸನಾತನ ಧರ್ಮವೆನಿಸಿದ "ಶಿವಾದ್ವೈತ" ಮತ್ತು "ಅದ್ವೈತ" ಆಧ್ಯಾತ್ಮಿಕ ಮತಗಳ ಬಹು ಪ್ರಾಚೀನತೆ ಹಾಗೂ ಅವುಗಳ ಘನ ಅಸ್ತಿತ್ವ ವಿಷಯದಲ್ಲಿ ಅತಿ ಗಂಭೀರವೂ ಸರಳವೂ ಆದ ಮಹೋನ್ನತ ಮಟ್ಟದ ವಿಚಾರ ವಿನಿಮಯಗಳನ್ನು ವಿಚಕ್ಷಣೆಯಿಂದ ಮಾಡಿ ಉಭಯ ಭಾಷ್ಯಕಾರರೂ, ಮಹತ್ಪೂರಿತವಾದ ಕೆಲವಂಶಗಳಲ್ಲಿ ಅವ್ಯಕ್ತವಾದ ಧರ್ಮವ ಹಾಗೂ ಪರಾತ್ಪರ ವಸ್ತುವನ್ನು ನಿರ್ಣಯಿಸ.ವ

ಸರಣಿಯಲ್ಲಿ ಭಿನ್ನಾಭಿಪ್ರಾಯವುಳ್ಳವರಾಗಿದ್ದರೂ, ಶಿವಾಚಾರ್ಯದ್ವಯರ ದಿವ್ಯ ಜ್ಞಾನ ವಿಜ್ಞಾನಪೂರ್ಣ ಅರ್ಥಗರ್ಭಿತ ತತ್ವ ಪ್ರತಿಪಾದನೆಗಳಿಂದ, ಆಧ್ಯಾತ್ಮಿಕ ಪ್ರಪಂಚಕ್ಕೆ ಶೃತ್ಯರ್ಥಗಳಲ್ಲಿ ಗರ್ಭೀಕೃತವಾದ ಸತ್ಯಾಂಶದ ಪ್ರಕಾಶ ಉಜ್ವಲ ಗೊಂಡು ಬೆಳಗಿ ಅದರಿಂದ ವಿಶಾಲಾರ್ಥಗಳು ಪ್ರಚಲಿತವಾಗಿ ಪ್ರಕಾಶಗೊಂಡು ಮುಮುಕ್ಷುಗಳ ಮನ ನೆನಹುಗಳಲ್ಲಿ ಪ್ರಜ್ಯೋದಿತವಾಗಿ ಬೆಳಗಿ ಅರಿತಂತಾಗಿರುವುದು ಸರಿಯಷ್ಟೆ. ಶ್ರೀಮತೆ ಶ್ರೀ ನೀಲಕಂಠ ಶ್ರೀಶಂಕರ ಉಭಯ ಶಿವಾಚಾರ್ಯೇಭ್ಯೋ ನಮಃ.

ಹನ್ನೊಂದನೇ ಶತಮಾನದ ಉತ್ತರಾರ್ಧದಲ್ಲಿದ್ದ "ಶ್ರೀಕರ ಭಾಷ್ಯ ಕರ್ತರೂ, ವಿಚಕ್ಷಣ ಸಂಪನ್ನರೂ, ನಿಗಮಾಗಮಗಳಲ್ಲಿ ಪಾರಂಗತರೂ ಮತ್ತು "ಪರಂತಪಃ" ಅಂದರೆ, ಪರವಾದಿಗಳೂ ಮತ್ತು ಕ್ಷುದ್ರವಾದಿಗಳಿಗೆ ತಪ್ತಾಯಮಾನವಾದ ಯಜ್ಞೇಶ್ವರನಂತೆ ಬೆಳಗಿ ಸುಜನರಿಗೆ ಕರುಣಾಳುಗಳಾಗಿ ಅದ್ವಿತೀಯ ಪಾಂಡಿತ್ಯ ಸಂಪನ್ನಮಹೋದಯರೂ ಆಗಿ ಸಂಯಮಿಗಳೆನಿಸಿದ್ದ ಶ್ರೀಪತಿ ಪಂಡಿತಾರಾಧ್ಯ ಮಹೋದಯರು, ಶ್ರೀ ಮದಾನಂದತೀರ್ಥ ಶ್ರೀಮನ್ಮಧ್ವಾಚಾರ್ಯರಿಗೆ ಪೂರ್ವದಲ್ಲೂ, ಶ್ರೀ ರಾಮಾನುಜಾಚಾರ್ಯರ ನಂತರವೂ ಅಂದರೆ-ವಿಶಿಷ್ಟಾದ್ವೈತ ದ್ವೈತ ಮತಸ್ಥಾಪನಾಚಾರ್ಯದ್ವಯರ ನಡುವಣಕಾಲ ಮಾನದಲ್ಲಿ ಬದುಕಿ ಬೆಳಗಿ, ಉಪನಿಷತ್ತುಗಳಿಗೂ ಬ್ರಹ್ಮಸೂತ್ರಗಳಿಗೂ ಮತ್ತೂ ಭಗವದ್ಗೀತೆ ಎಂಬೀ ಪ್ರಸ್ಥಾನತ್ರಯಂಗಳಿಗೆ ವೀರಶೈವ ದರ್ಶನ ಪರವಾದ ಗಂಭೀರವೂ, ಸರಳವೂ, ಆಪ್ಯಾಯನಕರವೂ ಆದ "ಶ್ರೀಕರ ಭಾಷ್ಯ"ವನ್ನು ರಚಿಸಿ ಜಗದ್ವಿಖ್ಯಾತರಾಗಿರುವರು. ಇದರಿಂದಾಗಿ ಇವರು ಧರ್ಮ ಕ್ಷೇತ್ರವೆನಿಸಿದ ಈ ಭರತ ಖಂಡದ ಶಿವಾದ್ವೈತ ಸಿದ್ಧಾಂತ ಪ್ರತಿಪಾದಕ ದಿವ್ಯಜ್ಞಾನ ಭಾಸ್ಕರನಂತೆ ಪ್ರದೀಪ್ತರಾಗಿದ್ದರು. ಕುಮತಿಗಳಿಗೆಂತು, ಶ್ರೀಪತಿ ಪಂಡಿತಾರಾಧ್ಯ ವಿರಚಿತ "ಶ್ರೀಕರ ಭಾಷ್ಯದ ಶ್ರೀಕರವು" ಶ್ರೀಕರವೆನಿಸಬಲ್ಲದು.

ಹನ್ನೆರಡನೇ ಶತಮಾನದಲ್ಲಿ ಅವತರಿಸಿ ಸನಾತನವಾದ ವೀರಶೈವ ಮತೋದ್ಧಾರಕರೆಂದು ಹೆಸರಾದ ಕಲ್ಯಾಣದ ಶ್ರೀ ಬಸವಣ್ಣನವರು ಶ್ರೀಕರ

# " ಪ್ರಸ್ತಾವನೆ "

ಭಾಷ್ಯಕರ್ತ್ತರಾದ ಶ್ರೀಪತಿ ಪಂಡಿತಾರಾಧ್ಯ ಶಿವಾಚಾರ್ಯ ಮಹೋದಯರ ವಿಷಯವನ್ನೂ ಹಾಗೂ ಅವರಿಂದ ರಚಿತವಾದ ಶ್ರೀಕರ ಭಾಷ್ಯವನ್ನೂ ಪೂರ್ಣ ಅರಿತಿದ್ದರೆಂದು ಕಂಡುಬರುತ್ತೆ. ಬಿಜ್ಜಳನ ಆಸ್ಥಾನದಲ್ಲಿ ಮಂತ್ರಿವರ್ಯರಾದ ಬಸವಣ್ಣ, ಒಮ್ಮೆ ಪೂರ್ವಜರಾದ ಶಿವಶರಣರ ವೃತಾಂತವನ್ನು ವಿವರಿಸಿ ರಾಜನಿಗೆ ಹೇಳುವ ಸಂದರ್ಭದಲ್ಲಿ, ಶ್ರೀಪತಿ ಪಂಡಿತಾರಾಧ್ಯರನ್ನು ಸ್ಮರಿಸಿಕೊಂಡು, "ಓ ರಾಜನ್!

ಮಹಿಮಾನ್ವಿತರಾದ ಶ್ರೀಶೈಲ ಜಗದ್ಗುರು ಪಂಡಿತಾರಾಧ್ಯ ಮಹಾ ಪೀಠಾಚಾರ್ಯ ಶ್ರೀಪತಿ ಪಂಡಿತರು, ದೀರ್ಘದರ್ಶಿಗಳು, ಶ್ರೋತ್ರೀಯ ಬ್ರಹ್ಮ ನಿಷ್ಠರು, ಮಹಾ ಶಿವಾನುಭಾವಿಗಳೂ ಆಗಿರುವುದರೊಂದಿಗೆ ಪವಾಡ ಪುರುಷರೂ ಆಗಿದ್ದರೆಂದು ಶೃತಪಡಿಸಿರುವರು. ವೀರಶೈವ ಮತಾಚಾರ್ಯರಾದ ಶ್ರೀಪತಿ ಪಂಡಿತರು ಅನಂತಪಾಲ ರಾಜನ ಸಭೆಯಲ್ಲಿ ಶಿವ ಸರ್ವೋತ್ತಮತ್ವವನ್ನು ಮುಕ್ತ ಕಂಠದಿಂದ ಸ್ತುತಿಸಿ ಶಿವಭಕ್ತ ಮತ್ತು ಶಿವಶರಣರಿಗೆ ಸದೃಶರು ಬೇರೊಬ್ಬರಿಲ್ಲವೆಂದು ಪ್ರತಿಪಾದಿಸಿ, ಭೀಷ್ಮ ಪ್ರತಿಜ್ಞಾ ಪೂರ್ವಕ ಕಂಕಣ ತೊಟ್ಟು ಶಿವ ಸರ್ವೋತ್ತಮತ್ವವನ್ನು ಸಾಧಿಸಿದ ಮಹನೀಯರೆಂದು" ಉಸಿರಿರುವರು. ಶ್ರೀಕರ ಭಾಷ್ಯಾರಂಭದಲ್ಲಿ ಶ್ರೀಪತಿ ಪಂಡಿತರು ॥ ಶಿವಾನುಗ್ರಹಾದ್ಭಾಷ್ಯಂ ಶ್ರೀಕರನಾಮಕಂ । ಭವಹರಂ ದುರ್ವಾದಿಗರ್ವಾಪಹಂ ॥ ಎಂಬುದಾಗಿ ಧೀರೋದ್ಗಾರವೆತ್ತಿ ಪಂಡಿತ ಶ್ರೇಣಿಯ ಪರವಾದಿಗಳೂ ಹಾಗೂ ಇತರ ವಾದಿಗಳೂ ಯಾರಾದರೂ ತಮ್ಮನ್ನು ವಿರೋಧಿಸಿ ಸಂಕುಚಿತ ಮನೋಭಾವದಿಂದ ವಾದಿಸಿದರೆ ಅವರನ್ನು ಸೂಕ್ತ ರೀತಿಯಲ್ಲಿ "ತತ್ವಾರ್ಥ ಬೋಧಾಕರಂ" ಅಂದರೆ, ಶಾಸ್ತ್ರ ಬದ್ಧವಾದ ದಿವ್ಯ ವಾಣಿಯಿಂದ ಖಂಡಿಸಿ ಭಿನ್ನಾಭಿಪ್ರಾಯದವರ ಮೇಲೆ ಬೆಳಕನ್ನು ಬೀರಿ ಸಮನ್ವಯಾರ್ಥವನ್ನು ಚಿತ್ತ ಸ್ಥೈರ್ಯದಿಂದ ಹೊರಸೂಸುತ್ತಿದ್ದರು. ಶ್ರೀಪತಿ ಪಂಡಿತರು ವಾದಿಗಳಿಗೆ ಅನಂತ ಮುಖಗಳಿಂದ ಸತ್ಯ ದರ್ಶನವನ್ನು ಮನಗಾಣಿಸಿದರೂ ವಿಶ್ವಸಿಸದೇಹೋದಲ್ಲಿ, ಪರವಾದಿಗಳ ಹಿಡಿತದ

ಪ್ರಚಂಡ ಪಟ್ಟು ಪಂಥ ಪರಾಕ್ರಮಗಳನ್ನು ಸಡಿಲಿಸಿ, ದುರ್ವಾದಗಳಿಂದ ಅವರನ್ನು ದೂರೀಕರಿಸಲು ತಮ್ಮ ತಪಃಪ್ರಭಾವ ಹಾಗೂ ಶಿವಯೋಗ ಶಕ್ತಿ ಯಿಂದ, ಅವರುಗಳ ಎದುರಿನಲ್ಲಿ ಒಮ್ಮೆ, ಒಂದು ವಸ್ತ್ರದಲ್ಲಿ ಅಗ್ನಿಬಂಧನ (ಅಗ್ನಿ ಸ್ತಂಭನ) ವನ್ನು ಮಾಡಿ ವಸ್ತ್ರದಲ್ಲಿ ಕಟ್ಟಿದ್ದ ಕೆಂಡದಂತ ಅಗ್ನಿಯನ್ನು ಮಹಾರುದ್ರನ ನಾಮಸ್ಮರಣ ಪೂರ್ವಕ ಬನ್ನಿ ಮರದೊಂದು ರಂಬೆಗೆ ಕಟ್ಟಿ, ಸತ್ಯಕ್ಕೆ ದೂರರಾದ ಪರವಾದಿಗಳಿಗೆ ಕಿಂಚಿತ್ತೂ ಅಗ್ನಿ ದೊರೆಯದಂತೆ ಮಾಡಿದ ರೆಂದೂ ಪ್ರತೀತಿ ಇದೆ. ಇವರು ವೀರಶೈವ ಅಥವಾ ಲಿಂಗಾಂಗಿ ಧರ್ಮ "ಶಿವಾ ದ್ವೈತವೆಂದೂ" (ಶಕ್ತಿ ವಿಶಿಷ್ಟಾದ್ವೈತವೆಂದೂ) ಇದು, ಸನಾತನವೂ ಸರ್ವ ಶೃತಿ ಸಮನ್ವಯವೂ ಹಾಗೂ ಜ್ಞಾನ ಕರ್ಮಗಳ ಸಮನ್ವಯ ಸಮದರ್ಶನ ವೆಂದೂ ಸ್ಪಷ್ಟಪಡಿಸಿರುವರು. ಅದರೊಂದಿಗೆ ಜೀವ ಜಗತ್ತು ಮತ್ತು ಜಗದೀ ಶ್ವರ ಈ ಮೂರೂ ಸತ್ಯವೆಂದೂ, ನಿಗಮಾಗಮಗಳ ಆಧಾರದಿಂದ ಜೀವ ಈಶ್ವರರಂತೆ ಜಗತ್ತೂ ಪರಿಣಾಮ ರೂಪದಲ್ಲಿ ಅಳವಡಿಸಿದಂತೆ ಸತ್ಯವೆಂದೂ, ಪರಿಣಾಮವಾದವನ್ನು-*The ancient theory of evolution*-ಸಪ್ರಮಾಣ ಬದ್ಧವಾದ ರೀತಿಯಲ್ಲಿ ಹೃದಯಂಗಮವಾಗಿ ಪ್ರತಿಪಾದಿಸಿ "ಜೀವಸತ್ಯಂ ಜಗತ್‌ಸತ್ಯಂ ಬ್ರಹ್ಮಸತ್ಯಂ" ಎಂಬ ತ್ರಿಪುಟಿ ಮಹದಂಶಗಳನ್ನು ಚಂದೋಬದ್ಧವಾಗಿ ಬೆಳಕಿಗೆ ತಂದ, ಸರ್ವಧರ್ಮ ಸಮನ್ವಯಾಚಾರ್ಯ ರೆಂದರೆ ಶ್ರೀಪತಿ ಪಂಡಿತಾರಾಧ್ಯರೇ ಆಗಿರುವರು ಎಂಬ ಮಹದಂಶವನ್ನು ಶಿವ ಶರಣರ ಅಣ್ಣ ಬಸವಣ್ಣ ಮುಕ್ತ ಕಂಠದಿಂದ ಬಿಜ್ಜಳನ ರಾಜಸಭೆಯಲ್ಲಿ ಗಂಭೀರವಾದ ಗುರುಭಕ್ತಿ ಭಾವದಿಂದ ಶೃತಪಡಿಸಿರುವುದಾಗಿ ಕಂಡುಬರುತ್ತೆ. ಮಹಾನುಭಾವನಾದ ಕಲ್ಯಾಣದ ಬಸವಣ್ಣನೇ ಮುಕ್ತ ಕಂಠದಿಂದ ಮೇಲ್ಕಂಡ ಶ್ರೀಪತಿ ಪಂಡಿತಾರಾಧ್ಯ ಶಿವಾಚಾರ್ಯರನ್ನು ಅವರ ನಿಜ ಮಹಿಮೆಯನ್ನು ಘನ ಗಂಭೀರ ಬಾವದಿಂದ ಹೃತ್ಪೂರ್ವಕವಾಗಿ ಸ್ತುತಿಸಿ ಕೊಂಡಾಡಿರುವುದು ಸಂಸ್ಕೃತ ಬಸವಪುರಾಣದಿಂದ ವೇದ್ಯವೇಯಿದುತೆ. ಇದೇ ಅಂಶವನ್ನು ಕ್ರಿ. ಶ. ೧೧೯೫ ರಲ್ಲಿ ಪ್ರಸಿದ್ಧನಾದ ಪಾಲ್ಕುರಿಕೆ ಸೋಮನಾಥ ಕವೀಂದ್ರನೂ ಸಹ ತನ್ನಿಂದ ವಿರಚಿತವಾದ ಆಂಧ್ರ ಬಸವಪುರಾಣದಲ್ಲೂ ಉಲ್ಲೇಖಿಸಿರುವನು.

ಅನಂತಪಾಲ ರಾಜನಾದರೋ ಹನ್ನೊಂದನೆ ಶತಮಾನದ ಚಾಳುಕ್ಯ ಸಾಮಂತ ರಾಜನಾಗಿದ್ದು ಬನವಾಸಿ ಮೊದಲಾದ ಕನ್ನಡ ಪ್ರಾಂತಗಳನ್ನೂ, ಬೆಜವಾಡ, ಕಡಪ, ಕರ್ನೂಲ್, ಮೊದಲಾದ ಆಂಧ್ರ ಪ್ರಾಂತಗಳನ್ನೂ ಆಳುತ್ತಿದ್ದನೆಂದು ಶಿಲಾ ಶಾಸನಗಳಿಂದ ಸ್ಪಷ್ಟವೇಯಿರತ್ತೆ. ಅನಂತಪಾಲ ರಾಜನು ೧೧ನೇ ಶತಮಾನದ ಕೊನೆಯಲ್ಲಿನ್ದನೆಂದೂ, ಇವನು ಶ್ರೀಪತಿ ಪಂಡಿತರ ಪರಮ ಶಿಷ್ಯನಾಗಿದ್ದನೆಂದೂ ತಿಳಿದು ಬರುತ್ತೆ. ಶ್ರೀಪತಿ ಪಂದಿತರು ತಮ್ಮ ಶಿಷ್ಯನಾದ ಅನಂತಪಾಲ ಅರಸನ ಎದುರಲ್ಲಿ ಹಾಗೂ ಅನೇಕ ಪರವಾದಿಗಳ ಸಮಕ್ಷಮದಲ್ಲಿ ಬೆಜವಾಡದ ಶ್ರೀ ಮಲ್ಲೇಶ್ವರ ದೇವಾಲಯದಲ್ಲಿ ಅಗ್ನಿಸ್ತಂಭನ ಪವಾಡವನ್ನು ಲೀಲಾಜಾಲವಾಗಿ ನೆರವೇರಿಸಿರುವರು. ಚತುರೋಪಾಯಗಳಲ್ಲಿ ಇದು ಒಂದಾಗಿದ್ದು ಸತ್ಯ ಮಾರ್ಗದರ್ಶಕವಾಗಿರುವುದು. ಪರವಾದಿಗಳು ಅಗ್ನಿಕ್ಷೋಭೆಯಿಂದ ಪರಿತಪಿಸಿ ನಿತ್ಯದ ಅಗ್ನಿ ಬಳಕೆಗೆ ಯತ್ನವಿಲ್ಲದವರಾಗಿ, ಖಿನ್ನವದನದಿಂದ ಅವರೆಲ್ಲರೂ ಶ್ರೀಪತಿ ಪಂಡಿತಾರಾಧ್ಯರಲ್ಲಿಗೆ ಬಂದು, ಶ್ರೀಕರ ಭಾಷ್ಯದ ಅನುವಾದಕ್ಕೆ ತಲೆದೂಗಿ ತಮ್ಮ ಸೋಲನ್ನು ಮನಃಪೂರ್ವಕವೊಪ್ಪಿ, ವಸ್ತ್ರದಲ್ಲಿ ತಮ್ಮ ತಪಃ ಪ್ರಭಾವದಿಂದ ಕಟ್ಟಿ ಅಗ್ನಿಸ್ತಂಭನ ಮಾಡಿರುವದನ್ನು ಸಡಿಲಿಸಿ ಅಗ್ನಿಯನ್ನು ದಯಪಾಲಿಸಬೇಕೆಂದು ಪ್ರಾರ್ಥಿಸಿಕ್ಕೊಂಡರು. ಸತ್ಯಕ್ಕೆ ಮಣಿದ ಅವರ ನಿಜ ವರ್ತನೆಗೆ ಮೆಚ್ಚಿ ಶ್ರೀಪತಿ ಪಂಡಿತರು, ಮಹಾರುದ್ರನ ಸ್ಮರಣೆಯೊಂದಿಗೆ—

॥ ಧರ್ಮೋ ರುದ್ರೋ ಜಗದ್ವಿಷ್ಣುಃ ।
ಸರ್ವಜ್ಞಾನಂ ಪಿತಾಮಹಃ ಶ್ರೀ ರುದ್ರ ।
ರುದ್ರ ರುದ್ರೇತೀ ಯಸ್ತಂಭೂಯಾದ್ವಿಚಕ್ಷಣಃ ॥

ಎಂಬುದಾಗಿ ಮಹಾರುದ್ರನನ್ನು ವಂದಿಸಿ ಬನ್ನಿಮರಕ್ಕೆ ಕಟ್ಟಿದ್ದ ಅಗ್ನಿಗಂಟನ್ನು ಬಿಚ್ಚಿ ವಸ್ತ್ರದಿಂದ ಶ್ರೀ ಯಜ್ಞೇಶ್ವರನನ್ನು ಬಿಡುಗಡೆ ಮಾಡಿ ಅಖಿಲ ಕ್ಷೇಮಾಭ್ಯುದಯಾದಿ ಸನ್ಮಂಗಳಗಳನ್ನು ಕೋರಿರುವರು. ಈ ಮಹದಂಶವನ್ನು ಶ್ರೀಪತಿ ಪಂಡಿತಾರಾಧ್ಯರ ಸಂಪ್ರದಾಯಕರಾದ ವೀರಾರಾಧ್ಯರು,

ಆಂದ್ರ ಭಾಷೆಯಲ್ಲಿ ರಚಿಸಿರುವ "ಧರ್ಮ ಗುಪ್ತಾಭ್ಯುದಯ" ಎಂಬ ಗ್ರಂಥ ದಿಂದಲೂ ತಿಳಿದು ಬರುತ್ತದೆ. ಶ್ರೀಪತಿ ಪಂಡಿತಾರಾಧ್ಯರ ಮಂಗಳ ನಾಮ, ಅವರ ಕೃತಿ ಹಾಗೂ ಅವರ ಶಾಶ್ವತ ಕೀರ್ತಿ ಎಂದೆಂದಿಗೂ ಸರ್ವತ್ರ ಬೆಳಗುತ್ತ ಲಿರುವುದು. ಆಂದ್ರ ದೇಶದಲ್ಲಿ ಅವರ ಕೀರ್ತಿ ಕುಸುಮ ಬಾಡದೆ ಅಳಿಯದೆ ಕಂಗೊಳಿಸುತ್ತಲಿರುವುದು. ಶ್ರೀಕರ ಭಾಷ್ಯಕರ್ತೃಗಳಾದ ಶ್ರೀಪತಿ ಪಂಡಿತಾ ರಾಧ್ಯರು ಚಿರ ಸ್ಮರಣೀಯರು. ನಾವು ಅವರಿಗೆ ಚಿರಋಣಿಗಳೇ ಹೌದು.

ನಿಜವಾದ ಮಹಾತ್ಮರಿಗೆ ಯಾವುದುತಾನೇ ಅಘಟನೀಯವೆನಿಸಬಲ್ಲದು. ಇಷ್ಟಲಿಂಗದಲ್ಲಿ ನಿಷ್ಠೆಯುಳ್ಳ ಶಿವಶರಣನು "ತಾ ಸತಿ ಲಿಂಗಪತಿ" ಭಾವದಿಂದ, ಶ್ರೇಷ್ಠ ಪತಿವ್ರತೆಯ ಸದ್ಭಾವ ಭಕ್ತಿಯಿಂದ ವರ್ತಿಸಿ, ಜೀವನೆಂಬ ಅಂಗ ಸತಿ, ಪರಮಾತ್ಮನೆಂಬ ಲಿಂಗಪತಿ ದೇವನಲ್ಲಿ ವಿಲೀನನಾಗಿ, ಲಿಂಗಾಂಗ ಸಾಮರಸ್ಯ ಸುಖವನ್ನು ಹೊಂದುವನು. "ಸತಿಗೆ ಪಾತಿವ್ರತ್ಯವೇ ಭೂಷಣಂ" ಎಂಬಂತೆ, ಪತಿವ್ರತೆಯರ ಆಧ್ಯಾತ್ಮಿಕ ಶಕ್ತಿ ಸ್ತುತ್ಯಾರ್ಹವೂ ಅಪಾರವೂ ಆಗಿರುವುದು. ಪುಣ್ಯ ಶ್ಲೋಕರಾದ ಸತ್ಯವಾನ್‌ಸಾವಿತ್ರಿ, ಹರಿಶ್ಚಂದ್ರ ಚಂದ್ರಮತಿ ಮತ್ತು ನಳ ದಮಯಂತಿಯರ ಚರಿತ್ರೆಗಳಿಂದ, ಪಾತಿವ್ರತ್ಯಾಗ್ನಿ ಪ್ರಭಾವವು ಹೊರಬಿದ್ದಿರು ವುದು. ಪ್ರಾಥಃ ಸ್ಮರಣೀಯರಾದ ಶ್ರೀ ಸಾವಿತ್ರಿ, ಚಂದ್ರಮತಿ, ಮತ್ತು ದಮಯಂತಿ ಮೊದಲಾದವರು ವರ್ಣನಾತೀತ ಕಷ್ಟ ಕಾರ್ಪಣ್ಯಗಳಿಗೆ ಪೊಳ ಗಾದರೂ ಪಾತಿವ್ರತ್ಯಾಗ್ನಿಯಿಂದ ಪರ್ವತಾಕಾರವಾದ ಎಲ್ಲಾ ಪ್ರತಿಬಂಧಕ ಗಳನ್ನೂ-ಸೂರ್ಯನೆದುರಿನ ಮಂಜು ಕಣ್ಮರೆಯಾಗುವಂತೆ-ಸಹಿಷ್ಣುತೆಯಿಂದ ದಾಟಿ ಅವುಗಳನ್ನು ಹಿಮ್ಮೆಟ್ಟಿಸಿ, ಜಯಶೀಲರಾಗಿ ಲೋಕದ ಆದರ್ಶ ನಾರೀ ಮಣಿಗಳಾಗಿ ಬೆಳಗುತ್ತಲಿರುವರು. ಕವಿಕುಲ ಸಾರ್ವಭೌಮನಾದ ಕಾಳಿದಾಸನು ಪುಣ್ಯ ಶ್ಲೋಕರಾದ ನಳ ದಮಯಂತಿಯರ ಪಾವನ ಚರಿತ್ರೆಯನ್ನೊಳಗೊಂಡ ನೈಷಧದಲ್ಲಿ ಪತಿವ್ರತಾ ಶಿರೋಮಣಿಯಾದ ದಮಯಂತಿಯ ಪ್ರಭಾವವನ್ನು ಹೃದಯಂಗಮವಾಗಿ ವಿವರಿಸಿರುವುದು ಸರಿಯಷ್ಟೆ. ನಳ ದಮಯಂತಿಯರ ಗರ್ಭ ಸುಧಾಂಬುಧಿಯಲ್ಲಿ ಜನಿಸಿದವಳೇ—ಸತಿಕುಲ ತಿಲಕಳಾದ ನಳಾಯಿನಿ

ಎಂಬ ಕನ್ಯಾಮಣಿ. ಇವಳು ವಿವಾಹ ಯೋಗ್ಯ ವಯಸ್ಕಳಾಗುತ್ತಲೇ, ಮಾತಾಪಿತೃಗಳು ನಳಾಯಿನಿಯನ್ನು ಮೌದ್ಗಲ್ಯನೆಂಬ ಋಷಿಗೆ ಕೊಟ್ಟು ಮದುವೆ ಮಾಡಿದರು. ಈ ಋಷಿಗೆ ಪೂರ್ವಾರ್ಜಿತ ಕಾಲಕರ್ಮ ಸಂಯೋಗ ದಿಂದ ತೊನ್ನು ರೋಗವು ಸಂಪ್ರಾಪ್ತವಾಯಿತು. ॥ಪೂರ್ವಾರ್ಜಿತ ಕೃತಂ ಪಾಪಂ । ವ್ಯಾಧಿರೂಪೇಣ ಬಾಧಿತಃ॥ ಋಷಿಗಳಾದರೇನು ಮಹರ್ಷಿಗಳಾದ ರೇನು, ರಾಜರಾದರೇನು ಮಹಾರಾಜರಾದರೇನು, ಕರ್ಮ ಫಲವು ಬಿಟ್ಟಿದ್ದಲ್ಲ. "ನಾ ಮಾಡಿದ ಕರ್ಮ ಬಲವಂತವಾದರೆ । ನೀಮಾಡುವುದೇನೋ ಶ್ರೀಹರಿಯೇ" ಮತ್ತು "ಆರ್ಯೇನು ಮಾಡ್ಯಾರು ಆರಿಂದ ಲೇನಹುದು । ಪೂರ್ವಜನ್ಮದ ಕರ್ಮ ಬೆನ್ನ ಬಿಡದು" ಎಂಬ ದಾಸ ಶ್ರೇಷ್ಠರ ಕೀರ್ತನೆಗಳೇ ಸಾಕ್ಷಿ. ॥ಅವಶ್ಯ ಮನುಭೋಕ್ತವ್ಯಂ । ಕೃತಂ ಕರ್ಮ ಶುಭಾಶುಭಂ॥ ಎಂಬಂತೆ ಭೀಕರವಾದ ಕರ್ಮದ ದುಷ್ಫಲದಿಂದಾಗಿ ಋಷಿ ಮೌದ್ಗಲ್ಯನು, ದಿನೇ ದಿನೇ ಭಯಂಕರ ವಾದ ಕುಷ್ಠ ವ್ಯಾಧಿಯಿಂದ ಅಂಗ ಅವಯವಗಳಲ್ಲಿ ಕೀವು ರಣಗಳಿಂದ ಪೀಡಿತ ನಾಗಿ ಅಹೋ ರಾತ್ರಿ ಬಳಲಿ ಬವಣೆಗೊಂಡಿದ್ದನು. ಸಾಧ್ವಿ ನಳಾಯಿನಿ ಪತಿಭಕ್ತಿ ಪರಾಯಣಳಾಗಿ, ಕಿಂಚಿತ್ತು ಬೇಸರವೂ ಅಸಹ್ಯವೂಗೊಳ್ಳದೆ, ಇದು ತನ್ನ ಪಾಲಿನ ಪೂಜ್ಯ ಪತಿಸೇವೆಯೆಂದು ಭಾವಿಸಿ, ನಿತ್ಯವೂ ಗಂಡನ ಚರಣ ಸೇವೆಗೈಯ್ಯುತ್ತಾ, ಸೋರುವ ರಣ, ರಕ್ತ, ಕೀವುಗಳನ್ನು ತನ್ನೆರಡು ಕೈಗಳಿಂದ ಒರಸಿ ಉಪಚರಿಸಿ, ಪತಿಗೆ ತಾನೇ ಉಣಬಡಿಸುತ್ತಲಿದ್ದಳು. ಅವನು ಉಂಡು ಬಿಟ್ಟ ಶೇಷಾನ್ನವನ್ನು ಪತಿಪ್ರಸಾದವೆಂದು ತಾನು ಸೇವಿಸುತ್ತಲಿದ್ದಳು. ಕಾಲಕ್ರಮೇಣ ಮಹಾ ರೋಗದ ವ್ಯಾಪ್ತಿಯಿಂದ ಋಷಿ ಮೌದ್ಗಲ್ಯನ ಅಂಗ ಅವಯವಗಳನ್ನೆಲ್ಲಾ ಕುಷ್ಠ ಹಿಡಿದು ತಿರುಗಾಡಲಿಕ್ಕೂ ಬಾರದ ದುಸ್ಥಿತಿ ಪ್ರಾಪ್ತಿಯಾಗಲು, ನಳಾಯಿನಿಯು ಪತಿದೇವನನ್ನು ಒಂದು ಗೂಡೆಯೊಳಗೆ ಕುಳ್ಳಿರಿಸಿ, ತನ್ನ ತಲೆಯಮೇಲೂ ಹೊತ್ತು ಅವನಾಜ್ಞೆಯಂತೆ ಎಲ್ಲಿಗೆ ಹೋಗೆಂ ದರೆ ಮಾರುತ್ತರವೀಯದೆ ಹೋಗುತ್ತಾ ಅವನಭೀಷ್ಟಗಳನ್ನು ನೆರವೇರಿಸುವ ವ್ರತಾನುಷ್ಠಾನಪರಳಾಗಿದ್ದಳು. ॥ಪತಿಯೇ ತಾಯಿ ಪತಿಯೆ ತಂದೆ, ಪತಿಯೆ ಬಂಧು, ಪತಿಯೆ ಬಳಗ । ಪತಿಯೆ ವಿದ್ಯೆ, ಪತಿಯೆ ಬುದ್ಧಿ, ಪತಿಯೆ ಗುರು,

ಪತಿಯೆ ಲಿಂಗ, ಪತಿಯೆ ಜಂಗಮು, ಪತಿಯೇ ಸತಿಗೆ ಸದ್ಗತಿ ಸರ್ವಸ್ವ ||

|| ಪತಿಸೇವೆಗೆಂದು ಆರಣ್ಯವ ಪೊಕ್ಕಳು ಭೂಜಾತೆ ಸೀತೆ |
ಪತಿಗಾಗಿ ಅಗ್ನಿಕುಂಡದೋಳ್ ಧುಮಿಕಿದಳು ಮಾದ್ರಿ |
ಪತಿಗಾಗಿ ತನ್ನ ದೇಹವನು ವಿಕ್ರಯಿಸಿಕೊಂಡಳು, ಸಾಧ್ವಿ ಚಂದ್ರಮತಿ ||
ಪತಿಗಾಗಿ ಯಮನನು ಹಿಂಬಾಲಿಸಿ, ನಿಷ್ಠೆಯಿಂದ ಬೇಡಿದಳು
ಪತಿ ಪ್ರಾಣವನು ಸಾವಿತ್ರಿ |
ಪತಿಗಾಗಿ ಪರಸೇವೆಯನುಗೈದಳು ಪಾಂಚಾಲಿ
ಇದರಿಂ, ಸತಿಗೆ ಕ್ಷಿತಿಯೋಳ್ ಪತಿಯೇ ದೈವಂ, ಸದ್ಗತಿ
ಮೋಕ್ಷ್ ಸರ್ವಸ್ವ ||

ಈ ಘನ ತತ್ವಗಳನ್ನು ಕೂಲಂಕಷವಾಗಿ ಅರಿತಿದ್ದ ವಿಚಕ್ಷಣ ಸಂಪನ್ನೆ ನಳಾಯಿನಿ, ಒಂದು ದಿವಸ ಪತಿಯಭೀಷ್ಟದಂತೆ ಗೂಡೆಯಲ್ಲಿರಿಸಿ ಹೊತ್ತುಕೊಂಡು ಹೋಗುತ್ತಿರುವಾಗ, ಕಾರಣಾಂತರದಿಂದ ಪತಿ ಕುಳಿತಿದ್ದ ಗೂಡೆಯನ್ನು ಒಂದು ಮರದ ರೆಂಬೆಗೆ ಕಟ್ಟಿ, ಬೇರೆ ಕೆಲಸದಲ್ಲಿ ನಿರತಳಾಗಿದ್ದಳು. ಆ ಸಮಯದಲ್ಲಿ ಮಾರ್ಗ ಗಾಮಿಗಳಾಗಿ ಪ್ರಯಾಣ ಮಾಡುತ್ತಲಿದ್ದ ಋಷಿಯೋರ್ವರಿಗೆ ಸಂಧ್ಯಾಕಾಲದಲ್ಲಿ ಮೌದ್ಗಲ್ಯನ ಪಾದವು ತಲೆಗೆ ತಾಕಲು, ಕೋಪಗೊಂಡು ಸೂರ್ಯೋದಯದೊಳಗಾಗಿ ನಿನ್ನ ಪ್ರಾಣಹರಣವಾಗಲೆಂದು ಮೌದ್ಗಲ್ಯನನ್ನು ಶಪಿಸಿದರು. ಈ ಕಠೋರ್ರ್ಯೋಕ್ತಿಯನ್ನು ಅರಿತ ಸುಮಂಗಲೆಯಾದೀ ನಳಾಯಿನಿದೇವಿಯು ಮನದೊಳಗೆ ಪತಿದೇವನ ಪಾದ ಸ್ಮರಣೆಯಿಂದ ಕೂಡಿ, ಸೂರ್ಯೋದಯವಾಗದಿರಲೆಂದು ಆಣೆಯಿಟ್ಟಳು. ಪಾತಿವ್ರತ್ಯಾಗ್ನಿಯ ಪ್ರಭಾವ ಮುಮ್ಮೂರ್ತಿಗಳನ್ನೂ ಚಕಿತಗೊಳಿಸಿದ ಅತ್ರಿ ಮಹರ್ಷಿಗಳ ಪತ್ನಿ ಅನುಸೂಯೆಯ ಮಂಗಳನಾಮ ಸಂಸ್ಮರಣೀಯವಾದುದು. ಉಕ್ಕಿನ ಕಡಲೆಗಳನ್ನು ಹುರಿದು ಆ ಅರಳಿದಕಡಲೆಗಳನ್ನು ಶ್ರೀ ನಾರದಮಹರ್ಷಿಗಳಿಗೆ ಕೊಟ್ಟಳು ಅನುಸೂಯ. ಪತಿಭಕ್ತಿ ಪತಿ ಸೇವೆ ಪಾತಿವ್ರತ್ಯದ ಪ್ರಭಾವದಿಂದ ಹರಿ ಹರ

ಬ್ರಹ್ಮಾದಿಗಳನ್ನು ಮಕ್ಕಳಾಗಿಸಿ ತೊಟ್ಟಿಲಿನಲ್ಲಿ ಮಲಗಿಸಿ "ಜೋ ಜೋ" ಎಂದು ಪಾಡಿದಳು ಸತಿ ಅನುಸೂಯ. ತ್ರಿಶಕ್ತಿ ಸ್ವರೂಪಣಿಯರುಗಳಾದ ಶ್ರೀ ಲಕ್ಷ್ಮಿ, ಪಾರ್ವತಿ ಸರಸ್ವತಿಯರುಗಳು ತಂತಮ್ಮ ಪತಿದೇವರುಗಳಿಗಾಗಿ ಬಂದು ಬೇಡಿದರು. ಅಸೂಯಾ ಭಾವವಿಲ್ಲದ ಅನುಸೂಯೆಯ ಪಾತಿವ್ರ ತ್ಯಾಗ್ನಿ ಅದೆಷ್ಟು ಹಿರಿಮೆಯುಳ್ಳದ್ದೋ ಬಲ್ಲವರಾರು ?

ಇತ್ತ ನಳಾಯಿನಿದೇವಿಯ ಮಣಿವಚನದಂತೆ ಎಷ್ಟು ದಿನಗಳಾದರೂ ಸೂರ್ಯೋದಯವೇ ಆಗಲಿಲ್ಲ. ಸೂರ್ಯ ರಶ್ಮಿಯನ್ನು ಕಾಣದೆ ಜನ ಜಾನು ವಾರಗಳು ಕಂಗಾಲರಾಗಿ ಕಂಗೆಟ್ಟಿದ್ದರು. ಗಾಢಾಂಧಕಾರ ವಿಶ್ವವನ್ನು ಕವಿದಿತ್ತು. ಸೀತಲ ಪ್ರಕೃತಿಯು ಸೀಮಾತೀತವಾಗಿ ವ್ಯಾಪಿಸಿ, ಸರ್ವವನ್ನೂ ಅಸ್ತವ್ಯಸ್ತಗೊಳಿಸಿತು. ಆಗ ದಿಕ್ಕುತೋಚದ ಜನ, ಮುನಿ ಸ್ತೋಮಗಳು ಆರ್ಥತ್ರಾಣ ಪರಾಯಣನಾದ ಪರಮಾತ್ಮನನ್ನು ಅನನ್ಯ ಭಕ್ತಿ ಭಾವದಿಂದ ಪ್ರಾರ್ಥಿಸಲಾಗಿ, ಭಕ್ತಿಪರಾಧೀನನಾದ ಸ್ವಾಮಿ, ಜಗತ್ಪ್ರಭು, ಪರಮೇಶ್ವರನು ವಿಚಾರವೇನೆಂದು ತಿಳಿದು ಹರಿ ಬ್ರಹ್ಮಾದಿಗಳೊಂದಿಗೆ ಪತಿವ್ರತಾ ಶಿರೋಮಣಿ ಯಾದ ನಳಾಯಿನಿಯಿರುವ ಪರ್ಣಶಾಲೆಗೆ ಬಂದು ಆಕೆಯ ಪತಿವ್ರತಾ ಧರ್ಮಕ್ಕೆ ಮೆಚ್ಚಿ "ಅಮ್ಮಾ! ನಿನ್ನ ಕಟ್ಟಾಜ್ಞೆಯಿಂದಾಗಿ ಸೂರ್ಯನುದಯಿಸದೆ ಜಗತ್ತು ತಲ್ಲಣಿಸಿರುವುದು. ಆದ್ದರಿಂದ ಸೂರ್ಯೋದಯವು ತಕ್ಷಣ ಬೇಕಾ ಗಿರುವುದರಿಂದ ಅದಕ್ಕೆ ನೆರವಾಗೆನಲು ; ನಳಾಯಿನಿಯು ಸರ್ವದೇವೋತ್ತ ಮೋತ್ತಮನಾದ ಪರಮೇಶ್ವರನಲ್ಲಿ ತನ್ನ ಪ್ರಾಣಪತಿಗೆ ಮೃತ್ಯುರೂಪದಲ್ಲಿ ಹೆಗಲೇರಿರುವ ಋಷಿಶಾಪದ ವೃತ್ತಾಂತವನ್ನು ನಿವೇದಿಸಿಕೊಳ್ಳುತ್ತಿರುವಷ್ಟರಲ್ಲಿ, ಸರ್ವವನ್ನೂ ಜ್ಞಾನ ದೃಷ್ಟಿಯಿಂದ ಅರಿತ ಮೌದ್ಗಲ್ಯನಿಗೆ ಶಾಪವಿತ್ತ ಋಷಿಯೂ ಆ ವೇಳೆಗೆ ಆ ಸ್ಥಳದಲ್ಲಿ ಸನ್ನಿಹಿತ ರಾಗಲು, ದಯಾನಿಧಿಯಾದ ಪರಮಾತ್ಮನನ್ನು ಪತಿವ್ರತಾ ಶಿರೋಮಣಿಯಾದ ನಳಾಯಿನಿಯು ತನ್ನ ಪತಿ ದೇವನಿಗೆ ಪ್ರಾಣಭಿಕ್ಷೆಯನ್ನು ದಯಪಾಲಿಸೆಂದು ಪ್ರಾರ್ಥಿಸುತ್ತಾ ॥ಪತಿಂ ದೇಹಿ ಪತಿಂ ದೇಹಿ, ಪತಿಂ ದೇಹಿ ಎಂದು ಐದಾವರ್ತಿ ಪ್ರಾರ್ಥಿಸಿ ಮೊರೆಹೋಗಲು, ॥

‖ಅಭಯದಂ ಕರುಣಾಭರಣಂ ಶಿವಂ । ಭಜತರೇ ಮನುಜಾ ಗಿರಿಜಾಪತಿಂ ‖
ಶರಣಾಗತರಾದ ಭಕ್ತರಿಗೆ ಅಭಯವೀಯುವುದರಲ್ಲಿ ಕರುಣಾ ಸಮುದ್ರನೆನಿಸಿದ ಪರಶಿವನು, ಮೌದ್ಗಲ್ಯನು ದೀರ್ಘಾಯುಷ್ಮಂತನೂ, ಆರೋಗ್ಯ ದೃಢಗಾತ್ರನೂ ಆಗಿ ನೀವು ಸುಖದಿಂ ಬಾಳಿರೆಂದು ಆಶೀರ್ವದಿಸುತ್ತಿದ್ದ ಹಾಗೆ ಅಂತರಿಕ್ಷದಲ್ಲಿ ದೇವ ದುಂದುಭಿ ಮೊಳಗಲು, ನಳಾಯಿನಿ-ಮೌದ್ಗಲ್ಯರು ಸಂತಸದಿಂದ ಬಾಳಲೆಂದು ದೇವತೆಗಳು ಪುಷ್ಪವೃಷ್ಟಿ ಗೆರೆಯುತ್ತಿರುವ ಸನ್ಮಂಗಳ ಸಮಯದಲ್ಲಿ ಅತ್ಯಾನಂದದಿಂ ಹರ್ಷಿತಳಾದ ನಳಾಯಿನಿದೇವಿಯು ಪೂರ್ವಾಭಿಮುಖವಾಗಿ ಕೈಜೋಡಿಸಿ, ಸೂರ್ಯನನ್ನು ಮನಸಾ ಸ್ಮರಿಸಿ ನಮಸ್ಕರಿಸುತ್ತಾ:-

ಉದಯೇ ಬ್ರಹ್ಮರೂಪಂಚ । ಮಧ್ಯಾಹ್ನೇತು ಮಹೇಶ್ವರಃ ।
ಅಸ್ತಮಾನೇ ಸ್ವಯಂವಿಷ್ಣುಃ । ತ್ರಯಮೂರ್ತಿರ್ದಿವಾಕರಃ ‖

ರಶ್ಮಿಮಂತಂ ಸಮುದ್ಯಂತಂ । ದೇವಾಸುರ ನಮಸ್ಕೃತಂ ।
ಪೂಜಯಸ್ವವಿವಸ್ವಂತಂ । ಭಾಸ್ಕರಂ ಭುವನೇಶ್ವರಂ ‖

ಸರ್ವದೇವಾತ್ಮಕೋಹ್ಯೇಷ । ತೇಜಸ್ವೀ ರಶ್ಮಿಭಾವನಃ ।
ಏಷ ದೇವಾಸುರಗಣಾನ್ । ಲೋಕಾನ್ ಪಾತಿಗಭಸ್ತಿಭಿಃ ‖

ಏಷ ಬ್ರಹ್ಮಾಚವಿಷ್ಣುಶ್ಚ । ಶಿವಸ್ಕಂದಃ ಪ್ರಜಾಪತಿಃ ।
ಮಹೇಂದ್ರೋಧನದಃಕಾಲೋ । ಯಮಸ್ಸೋಮೋ ಹ್ಯಪಾಂಪತಿಃ ‖

ಪಿತರೋವಸವಸ್ಸಾಧ್ಯಾ । ಹ್ಯಶ್ವಿನೌ ಮರುತೋ ಮನುಃ ।
ವಾಯುರ್ವಹ್ನಿಃಪ್ರಜಾಪ್ರಾಣ । ಋತುಕರ್ತಾ ಪ್ರಲಭಾಕರಃ ‖

ಆದಿತ್ಯಸ್ಸವಿತಾಸೂರ್ಯಃ । ಖಗಃ ಪೂಷಾಗಭಸ್ತಿಮಾ಼ ।
ಸುವರ್ಣ ಸದೃಶೋಭಾನು । ಸ್ವರ್ಣರೇತಾ ದಿವಾಕರಃ ‖

‖ಹರಿದಶ್ವೈಸ್ಸಹಸ್ರಾರ್ಚಿ । ಸ್ಸಪ್ತಸಪ್ತಿರ್ಮಾರೀಚಿಮಾ಼ ।
ತಿಮಿರೋನ್ಮಥನಶ್ಶಂಭುಂ । ಸ್ತ್ವಷ್ಟಾಮಾರ್ತಾಂಡ ಅಂಶುಮಾ಼ ‖
ಹಿರಣ್ಯಗರ್ಭಶ್ಶಿಶಿರಸ್ತಪನೋ । ಭಾಸ್ಕರೋರವಿಃ ।
ಅಗ್ನಿಗರ್ಭೋಽದಿತೇಪುತ್ರಃ । ಶ್ಶಂಕಃ ಶಿಶಿರನಾಶನಃ ‖

ವ್ಯೋಮನಾಥ ಸ್ತಮೋಭೇದೀ । ಋಗ್ಯಜುಸ್ಸಾಮಪಾರಗಃ ।
ಘನವೃಷ್ಟಿರಪಾಂಮಿತ್ರೋ । ವಿಂಧ್ಯ ವೀಥೀಪ್ಲವಂಗಮಃ ॥

ಆತಪೀ ಮಂಡಲೀ ಮೃತ್ಯುಃ । ಪಿಂಗಲಃ ಸರ್ವತಾಪನಃ ।
ಕವಿರ್ವಿಶ್ವೋ ಮಹಾತೇಜಾ । ರಕ್ತಃ ಸರ್ವಭವೋದ್ಭವಃ ॥

ನಕ್ಷತ್ರ ಗ್ರಹತಾರಾಣಾ ಮ । ಧಿಪೋ ವಿಶ್ವಭಾವನಃ ।
ತೇಜಸಾಮಪಿ ತೇಜಸ್ವೀ । ದ್ವಾದಶಾತ್ಮನ್ನಮೋಸ್ತುತೇ ॥

॥ನಮಃ ಪೂರ್ವಾಯ ಗಿರಿಯೇ । ಪಶ್ಚಿಮೇ ಗಿರಯೇ ನಮಃ ।
ಜ್ಯೋತಿರ್ಗಣಾನಾಂ ಪತಯೇ । ದಿನಾಧಿ ಪತಯೇ ನಮಃ ॥

॥ಜಯಾಯ ಜಯಭದ್ರಾಯ । ಹರ್ಯಶ್ವಾಯ ನಮೋನಮಃ ।
ನಮೋನಮಸ್ಸಹಸ್ರಾಂಶೋ ! । ಆದಿತ್ಯಾಯ ನಮೋನಮಃ ॥

ಇದರರ್ಥ ಸಂಗ್ರಹವಾಗಿ ಹೀಗಿರುವುದು :—

ಪ್ರಶಸ್ತವಾದ ಕಿರಣರಾಜಿಗಳಿಂದ ವಿರಾಜಿತನಾದವನೆ, ಅರ್ಥೋದಯಾದಿಗಳಿಲ್ಲದೆ ಪೂರ್ಣೋದಯದಿಂದ ಬೆಳಗುವ ಸ್ವಾಮಿಯೇ, ದೇವಾಸುರ ನರರುಗಳಿಂದ ನಮಸ್ಕೃತನಾದ ದಿನಮಣಿಯೇ, ತನ್ನ ತೇಜಸ್ಸಿನಿಂದ ಇತರ ತೇಜಸ್ಸುಗಳಿಗೆಲ್ಲಾ ತೇಜಸ್ಸನೀಯುವ ಅಖಂಡ ತೇಜೋರಾಶಿಯೇ, ತ್ರಿಭುವನಾಧಿಪನೂ ಆದ ಶ್ರೀ ಸೂರ್ಯನೇ ನಿನಗೆ ನಮಸ್ಕರಿಸುವೆನು.

ಭೋ! ಭೋ!! ಸಮಸ್ತ ದೇವತಾ ಸದೃಶನಾದ ಹಾಗೂ ತ್ರಿಮೂರ್ತ್ಯಾತ್ಮಕನೇ, ಸಮಸ್ತ ಭೂತಾಂತರ್ಯಾಮಿಯಾಗಿ ಸಮಸ್ತ ಕರ್ಮಗಳನ್ನು ಮಾಡಿಸುವಾತನೇ, ಸಮಸ್ತವನ್ನೂ ಆಕರ್ಶಿಸುವವನೂ, ಜಗತ್ಪಿತನೂ ಹಾಗೂ ಅಖಿಲ ಪ್ರೇರಕನೂ ಆಗಿ ರಾರಾಜಿಸುವಾತನೇ, ವಿಶ್ವ ಪೋಶಕನೇ, ಭೂಮ್ಯಂತರಿಕ್ಷಗಳನ್ನು ಮತ್ತು ದಶದಿಕ್ಕುಗಳನ್ನು ಬೆಳಗಿಸುವಾತನೇ, ಬ್ರಂಹ್ಮಾಂಡೋತ್ಪಾದಕ ದ್ರವ್ಯವುಳ್ಳವನೂ, ಸುವರ್ಣ ಸದೃಶವಾದ ಆತ್ಮ ಜ್ಞಾನವೆಂಬ ನಿಧಿಯ ಲಾಭಕ್ಕೆ ಸಮಾನನಾದವನೇ ; ಮನೋಹರವಾದ ಶ್ಯಾಮಲ ವರ್ಣವುಳ್ಳ ಸಪ್ತಾಶ್ವಗಳಿಂದ ಅಲಂಕೃತವಾದ ಮಹಾ ರಥದಲ್ಲಿ ಮಂಡಿಸಿ ಮಾರ್ತಾಂಡ

ನೆನಿಸಿದ ಸ್ವಾಮಿಯೇ, ಅದಿತಿಪುತ್ರನೇ, ಹಿರಣ್ಯಗರ್ಭನೇ ನಿನಗೆ ನಮಸ್ಕರಿಸುವೆನು.

ಭೋ ! ಸ್ವಾಮಿನ್ !! ಅಜ್ಞಾನಂಧಕಾರಧ್ವಂಸಕನೇ, ಪ್ರಜ್ಞಾನಾನಂದ ಪ್ರದಾತನೇ, ಋಗ್, ಯಜುರ್. ಸಾಮವೇದ ಪಾರಂಗತನೇ, ಛಾಯಾ ವಲ್ಲಭನೇ, ಸರ್ವಜ್ಞನೇ, ದ್ವಾದಶ ಮಂಡಲಾಂತರ್ ವರ್ತಿಯೇ, ಮೂಡಲ ಪಡವಲ ಪರ್ವತಗಳಲ್ಲಿ ಉದಯಾಸ್ತಮಾನಗಳಿಂದ ಪರಿಶೋಭಿಸಿ ಅಂತರ್ಯಾಮಿಯಾಗುವ ದೇವನೇ, ಶ್ರೀ ಸಾವಿತ್ರಿ, ಗಾಯಿತ್ರಿ ಎಂಬ ದೇವತೆಗಳಿಗೆ ಮಾತೃಸ್ಥಾನವಾಗಿ ಬೆಳಗಿ ಪ್ರೇರಕನಾದ ಸವಿತಾ ದೇವನೇ, ತಂದೆಯೇ, ಜಗತ್ಪಿತನೇ ನಿನ್ನನ್ನು ಹೃತ್ಪೂರ್ವಕವಾಗಿ ವಂದಿಸುವೆನು, ನಮಸ್ಕರಿಸುವೆನು ಜಗಚ್ಚಕ್ಷುವೇ ಉದಯಿಸು ! ಉದಯಿಸು !! ಪ್ರಾದುರ್ಭವಿಸು ! ಪ್ರಾದುರ್ಭವಿಸು !!

॥ ಭಾಸ್ಕರತೇ ನಮೋ ನಮೋ ನಮೋ । ಉದಯ ಭಾಸ್ಕರತೇ ನಮೋ ನಮೋ ನಮೋ । ಬ್ರಹ್ಮಸ್ವರೂಪಿಣೇ ನಮೋ ನಮೋ ನಮೋ ॥ಭಾಸ್ಕರತೇ॥

ಭಾಸ್ಕರತೇ ನಮೋ ನಮೋ ನಮೋ । ಮಧ್ಯಾಹ್ನ ಭಾಸ್ಕತೇ ನಮೋ ನಮೋ ನಮೋ। ಮಹೇಶ ಸ್ವರೂಪಿಣೇ ನಮೋ ನಮೋ ನಮೋ ॥ಭಾಸ್ಕರತೇ॥

॥ಭಾಸ್ಕರತೇ ನಮೋ ನಮೋ ನಮೋ । ಭಾಸ್ಕರತೇ ನಮೋ ನಮೋನಮೋ । ಸಂಧ್ಯಾ ಭಾಸ್ಕರತೇ ನಮೋ ನಮೋ ನಮೋ । ವಿಷ್ಣುಸ್ವರೂಪಿಣೇ ನಮೋ ನಮೋ ನಮೋ ॥ಭಾಸ್ಕರತೇ॥

ಈ ಪ್ರಕಾರವಾಗಿ ನಳಾಯಿನಿಯು ಹೃದಯಂಗಮವಾಗಿ ಶ್ರೀ ಸೂರ್ಯನಾರಾಯಣನನ್ನು ಸ್ತುತಿಸುತ್ತಿದ್ದಂತೆ ಪೂರ್ವ ಸಮುದ್ರದಿಂದ ಅರುಣೋದಯವನ್ನು ಮುಂದು ಮಾಡಿಕೊಂಡು ಸಹಸ್ರ ಕಿರಣಾಂಶಗಳಿಂದ ಬಾಲ ಸೂರ್ಯನು ಹೊಂಬಣ್ಣದಿಂದ ಥಳಥಳನೆ ಹೊಳೆಯುತ್ತ ಉದಯಿಸಿ ಅಖಿಲ ಜಗತ್ತನ್ನು ಬೆಳಗಿಸಿ ಸಮಸ್ತ ಜೀವಕೋಟಿಗಳಿಗೆ ಪ್ರಾಣಾಧಾರಕನಾಗಿ ಅತುಲಾನಂದವನ್ನು ಉಂಟುಮಾಡಿದನು.

ಮೇಲ್ಕಂಡ ಸ್ತೋತ್ರಗಳು ಶ್ರೀಮದ್ರಾಮಾಯಣದ ಯುದ್ಧ ಕಾಂಡದ, ರಾಮ ರಾವಣರ ನೇರ್ ಯುದ್ಧಪ್ರಸಂಗದಲ್ಲಿ ರಾವಣನ ವಧಾರ್ಥ, ಶ್ರೀರಾಮ ಚಂದ್ರನ ವಿಜಯನಿಮಿತ್ತ, ಭಗವತ್ಪಾದ ಜಗದ್ಗುರು ಶ್ರೀ ರೇಣುಕಾಚಾರ್ಯರ ಪ್ರಪ್ರಥಮ ಶಿಷ್ಯರಾದ ಆದಿ ಅಗಸ್ತ್ಯರು, ಅಂತರಿಕ್ಷದಲ್ಲಿ ಪ್ರಸನ್ನರಾಗಿ ಶ್ರೀರಾಮ ನಿಗೆ ಬೋಧಿಸಿದ ಆದಿತ್ಯ ಹೃದಯವೆಂಬ ಜಯಪ್ರದವಾದ ಮಂಗಳ ಮಂತ್ರವೇ ಆಗರುವುದು. ಅಸ್ತು.

ಐಹಿಕ ಪ್ರಪಂಚದ ಬಾಳ್ವೆಯ ಬೆಳಕಿನಲ್ಲಿ ಸತಿಪತಿಗಳ ಸುಮಧುರ ದಾಂಪತ್ಯದ ಘನತೆಯ ಪಾತಿವ್ರತ್ಯಾಗ್ನಿ ಪ್ರಭಾವವು ಇಷ್ಟೊಂದು ಅಮೋಘವಾಗಿರುವುದಾಗಿ ಕಂಡು ಬರುತ್ತಿರುವಲ್ಲಿ; ಜೀವಬ್ರಹ್ಮೈಕ್ಯವೆಂಬ ಶರಣಸತಿ ಲಿಂಗಪತಿ ಷಟ್ಸ್ಥಲ ಮಾರ್ಗದಲ್ಲಿ ಪತಿವ್ರತಾ ಧರ್ಮಕ್ಕಿಂತಲೂ ಶ್ರೇಷ್ಠವೂ ಪ್ರಭಾವಾನ್ವಿತವಾದ, ಆಧ್ಯಾತ್ಮಿಕ ಭೂಮಿಕೆಯಲ್ಲಿ ಭಕ್ತಿ, ಜ್ಞಾನ, ವೈರಾಗ್ಯ, ತ್ಯಾಗ, ತೃಪ್ತಿ, ಶರಣಾಗತಿ ಭಾವದಿಂದ ಆತ್ಮಾರ್ಪಣಪೂರ್ವಕ ಇಷ್ಟಲಿಂಗದಲ್ಲಿ, ಅಂಗನೆನಿಸಿದ ಜೀವಾತ್ಮನು ಭಾವೈಕ್ಯತೆಯಿಂದ ಕೂಡಿ—

॥ ಸತೀ ಚಾಹಂ ಪತಿರ್ಲಿಂಗಂ । ಹೃದಿಯುಕ್ತಃ ಸ್ವಯಂ ಪ್ರಭುಃ ।
ಪ್ರಾಪಂಚಿಕ ಸುಖಂ ನಾಸ್ತಿ । ಶರಣಸ್ಥಲ ಮುತ್ತಮಂ ॥

ಅಂದಹಾಗೆ "ಶರಣಸತಿ ಲಿಂಗಪತಿ" ಧರ್ಮವನ್ನಳವಡಿಸಿಕೊಂಡು ಪತಿ ವ್ರತಾ ಸತೀಮಣಿಯಂತೆ ಶಿವಲಿಂಗದಲ್ಲಿಟ್ಟ ಘನ ನಿಷ್ಠೆಯಿಂದ ॥ ಏವಂಚ, ಲಿಂಗ ತತ್ವಸ್ಯ ಶರಣತತ್ವಂ ಅಂಗಂ । ಶರಣಸ್ಯ ಲಿಂಗಂ ಪ್ರಾಣಃ ॥ ಶರಣ ಮೇವಲಿಂಗಂ ಲಿಂಗಮೇವ ಶರಣಂ ॥ ಅಂದರೆ ಶಿವಲಿಂಗತತ್ವಕ್ಕೆ ಶರಣನು ಅಂಗವಾಗಿಯೂ (ವಿಹಾರ ಸ್ಥಾನವಾಗಿ) ಶರಣನೆಂದೆನಿಸಿದ (ಸತಿಗೆ) ಇಷ್ಟ ಲಿಂಗವು ಪ್ರಾಣವಾಗಿಯೂ ಈ ಪ್ರಕಾರ ಬೀಜವೃಕ್ಷ ನ್ಯಾಯಕ್ಕನುಗುಣವಾಗಿ ಲಿಂಗಾಂಗಗಳಲ್ಲಿನ ಅನ್ಯೋನ್ಯ ಸಾಮರಸ್ಯ ಸುಖವನ್ನು ಹೊಂದಿರುವ ಮಹಾಪುರುಷನೆಂದೆನಿಸಿದ ಆಚಾರ್ಯಶ್ರೇಷ್ಠರಾದ ಶ್ರೀಪತಿ ಪಂಡಿತಾರಾಧ್ಯರು

ಶಿವಾದ್ವೈತ ತತ್ವ ಪ್ರತಿಪಾದಕ ದಿವ್ಯ ಜ್ಞಾನಭಾಸ್ಕರರಾಗಿ ಹಾಗೂ ಶ್ರೀಗಿರಿಯ ಪೀಠೇಶರೂ ಆದ ಜಂಗಮ ಜಗದ್ಗುರು ಶ್ರೀಪತಿ ಪಂಡಿತಾರಾಧ್ಯರು, ಆಗಮಾ ಮ್ನಾಯ ಸಿದ್ಧಾಂತವಿಡಿದು ಶ್ರೀಕರ ಭಾಷ್ಯವನ್ನು ಅಪೋಘವಾಗಿ ರಚಿಸಿ ಕೀರ್ತಿ ಶೇಷರಾಗಿರುವ ಮಹದಂಶವನ್ನು ಮಹಾನುಭಾವರಾದ ಶಿವಶರಣ ಕಲ್ಯಾಣದ ಶ್ರೀ ಬಸವೇಶ್ವರರು ಮುಕ್ತ ಕಂಠದಿಂದ ಬಿಜ್ಜಳನ ಒಡ್ಡೋಲಗ ದಲ್ಲಿ ಕೈ ಎತ್ತಿ ಸಾರಿ ಸಮಸ್ತರನ್ನೂ, ಚಕಿತಗೊಳಿಸಿರುವರೆಂಬ ಅಂಶ ಸಂಸ್ಕೃತ ಮತ್ತು ಆಂಧ್ರ ಬಸವ ಪುರಾಣಗಳಲ್ಲಿ ಉಲ್ಲೇಖಿತವಾಗಿರುವುದು ಸರಿಯಷ್ಟೆ.

## XIII

ಶ್ರೀಪತಿ ಪಂಡಿತರು ಶ್ರೀಕರ ಭಾಷ್ಯದ ಆರಂಭದಲ್ಲೇ ಮಂಗಳಾತ್ಮಕ ನಾದ ಪರಶಿವನನ್ನು ಸ್ತುತಿಸುತ್ತಾ......

॥ ಓಂ ನಮೋ ಲಿಂಗರೂಪಾಯ । ಜಗಜ್ಜನ್ಮಾದಿ ಹೇತವೇ
ನಿಗಮಾಗಮ ವೇದ್ಯಾಯ । ಭಕ್ತಸಿದ್ಧಿ ಪ್ರದಾಯಿನೇ ॥

ಎಂಬುದಾಗಿ, ಗಂಭೀರಾರ್ಥವುಳ್ಳ ತತ್ವವನ್ನು ಹೊರಗೆಡಹಿರುವರು. "ಜನ್ಮಾದ್ಯಸ್ಯಯತಃ?" ಎಂಬ ಬ್ರಹ್ಮಸೂತ್ರದ ಎರಡನೇ ಸೂತ್ರಕ್ಕೆ ಸಮಂಜಸ ವಾದ ಉತ್ತರದಂತೆ, ॥ಜಗಜ್ಜನ್ಮಾದಿಹೇತವೇ॥ ಎಂದು ಲಿಂಗರೂಪಿ ಪರಶಿವನನ್ನು ಶ್ರೀಪತಿ ಪಂಡಿತರು ಸ್ತುತಿಸಿರುವುದು, ಉಪನಿಷದರ್ಥವನ್ನೇ ಪ್ರತಿಪಾದಿ ಸುತ್ತಲಿರುವುದು. ॥ಯತೋವಾ ಇಮಾನಿ ಭೂತಾನಿ ಜಾಯಂತೇ ।ಏನಜಾತಾನಿ ಜೀವಂತಿ, ಯತ್ಪ್ರಯಂತ್ಯಭಿ ಸಂವಿಶಂತಿ ।ತದ್ವಿ ಜಿಜ್ಞಾಸಸ್ವತದ್ಬ್ರಹ್ಮ ॥ಅಂದರೆ ॥ಲಿಂಗಂ ಚಿದಾತ್ಮಕಂ ಬ್ರಹ್ಮ ॥ ಎಂಬಂತೆ, ಬ್ರಹ್ಮದಿಂದುದ್ಭವಿಸಿದ ಅಖಂಡ ವಿಶ್ವವು ಬ್ರಹ್ಮನನ್ನೇ ಆಶ್ರಯಿಸಿ ಬ್ರಹ್ಮಾಂಡವೆನಿಸಿ ಅಂತ್ಯದಲ್ಲಿ ಅನಂತನೆನಿಸಿದ ಪರಬ್ರಹ್ಮ ಅರ್ಥಾತ್ ಲಿಂಗರೂಪಿ ಪರಶಿವನಲ್ಲೇ ಅಡಗುವುದರಿಂದ, ಜಗತ್ತಿಗೆ ಮಿಥ್ಯತ್ವ ಅನ್ವಯಿಸಲಿಕ್ಕಿಲ್ಲ ಪರಿಣಾಮವಾದವನ್ನು ಹಿಡಿದು ಶ್ರೀಕರಭಾಷ್ಯ, ಕಾರರು ಇತರ ಭಾಷ್ಯಕಾರರುಗಳಂತೆ ಜಗತ್ಸತ್ಯತ್ವವನ್ನು ಶೃತ್ಯರ್ಥಗಳ ಆಧಾರ ಗಳಿಂದ ಸ್ವಚ್ಛಂದವಾಗಿ ನಿರೂಪಿಸಿ ಮಥಿಸಿರುವರು.

॥ ಯಸ್ಮಾದಿದಂ ಜಗತು ಜಾಯತ । ಯತ್ರ ತಿಷ್ಠತ್ಯಂತೇ।
ಸಮಸ್ತ ವಿಧಮಸ್ತ ಮುಪೈತಿಯತ್ರ । ತಸ್ಮೈ ನಮಃ
ಸದಸದಾದಿ ವಿಕಲ್ಪಶೂನ್ಯ । ಚೈತನ್ಯಮಾತ್ರಮಪುಷೇ
ಪುರುಷೋತ್ತಮಾಯ ॥ ಎಂಬ ಸ್ತೋತ್ರದಿಂದಲೂ, ಮತ್ತೂ

॥ ಪೂರ್ಣಮದಃ ಪೂರ್ಣಮಿದಂ । ಪೂರ್ಣಾತ್ಪೂರ್ಣ ಮುದಚ್ಯತೇ ।
ಪೂರ್ಣಸ್ಯ ಪೂರ್ಣಮಾದಾಯ । ಪೂರ್ಣಮೇವಾವಶಿಷ್ಯತೇ ॥

ಎಂಬ ಉಪನಿಷದ್ ಮಂತ್ರ ಭಾಗಗಳಿಂದಲೂ, ಮತ್ತೂ ಶಿವಲಿಂಗವು

॥ ಸರ್ವೇಷಾಂಸ್ಥಾನ ಭೂತತ್ವಾ। ಲ್ಲಯ ಭೂತ ತ್ವತಸ್ತಥಾ । ತತ್ವಾನಾಂ ಮಹದಾದೀನಾಂ ಸ್ಥಲ ಮಿತ್ಯಭಿಧೀಯತೇ ॥ ಜಗತ್ತಿನ ಉತ್ಪತ್ತಿ ಶೋರ್ವಿಕೆ ಹಾಗು ಉಪರತಿಗಳಿಗೆ ಲಿಂಗರೂಪಿ ಪರಶಿವನು *The Eternal Divine Refuge* ಆಶ್ರಯ ಭೂತನಾಗಿರುವನು.

ಇದರಿಂದಾಗಿ, ॥ ಸರ್ವಂ ಖಲ್ವಿದಂ ಬ್ರಹ್ಮ ॥, " ವಾಸುದೇವಸ್ಸರ್ವ ಮಿತಿ," "ಈಶಾವಾಸ್ಯಮಿದಂಸರ್ವಂ," "ಮತ್ಸ್ಥಾನಿಸರ್ವ ಭೂತಾನಿ","ಮಮಾತ್ಮಾ ಸರ್ವ ಭೂತಾತ್ಮಾ, " ಮಯಾತತ ಮಿದಂಸರ್ವಂ । ಸೂತ್ರೇಮಣಿಗಣಾ ಇವಾ", ಮೊದಲಾದ ಉಪನಿಷದ್ವಾಕ್ಯಗಳಿಂದ ಕಂಡುಬರುವುದೇನೆಂದರೆ ಚರಾಚರಾತ್ಮಕವಾದೀ ಅಖಿಲ ವಿಶ್ವವು ಪರಮಾತ್ಮನಲ್ಲಿ " ಮಯೂರಾಂಡರ ಸನ್ಯಾಯದಂತೆ ಇದ್ದು ಪ್ರತಿಫಲಿಸಿ, ಪ್ರಾದುರ್ಭಾವಗೊಂಡು ಮತ್ತವನಲ್ಲೇ ಅಡಗಿರುವುದೆಂದು ಸ್ಪಷ್ಟವೇಯಿರುತ್ತೆ. *All are parts of that Stupendous Whole* ಎಂದೂ ಮತ್ತು *this visible, tangible and invisible universe is nothing but a projection from that Eternal Being which is Self existent, Resplendant and infinitely Glorious* ಎಂಬುದಾಗಿ ಪಾಶ್ಚಿಮಾತ್ಯ ಪಂಡಿತರು ಸಹ ನಿರ್ಧರಿಸಿರುವರು "ಸರ್ವಂ" ಎಂಬ ಪದ ಮೇಲುದಹರಿಸಿದ ಎಲ್ಲಾ ಶೃತಿಮಂತ್ರಗಳಲ್ಲಿ ಹಾಸುಹೊಕ್ಕಾಗಿ ಬಳಸಿರುವುದರಿಂದ, ಆ ಶಬ್ದ ವಿಶಾಲಾರ್ಥ ಗರ್ಭಿತವುಳ್ಳದ್ದಾಗಿ, ಸ್ಥಾವರ ಜಂಗಮಾತ್ಮಕ

ವಾದ ಇಡಿ ಬ್ರಹ್ಮಾಂಡವನ್ನೇ ಅಷ್ಟೇ ಅಲ್ಲದೆ, ಅನಂತಕೋಟಿಬ್ರಹ್ಮಾಂಡಗಳೂ "ಸ್ಥಲ" ಶಬ್ಧದಿಂದ ನಿರ್ದೇಶಿಸಲ್ಪಡುವ ಪರಬ್ರಹ್ಮ(ಪರಶಿವ) ನಿಂದಲೇ ಪ್ರಾದುರ್ಭಾವಗೊಂಡು ವಿಚಿತ್ರಾಯಮಾನವಾಗಿ ಪ್ರಕಾಶಿಸಿ — ಸಮುದ್ರದಿಂದ ಹೊರಬಿದ್ದ ಅಲೆ, ನೊರೆ, ಗುಳ್ಳೆ, ಕೋಟಿ ಕೋಟಿ ತರಂಗಗಳು ಮೇಲೆ ಧಿಮ್ಮಿ, ಧುಮ್ಮಿಕ್ಕಿ ಭೋರ್ಗರೆದು ಮತ್ತೆ ಸಮುದ್ರದಲ್ಲೇ ಉಪರತಿ ಹೊಂದುವಂತೆ, ಅಖಿಲಬ್ರಹ್ಮಾಂಡಕೋಟಿಗಳು ಯಾವ ಮೂಲಭೂತವಾದ ಪರಾತ್ಪರವಸ್ತು, ॥ಯಃ ಮೂಲಂ ಪ್ರಾದುರಾಸೀತ್ ॥ ಅಂದಹಾಗೆ, ॥ ನಮಸ್ತುಂಗಶಿರಃ ಶ್ಚುಂಭಿ ಚಂದ್ರಚಾಮರ ಚಾರವೇ। ತ್ರೈಲೋಕ್ಯ ನಗರಾರಂಭ । ಮೂಲಸ್ಥಂಭಾಯ ಶಂಭವೇ ॥ ಅಖಿಲಕ್ಕೂಮೂಲ ಸ್ಥಂಭಾಯ ಮಾನವಾಗಿರುವ ಪರಶಿವ ತತ್ವದಲ್ಲಿ ಅವಿನಾಭಾವಸಂಬಧದಿಂದ "ಪ್ರಕೃತಿ" ಅಥವಾ "ಶಕ್ತಿ" ಯೆಂದೆನಿಸಿ ವಿರಾಜಿಸುವ "ಶಿವಶಕ್ತಿಯರ" ವೈಶಿಷ್ಟ್ಯ ಆದ್ವಿತೀಯ ರಚನಾತ್ಮಕವಾಗಿ ವಿರಾಜಿಸುತ್ತಲಿರುವುದರಿಂದ ದ್ವೈತ, ವಿಶಿಷ್ಟಾದ್ವೈತ, ಶೈವ, ಶಿವಾದ್ವೈತ ಹಾಗೂ ಪಾಶ್ಚಿಮಾತ್ಯ ವಿದ್ವನ್ಮಣಿಗಳೂ, ಜಗನ್ಮಿಥ್ಯಾವಾದವನ್ನು ಖಂಡಿಸಿ, ಪರಿಣಾಮವಾದವನ್ನು ಅನೇಕ ಶೃತ್ಯಾಧಾರಗಳಿಂದ ಪ್ರತಿಪಾದಿಸಿ ಜಗತ್ಸತ್ಯವೆಂದು ನಿರ್ಣಯಗೊಳಿಸಿರುವರು. "ದೇವೋ ಗಾವೋ ಬ್ರಾಹ್ಮಣೋಏಕ ರಾಶಿ, ಮೂಢೋ ಮೂರ್ಖೋ ಗಾರ್ಧಬೋ, ಏಕರಾಶಿ" ಎಂಬಂತ್ತೆ, ಸಜಾತೀಯವಾದ ಅಂಶಗುಣಗಳುಳ್ಳ ಪದಾರ್ಥಗಳನ್ನು ವಿಜಾತೀಯವಸ್ತುಗಳೊಂದಿಗೆ ಸರಿತೂಗಿಸಿ ಸಮಗಟ್ಟಲು ಹೇಗೆ ಸಾಧ್ಯವಿಲ್ಲವೋ ಅದರಂತೆ " ಜೀವ ಜಗತ್ತು ಜಗದೀಶ್ವರ " ಎಂಬೀ ಮೂರು ಸಜಾತೀಯವರ್ಗದ ಪರಿಣಾಮ ರೂಪಕಾರ್ಯವಾಗಿರುವುದರಿಂದ ಜೀವೇಶ್ವರರನ್ನು ಸತ್ಯ, ಸನಾತನರೆಂದೂ, ಇವರ ಶ್ರೇಣಿಯಲ್ಲಿ ಕೂಡಿಕ್ಕೊಂಡಿರುವ ಜಗತ್ತಿಗೆ ಮಿಥ್ಯತ್ವವನ್ನು ಹೇಳಲಿಕ್ಕೆ ಹೇಗೆ ತಾನೆ ಸಮಂಜಸವೆನಿಸೀತು. ಶ್ರೀಪತಿಪಂಡಿತರು ಶ್ರೀಕರಭಾಷ್ಯದಲ್ಲಿ ವಿದ್ವತ್ಪೂರಿತ ಶೈಲಿಯಿಂದ ಸಮರ್ಪಕವಾಗಿ ಜಗತ್ತೂಸತ್ಯವೆಂಬ ಘನಅಂಶವನ್ನು ವಿಶದೀಕರಿಸಿರುವರು. ಸುಜ್ಞಾನಿಗಳಿಗೆ ಶ್ರೀಕರವೆಂದೆನಿಸಿದ, ಸುಜ್ಞಾನಾದಿ ಸಂಪದಭ್ಯುದಯಾದಿಗಳ ಆಗರದಂತೆಸೆವ, ಆಧ್ಯಾತ್ಮತತ್ವ ಸುಧಾಸಿಂಧುವೇ ಶ್ರೀಪತಿಪಂಡಿತರಿಂದ

ಜಗತ್ತಿಗೆ ಅನುಗ್ರಹೀತವಾಗಿರುವ ವೀರಶೈವ ದರ್ಶನ, ಶಿವಾದ್ವೈತವೆಂಬ ತತ್ವವನ್ನೊಳಗೊಂಡ ಹಾಗೂ ಪ್ರಸ್ಥಾನತ್ರಯಗಳ ಮೇಲಿನ ಸಮೀಚೀನವಾದ ಭಾಷ್ಯ "ಶ್ರೀಕರ ಭಾಷ್ಯ". ಪ್ರಸ್ಥಾನ ತ್ರಯಂಗಳಿಗೆ ಅನೇಕಾನೇಕ ಭಾಷ್ಯಕಾರರೂ ಮತಸ್ಥಾಪನಾಚಾರ್ಯರೂ ರಚಿಸಿರುವ ಆ ಆಭಾಷ್ಯಗಳನ್ನು ಶ್ರೀಪತಿ ಪಂಡಿತರು ಸಮೀಚೀನವಾಗಿ ಪರಿಷ್ಕರಿಸಿ, ನಿರ್ಮಲ ಹೃದಯದಿಂದಲೂ ಸರಳಭಾವದಿಂದಲೂ ಕುಶಾಗ್ರವಿವೇಚನೆಯಿಂದಲೂ ಗಂಭೀರವೂ ಸರ್ವಸಮ್ಮತವೂ ಆದ ರೀತಿಯಲ್ಲಿ ಶೃತಿ ಸ್ಮೃತಿ ಯುಕ್ತಿ ಅನುಭವ ಸಮಾದಾನ ಮತ್ತು ಪ್ರಮಾಣಗಳಿಂದ ವಿರಾಜಿತವಾದ, ಸ್ವತಃ ಸಿದ್ಧ ಸಿದ್ಧಾಂತವನ್ನು ಸ್ಥೈರ್ಯ ಧೈರ್ಯಗಳಿಂದ ಹೃದಯಂಗಮವಾಗಿ ಸಮರ್ಥಿಸಿ, ಆ ಸಮರ್ಥನೆಯ ಸ್ವಯಂಪ್ರಕಾಶದ ವ್ಯಾಪ್ತಿಯಲ್ಲಿ ಶಿವಾದ್ವೈತ ತತ್ವದ ಅಖಂಡ ದಿವ್ಯ ಚಿನ್ಮಯ ಘನತೇಜೋರಾಶಿಯ ಪ್ರಭುತ್ವ, ಮಾತೃವತ್ ಸರ್ವತ್ರ ಬೆಳಗಿ ಅಖಿಲವನ್ನೂ ಗರ್ಭೀಕರಿಸಿಕೊಂಡಿರುವಂಥ ಮಹದಂಶವನ್ನು ಶ್ರೀಕರ ಭಾಷ್ಯವು ರಮ್ಯವಾಗಿ ಹೊರಸೂಸುತ್ತಿರುವುದು. ಇದಕನ್ಯವಾದ ನಿರ್ಣಯಗಳಿಂದ ಕಾಣುವ ದ್ವೈತ, ವಿಶಿಷ್ಟಾದ್ವೈತ, ಅದ್ವೈತ ಶೈವಸಿದ್ಧಾಂತವೆಂಬ ವೈದಿಕಮತಗಳು ಆ ಆ ಮತಾಚಾರ್ಯರುಗಳಿಂದ ಪ್ರತಿಪಾದಿತವಾದಂತೆ, ಶೃತಿಯ ಒಂದೊಂದು ಭಾಗವನ್ನು ಮಾತ್ರವೇ ಅವರುಗಳು ಪ್ರಮಾಣವೆಂದು ಅಂಗೀಕರಿಸಿ, ಭಿನ್ನಭಿನ್ನ ಸಿದ್ಧಾಂತಗಳಿಂದ ಭಿನ್ನವಾಗಿರುವುವು. ಆದರೂ ಅವರೆಲ್ಲರೂ ಶೃತಿದೇವಿಯ ದಿವ್ಯ ಅಡಿದಾವರೆಗಳನ್ನು ಆಶ್ರಯಿಸಿ ಶರಣಾಗತರಾಗಿರುವುದರಿಂದ । ಮೇಲ್ಕಂಡ ಮತಗಳು ಪೂಜನೀಯವೆನಿಸಿ ಮುಕ್ತಿ ಮಂದಿರವನ್ನೇರಲು ಸಹಕರಿಸಿರುವ ಸೋಪಾನಗಳಂತೆ ವಿರಾಜಿತವಾಗಿರುವುವು.

॥ಶೃತ್ಯೇಕದೇಶ ಪ್ರಾಮಾಣ್ಯಂ । ದ್ವೈತಾದ್ವೈತ ಮತಾದಿಷು ।
ದ್ವೈತಾದ್ವೈತ ಮತೇಶುದ್ಧೇ । ವಿಶೇಷಾದ್ವೈತ ಸಂಜ್ಞಕೇ ।
ವೀರಶೈವೈಕ ಸಿದ್ಧಾಂತೇ । ಸರ್ವಶೃತಿಸಮನ್ವಯಃ ॥

ವೇದದ ಪೂರ್ವಪಕ್ಷದ ದ್ವೈತ ಶಿದ್ಧಾಂತವನ್ನೂ ಉತ್ತರಪಕ್ಷದ ಅದ್ವೈತ

ಅಥವಾ ವೇದಾಂತ ಸಿದ್ಧಾಂತದವನ್ನೂ ಸಾರಸಾರ ವಿವೇಚನೆಯಿಂದ ಒಂದು ಗೂಡಿಸಿ ಸಮಂಜಸಗೊಳಿಸುವ ಧರ್ಮಸೇತುವೆ "ದ್ವೈತಾದ್ವೈತ". ಇದು ಜಗತ್ತಿಗೆ ಮೂಲಸ್ಥಂಭದಂತೆ ಅವಲಂಭನೆಯಾಗಿದ್ದು ॥ ಏಕ ವಿಜ್ಞಾನೇನ ಸರ್ವ ವಿಜ್ಞಾನಂ ಭವತಿ ॥ಎಂಬಸೂತ್ರದಂತೆ ದ್ವೈತಾದ್ವೈತ ಅಥವಾ ವಿಶೇಷಾದ್ವೈತ ಮತದ ಸ್ವರೂಪವೊಂದನ್ನು ಪೂರ್ಣ ತಿಳಿದುಕೊಂಡರೆ, ಇತರ ಮತಗಳ ಸ್ವರೂಪ ಇದೊಂದರಲ್ಲೇ ಪ್ರತಿಬಿಂಭಿತವಾಗಿರುವ ಅಂಶವನ್ನು ಕಾಣಬಹುದು. ಹೇಗೆಂದರೆ ॥ ಪಂಡಿತಃ ಸಮದರ್ಶಿನಃ ॥ ಅಂದಹಾಗೆ, ಪಂಡಿತರು ಸಮದರ್ಶಿಗಳು ಮತ್ತೂ ಕ್ಷಮಾ ವಿಭೂಷಿತರೂ ಇರುವರು.

ಸಮದರ್ಶನದಿಂದ ರೂಪಗೊಂಡ ಸರ್ವಶೃತಿಸಮನ್ವಯದ ನಿಲುವಿನ ಜ್ಞಾನ ವಿಜ್ಞಾನ ಪ್ರಫುಲ್ಲಿತ ಭಾವಗರ್ಭಿತ ಸಿದ್ಧಾಂತವನ್ನು ವಿಶಾಲದೃಷ್ಟಿ ಕೋನದಿಂದ ಹೃದಯಂಗಮವಾಗಿ ನಿರೂಪಿಸುವ ವೀರಶೈವಧರ್ಮದ ಮುಖ್ಯ ಸಿದ್ಧಾಂತ ವಿಶೇಷಾದ್ವೈತವೆಂದು ಪ್ರಸಿದ್ಧವೂ, ಸನಾತನವೂ ಶಾಸ್ತ್ರೀಯವೂ ಸರ್ವಾಂಗ ಸುಂದರವೂ ಆಗಿ ವಿರಾಜಿತವಾಗಿರುವುದನ್ನು ಶ್ರೀಕರಭಾಷ್ಯದಲ್ಲಿ ವರ್ಣಿತವಾದ ಅಂಶ ಇತೋಪ್ಯತಿಶಯವಾಗಿ ಕಾಣಬಹುದು. ದಿವ್ಯ ಗಂಗಾ ಯಮುನಾ ಸರಸ್ವತಿ ಜೀವನದಿಗಳ ತ್ರಿವೇಣಿ ಪುಣ್ಯ ಸಂಗಮದಂತೆ, ಗಂಭೀರ ವಾದ ಆಧ್ಯಾತ್ಮಿಕ ವಿಚಾರ ವಿನಿಮಯ ಕ್ಷೇತ್ರದಲ್ಲಿ ಭಕ್ತಿ ಜ್ಞಾನ ಕರ್ಮಗಳ ಸರಣಿ ಸಂಗಮ ಸಮನ್ವಯ ಹಾಗೂ ದ್ವೈತಾದ್ವೈತವೆಂಬ ಪರಮವೀರಶೈವ ಮತ ಧರ್ಮದಲ್ಲಿ ನಿರೂಪಿಸಿ ನಿರ್ಣಯಗೊಳಿಸಿರುವ. ಶಿವಲಿಂಗೋದ್ಭವ ಮೂರ್ತಿಗಳಾದ ಪಂಚ ಪೂರ್ವಾಚಾರ್ಯರ ಸಿದ್ಧಾಂತದಂತೆ, ಶ್ರೀಕರಭಾಷ್ಯದಲ್ಲಿ ದೀರ್ಘ ದರ್ಶಿಗಳೂ ಹಿರಿಯ ಸಂಯಮಿಗಳೂ ಆದ ಶ್ರೀಪತಿ ಪಂಡಿತರು ತಮಗೆ ಪೂರ್ವ ಜರಾದ ಶ್ರೀ ನೀಲಕಂಠ ಶಿವಾಚಾರ್ಯರು, ॥ ಸ್ವೇಚ್ಛಾವಿಗ್ರಹಯುಕ್ತಾಯ । ಸ್ವೇಚ್ಛಾವರ್ತನ ವರ್ತಿನೇ । ಸ್ವೇಚ್ಛಾಕೃತ ತ್ರಿಲೋಕಾಯ ನಮಃ ಸಾಂಬಾಯ ಶಂಭವೇ ॥ ಸ್ತುತಿಸಿದಂತೆ ಶಂಭುಸದೃಶ ಸ್ವಯಂಭುತೇಜೋರಾಶಿಗಳಾದ ಜಗದ್ಗುರು ಶ್ರೀ ರೇಣುಕಾದಿ ಪಂಚಾಚಾರ್ಯರುಗಳ ವೀರಶೈವ ದರ್ಶನಪರವಾದ

ಪ್ರಸ್ಥಾನತ್ರಯಂಗಳ ಮೇಲಿನ ಭಾಷ್ಯಗಳನ್ನು ಅನುಸರಿಸಿ, ಆ ಭಾಷ್ಯಗಳ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿನಾಮ ರೇಣುಕ ಗೀತೆಯ ಆಧಾರಗಳ ಮೇಲೆ ರಚಿಸಿರುವ ನೀಲಕಂಠ ಭಾಷ್ಯವನ್ನೂ ಅನುಸರಿಸಿ, ಶ್ರೀಪತಿ ಪಂಡಿತರು ತಮ್ಮ ಭಾಷ್ಯವನ್ನು ರಚಿಸಿರುವುದಾಗಿ ಕಂಡುಬರುತ್ತೆ. ಮತ್ತು ಅದ್ವಿತೀಯವಾದ ಧೈರ್ಯ ಸ್ಥೈರ್ಯ ಔದಾರ್ಯಾದಿ ಘನ ವಿಶಾಲಾರ್ಥ ಗರ್ಭಿತವಾದ ಸುಂದರ ಶೈಲಿಯಲ್ಲಿ ರಮಣೀಯವಾದ ಗಂಗಾ ಪ್ರವಾಹದಂಥಾ ಸರ್ವಶೃತ್ಯರ್ಥಗಳನ್ನು ಹೃದಯಂಗಮವಾಗಿ ಸಮನ್ವಯಿಸಿ, ಶ್ರೀಮದ್ ಶಿವಾದ್ವೈತ ಗೀತಾ ಸೂಪ ನಿಷತ್ಸು ಬ್ರಹ್ಮ ಶಿವವಿದ್ಯಾಯಾಂ – ಯೋಗಶಾಸ್ತ್ರೇ – ಭಗವಾನ್ ಶ್ರೀರೇಣು ಕಾಗಸ್ತ್ಯ ಸಂವಾದೋಪದೇಶಾತ್ಮಕ ರೇಣುಕಗೀತೆಯಲ್ಲಿ ಅಂತರ್ಗತವಾಗಿರುವ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಜ್ಞಾನೈಕ್ಯ ಮಾರ್ಗಾವಲಂಭನೆಯನ್ನು ಬಿಡದೆ ಸಕ್ರಮಬದ್ಧವಾಗಿ ಅನುಸರಿಸಿ ಶ್ರೀಪತಿ ಪಂಡಿತರು ತಮ್ಮ ಘನ ಶ್ರೀಕರ ಭಾಷ್ಯದಲ್ಲಿ ದಿಟ್ಟತನದಿಂದ ವಿವೇಚನಾತ್ಮಕ ವಿದ್ವತ್ಪೂರಿತ ಹಾಗೂ ಸರ್ವವಿದ್ವ ಜ್ಜನಗ್ರಾಹ್ಯಶೈಲಿಯಲ್ಲಿ ವಿಸ್ತರಿಸಿ, ಶೃತ್ಯರ್ಥಗಳಿಗನುಗುಣವಾಗಿ ಸಮರ್ಥಿಸಿರುವ ಸತ್ಯಾಂಶ ನಿಗಮಾಗಮಗಳ ಅರ್ಥಗಳಿಗೆ ಯಥಾರ್ಥವಾಗಿ ಸಮನ್ವಯಿಸುವುವು, ಎಂಬ ಮಹದಂಶ ಶ್ಲಾಘನೀಯವೇ ಆಗಿರುವುದು. ಆದ್ದರಿಂದ ಎಲ್ಲಾ ಉಪ ನಿಷತ್ತುಗಳ ಸಾರ ಸಂಗ್ರಹವೆನಿಸಿದ ವಿಶೇಷಾದ್ವೈತ ಸಿದ್ಧಾಂತವನ್ನು ಅನಂತವೂ ಅಖಂಡವೂ ಆಗಿ ಪ್ರಕಾಶಗೊಳಿಸುತ್ತಾ, ವಿಜಯವಾಟಿಕಾಕ್ಷೇತ್ರ ಪ್ರವಿರಾಜಮಾನ (ಬೆಜವಾಡ ನಗರ ನಿವಾಸಿಯಾಗಿಯೂ) ಶ್ರೀ ಶೈಲ ಜಗದ್ಗುರು ಶ್ರೀಪಂಡಿತಾರಾಧ್ಯ ಪೀಠಾಧಿಪತಿಗಳೂ ಆದ ಶ್ರೀಪತಿ ಪಂಡಿತಾರಾಧ್ಯ ಶಿವಾಚಾರ್ಯರು.—

॥ ವೇದಾಗಮಾರ್ಥತತ್ವಜ್ಞಃ ಶೈವಾನಾಂ ಮೋಕ್ಷಕಾಂಕ್ಷಿಣಾಂ।
ವೈದಿಕಾನಾಂ ವಿಶುದ್ಧಾನಾ ಮೇತದ್ಭಾಷ್ಯಂಹಿ ಕಲ್ಪಕಂ ॥

ಅಂದರೆ, ಶಿವಾಗಮಾಮ್ನಾಯಾದಿಗಳ ಹೃದಯವನ್ನು ಅರಿತು ಅನುಭವ ಪೂರ್ಣ ಅರ್ಥ ಮಾಡಿಕೊಂಡಿರುವ ನಿರ್ಮಲ ಹೃದಯ ಸ್ವಾಂತರೂ, ಶ್ರದ್ಧಾ

ಭಕ್ತಿ ಸಂಪನ್ನರೂ, ವಿರಾಗದಿಂದ ಮೋಕ್ಷಾಪೇಕ್ಷಿಗಳಾದ ಸುಹೃತ್ತುಗಳಿಗೆ (ಶಿವಶರಣರಿಗೆ) ಪರಶಿವತತ್ವವನ್ನು ಪರಮಾದರದಿಂದ ಬೋಧಿಸುವ ಸನ್ಮಂಗಳ ಪ್ರದವಾದ ಶ್ರೀಕರ ಭಾಷ್ಯವು ಶುದ್ಧಸ್ಫಟಿಕದಂತೆ ಬೆಳಗಿ ಆಪ್ಯಾಯನವೂ ಅಮೃತೋಪಮಾನಕರವೂ, ಆನಂದದಾಯಕವೂ, ಆಗಿ ವಿದ್ವನ್ಮಾನ್ಯವೂ ತತ್ವಾರ್ಥ ವಿಜ್ಞಾನಸಾಗರವೂ ಆಗಿ ವಿರಾಜಿಸಿ, ಪರಮಜಿಜ್ಞಾಸುಗಳಿಗೂ ದಿವ್ಯ ಮಾರ್ಗದರ್ಶಕವಾಗಿರುವುದು. ಶ್ರೀಮದ್ವೈಪಾಯನ ಮುನಿಗಳೆಂದು ಜಗದ್ವಿ ಖ್ಯಾತರಾದ ಶ್ರೀ ವ್ಯಾಸಾಚಾರ್ಯರಿಂದ ರಚಿಸಿಲ್ಪಟ್ಟ ಬ್ರಹ್ಮ ಸೂತ್ರಗಳ ಅರ್ಥವನ್ನು ಅಕ್ಷರಶಃ ಪುಷ್ಟೀಕರಿಸಿ ವಿಶದಗೊಳಿಸುತ್ತಾ, ಶಿವದೀಕ್ಷಾ ಸಂಸ್ಕಾರ ದಿಂದ ಭಕ್ತರ ಭವಪಾಶವನ್ನು ಪರಿಹರಿಸಿ, "ಕಾಲ"ತತ್ವದಿಂದ "ಪೃಥ್ವಿ" ತತ್ವದ ವರವಿಗೂ ಇರುವ ಮೂವತ್ತು ತತ್ವಗಳಿಂದ ಕೂಡಿ, "ಪುನರಪಿ ಜನನಂ ಪುನರ ಪಿಮರಣಂ। ಪುನಗಪಿ ಜನನಂ ಪುನರಪಿ ಮರಣಂ। ಪುನರಪಿ ಜನನೀ ಜಠರೇ ಶಯನಂ ॥ ಎಂಬಂತೆ ಸಾವಿರಾರು ಜನ್ಮಗಳನ್ನು ಎತ್ತಲು ಹೈತುಕವಾಗಿರುವ "ಪುರ್ಯಷ್ಟಕ" ವೆಂಬ ಹೆಸರಿನಿಂದ ಬೆಳಗುವ ಸೂಕ್ಷ್ಮ ಶರೀರವನ್ನು ಛಿದ್ರಿಸಿ ವಿನಾಶಗೊಳಿಸಿ, ಸ್ಥೂಲ ಸೂಕ್ಷ್ಮಕಾರಣ ಶರೀರಗಳನ್ನು ಇಷ್ಟ ಪ್ರಾಣ ಭಾವ ಲಿಂಗಗಳಲ್ಲಿ ಲಯಗೊಳಿಸಿ ಸರ್ವಾಂಗಲಿಂಗಮಯನೂ ಶಿವಲಿಂಗ ಭೋಗೋಪ ಭೋಗಿಯಾಗಿ, ಲಿಂಗಾಂಗ ಸಾಮರಸ್ಯಮೋಕ್ಷ ಸುಖವನ್ನು ಹೊಂದಲು ಮತ್ತು ಭಿನ್ನಭಿನ್ನ ಮತಗಳೆಂಬ ಮದಗಜಗಳಿಗೆ ಸಿಂಹ ಪ್ರಾಯವಾಗಿಯೂ, ಕೇವಲ ನಿರ್ವಿಶೇಷಾದ್ವೈತ ವೆನಿಸದೆ ಸವಿಶೇಷಾದ್ವೈತವಾಗಿಯೂ ರಂಜಿಸಿ ಉಭಯಾ ತ್ಮಕನೂ ಅನಂತನೂ ಆಗಿ, ಅಘಟನಾಘಟನಾತ್ಮಕ ಸಮಗ್ರ ಶಕ್ತಿಯುತನಾದ ಪರಮಾತ್ಮನ ಅರಿವನ್ನು ಮಾಡಿಕೊಡುವ ವಿದ್ಯೆಯೆಂದರೆ ಶ್ರೀಕರಭಾಷ್ಯವೆಂಬ ಸದ್ವಿದ್ಯೆಯೇ ಆಗಿದುತ್ತೆ.

ಷಡ್ಗುಣೈಶ್ವರ್ಯ ಪರಿಪೂರ್ಣ ಸಂಪನ್ನನಾದ ಶ್ರೀಮತ್ಪರಮೇಶ್ವರನು—

॥ ಐಶ್ವರ್ಯಸ್ಯ ಸಮಗ್ರಸ್ಯ, ವೀರ್ಯಸ್ಯ ಯಶಸಃ ಶ್ರೀಃ ।
ಜ್ಞಾನ ವೈರಾಗ್ಯಯೋ ಶ್ಚೈವ, ಷಣ್ಣಾಂಭಗ ಇತಿ ಈರಿಣಾ ॥

ಎಂಬಂತೆ, ಅನಂತಾನಂತ ಬ್ರಹ್ಮಾಂಡ ಕೋಟಿಗಳಲ್ಲಿ ವಿರಾಜಿಸುವ

ಸಮಗ್ರ ಐಶ್ವರ್ಯ ಸಂಪತ್ ಸೌರಭವೂ, ವೀರ್ಯವತ್ತರವಾದ ಸಮಗ್ರಪರಾ ಕ್ರಮವೂ, ಕೀರ್ತಿ, ಯಶಸ್ಸು, ಸನ್ಮಂಗಳವೂ, ಸಮಗ್ರ ಜ್ಞಾನವಿಜ್ಞಾನವೂ ಮತ್ತು ವೈರಾಗ್ಯತ್ಯಾಗಾದಿ ಸತ್‌ಸ್ವರೂಪ ಚಿದಾನಂದ ಚೈತನ್ಯವೇ "ಚೈತನ್ಯಂ ಬ್ರಹ್ಮ" ಭಗವಂತನೆನಿಸಿ, ಷಡ್ಗುಣೈಶ್ವರ್ಯ ಸಂಪನ್ನನೂ ಎನಿಸಿ, ॥ ಮಧುರ ಮಧುರ ಮೇತನ್, ಮಂಗಳಂ ಮಂಗಳಾನಾಂ ॥ ಮಂಗಳಂಗಳಿಗೆಲ್ಲಾ ಸನ್ ಮಂಗಳದಾಯಕನೂ ಮಧುರಂಗಳಿಗೆಲ್ಲಾ ಪರಮಮಾಧುರ್ಯ ಪ್ರದನೂ ಆದ ಪರಶಿವನು, ಅಕ್ಷರನೂ ಶಕ್ತಿಯುತನೂ ಹಾಗೂ ಶಕ್ತಿ ವಿಶಿಷ್ಟಾತ್ಮಕನೂ, ಶಿವಶಕ್ತಿಮಯನೂ ಕೂಟಸ್ಥನೂ ಅರ್ಧನಾರೀಶ್ವರತ್ವಾದಿ ಅನಂತಾನಂತ, ಸದ್ಗುಣ ವಿಶಿಷ್ಟನೂ, ನಿಸ್ತ್ರೈಗುಣ್ಯನೂ, ವಿಶ್ವಾತೀತನೂ ವಿಶ್ವವಂದ್ಯನೂ, ವಿಶ್ವತೋಮುಖ, ವಿಶ್ವಾಕ್ಷ, ವಿಶ್ವಸ್ವರೂಪನೂ, ವಿಶ್ವಕುಟುಂಬಿಯೂ ಶ್ರೀ ಕಾಶಿವಿಶಾಲಾಕ್ಷಿ ಪ್ರಾಣವಲ್ಲಭನೂ, ಶ್ರೀಶ್ರೀ ವಿಶ್ವೇಶ್ವರನೂ, ವಿಶ್ವಂಭರನೂ ನಿರಂಜನನೂ, ನಿಷ್ಕಲನೂ, ನಿರಾಮಯನೂ, ನಿರವಯವನೂ, ಅಪ್ರಮೇ ಯನೂ ತಾನೇ ಆಗಿ ರಂಜಿಸಿ ವಿಜೃಂಭಿತನಾಗಿ ಬ್ರಹ್ಮಾಂಡಾಖಂಡಾದ್ವಯ ಮಹೋನ್ನತವಾಗಿ ವಿರಾಜಿಸುವ ಮಹದಂಶವನ್ನು ಶೃತಿದೇವಿಯು ಸಮುದ್ರ ಘೋಷದಂತೆ ಮುಕ್ತಕಂಠದಿಂದ ಸಾರುತ್ತಿರುವಳು. ಶುದ್ಧ ಬ್ರಹ್ಮ ಪರಾತ್ಪರ ವಸ್ತುವೆನಿಸಿದ ಪರಶಿವನು ಮೂರ್ತನೂ ಹೌದು. ಅಮೂರ್ತನೂ ಹೌದು. ಶುದ್ಧ ಸ್ಫಟಿಕದೋಪಾದಿಯಲ್ಲಿ ಸಕಲನೂ ಹೌದು. ನಿಷ್ಕಲನೂ ಹೌದು. ಸವಿಶೇಷನೂ ಹೌದು. ನಿರ್ವಿಶೇಷನೂ ಹೌದು. ಸಾಕಾರನೂ ಹೌದು. ನಿರಾಕಾರನೂ ಹೌದು. ಎಂಬಿವೇ ಅನಂತ ಪ್ರಮಾಣಗಳನ್ನು ಶೃತಿಮಾತೆಯು ಎತ್ತಿ ಪ್ರತಿಪಾದಿಸುತ್ತಾ.—

> ॥ ವೇದಾಃ ಸ್ತುವಂತಿ ಸ್ಮೃತಯಃ ಪ್ರತಿಪಾದಯಂತಿ ॥ ತ್ವಾಮ
> ಕ್ಷರಂ ಶಿವಮನಂತಮನೇಕ ರೂಪಂ ॥ ಶಕ್ತ್ಯಾವಿಶಿಷ್ಟ ಮುಭ
> ಯಾತ್ಮಕ ಮೇಕಮಾದ್ಯಂ ॥

ಎಂಬುದಾಗಿ ಬೋಧಿಸಿ, ಸರ್ವೇಶ್ವರನ ಸ್ವರೂಪ ಸಾಕ್ಷಾತ್ಕಾರವನ್ನು ಸಂಕು ಚಿತಭಾವದಿಂದಏಕಪಕ್ಷೀಯವಾಗಿ ಪರಿಗಣಿಸಿ ನಿರ್ಣಯಿಸಲು ಆಳವೆ ! ಅವನು

" ಸ್ವಾನುಭೂತ್ಯೈಕಮಾನಾಯ " ಅಂದಹಾಗೆ ಕೇವಲ ಭಕ್ತಿ ಪರವಶತೆಯಿಂದ ಮಾಡುವ ಧ್ಯಾನಗಮ್ಯನು ॥ ಪರಂಬ್ರಹ್ಮ ಪರಂಧಾಮ। ಪವಿತ್ರಂ ಪರಮಂ ಭವಾನ್ । ಪುರುಷಂ ಶಾಶ್ವತಂ ದಿವ್ಯಂ । ಆದಿ ದೇವಮಜಂ ವಿಭುಂ॥ ಎಂಬಿವೇ ನಿರ್ಧಾರಗಳು ಪರಮಾತ್ಮನ ಅನಂತ ಮುಖವೈಶಿಷ್ಟ್ಯವನ್ನು ಶೃತಪಡಿಸುತ್ತ ಲಿರುವುವು. "ಉಮಾಸಹಾಯಂ ಪರಮೇಶ್ವರಂ ಪ್ರಭುಂ" ಎಂಬ ಶೃತಿವಚನ ದಂತೆ ಪರಶಿವನು ಶಕ್ತಿ ವಿಶಿಷ್ಟನೂ ಹೌದು. ಮತ್ತು ಅವನು ॥ ಪ್ರಕೃತೇಃ ಪರಃ॥ ಅಖಂಡವಾದೀ ಪ್ರಕೃತಿ ಸ್ವರೂಪನೂ ಆಗಿರುವನು ಮತ್ತು ಅದೇ ಸಮಯದಲ್ಲಿ ಪ್ರಕೃತಿಗೆ ಅತೀತನೂ ಆಗಿರುವನು. ಇದರಿಂದಾಗಿ ವೇದಾಗಮ ಉಪನಿಷದಾದಿಗಳಿಗೂ ಶಿವಶರಣರಿಗೂ ಪರಶಿವನು ಏಕನೆಂತಲೂ, ಉಭಯಾ ತ್ಮಕನೆಂತಲೂ, ನಾನಾತ್ಮಕನಾಗಿ ಅನಂತನೆಂತಲೂ, ಅದ್ವಿತೀಯನೆಂತಲೂ, ಸ್ತುತ್ಯನಾಗಿ ವಿರಾಜಿತನಾಗಿರುವುದರಿಂದ ಕಿಂಚದಜ್ಞತಾ ಶಕ್ತಿಯಿಂದ ಕೂಡಿದ ಅಲ್ಪಾಯುವಾದೀ ಬಡಮಾನವನ ನಿರ್ಣಯ ಸರ್ವತ್ರ ಏಕಪಕ್ಷೀಯವಾಗಿ ನಿಲ್ಲಲು ಸಾಧ್ಯವೆ ?

ಶ್ರೀಮದ್ಭಗವದ್ಗೀತೆಯಲ್ಲಿ:—

॥ಯೋ ಯೋ ಯಾಂ ಯಾಂ ತನುಂ ಭಕ್ತಃ ।<br>
ಶ್ರದ್ಧಯಾರ್ಚಿತುಂಇಚ್ಛತಿ॥ ತಸ್ಯತಸ್ಯಾ<br>
ಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಂ॥

ಅಂದರೆ ಯಾವ ಯಾವ ಭಕ್ತರು ಶ್ರದ್ಧಾ ಭಕ್ತಿಯಿಂದ ನನ್ನನ್ನು ಯಾವ ಯಾವ ರೂಪನಾಮಗಳಿಂದ ಕಂಡು ಆಕರ್ಷಿತಭಾವದಿಂದ ನಲಿದು ಆನಂದಿಸಿ ನನ್ನನ್ನು ಹೊಂದಲು ಪ್ರೇಮಾ ಮೃತಭಾವದಿಂದ ಇಚ್ಛಿಸುವರೋ ಅಂಥವರಿಗೆ ಅವರವರ ಮನೋಭಾವಕ್ಕನುಗುಣವಾಗಿ ನಾನು ನನ್ನ ಇಚ್ಛಾಶಕ್ತಿಯಿಂದ ಆವಿರ್ಭವಿಸಿ ಪ್ರಕಟವಾಗಿ ತೋರುವೆನೆಂದು ಅಭಯಃ ವನ್ನಿತ್ತಿರುವನು.

ಮಹಾಮಹಿಮ ಕೈವಲ್ಯ ಪತಿಯಾದ ಸ್ವಾಮಿ ಸರ್ವಾಂತರ್ಯಾಮಿಯಾ

ಗಿರುವುದರೊಂದಿಗೆ ಸರ್ವಕ್ಕೂ ಆಶ್ರಯಭೂತನಾಗಿ॥ ಸರ್ವಂ ಖಲ್ವಿದಂ ಬ್ರಹ್ಮ॥ ಎಂಬಂತೆ ಅಖಿಲವೂ ತಾನೇ ಆಗಿ, ಆವಿರ್ಭಾವ ಅಂತರ್ಧಾನಗಳೆಂಬ ಭಕ್ತೋದ್ಧಾರ ಲೀಲಾವಿಭೂತಿ ಯೋಗದಿಂದ ವಿರಾಜಿಸುತ್ತ ಪುರಾಣಪುರುಷನೂ ಹಾಗೂ ಪ್ರಣವಸ್ವರೂಪಿಯೂ ಆಗಿ ರಂಜಿಸುತ್ತಲಿರುವನು. *God is Omnipotent. He is Omnipresent and He is Omniscient. He is Beginningless and Endless. He is the Alfa and Omega* ಎಂಬೀ ನುಡಿಗಳು ಮೇಲೆ ಸೂಚಿಸಿದ ಮಹದಂಶವನ್ನೇ ಪ್ರತಿಪಾದಿಸುತ್ತಲಿವೆ.

ವೇದಾಗಮೋಪನಿಷತ್ತುಗಳಲ್ಲೂ, ॥ಮತ್ಸ್ಥಾನಿ ಸರ್ವಭೂತಾನಿ॥, ॥ಮಮಾತ್ಮಾಸರ್ವ ಭೂತಾತ್ಮ॥ ಮಯಾತತಮಿದಂ ಸರ್ವಂ ॥,॥ಈ ಶಾವಾಸ ಮಿಂದಂಸರ್ವಂ ॥ ವಾಸುದೇವಃ ಸರ್ವಮಿತಿ॥ ಎಂಬೀ ವಾಕ್ಯಗಳು ಜೀವ ಜಗತ್ತು ಜಗದೀಶ್ವರರಿಗಿರುವ ನಿಕಟ ಸಂಪರ್ಕ ಸಂಬಂದ ಸಾಮ್ಯಗಳನ್ನು ಹೊರಸೂಸುವಂತೆ ಭಾಸಮಾನವಾಗಿರುವುವು. ಭಕ್ತೋದ್ಧಾರಕನೂ ಜಗದುದ್ಧರಣೈಕ ಶೀಲನೂ ಆದ ಪರಮೇಶ್ವರನು

ಅವರವರ ಭಾವಕ್ಕೆ
ಅವರವರ ಭಕುತಿಗೆ
ಅವರವರ ತೆರನಾಗಿ
ಇರುತಿಹನು ಶಿವಯೋಗಿ ॥೧॥
ಹರಿಯ ಭಕ್ತರಿಗೆ ಹರಿ ।
ಹರನ ಭಕ್ತರಿಗೆ ಹರ ।
ನರರೇನು ಭಾವಿಸುವ ।
ರಪರಂತೆ ತೋರುವನು ॥೨॥
ಅವರವರ ದರುಶನಕೆ
ಅವರವರ ವೇಷ ರೂಪಂಗಳಲಿ ।
ಅವರವರಿಗೆಲ್ಲ ಗುರು ನೀನೊಬ್ಬನೇ ॥೩॥

ಅವರವರ ಭಾವಕ್ಕೆ ।
ಅವರವರ ಪೂಜೆಗೆಂ ।
ಅವರಿವರೆಮ್ಮವರಿಗೆಲ್ಲರಿಗೇ ।
ದೇವ ! ದೇವಾದಿದೇವ !! ನೀನೊಬ್ಬನೇ !!!

ಜಗದ್ಗುರುದೇವ ॥

ಅಂತೆಂದ ಬಳಿಕ ॥ ಶೃತಿ ವಚನವಾಡುವುದು । ಶರಣಾಗತರ ರಕ್ಷಕನೆಂದು॥ ಶರಣಾಗತರಾದ ಭಕ್ತರಿಗೆ ಸ್ವಾಮಿ ತನ್ನ ಸ್ವರೂಪವನ್ನು ಕಟಾಕ್ಷಿಸುವುದರಲ್ಲಿ ಹಾಗೂ ನಿಜಭಕ್ತರನ್ನು ತನ್ನ ಸ್ವರೂಪದಲ್ಲಿ "ಶಿಖಿ ಕರ್ಪೂರವತ್" ಅಪ್ಪಿಕೊಳ್ಳು ವುದರಲ್ಲಿ ॥ಅಭಯದಂ ಕರುಣಾಭರಣಂ ಶಿವಂ॥ ಇಂತಪ್ಪ ಮಹಿಮಾನ್ವಿತನಾದ ಪರಶಿವನು ಸಮಗ್ರಶಕ್ತಿಯುತನಾಗಿರುವುದರೊಂದಿಗೆ, ವಿಚಿತ್ರಾ್ರಯಮಾನಕರ ವಾದ ॥ ಯೋಗಮಾಯಾ ಸಮಾವೃತಃ ॥ ಎಂಬಂತೆ ಮಾಯಾ – ಮಾಯಿ ಎಂಬಿವೇ ಮೊದಲಾದ ದೈವೀ ಶಕ್ತಿ ವಿಶಿಷ್ಟನೂ ಅನಂತಾತ್ಮಕನೂ ಅಭಿನ್ನನೂ, ಆಗಿ ರಂಜಿಸಿ, ಏಕನೂ, ಉಭಯಾತ್ಮಕನೂ ಆಗಿ ॥ ಸ್ವಾನು ಭೂತ್ಯೇಕಮಾ ನಾಯ ॥ ಎಂಬಂತೆ ಶಿವಯೋಗಿಗಳ ಅನುಭವ ಗಮ್ಯನಾದ ಪರಶಿವನ ಮಹಿಮೆ ॥ಮಹಿಮ್ನಃ ಪಾರಂತೇ । ಪರಮವಿದುಷೋ । ಯದ್ಯಸದೃಶೀ ॥ ಸ್ತುತಿ। ಬ್ರಹ್ಮಾ ದೀನಾಮಪಿ ತದವಸನ್ನಾಸ್ತ್ವಯಿಗಿರಃ॥ ಅದಂರೆ, ಮಹಾದೇವನ ಮಹಾ ಮಹಿಮೆ ಮಹಾತ್ಮರಿಗಲ್ಲದೆ ಮಂಕುಮಾನವರಿಗೆ ಹೀಗೇ ಎಂದು ನಿರ್ಧರಿಸಿ ಹೇಳಲು ಎಂತು ಸಾಧ್ಯ. "ಮನವಚನ ಕತಿದೂರ ನೆನೆದವರ ನನುಸರಿಸಿ ಬರುವ" ಪರಶಿವನ ಒಲುಮೆಗೆ ಭಕ್ತಿಯೇ ಮೂಲ ಸಾಧನವಾದ್ದರಿಂದ ॥ತ್ವತ್ಪಾ ದಾಂ ಬೋರುಹ ಯುಗಗತಾ । ನಿಶ್ಚಲಾ ಭಕ್ತಿ ರಸ್ತು ॥ ಭೋಸ್ವಾಮಿ೯! ನಿನ್ನ ಪಾದಾರವಿಂದಗಳಲ್ಲಿ ಅನವರತ ಅನನ್ಯಭಕ್ತಿ ಇರುವಂಥಾ ದಿವ್ಯ ಭಾಗ್ಯವನ್ನು ನನಗೆ ಕೊಡೆಂದು ನಾವು ನಿತ್ಯ ದೇವರನ್ನು ಪ್ರಾರ್ಥಿಸಬೇಕು. ॥ ಮಲಗಿಪಾಡಿದರೆ ತಲೆಯ ಬಳಿ ಕುಳಿತು ಕೇಳುವನು, ಕುಳಿತು ಪಾಡಿದರೆ ಹಿಂದೆ ನಿಂತು ಕೇಳು ವನು । ನಿಂತುಪಾಡಿದರೆ ನಲಿವನು । ನಲಿದರೆ ಒಲಿವನು ಎನ್ನಯ ಪುರಂದರ

ವಿಠಲನು || ಎಂದು ಪುರಂದರದಾಸರು ಹಾಡಿ ನುಡಿದಿರುವರು. ದ್ವೈತಾದ್ವೈತ ಮತವಲ್ಲಿ ಉಭಯಾತ್ಮಕನಾದ ಪರಮಾತ್ಮನ ಸಂದರ್ಶನ ಸಾಕ್ಷಾತ್ಕಾರಗಳು ಸ್ವಚ್ಛಂದವಾಗಿ ನಿರೂಪಿತವಾಗಿರುವುವು.

ಉಪನಿಷತ್ ಪ್ರತಿಪಾದಿತ ಮೂರ್ಧನ್ಯ ಮಹಾಮಂತ್ರ ವಾಕ್ಯಾನು ಸಂಧಾನವನ್ನು ಎತ್ತುಕೊಳ್ಳುತ್ತಲೆ ಆರಂಭಿಸಿ ಜಪಿಸಿ, ಮುಕ್ತಸ್ಥಿತಿಯನ್ನು ವಾಚಾರಂಭಣದಿಂದ ಬಾಹ್ಯಾಭ್ಯಂತರಂಗಗಳ ಎಲ್ಲಾ ವ್ಯವಹಾರಗಳಲ್ಲೂ ತೈಲಧಾರೆಯಂತೆ ಏಕಪ್ರಕಾರವಾಗಿ – ಕೇವಲಾ ದ್ವೈತ ಬೋಧಿಸುತ್ತಲಿದೆ. ಸರ್ವಸಂಗ ಪರಿತ್ಯಾಗ ಮಾಡಿದ ಅವದೂತ ಮಹಾಪುರುಷನಿಗೆ, ನಿವೃತ್ತಿ ಧರ್ಮಮಾರ್ಗಾವಲಂಭಿಯಾದ ಜೀವನ್ಮುಕ್ತ ಮಹಾಪುರುಷನಿಗೆ ಹಾಗೂ ಶರಣಸ್ಥಲದ ಮಹಾಶಿವಶರಣ, ಶಿವವ್ರತಿಗೆ ಬೋಧ್ಯವಾಗುವ "ತತ್ವಮಸಿ", "ಅಹಂಬ್ರಹ್ಮಾಸ್ಮಿ" ಮಹಾಮಂತ್ರಾನು ಸಂಧಾನದ ಬ್ರಾಹ್ಮೀ ಸ್ಥಿತಿ, ಕರ್ಮ ಜೀವಿಗಳಾಗಿ ಹೃದಯದ ಅಂನತಕೋಟಿ ಅಜ್ಞಾನ ಗ್ರಂಥಿಗಳಿಂದ ಕೂಡಿ ತೊಳಲಿ ಬಳಲುತ್ತಿರುವ ಹಾಗೂ ಸಂಸಾರವೇ ಸಾರವೆಂದು ಬಗೆದು ಪ್ರವೃತ್ತಿ ಮಾರ್ಗಾವಲಂಬನೆಯಿಂದ ವಿಕಾರ, ವಿಸ್ಮಯ ಭಾವಿಗಳಾದ ಸಾಮಾನ್ಯ ನರರಿಗೆ ಅಜ್ಞಾತ ಸ್ಥಿತಿಯಲ್ಲಿ ಮೇಲುಕ್ತವಾದ ಮೂಲಮಂತ್ರಾರ್ಥ ಹೇಗೆ ತಾನೆ ಗೋಚರವಾಗಿ ಅನ್ವಯಿಸಬಲ್ಲದು. ? ಮುಕ್ತ ಜೀವರಂತೆ ಬದ್ಧಜೀವನು ಅಹಂಕಾರ ಮಮಕಾರವರ್ಜಿತನಲ್ಲ. || ಮಮೇತಿ ಬಧ್ಯತೇಜನ್ತುಃ। ರ್ನಮಮೇತಿ ವಿಮುಚ್ಯತೇ|| ಬಂಧಾಯ ವಿಷಯಾಸಕ್ತಃ। ಮುತ್ತ್ಯೈರ್ನಿರ್ವಿಷಯಂ ಸ್ಮೃತಂ|| ನಾನು –ನನ್ನದು ಎಂಬ ಅಭಿಮಾನವೇ ಬಂಧನವಾಗಿ ವಿಕಾರವನ್ನುಂಟುಮಾಡುವುದು. ಇವೆರಡನ್ನೂ ಈಶ್ವರಾರ್ಪಿತ ಮನೋಬುದ್ಧಿಯಿಂದ ಬಿಟ್ಟು ವರ್ಜಿತಮಾಡಿದರೆ, ಆಗ ನಿರ್ವಿಷಯಕ ಮನೋಭಾವದಿಂದ ಅನಿರ್ವಚನೀಯವಾದ ಮುಕ್ತಸ್ಥಿತಿಯನ್ನು ಹೊಂದಬಲ್ಲನು. ವಿಷಯಾದಿಗಳಲ್ಲಿಟ್ಟ ಆಸಕ್ತಿಯೇ ಬಂಧನವೆನಿಸುವುದು. ಅನಾಸಕ್ತಿಯೇ ಮುಕ್ತಿಗೆ ಮಾರ್ಗ. ಬಂಧನದಲ್ಲಿ ಬಿದ್ದಿರುವ ಮಲಿನ ಚಿತ್ತಕ್ಕೆ ಚಂಚಲಾತ್ಮಕ ಅಶಾಂತಿ ಅತೃಪ್ತಿ ಎಂಬ ಅಲೆಗಳ ಬಡಿತ ನಿಲ್ಲುವಂತಿಲ್ಲ. ಚಲಿಸುವ ಚಿತ್ತ ವೃತ್ತಿಗಳಲ್ಲಿ ಆತ್ಮದರ್ಶನವಾಗುವುದುತಾನೆ ಹೇಗೆ?"ಬಳಸದಿರ ದ್ವೈತವನು ಬಾಹ್ಯದಲಿ।

ತಿಳಿ ನಿನ್ನೊಳಗೇಕೋ ಭಾವದಲಿ" ಎಂಬ ಶ್ರೀ ನಿಜಗುಣ ಶಿವಯೋಗಿಗಳ ಉಪದೇಶ ಸಂಸ್ಮರಣೀಯವೇ ಆಗಿರುವುದು.

ಯಾವ ರೀತಿ ॥ ಘಟ ಪಟ ಕುಡ್ಯಾದಿಷು। ಮುಖಂನೈವ ಪ್ರತಿಬಿಂಭಿತೇ ಕಿಂತು ನಿರ್ಮಲೇ ಮುಕುರೇ ॥ ಅಂದರೆ—
ನಿರ್ಮಲವಾದ ಕನ್ನಡಿಯಲ್ಲಿ ಮುಖಪ್ರತಿಬಿಂಭಿಸಿ ಸ್ವಚ್ಛಂದವಾಗಿ ಕಾಣುತ್ತಿದೆಯೇವಿನಃ, ಗೋಡೆ ಕುಡುಕೆ ಮಡಿಕೆ ಹಾಗೂ ವಸ್ತ್ರಗಳನ್ನು ನೋಡಿದ ಮಾತ್ರಕ್ಕೆ ನಮ್ಮ ಮುಖದ ಪ್ರತಿಬಿಂಬ ಕಾಣಲಿಕ್ಕೆ ಸಾಧ್ಯವಿಲ್ಲವೋ ಅದರಂತೆ- ॥ಆತ್ಮಾ ರಾಗದ್ವೇಶಾದಿ ದೂಷಿತ ಚಿತ್ತೇ ನ ಪ್ರತಿಫಲತಿ। ಕಿಂತು ರಾಗದ್ವೇಶಾದಿ ಮಲರಹಿತೇ ಶುದ್ಧೋ ಚಿತ್ತೇ ಪ್ರತಿಫಲತಿ ॥

ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ, ಹಾಗೂ ದರ್ಪ, ಅಹಂಭಾವವೇನು, ಮತ್ತು ರಾಗ ದ್ವೇಶಾಸೂಯಾದಿ ಮಲತ್ರಯಗಳಿಂದ ಲೇಪಿತವಾದ ಮಲಿನ ಚಿತ್ತದಲ್ಲಿ "ಆತ್ಮಾ ನ ಪ್ರತಿ ಫಲತಿ" ಪರಮಾತ್ಮನ ಬಿಂಬವು ಪ್ರತಿಬಿಂಭಿಸುವುದಿಲ್ಲ. ಮಲಿನ ಚಿತ್ತದಲ್ಲಿ ಕಾಣುವುದೆಂದರೆ ಅವಿದ್ಯೆ ಅಜ್ಞಾನ ಅಂಧಕಾರವೇ ಆಗಿರುತ್ತೆ. ಯಾರ ಚಿತ್ತವು ಮಲತ್ರಯುಗಳಿಂದ ಬಿಡುಗಡೆಹೊಂದಿ ಪರಿಶುದ್ಧವಾಗಿರುವುದೋ, ಯಾರ ಚಿತ್ತದಲ್ಲಿ ರಾಗದ್ವೇಶಾದಿಗಳ ಸುಳಿಯಿಲ್ಲವೋ, ಯಾರ ಚಿತ್ತವು ಶೋಕ ಮೋಹಗಳಿಂದ ದೂರವಾಗಿ ನಿಷ್ಠಾ ಭಕ್ತಿಯಿಂದ ಕೂಡಿ ಸ್ಥಿರವೂ ಸ್ಫಟಿಕದಂತೆ ಧಾವಳ್ಯವಾಗಿ ಪ್ರಶಾಂತತೆಯಿಂದ ಪ್ರಕಾಶಿಸುವುದೋ ಅಂಥಾ ನಿರ್ಮಲವಾದ ಶುದ್ಧಾಂತಃ ಕರಣದಲ್ಲಿ ಆತ್ಮ ಪರಮಾತ್ಮರ ದಿವ್ಯಸ್ವರೂಪ ಸಾಕ್ಷಾತ್ಕಾರ "ಪ್ರತಿ ಫಲತಿ" ಪ್ರತಿಬಿಂಬಿಸಿ ದರ್ಶನವಾಗುವುದು. ಆದರೆ ಶೋಕ ಮೋಹಾದಿಗಳನ್ನು ಬಿಟ್ಟವರು ಬಹು ವಿರಳ. ಮಾನವ ಮಾಯಾಪ್ರಪಂಚದಲ್ಲಿ ಗಾಢ,। ವ್ಯಾಮೋಹಿತನಾಗಿರುವನು. ಮಾಯೆ ಯಾದರೋ ॥ ಮನದ ಮುಂದಣ ಮೋಹವೇ ಮಾಯ ಕಣಾ ಗುಹೇಶ್ವರಾ ॥ ಅಂದಹಾಗೆ ಅನಂತಕೋಟಿ ವ್ಯಾಮೋಹದಲ್ಲಿ ನೊಂದು

ನುಚ್ಚುನೂರ್ಥಾಗಿ ಬಳಲುವಂಗೆ ಸ್ಥಿರಚಿತ್ತ ವೆಲ್ಲಿಯದು. ಶಮ ದಮಾದಿ ಶಾಂತಿಯುತಾನೆ ಎಲ್ಲಿದೆ? "ಜೀವೇ ವಾರಿತರಂಗ ಚಂಚಲತರೇ ಶಾಂತಿಃ ಕುತಃ ಪ್ರಾಣಿನಃ ಅಥವಾ ಸೌಖ್ಯಂಕುತಃ ಪ್ರಾಣಿನಃ ||. ಸಮುದ್ರದಲೆಗಳ ನಿರಂತರ ಬಡಿತದಂತೆ ಜನಜೀವನದಲ್ಲಿ ಹಗಲಿರುಳು ಕಷ್ಟಸುಖಗಳೆಂಬ ಅಲೆಗಳು ಮನವೆಂಬ ದಡಕ್ಕೆ ಬಂದು ಎಡಬಿಡದೆ ಇವನನ್ನು ಬಡಿದು ಅಪ್ಪಳಿಸುತ್ತಿರಲು ಶಾಂತಿ ಇವನಿಗೆಲ್ಲಿಯದು? "ಶಾಂತಮುಲೇಕ ಸೌಖ್ಯಮುಲೇದು। ದಾಂತುಲಕ್ಕೈನ ವೇದಾಂತುಲಕ್ಕೈನನು.... " ಎಂದು ಶ್ರೀ ತ್ಯಾಗ ಬ್ರಹ್ಮರು ಹಾಡಿರುವುದು ಸೂಕ್ತವೇ ಇರುತ್ತೆ. ಈ ಕಾರಣದಿಂದ ತಿಳಿಯ ಬರುವುದೇನೆದಂರೆ, ಅದ್ವೈತ ಮತದ ಮೂಲಪೀಠಾಚಾರ್ಯರೂ ಸಹ ಅಂತರಂಗದಲ್ಲಿ ಜೀವಾತ್ಮ ಪರಮಾತ್ಮರುಗಳ ಜೀವ ಬ್ರಹ್ಮೈಕ್ಯ ಮಹಾಮಂತ್ರವನ್ನುಚ್ಚರಿಸಿ ಒಮ್ಮೊಮ್ಮೆ ಮೌನವ ಧರಿಸಿ ಆತ್ಮಾನು ಸಂಧಾನದಿಂದ " ಅಹಂಬ್ರಹ್ಮಾಸ್ಮಿ " ಮಹಾಮಂತ್ರ ಧ್ಯಾನಾ ಸಕ್ತರಾಗಿದ್ದರೂ, ಮಂತಿನಿಂದ ಮಸರನ್ನು ಕಡಯದಿದ್ದರೆ ಅದರಲ್ಲಿ ಅಂತರ್ಗತವಾಗಿರುವ ನವನೀತ (ಬೆಣ್ಣೆ) ಹೇಗೆ ಹೊರಬೀಳುವುದಿಲ್ಲವೋ ಹಾಗೆ ನಮ್ಮಲ್ಲಿ ಅಂತರ್ಯಾಮಿಯಾಗಿರುವ ಪರಮಾತ್ಮನನ್ನು ಸಂದರ್ಶಿಸಬೇಕಾದರೆ ನಿಕೃಷ್ಟ ಕರ್ಮಗಳನ್ನು ತ್ಯಜಿಸಿ — ಮೊದಲು ಮೊದಲು "ಶಿವಪೂಜೆಯೆಂಬ ಸತ್ಕ್ರಿಯೆ" ಶಿವಪಂಚಾಕ್ಷರಿ ಮಹಾಮಂತ್ರ ಜಪಾನುಷ್ಠಾನ, ನಂತರ ಶಿವಧ್ಯಾನಾನುಸಂಧಾನ, ಪ್ರಸನ್ನ ಚಿತ್ತದಲ್ಲಿ ಪರಮ ಪ್ರೇಮಾಮೃತ ಮಾಧುರ್ಯಾದಿ ಜ್ಞಾನ ಕ್ರಿಯೆಗಳ ಸಮನ್ವಯ ನಿಲವು ಬಾಹ್ಯಾಭ್ಯಂತರಗಳಲ್ಲೂ ಏಕಪ್ರಕಾರವಾಗಿ ಪ್ರಕಟಿಸಿ, ಅನುಷ್ಠಿಸಿ, ಆಚರಿಸಿ, ಘನಶಿವಪೂಜೆಯಿಂದಲೇ ಜೀವಶಿವನಾಗುವನೆಂಬ ಮಹದಂಶವನ್ನು, ತಮ್ಮಪೈನಂದಿನದ ಪರಮ ಬಾಹ್ಯಾಚರಣೆಯಿಂದಲೂ ಅನುದಿನ ಬಿಡದೆ ಶಿವಯಜ್ಞವನ್ನು (ಶಿವಪೂಜಾ ಮಹಾಯಜ್ಞವನ್ನು) ನೆರವೇರಿಸುತ್ತಲಿರುವರು. ಆದಿ ಶ್ರೀ ಶಂಕರಾಚಾರ್ಯರಿಂದ ಪರಂಪರಾನುಗತವಾಗಿ ಅದ್ವೈತ ಮೂಲ ಪೀಠಾಚಾರ್ಯರು ಗಂಗಾ ಪ್ರವಾಹದಂತೆ ತಮಗೆ, ಶ್ರೀ ಸೋಮೇಶ್ವರ ಲಿಂಗಾವಿರ್ಭೂತ ಜಗದ್ಗುರು ಸಾರ್ವಭೌಮ ಶ್ರೀ ರೇವಣಸಿದ್ಧ ಮಹಾಶಿವಯೋಗಿರಾಟ್‌ರವರು, ಸ್ವಹಸ್ತದಿಂದ ಅನುಗ್ರಹಿಸಿದ

ರತ್ನ ಗರ್ಭಗಣಪತಿಯನ್ನೂ ಶ್ರೀಚಂದ್ರಮೌಳೀಶ್ವರ ಲಿಂಗವನ್ನೂ ಅತ್ಯಂತ ಭಕ್ತಿಭಾವದಿಂದ ಅವಿಚ್ಛಿನ್ನವಾಗಿ ಪೂಜಿಸುತ್ತಲಿರುವುದು, ಅವರ ಆಚರಣೆಯಲ್ಲಿ ಪೂಜ್ಯಪೂಜಕ ಭಾವವು ನೆಲೆಗೊಂಡಿರುವುದೇ ದ್ವೈತಾದ್ವೈತ ಮತ ತತ್ವದ ಸಂಜ್ಞೆಯಾಗಿರುತ್ತೆ. ಇಂತಪ್ಪ ಬಾಹ್ಯ ಪೂಜೆ ದ್ವೈತ ತತ್ವವನ್ನು ಪ್ರತಿಪಾದಿಸುತ್ತಿರಲು, ನಿತ್ಯ ನಿಷ್ಕಾಮಾರ್ಚನೆಯ ಫಲವಾಗಿ ಜೀವನು ಮನೋಚಾಂಚಲ್ಯವನ್ನು ನೀಗಿ ಸ್ಥಿರಬುದ್ಧಿ ಮನೋವಾಕ್ಕಾಯಾದಿಗಳಿಂದ ಸಿದ್ಧಿ ಹೊಂದಿ ತನ್ನಲ್ಲಿ ಅಂತರ್ಯಾಮಿಯಾಗಿರುವ ಪರಮಾತ್ಮನ ಸ್ವಯಂ ಜ್ಯೋತಿ ರೂಪದರ್ಶಿಸಿ, ಮತ್ತವನಲ್ಲೇ ಶಿಖಿಕರ್ಪೂರವತ್ ಲೀನಭಾವದಿಂದ ಅದ್ವೈತ ಸ್ಥಿತಿಯಲ್ಲಿ ಪರಿಪೂರ್ಣನಾಗುತ್ತಿರುವ ಶಿವಾದ್ವೈತದ ತಿರುಳನ್ನೇ ಅದ್ವೈತಮತ ಮೂಲ ಪೀಠಾಚಾರ್ಯರುಗಳೂ ಆದಿಯಿಂದಲೂ ಪರಂಪರಾನುಗತವಾಗಿ ಅನುಷ್ಠಿಸಿ; ಪಾರಮಾರ್ಥಿಕ ಐಹಿಕ ಉಭಯ ದೃಷ್ಟಿಕೋನಗಳಿಂದಲೂ ಸಮಂಜಸ ಭಕ್ತಿ ಭಾವದಿಂದ "ಪೂಜ್ಯ ಪೂಜಕ ಭಾವಲೀಲಾ" ತತ್ವದ ಘನ ದೈವೀ ಸರಣಿಯಲ್ಲಿ ತನುಮನಗಳನ್ನು ವಿಲೀನಗೊಳಿಸುವ ಈ ಮಹದಂಶವನ್ನು ಎತ್ತಿ ಜಗತ್ತಿಗೆ ತೋರಿಸುವಂತೆ, ವಿಶೇಷಾದ್ವೈತದ ಸ್ವಯಂ ಶಾಂಭವಿ ತೇಜಸ್ಸನ್ನು ನಿರಂತರವಾಗಿ ॥ ಸ್ವಾನು ಭೂತ್ಯೇಕಮಾನಾಯ । ನಮಃ ಶಾಂತಾಯ ತೇಜಸೇ ॥ ಅಂದಂತೆ, ಸ್ವಾನುಭೂತಿಯಲ್ಲಿ ಕಂಡುಂಡನು ಭವಿಸುತ್ತಲಿರುವರು. ಮೇಲುದಹರಿಸಿದ ಕಾರಣದಿಂದ ಕೇವಲಾದ್ವೈತಿಗಳೂಸೂಕ್ಷ್ಮವಾಗಿ ಪರಿಶೀಲಿಸಿದ್ದಲ್ಲಿ ಶಿವಾದ್ವೈತವನ್ನೇ ಅಪ್ಪಿ ಅಂತರ್ಮುಖಿಗಳಾಗುತ್ತಿರುವರೆಂಬುವುದು ನಿರ್ವಿವಾದವೂ ಶಾಸ್ತ್ರೀಯ ಅಂಶವೇ ಆಗಿರುತ್ತೆ.

॥ ಕೀಟೋಪಿ ಭ್ರಮರಾಯತೆ ॥ ಎಂಬ ನ್ಯಾಯಾನುಸಾರ, ಅನುದಿನ ಅನನ್ಯಭ್ರಮರ ಚಿಂತನೆಯಿಂದ ಕೀಟವು ಭ್ರಮರವೇ ಆಗುವ ತೆರದಿ, "ಚಿಂದಿತ್ತು ಚಿಂದಿತ್ತು ಶಿವಮಾನಾರ್" ಎಂದಹಾಗೆ, ಅವಿಚ್ಛಿನ್ನಭಾವದಿಂದ ಪೂಜ್ಯ ಪೂಜಕ ಧರ್ಮವನ್ನು ಅವಲಂಬಿಸಿ "ನೀ ಶಿವನು, ನೀ ನಾದ್ಯ, ನೀ ನೇಕನಕ್ಷರನು ನೀ ಶಕ್ತಿಯುತನು, ಭಯರೂಪನೆನುತ ॥, ಪರಮಾತ್ಮನನ್ನು ಸ್ತುತಿಸಿ ಪೂಜಿಸಿ

ಕೈ ಜೋಡಿಸಿ ನಮಸ್ಕರಿಸಿ ॥ ಭೋ ! ಪ್ರಭೋ ! ನಾಶವಾಗಲಿ ನಮ್ಮ ಪಾಪ ತಾಪಗಳೆಲ್ಲ, ಪೋಷಿಸಲಿ ಮೂಜಗವ ಮುಕ್ಕಣ್ಣನು ॥ ಎಂದು ಶರಣಾಗತಿ ಭಾವದಿಂದ ನಿತ್ಯಧ್ಯಾನ ಮಾಡುತ್ತ ಬಂದರೆ, ದಿನ ಕ್ರಮೇಣದಲ್ಲಿ ಈಶಾನುಗ್ರಹ ದಿಂದ, " ಶಿವಪೂಜೆಯಿಂದಲೇ ಜೀವ ಶಿವನಾಗುವನೆಂಬ " ಸುವಿಚಾರಿಗಳ ಸ್ವಾನುಭವಾಭಿ ಮತಕ್ಕನುಸಾರ, "ನಾ ನೀ, ನೀ ನಾ" ಎಂಬ ಭೇದಭಾವ ಹಡಗಿ ॥ ಏಕತ್ವಮನು ಪಶ್ಯತಃ॥ ಎಂಬಂತೆ ಆತ್ಮಸ್ವರೂಪದಲ್ಲಿ, ನದಿಯು ಸಾಗರದಲ್ಲಿ ವಿಲೀನವಾಗುವಂತೆ ಶಿವಾದ್ವೈತದ ಭೂಮಿಕೆಯಲ್ಲಿ ಜೀವನು ಶಿವನಲ್ಲಿ ವಿಲೀನನಾಗುವನು. ಆದ್ದರಿಂದ ವೀರಶೈವ ಮತ ದ್ವೈತಾದ್ವೈತ ಸಮನ್ವಯ ಮತವೆಂದು ಅನಾದಿ ಕಾಲದಿಂದಲೂ ಪ್ರತೀತಿ ಇದೆ. ಅದ್ವೈತಿಗಳೂ, ಅದ್ವೈತ ಪೀಠಾಧಿಪತಿಗಳೂ ಅಂತರಂಗದಲ್ಲಿ "ಅಹಂಬ್ರಹ್ಮಾಸ್ಮಿ" ಮಹಾಮಂತ್ರಾನು ಸಂ ಧ್ಯಾನವನ್ನು ಆಧ್ಯಾತ್ಮಿಕವಾಗಿ ಮಾಡುತ್ತಲಿದ್ದರೂ, ಶಿವಪೂಜಾ ರೂಪ, ಪತಿಕರ್ಮ ಗಳಾದ ಅಭಿಷೇಕ, ಆರಾಧನೆ, ಅಭಿವಂದನೆ, ಸ್ತುತಿ ನಿವೇದನೆಗಳೆಂಬ ರಾಜೋಪ ಚಾರಗಳನ್ನು ಶಾಸ್ತ್ರೋಕ್ತ ವಿಧಿಯಂತೆ ಮಾಡದೆ ಬಿಟ್ಟಿಲ್ಲ. ಪೂಜಾದಿ ಜಪಾನು ಷ್ಠಾನಗಳು ದ್ವೈತಮಯವೇ ಆಗಿರುವುವು. ಜೀವನ್ಮುಕ್ತನೂ ಸಹ ದೇಹೇಂದ್ರಿ ಯಗಳೊಂದಿಗೆ ಇರುವವರವಿಗೂ ಮೇಲೆ ಹೇಳಿದ ದ್ವೈತಧರ್ಮವನ್ನು ಬಿಟ್ಟು ಕ್ಷಣ ಕಾಲ ಬಾಳುವಂತಿಲ್ಲ. ಶಿವೈಕ್ಯನಾದಂಗೆ ಬಾಹ್ಯಕರ್ಮಗಳ ಗೋಜಿಲ್ಲ. ಪರಿಪೂರ್ಣ ಜೀವ ಬ್ರಹ್ಮೈಕ್ಯ ಅಂದರೆ ಲಿಂಗಾಂಗದಲ್ಲಿ ಸಮರಸವಾಗುವವರವಿಗೂ ದ್ವೈತಾ ಚರಣೆಗಳಾದ ಜಪತಪ ಪೂಜಾದಿಗಳು ಅವಶ್ಯಕವಾಗಿ ಬೇಕೇಬೇಕು. ॥ಯಜ್ಞೋ ದಾನಂ ತಪ ಶ್ಚೈವ ಪಾವನಾನಿ ಮನೀಷಿಣಾಂ॥ ಇದು ಶಾಸ್ತ್ರದ ವಿಧಿ, ಸನಾತನ ಧರ್ಮ, ಶಿವಾಗಮಗಳ ತಿರುಳು, ಗೀತೆಯ ಸಾರಸರ್ವಸ್ವ, ಸಿದ್ಧಾಂತ ಶಿಖಾಮಣಿ ಬೋಧಿಸುವ ತತ್ವವಾದರೂ ಇದೇ ಆಗಿರುತ್ತೆ. ಜಗದ್ಗುರು ಆದಿ ಶ್ರೀ ಶಂಕರಾ ಚಾರ್ಯರು ತಮ್ಮ ಮೂಲ ಪೀಠದಲ್ಲಿ ಆಚರಣೆಯಲ್ಲಿ ಪ್ರಕಾಶಿತಗೊಳಿ ಸಿರುವುದೂ ಸಹ ಈ ಧರ್ಮವೇ ಆಗಿ ಶಿವಾರ್ಚನಾತ್ಮಕ ಪತಿಯಜ್ಞ ವೆನಿಸಿರುವುದು.

ಯಾವ ಶ್ರೀ ರತ್ನಗರ್ಭಗಣಪತಿಯನ್ನೂ ಶ್ರೀ ಚಂದ್ರಮೌಳೀಶ್ವರ

ಲಿಂಗವನ್ನೂ ಭಗವತ್ಪಾದ ಜಗದ್ಗುರು ಸಾರ್ವಭೌಮ ಶ್ರೀ ಶ್ರೀ ರೇಣುಕಾಚಾರ್ಯರು ಆದಿ ಶ್ರೀ ಶಂಕರಾಚಾರ್ಯರಿಗೆ ಅನುಗ್ರಹಿಸಿ ಶಿವಾನುಭವವನ್ನು ಸಾಕ್ಷಾತ್ತಾಗಿ ಬೋಧೆ ಗೈದರೋ, ಆ ಮಹಾತತ್ವಾಚರಣೆ ಅಚ್ಚಳಿಯದ ರೀತಿಯಲ್ಲಿ ಇಂದಿಗೂ ಶ್ರೀ ಶೃಂಗೇರಿ ಮೂಲ ಪೀಠದಲ್ಲಿ ಹೃದಯಂಗಮವಾಗಿ ಆಚರಣೆಯಲ್ಲಿರುವ ಅಂಶ ಕಂಡುಬರುತ್ತಿಲಿರುವುದು ಸರಿಯಷ್ಟೆ. ಅಂದ ಬಳಿಕ ದ್ವೈತಾದ್ವೈತ ಅಥವಾ ವಿಶೇಷಾದ್ವೈತ ಮತ ತತ್ವ, ಜಗದ್ಗುರು ಆದಿ ಶ್ರೀ ಶಂಕರಾಚಾರ್ಯರ ಕಾಲಕ್ಕಿಂತಲೂ ಬಹು ಪೂರ್ವ, (ಪ್ರಾಚೀನಕಾಲದಿಂದಲೂ) ಶೃತಿ ಶ್ಮೃತಿಗಳಲ್ಲುಕ್ತವಾದಂತೆ ಪ್ರಕಾಶಿತವಾಗಿತ್ತೆಂಬುದಕ್ಕೆ ಬಲವಾದ ಪ್ರಮಾಣ ವಿದ್ದೇ ಇದೆ. ನಿಗಮಾಗಮಗಳ ಮೂಲ ಸಾರವಾದ ವೇದಾಂತವನ್ನು ಶ್ರೀ ಶಂಕರಾಚಾರ್ಯರು ಬೋಧಿಸಿದರಾದರೂ, ಅನುಷ್ಠಾನದಲ್ಲಿ ಶ್ರೀ ರತ್ನಗರ್ಭಗಣಪತಿ, ಶ್ರೀ ಶಾರದಾಂಬ, ಶ್ರೀ ಚಂದ್ರಮೌಳೀಶ್ವರ ಲಿಂಗ ಪೂಜಾರಾಧನೆಗಳನ್ನು ವಿಧಿವತ್ತಾಗಿ ಯಾವಜ್ಜೀವವೂ ಆಚರಿಸುತ್ತಾ ಶ್ರೀ ರಾಮ, ಕೃಷ್ಣ ಶ್ರೀ ಸುಬ್ರಹ್ಮಣ್ಯಾದಿ ದಿವ್ಯ ವಿಗ್ರಹಾರಾಧಕರಾಗಿದ್ದು, ಪಾದಚಾರಿಯಾಗಿ ಗ್ರಾಮಗ್ರಾಮಾಂತರಗಳಲ್ಲಿ ಸಂಚರಿಸಿ, ಜನ ಕೋಟಿಯನ್ನು ಜನಾರ್ಧನನ ನಾಮಸ್ಮರಣೆ ಭಜನೆ ಅಂದರೆ॥ ಭಜಗೋವಿಂದ ಭಜಗೋವಿಂದ ಭಜಗೋವಿಂದಂ ಮೂಢಮತೆ ! ! "ಹೇಮೂಢಮತೇ ! ವಿಷಯಾದಿಗಳಲ್ಲಿ ಆಸಕ್ತಿಯುಳ್ಳ ಸ್ವಭಾವವನ್ನು ಈಗಲಾದರೂ ಬಿಟ್ಟು ಗೋವಿಂದನನ್ನು ಆಸಕ್ತಿಯಿಂದ ಭಜಸಿ, ಸುಖಿಯಾಗೆಲವೋ" ಎಂದು ಸರ್ವತ್ರ ಹಿತ ಬೋಧೆ ಮಾಡುತ್ತಾ ॥ ಯದ್ಯತ್ಕರ್ಮ ಕರೋಮಿತತ್ತದ। ಖಿಲಂ ಶಂಭೋಃ ತವಾರಾಧನಂ॥ ಹೇ ಪ್ರಭೋಃ ! ನಾನು ಜಾಗ್ರತ್, ಸ್ವಪ್ನ, ಸೂಕ್ಷ್ಮ, ಸ್ಥೂಲಾವಸ್ಥೆಗಳಲ್ಲೇ ಆಗಲಿ, ಬುದ್ಧಿ ಪೂರ್ವಕವಾಗಿ ಯಾಗಲಿ ಅಥವಾ ಅಬುದ್ಧಿ ಪೂರ್ವಕವಾಗಿ ಯಾಗಲಿ, ಏನೇನು ಕರ್ಮಗಳನ್ನು ಆಚರಿಸುವೆನೋ ಅವನ್ನೆಲ್ಲಾ ನಿನಗೆ ಅನನ್ಯಭಾವದಿಂದ ನಿವೇದಿಸಿ ಅರ್ಪಣ ಮಾಡುವೆನೆಂದು ಪ್ರಾರ್ಥಿಸಿರುವುದು, ಅಪರಿಪೂರ್ಣ ಸ್ಥಿತಿಯಲ್ಲಿನ ಪೂಜಕ ಪೂಜ್ಯ ಭಾವಲೀಲಾ ವಿಲಾಸ ದೈವೀ ಮನೋವಿಕಾಸವೇ ಆಗಿರುವುದು. ಇದರ ಸತ್ಫಲರೂಪವಾಗಿ ಶ್ರೀ ಮದಾ

ಚಾರ್ಯರವರು ಸೌಂದರ್ಯ ಲಹರಿ, ಶಿವಾನಂದ ಲಹರಿ, ಶ್ರೀ ಲಕ್ಷ್ಮೀಸ್ತೋತ್ರ ಶ್ರೀ ನರಸಿಂಹಸ್ತೋತ್ರ, ಶ್ರೀ ಗುರು ದಕ್ಷಿಣಾಮೂರ್ತಿ ಸ್ತೋತ್ರಗಳನ್ನು ಹಾಗೂ ಅಪರಾಧಕ್ಷಮಾಪಣಾ ಸ್ತೋತ್ರಗಳನ್ನೂ ಪಠಿಸಿ ಪಾಡಿ ಪರಾತ್ಪರಪರಂ ಜ್ಯೋತಿ ಸ್ವರೂಪಿಯಾದ ಶ್ರೀ ಚಂದ್ರಮೌಲೀಶ್ವರನ ದಿವ್ಯ ಕೃಪೆಗೆ ಪಾತ್ರರಾಗಿ, ನಮಗೆ ಮಾರ್ಗದರ್ಶಕ ಪರಮ ಆದರ್ಶ ಮಹಾಚಾರ್ಯರಾಗಿ ಬೆಳಗುತ್ತಲಿರುವರು. ಮೇಲ್ಕಂಡ ಮಹದಂಶಗಳೆಲ್ಲಾ ದ್ವೈತಾದ್ವೈತ ತತ್ವದ ಶ್ರೇಷ್ಠ ಅಂಶಗಳಾಗಿ ಪರಿಶೋಭಿಸುತ್ತಲಿರುವುವು. ಇದು ಸುಳ್ಳೆಂದು ಹೇಳಲು ಬರಲಿಕ್ಕಿಲ್ಲವಷ್ಟೆ. ಇಂತಪ್ಪ ದ್ವೈತಾದ್ವೈತಗಳ ಸಮೀಚೀನವಾದ ಲಿಂಗಾಂಗ ಸಾಮರಸ್ಯಾತ್ಮಕ ಸಮನ್ವಯ ತತ್ವವೇ ವಿಶೇಷಾದ್ವೈತವೆನಿಸಿ, ಮಧುರವೂ ಸರ್ವಮಂಗಳ ಮಯವೂ, ಅಕ್ಷಯವೂ, ಅಮೃತಮಯವೂ ಆದ ಮೋಕ್ಷವೆನಿಸುವುದು.

## XIV

ದ್ವೈತಮತ ಸ್ಥಾಪನಾಚಾರ್ಯರಾದ ಶ್ರೀ ಮದಾನಂದ ತೀರ್ಥ ಭಗವತ್ಪಾದ ಶ್ರೀಮನ್ಮಧ್ವಾಚಾರ್ಯರಿಗಿಂತಲೂ ಪೂರ್ವ, ಕಲ್ಯಾಣದ ಕ್ರಾಂತಿಪುರುಷನಾದ ಮಹಾನುಭಾವ, ವೀರಶೈವ ಮತೋದ್ಧಾರಕನೆಂದು ಖ್ಯಾತಿ ಪಡೆದ ಜಗಜ್ಯೋತಿ ಶ್ರೀ ಬಸವಣ್ಣನವರ ಕಾಲಕ್ಕಿಂತಲೂ ಬಹು ಪೂರ್ವ, ವಿಶಿಷ್ಟಾದ್ವೈತ ಮತಸ್ಥಾಪನಾಚಾರ್ಯ ಭಗವತ್ಪಾದ ಶ್ರೀ ಮದಾಚಾರ್ಯರಾಮಾನುಜರ ಕಾಲಕ್ಕಿಂತಲೂ ಪೂರ್ವ, ಅದ್ವೈತ ಮತ ಸ್ಥಾಪನಾಚಾರ್ಯ ಜಗದ್ಗುರು ಆದಿ ಶ್ರೀ ಶಂಕರಾಚಾರ್ಯರಿಗಿಂತ ಬಹು ಪೂರ್ವ, ಬೌದ್ಧ, ಜೈನ ಮತಾಚಾರ್ಯರುಗಳಿಗಿಂತಲೂ ಪೂರ್ವದಲ್ಲೇ, ಮಹದಾಚಾರ್ಯವರೇಣ್ಯರೂ, ಚತುರ್ಯುಗಗಳ ಆದಿಕಾಲದಲ್ಲೇ ಶಿವಲಿಂಗೋದ್ಭವರಾಗಿ ಅವತರಿಸಿ, ಪಂಚಾಚಾರ್ಯರೆಂಬ ಅಭಿಧಾನದಿಂದ ದಿವ್ಯದೇಹಧಾರಿಗಳಾಗಿ ಮೆರೆದು, ಪ್ರಸ್ಥಾನ ತ್ರಯಗಳಾದ ಉಪನಿಷತ್ತುಗಳಿಗೂ, ಬ್ರಹ್ಮ ಸೂತ್ರ ಹಾಗೂ ಭಗವದ್ಗೀತೆಗಳಿಗೆ ಶಿವಾದ್ವೈತ ಪರವಾಗಿ ಅಮೋಘವಾದ ಭಾಷ್ಯಗಳನ್ನೂ ರಚಿಸಿ, ಇಡೀ ವಿಶ್ವಕ್ಕೆ, ಮಾನವ ಧರ್ಮ ಅಷ್ಟು ಮಾತ್ರವಲ್ಲ, ಬ್ರಹ್ಮಾಂಡ ಕೋಟಿಗಳಿಗೆ ನೆಲ ವೀಡಾದ ಮಹಾ ಮುಕ್ತಾಫಲದಂಥದ್ವೈತಾದ್ವೈತಧರ್ಮವನ್ನು ಪ್ರತಿಪಾದಿಸಿದಿಗಂತ ವಿಶ್ರಾಂತವಾದ

ಶಾಶ್ವತ ತೇಜೋಕೀರ್ತಿ ಮಹಾ ಸಂಪನ್ನರೂ, ಸ್ತುತ್ಯಾರ್ಹರೂ ಪರಮ ಪೂಜ್ಯರೂ ಆದ ಮಹಾಚಾರ್ಯ ಶ್ರೀಮಜ್ಜಗದ್ಗುರು ಸಾರ್ವಭೌಮರೆಂದರೆ, ಅಯೋನಿಜರೂ, ಪ್ರಥಮಾಶ್ರಮ ಸಂಭ್ರಮರೂ ಹಾಗೂ ಪ್ರಪ್ರಥಮಾಚಾರ್ಯ ಶ್ರೀಮದ್ರೇಣುಕಾದಿ ಪಂಚಾಚಾರ್ಯರೇ ಆಗಿರುವರು. ಶಿವಾಗಮೋಕ್ತಿಯಂತೆ ಇವರು,—

॥ಏತೇಯುಗ ಚತುಷ್ಕೇತು । ಪಂಚಾರಾಧ್ಯಾಯಥಾ ವಿಧಿಃ ।
ಮಮಲಿಂಗ ಮುಖೋದ್ಭೂತಾ । ಲ್ಲೋಕ ವಿಶೃತ ಕೀರ್ತಯಃ ॥

ಶಿವಲಿಂಗಮುಖಗಳಿಂದ ಸ್ವೇಚ್ಛಾ ವಿಗ್ರಹ ಲೀಲೆಯಿಂದ ಅವತರಿಸಿ, ಸೃಷ್ಟ್ಯಾರಂಭದಿಂದಲೂ ಅಖಿಲ ಧರ್ಮಗಳಿಗೂ ತಾಯ್ಮನೆಯಂತೆ ಪರಿಶೋಭಿಸುವ ಶಿವಾದ್ವೈತ ತತ್ವವನ್ನು ಪ್ರತಿಪಾದಿಸಿ ಜಗತ್ತಿನಲ್ಲಿ ಸ್ಥಾಪಿಸಿರುವರು. "ವಯಂ ಶಿವಾಗಮಯೋರ್ಭೇದಂ ನ ಪಶ್ಯಾಮಃ ॥ ಎಂದು ಶ್ರೀ ಅಪ್ಪಯ್ಯದೀಕ್ಷಿತರು ಸ್ಪಷ್ಟವಾಗಿ ನುಡಿದು ವೇದಗಳಂತೆ ಶಿವಾಗಮಗಳೂ ಸಹ ಅಪೌರುಷೇಯ ವಾಣಿಯೆಂದು ಜಗತ್ತಿಗೆ ಸಾರಿರುವರು. ರೇಣುಕಗೀತೆಯಲ್ಲಿ ಭಗವಾನ್ ಶ್ರೀ ರೇಣುಕಾಚಾರ್ಯರು ಅಗಸ್ತ್ಯಮುನೀಂದ್ರನಿಗೆ ಇದೇ ಅಂಶವನ್ನು ಬೋಧಿಸುವಾಗ ॥ ವೇದಸಿದ್ಧಾಂತಯೋರೈಕ್ಯ । ಮೇಕಾರ್ಥಪ್ರತಿಪಾದನಾತ್ ॥ ವೇದ ಸಿದ್ಧಾಂತಗಳು ಒಂದೇ ವಿಷಯವನ್ನು ಪ್ರತಿಪಾದಿಸುವುದರಲ್ಲಿ ಏಕಾರ್ಥದಲ್ಲೇ ಪೂರ್ಣತೆಯನ್ನು ಹೊಂದುವುವೆಂದು ಅರುಹಿರುವರು. ಶ್ರೀಪತಿ ಪಂಡಿತಾರಾಧ್ಯ ಶಿವಾಚಾರ್ಯರು ಮೇಲ್ಕಂಡ ಸ್ವಾರಸ್ಯಾಂಶವನ್ನು ವಿವರಿಸುತ್ತ॥ ಸರ್ವವೇದೇಷು ಯದೃಷ್ಟಂ। ತತ್ಸರ್ವಂತು ಶಿವಾಗಮೇ॥ ಎಂಬ ವೀರಾಗಮ ಪ್ರಮಾಣಾನುಸಾರ ವಾಗಿ ವೇದಶಾಸ್ತ್ರ ಮತ್ತು ಸಿದ್ಧಾಂತ ಶಾಸ್ತ್ರ ಇವೆರಡು ಒಂದೇ ಅರ್ಥವನ್ನು ಪ್ರತಿಪಾದಿಸುತ್ತಲಿರುವುದರಿಂದ ಇವೆರಡಕ್ಕೂ ಒಂದೇವಿಧವಾದ ಪ್ರಾಮಾಣ್ಯ ವಿರುವುದಾಗಿ ಹೇಳಿರುವರು.

ಸಚ್ಚಿದಾನಂದ ಪರಿಪೂರ್ಣನಾದ ಪರಮಾತ್ಮನು ಸ್ವೇಚ್ಛೆಯಿಂದ ಸೃಷ್ಟಿ ಗುನ್ಮುಖನಾಗಲು ॥ ಪರಮಶಿವಸ್ಯ ಪೂಜ್ಯಪೂಜಕ ಲೀಲಾಯಾಂ । ನಿಸ್ತರಂಗ

ಸಮುದ್ರೇ । ತರಂಗೋತ್ಪತ್ತೇಃ । ಪ್ರಾಕ್‌ಲಹರೀವ ಈಶಚ್ಚಲನ ಮುತ್ಪದ್ಯತೇ॥ ಅಂದರೆ, ನಾಮರೂಪಗಳೇನೂಯಿಲ್ಲದ ಆಕಾಶವತ್ ನಿರ್ಲಿಪ್ತನೂ ಗಹನ ವಾದ ಹಾಗೂ ಅತಿಗಂಭೀರ ಸ್ವಭಾವವುಳ್ಳವನಾಗಿಯೂ, ಅಪರಿಚ್ಛಿನ್ನ ನಾಗಿಯೂ " ಸ್ವಾನುಭೂತ್ಯೈಕಮಾನಾಯ " ಶಿವಯೋಗಿ ಶಿವಶರಣರುಗಳ ಸ್ವಾನುಭೂತಿಗಮ್ಯನಾದ ಸತ್‌ಚಿತ್ ಆನಂದಸ್ವರೂಪಿಯಾದ ಶಾಂತನೂ ತೇಜೋರಾಶಿಯೂ ಆಗಿ ಬೆಳಗುವ ಪರಮಾತ್ಮನನ್ನು, ॥ ಅತರಂಗಾರ್ಣವೋ ಪಮಂ ॥ ತರಂಗಲೇಶವೂಯಿಲ್ಲದ ಪ್ರಶಾಂತವಾದ ಮಹಾಸಾಗರಕ್ಕುಸಮಾನ ವಾಗಿ ಹೋಲಿಸಿರುವುದು ಸರಿಯಷ್ಟೆ. ವಾಯುವಿನ ಅಥವಾ ಗಾಳಿ ಹೊಡತ ವಿಲ್ಲದ ಸಮುದ್ರದ ಜಲಾಶಯದ ಮೇಲ್ಭಾಗದಲ್ಲಿ ಯಾವ ಅಲೆಗಳ ಸಂಕುಲ ವಿಲ್ಲದಿರಲು, ಭಾವಿತರಂಗೋತ್ಪತ್ತಿಗೆ ಸೂಚಕವಾಗಿ ಮೊಟ್ಟಮೊದಲು ಒಂದಾ ನೊಂದು ಲಹರಿಯು (ನೀರಿನ ಚಲನವಲನಾತ್ಮಕ ಪರಿವರ್ತನೆ)ಉಂಟಾಗುವುದು. ಅಲ್ಲಿಂದ ಮುಂದೆ ಶತಾಂಶ ಸಹಸ್ರಾಂಶ ಲಕ್ಷಗಟ್ಟಲೆಅಲೆಗಳು ಸಾಗರದಲ್ಲಿ ಧುಮ್ಮಿಕ್ಕುವುವು.ಅದರಂತೆಪ್ರಣವ ಪ್ರಕಾಶೈಕ ಮಂಗಳ ವಿಗ್ರಹ ಪರಿಪೂರ್ಣನಾದ ಪರಮಾತ್ಮನಲ್ಲೂ, ಒಮ್ಮೊಮ್ಮೆಭಾವಿಪ್ರಪಂಚಲೀಲೋತ್ಪತ್ತಿಗೆ ಪೂರ್ವದಲ್ಲಿ ಭಾವಿ ಲೀಲೋತ್ಪತ್ತಿ ಸೂಚಕವಾಗಿ, ಮೊಟ್ಟಮೊದಲು ಪೂಜ್ಯಪೂಜಕ ಭಾವಲೀಲಾರ ಸಾನು ಭವೇಚ್ಛಾಮಯ ಒಂದಾನೊಂದು ದಿವ್ಯಲಹರಿ ವಿಶೇಷವು, ನಿರಂಕುಶ ಸ್ವಾತಂತ್ರ್ಯದಿಂದ ಉಂಟಾಗುವುದೆಂದು ಶಾಸ್ತ್ರ ಬೋಧಿಸುವುದು. "ಇಚ್ಛಾ ಮಾತ್ರ ಪ್ರಭೋಸ್ಸೃಷ್ಟಿ: " ಎಂಬಂತೆ ಸಮಗ್ರಶಕ್ತಿ ಸಂಪನ್ನನಾದ ಪರಶಿವನ ಇಚ್ಛಾಶಕ್ತಿ ಗರ್ಭದಿಂದ ಉದಯಿಸುವ ಲೀಲಾವಿಭೂತಿ ಯೋಗಯುಕ್ತವಾದ ಲಹರಿಯನ್ನೇ ॥ ಈಶಚ್ಚಲನ ಮುತ್ಪದ್ಯತೇ ॥ ಈಶಚ್ಚಲನವೆಂದು ಹೇಳಲ್ಪಟ್ಟಿದೆ. ॥ ಈಶ್ವರಃ ಸರ್ವಗತಃ ॥ ಎಂದ ಬಳಿಕ ಸರ್ವತ್ರವ್ಯಾಪಕನಾಗಿ ಸರ್ವಾಂ ತರ್ಯಾಮಿಯಾಗಿ ಸರ್ವತ್ರ ಪರಿಪೂರ್ಣನಾದ ಪ್ರಭುವಿನಲ್ಲಿ ಚಲನಾತ್ಮಕ ಕ್ರಿಯೋತ್ಪತ್ತಿಗೆ ಅವಕಾಶವೆಲ್ಲಿಯದು. "ಪೂರ್ಣಮದಃ ಪೂರ್ಣಮಿದಂ"ಎಂಬಂತೆ ಎಲ್ಲೆಲ್ಲೂ ಪರಮಾತ್ಮನು ಏಕಪ್ರಕಾರವಾಗಿ ತುಂಬಿತುಳುಕುತ್ತಿರುವನು. "ಸ್ಥಾಣು :– ನಗಚ್ಛತಿ–ನತಿಷ್ಠತಿ" ಅಂದರೆಅಚಲನು ಬೇರೊಂದೆಡೆಗೆ ಚಲಿಸುವ

ವನಲ್ಲ, ಅವನು ಅಸಂಗನು ಅಖಂಡನು ಅಲಿಪ್ತನು ಅಕ್ಷರನು ಮತ್ತೂ ಅವ್ಯಕ್ತ ನೆಂದು ವೇದವು ಶೃತಪಡಿಸುತ್ತಲಿರುವುದು. ವೇದಮಾತೆಯು ಮುಂದುವರೆದು, ವಿಭುವಾದ ಪರಶಿವನು ಅನಂತ ಶಕ್ತಿಯುತನು ಸ್ಫುರಣ ಮಯನು, ನಾದಬಿಂದು ಕಲಾತೀತನು ಹಾಗೂ ಚೈತನ್ಯಮಯನೂ ಆಗಿ ರಂಜಿಸಿ, ಸ್ವಾತ್ಮನಿ ಸೃಷ್ಟಿ, ಸ್ಥಿತಿ, ಲಯಾದಿ ಕ್ರೀಯಾ ವಿಶಿಷ್ಟ ಶಕ್ತಿಯುತನೆಂದೂ ಅವಿೋಘವಾಗಿ ಸ್ತುತಿಸಿ ॥ ಚೈತನ್ಯಂ ಬ್ರಹ್ಮ ॥ ವೆಂತಲೂ ॥ ರಸೋವೈಬ್ರಹ್ಮ॥ ವೆಂತಲೂ ಸಾರುತ್ತಲಿರುವಳು. ಇದರಿಂದ ಕಂಡುಬರುವುದೇನೆಂದರೆ ಚೈತನ್ಯ ಮಯನೂ, ಸ್ಫುರಣಮಯನೂ, ರಸಮಯನೂ ಆದ ಪರಮಾತ್ಮನಲ್ಲಿ ಇಚ್ಛಾ ಶಕ್ತಿ ಎಂಬ ಸ್ಫುರಣಶಕ್ತಿಯು ಸಹಜವಾಗಿ ಪ್ರಕಾಶಿಸಿ ಅವಿನಾಭಾವ ಸಂಬಂಧ ದಿಂದ ವಿರಾಜಿಸುತ್ತಲಿರುವುದೆಂದು ಭಾಸವಾಗುತ್ತೆ. ಸ್ಫುರಣ, ಸ್ಪಂದನ, ಧಾರಣ, ದಾಹಕ, ಆಪ್ಯಾಯನ ಮೊದಲಾದ ಶಕ್ತಿಗಳು ಇಚ್ಛಾಶಕ್ತಿಗರ್ಭದಲ್ಲಿ ಅಡಗಿ, ಸೃಷ್ಟಿಗುನ್ಮುಖವಾಗುತ್ತಲೇ, ॥ ಯಥಾಸುದೀಪ್ತಾತ್ಪಾವಕಾದ್ವಿಸ್ಫು ಲಿಂಗಾಃ ॥ ಎಂಬ ಶೃತಿ ಪ್ರಮಾಣಾನುಸಾರ ಅಖಂಡಾಕಾರದಿಂದ ಅಗ್ನಿಕಣಗಳು ಹೊರಬೀಳುವಂತೆ, ಸೂರ್ಯಮಂಡಲದಿಂದ ಸೂರ್ಯಕಿರಣಗಳು ಕೋಟಿಗಟ್ಲೆ ಹೊರಹೊಮ್ಮುವಂತೆ ಪರಶಿವತತ್ವದಿಂದ ಇಚ್ಛಾಶಕ್ತಿಯು ಹೊರಹೊಮ್ಮಿ ವಿಚಿತ್ರಾಯಮಾನವಾಗಿ ಬೆಳಗುತ್ತಿರುವುದು. ಇಂಥಾ ಶಕ್ತಿ ಶಿವನಲ್ಲಿ ಸಹಜ ವಾಗಿರ ವುದೆಂಬ ಅಂಶ ॥ ಸ್ವಾಭಾವಕೀಜ್ಞಾನ ಬಲಕ್ರಿಯಾಚ ॥ ಎಂಬ ಅಧಾರ ದಿಂದ ಸ್ಪಷ್ಟವೇ ಇರುತ್ತೆ. ಅಂದರೆ ಇಚ್ಛಾಶಕ್ತಿಯಿಂದ ಕವಲೊಡೆದ ಜ್ಞಾನ ಶಕ್ತಿ ಕ್ರಿಯಾಶಕ್ತಿಗಳು ಇಚ್ಛಾಶಕ್ತಿಗೆ ಒಳಗಿನ ಅಂಬರವಾಗಿ (ವಸ್ತ್ರವಾಗಿ) ಜ್ಞಾನಶಕ್ತಿಯೂ, ಹೊರಗಿನ ಉಡುಪಾಗಿ ಕ್ರೀಯಾಶಕ್ತಿಯೂ ಬೆಳಗುತ್ತ ಲಿರುವುವು. ಈ ಮೂರು ಶಕ್ತಿಗಳ ಒಕ್ಕೂಟದ ಬೃಹತ್ ಕಾರ್ಯರೂಪವಾಗಿ ಪರಶಿವನ ಸತ್‌ಸಂಕಲ್ಪದಿಂದ, ಅಂಡಾಂಡ, ಪಿಂಡಾಂಡ, ಬ್ರಹ್ಮಾಂಡಕೋಟಿ ಗಳು ॥ ವಿವಿಧೈವ ಶ್ರೂಯತೇ ॥ ವಿಧವಿಧವಾಗಿ ಅನಂತಮುಖದಿಂದ ಪ್ರಕಟ ವಾಗಿ ಪ್ರಕಾಶಿಸುವುವು. ಸೂರ್ಯಾಸ್ತಮಾನ ಸಮಯಕ್ಕೆ ದೇದೀಪ್ಯಮಾನವಾಗಿ ಜಗತ್ತನ್ನೆಲ್ಲಾ ಆವರಿಸಿ ಬೆಳಗುತ್ತಿರುವ ಕೋಟಿಗಟ್ಲೆಕಿರಣರಾಜಿಗಳೆಲ್ಲಾ ಒಮ್ಮಿಂ

ದೊಮ್ಮೆಲೇ ಸೂರ್ಯಮಂಡಲದ ಕಡೆ ಆಕರ್ಷಿಸಲ್ಪಟ್ಟು ಆ ದಿವ್ಯತೇಜೋ ಮಂಡಲದಲ್ಲಿ ಅಂತರ್ಭಾವವನ್ನು ಹೊಂದುವಂತೆ,ದೃಶ್ಯಾದೃಶ್ಯವಾದ ಅಖಿಲಾಂಡ ಕೋಟಿಗಳೆಲ್ಲಾ ॥ ಮೂಲಸ್ಥಂಭಾಯ ಶಂಭುವೇ ॥ ಆದಿಮೂಲ ಕಾರಣ ಪರಮ ಪುರುಷನಾದ ಶಂಭುವಿನಲ್ಲಿ ಅಂತರ್ಗತವಾಗುವುವು. ಸಮಗ್ರ ಶಕ್ತಿಯುತನೂ ಕರುಣಾ ರಸಪೂರಿತನೂ ಆದ ಭಗವಂತನ ವೈಭವೋಪೇತವಾದ ದಿವ್ಯ ಲೀಲಾ ಕೈವಲ್ಯದ ಅದ್ಭುತ ರಹಸ್ಯ, ಹರಿಬ್ರಹ್ಮಾದಿಗಳಿಗೂ, ದೇವೇಂದ್ರ, ನಂದಿ, ಭೃಂಗಿ, ಸ್ಕಂದ, ನಾರದಾದಿಗಳಿಗೂ ಅಗೋಚರವೆಂದ ಬಳಿಕ, ಬಡಮಾನವರಿಗೆಂತು ಗೋಚರವಾದೀತು.

ಶಕ್ತಿ ವಿಶಿಷ್ಟಾದ್ವೈತದಲ್ಲಿ ಇಷ್ಟಲಿಂಗಾರಾಧನೆಯಿಂದ ಲಿಂಗಾಂಗ ಸಾಮರಸ್ಯವನ್ನು ಹೊಂದುವುದೇ ಸಾಯುಜ್ಯಮುಕ್ತಿ ಎನಿಸುವುದು. ಇಂತಪ್ಪ ಮೋಕ್ಷಾನಂದವನ್ನು ಶಿವಶರಣನು ಜೀವಂತನಾಗಿರುವ ಕಾಲದಲ್ಲೇ ಅನುಭವಿಸಿ ನಿತ್ಯವಿಭೂತಿಯಾಗಿ ವಿರಾಜಿಸುವನು. ಜೀವನದಿಗಳು ಸಮುದ್ರದಲ್ಲಿ ಸಂಗಮವಾಗಿ ಸಮರಸಗೊಳ್ಳುವಂತೆ ಶಿವಶರಣನು ಸರ್ವಾರ್ಪಣಭಾವದಿಂದ ॥ ಸರ್ವಧರ್ಮಾನ್ ಪರಿತ್ಯಜ್ಯ । ಮಾಮೇಕಂ ಶರಣಂವ್ರಜ ॥ ಎಂಬಂತೆ ಶಿವಲಿಂಗ ಅಂದರೆ ಇಷ್ಟ ಪ್ರಾಣ ಭಾವಲಿಂಗ ಸಂಯೋಗಾನಂದದಲ್ಲಿ ನಿರತನಾಗಿ, ಜ್ಯೋತಿಯನ್ನು ಸ್ಪರ್ಶಿಸಿದ ಕರ್ಪೂರ ಜ್ಯೋತಿಯಾಗುವಂತೆ ಶಿವಾರ್ಪಿತ ಮನೋಬುದ್ಧಿ ಭಾವಗಳಿಂದ ಶಿವಶರಣನು ಶಿವನೇ ಆಗಿ ವಿರಾಜಿಸುವನು.

ಶಿವಲಿಂಗವು ಮೂರ್ತಾ ಮೂರ್ತ ಸ್ವರೂಪದಿಂದ ವಿರಾಜಿಸುತ್ತಿರುವುದರಿಂದ, ದಿವ್ಯಾನುಗ್ರಹಕ್ಕೆ ಸುಲಭದ ಮಾರ್ಗವಾಗಿ ರುವುದು. ಶಿವಾನುಗ್ರಹ ಸಿದ್ಧಿಸಬೇಕಾದರೆ ಶಿವಪಂಚಾಕ್ಷರೀ ಮಹಾಮಂತ್ರ ಜಪಾನು ಸಂಧಾನ ಅತ್ಯಗತ್ಯ.

॥ ಸಪ್ತಕೋಟಿಷು ಮಂತ್ರೇಷು। ಮಂತ್ರಃ ಪಂಚಾಕ್ಷರೋಮಹಾನ್।
ಬ್ರಹ್ಮವಿಷ್ಣ್ವಾದಿ ದೇವೇಷು। ಯಥಾಶಂಭುರ್ಮಹತ್ತರಃ ॥೧॥
ಓಂಕಾರ ಪೂರ್ವೋ ಮಂತ್ರೋಯಂ। ಪಂಚಾಕ್ಷರಮಯಃ ಪರಃ।

ಶೈವಾಗ ಮೇಷು ವೇದೇಷು । ಷಡಕ್ಷರ ಇತಿಸ್ಮೃತಃ ॥೨॥
ಪುರಾಸಾನಂದ ಯೋಗೀಂದ್ರಃ । ಶಿವಜ್ಞಾನಪರಾಯಣಃ ।
ಪಂಚಾಕ್ಷರಂ ಸಮುಚ್ಚಾರ್ಯ । ನಾರಕಾನುದತಾರಯತ್ ॥೩॥

ಸಪ್ತಕೋಟಿ ಮಂತ್ರಗಳಿಗೆ ಮಸ್ತಕಮಣಿ (ಚೂಡಾಮಣಿ) ಯಂತೆ ವಿರಾಜಿಸುವ ಪ್ರಣವಸಹಿತ ಶಿವಪಂಚಾಕ್ಷರೀ ಮಹಾಮಂತ್ರವನ್ನು, ವಿಷ್ಣು ಬ್ರಹ್ಮೇಂದ್ರಾದಿಗಳು ಆದಿಯಾಗಿ ಸರ್ವರೂ ಜಪಿಸಿ ಮುಕ್ತರಾಗಿರುವರು. ಶಿವಜ್ಞಾನಪರಾಯಣರಾದ ಸಾನಂದರೆಂಬ ಯೋಗೀಂದ್ರರು, ನರಕದಲ್ಲಿ ಬಿದ್ದು ನರಳುವ ಅನೇಕಜೀವಾತ್ಮರುಗಳಿಗೆ ಮೇಲುಕ್ತವಾದ ಮಹಾಮಂತ್ರೋಪದೇಶದಿಂದ ಮುಕ್ತರನ್ನಾಗಿಸಿರುವರೆಂಬ ಅಂಶ ಲೋಕಪ್ರಸಿದ್ಧವೇ ಇದೆ. ಶಿವಪಂಚಾಕ್ಷರಿ ಮಂತ್ರ ಜಪದಿಂದ ಮಹತ್ತರವಾದ ಫಲವು ಹಸ್ತಗತವಾಗುವುದೆಂಬ ಶಾಸ್ತ್ರ ಪ್ರಮಾಣವು ಪ್ರಸಿದ್ಧವೇ ಇರುತ್ತೆ.

ಶಿವಪಂಚಾಕ್ಷರಿಯ ಪಂಚಬೀಜಾಕ್ಷರ ಮಹಾಮಂತ್ರಗಳು, ಪಂಚಾನನನಾದ ಪರಶಿವನ ಪಂಚಮುಖಪದ್ಮಗಳೇ ಆಗಿ ವಿರಾಜಿಸುತ್ತಿರುವುವು.

॥ ಪಂಚಾಸ್ಯಾಸನ ಪಂ । ಕಜಾತ ಜನಿತರ್ । ಪಂಚಾಸ್ಯಪೀಠಾಧಿಪರ್ ।
ಪಂಚಕ್ಲೇಶ ವಿನಾಶಕರ್ । ಪರತರ ಶ್ರೀ ಪಂಚಲಿಂಗೋದ್ಭವರ್ ।
ಪಂಚಾಚಾರನಿಯಾಮಕರ್ । ಪರಿಲಸತ್ಪಂ ಚಾಕ್ಷರೀಬೋಧಕರ್ ।
ಪಂಚಾಚಾರ್ಯಜಗದ್ಗುರೂತ್ತಮರವರ್ । ಪಾಲಿಪ್ಪುದೀ ಲೋಕಮಂ ॥

॥ ಹರಃ ಓಂ ॥

॥ ಶ್ರೀ ಗುರುಭ್ಯೋನಮಃ ॥

# ಓಂ

| ನ | ಮ | ಶಿ | ವಾ | ಯ | ಶಿವಪಂಚಾಕ್ಷರೀ ಮಹಾ ಮಂತ್ರ ಬೀಜಾಕ್ಷರಗಳು |
|---|---|---|---|---|---|
| ಸದ್ಯೋಜಾತ | ವಾಮದೇವ | ಅಘೋರ | ತತ್ಪುರುಷ | ಈಶಾನ | ಶ್ರೀ ಪರಮೇಶ್ವರನ ಸದ್ಯೋಜಾತಾದಿ ಪಂಚಮುಖಗಳು |
| ರೇಣುಕ | ದಾರುಕ | ಘಂಟಾಕರ್ಣ (ಏಕೋರಾಮಾರಾಧ್ಯ) | ಧೇನುಕರ್ಣ (ಪಂಡಿತಾರಾಧ್ಯ) | ವಿಶ್ವಾರಾಧ್ಯ | ಶ್ರೀ ಪರಮೇಶ್ವರನ ಪಂಚಮುಖ ಸಂಭವರಾದ॥ ಸದ್ಯೋಜಾತಾದಯಃ ಪಂಚ। ವ್ಯೂಹಾಃ ಪ್ರೋಕ್ತಾಃ ಸನಾತನಾಃ॥ ಎಂಬ ಶಿವಾಗಮ ಪ್ರಮಾಣಾನುಸಾರ, ಪರಶಿವನ ಸದ್ಯೋಜಾತಾದಿ ಪಂಚಬ್ರಹ್ಮಸ್ವರೂಪರೆಂದೂ, ಪಂಚಾನನನ, ದಿವ್ಯ ವ್ಯೂಹ ಮೂರ್ತಿಗಳೆಂದೂ ಸ್ತುತ್ಯರಾದ ಶ್ರೀ ಮದ್ರೇಣುಕಾದಿ ಪಂಚಾಚಾರ್ಯರಿವರು. |

|| ಶ್ರೀ ಗುರುಭ್ಯೋನಮಃ ||

# ಓಂ

| ನ | ಮ | ಶಿ | ವಾ | ಯ | ಶಿವಪಂಚಾಕ್ಷರೀ ಮಹಾ ಮಂತ್ರ ಬೀಜಾಕ್ಷರಗಳು |
|---|---|---|---|---|---|
| ಶ್ರೀಸೋಮೇಶ್ವರ ಲಿಂಗ | ಶ್ರೀ ಸಿದ್ಧೇಶ್ವರ ಲಿಂಗ | ಶ್ರೀ ರಾಮನಾಥ ಲಿಂಗ (ಭೀಮನಾಥಲಿಂಗ ವೆಂದೂ ಕರೆಯು ವರು) | ಶ್ರೀ ಮಲ್ಲಿಕಾರ್ಜುನ ಲಿಂಗ | ಶ್ರೀ ವಿಶ್ವನಾಥ ಲಿಂಗ | ನಾಲ್ಕೂಯುಗಗಳಲ್ಲಿ ಶ್ರೀ ಮದ್ರೇಣುಕಾದಿ ಜಗದ್ಗುರು ಪಂಚಾಚಾರ್ಯರುಉದ್ಭವಿಸಿದ ಸ್ಥಾನಗಳಾದ ಪಂಚಮಹಾ ಜ್ಯೋತಿರ್ಲಿಂಗಗಳು. |
| ಕುಲ್ಯಪಾಕ ಕ್ಷೇತ್ರ | ವಟಕ್ಷೇತ್ರ | ದ್ರಾಕ್ಷಾರಾಮ ಕ್ಷೇತ್ರ | ಸುಧಾಕುಂಡ ಕ್ಷೇತ್ರ | ಶ್ರೀ ಕಾಶೀ ಕ್ಷೇತ್ರ | ಶಿವಲಿಂಗೋದ್ಭವ ದಿವ್ಯ ಮೂರ್ತಿಗಳಾದ ಜಗದ್ಗುರು ಶ್ರೀ ಮದ್ರೇಣುಕಾದಿ ಪಂಚಾಚಾರ್ಯರುಗಳು ಉದ್ಭವಿಸಿದ ಜ್ಯೋತಿರ್ಲಿಂಗಗಳು ವಿರಾಜಿಸುವ ಪಂಚಮಹಾಪುಣ್ಯ ಕ್ಷೇತ್ರಗಳು. |

॥ ಶ್ರೀ ಗುರುಭ್ಯೋನಮಃ ॥

# ಓಂ

| ನ | ಮ | ಶಿ | ವಾ | ಯ | ಶಿವಪಂಚಾಕ್ಷರೀ ಮಹಾ ಮಂತ್ರ ಬೀಜಾಕ್ಷರಗಳು |
|---|---|---|---|---|---|
| ಶ್ರೀ ಮದ್ರಂಭಾಪುರಿ (ಬಾಳೆಹೊನ್ನೂರು) | ಉಜ್ಜಯಿನೀ | ಹಿಮವತ್ಕೇದಾರ | ಶ್ರೀ ಶೈಲ | ಶ್ರೀ ಕಾಶಿ | ಶ್ರೀಮದ್ರೇಣುಕಾದಿ ಪಂಚಾಚಾರ್ಯರು, ಧರ್ಮಸಂಸ್ಥಾಪನೆ ಹಾಗೂ ಧರ್ಮಜಾಗೃತಿಗಾಗಿ ಸ್ಥಾಪಿಸಿರುವ ಸನಾತನ ಪಂಚ ಮೂಲ ಧರ್ಮ ಮಹಾಪೀಠಗಳು. |
| ವೀರ ಸಿಂಹಾಸನ | ಸದ್ಧರ್ಮ ಸಿಂಹಾಸನ | ಪರಮ ವೈರಾಗ್ಯ ಸಿಂಹಾಸನ | ಶ್ರೀ ಸೂರ್ಯ ಸಿಂಹಾಸನ | ಜ್ಞಾನ ಸಿಂಹಾಸನ | |
| ಶ್ರೀ ಆದಿ ಅಗಸ್ತ್ಯ ಮಹರ್ಷಿ | ಶ್ರೀ ದಧೀಚಿಮಹರ್ಷಿ | ಶ್ರೀ ವೇದವ್ಯಾಸ ಮಹರ್ಷಿ | ಶ್ರೀ ಸಾನಂದ ಮಹರ್ಷಿ | ಶ್ರೀ ದೂರ್ವಾಸ ಮಹರ್ಷಿ | ಸನಾತನ ಮಹಾಪಂಚ ಸಿಂಹಾಸನಾಧಿಪತಿಗಳಾದ ಶ್ರೀ ಮದ್ರೇಣುಕಾದಿ ಪಂಚಾಚಾರ್ಯ ಜಗದ್ಗುರು ಸಾರ್ವಭೌಮರ ಪ್ರ ಪ್ರಥಮ ಶಿಷ್ಯರುಗಳು. |

॥ ಶ್ರೀ ಗುರುಭ್ಯೋನಮಃ ॥

# ಓಂ

| | | | | | |
|---|---|---|---|---|---|
| ನ | ಮ | ಶಿ | ವಾ | ಯ | ಶಿವಪಂಚಾಕ್ಷರೀ ಮಹಾ ಮಂತ್ರ ಬೀಜಾಕ್ಷರಗಳು |
| ಋಗ್ವೇದ (ಕಾಮಿಕಾಗಮ) | ಯಜುರ್ವೇದ (ದೀಪ್ತಾಗಮ) | ಸಾಮವೇದ (ವಿಜಯಾಗಮ) | ಅಥರ್ವಣವೇದ (ವಾತುಲಾಗಮ) | ಅಜಪವೇದ (ಶಿವಾಗಮ) (ಪ್ರೋದ್ಗಿತಾಗಮ) | ಜಗದ್ಗುರು ಶ್ರೀ ಮದ್ರೇಣುಕಾದಿ ಪಂಚಾಚಾರ್ಯರ ಶಿವೋಕ್ತ ಪಂಚವೇದ ಹಾಗೂ ಪಂಚ ಸೂತ್ರಗಳ ಹೆಸರುಗಳು. |
| ಶ್ರೀ ರೇಣುಕ ಶಾಖಾ | ಶ್ರೀ ದಾರುಕ ಶಾಖಾ | ಶ್ರೀ ಘಂಟಾಕರ್ಣ ಶಾಖಾ | ಶ್ರೀ ಧೇನುಕರ್ಣ ಶಾಖಾ | ಶ್ರೀ ವಿಶ್ವಕರ್ಣ ಶಾಖಾ | ಶ್ರೀ ಮತ್ಪಂಚಾಚಾರ್ಯರುಗಳ ಪಂಚಶಾಖೆಗಳಹೆಸರುಗಳು |
| ಪೃಥ್ವಿ ತತ್ವ | ಅಪ್ ತತ್ವ | ಅಗ್ನಿ ತತ್ವ | ವಾಯು ತತ್ವ | ಆಕಾಶ ತತ್ವ | |

ಪಂಚಮಹಾಭೂತ (ಪಂಚ ತತ್ವ) ಗಳಿಗೆ ಜಗದ್ಗುರು ಶ್ರೀ ಮದ್ರೇಣುಕಾದಿ ಪಂಚಾಚಾರ್ಯರು ಅಧಿಪತಿಗಳೆನಿಸಿ, ಪೃಥ್ವಿಲಿಂಗ, ಅಪ್ ಲಿಂಗ, ಜ್ಯೋತಿರ್ಲಿಂಗ ವಾಯುಲಿಂಗ ಮತ್ತೂ ಆಕಾಶಲಿಂಗಮಯರಾಗಿರುವರು. ಇದರಿಂದ ಪೃಥ್ವಿತತ್ವಕ್ಕೊಡೆಯರಾದ ರೇಣುಕರು ಜಗದ್ಗುರು ವೆನಿಸಿರುವರು. ಉಳಿದ ಚತುರಾಚಾರ್ಯರೂ ಅ, ಆತತ್ವಕ್ಕೊಡೆಯಿರೆನಿಸಿ, ಜಗದ್ಗುರುಗಳೆನಿಸಿರುವರೆಂದು ಸನಾತನ ಶಾಸ್ತ್ರಪ್ರಮಾಣ ಸುಪ್ರಸಿದ್ಧವೇಇರುತ್ತೆ.

॥ ಶ್ರೀ ಗುರುಭ್ಯೋನಮಃ ॥

# ಓಂ

| | | | | | |
|---|---|---|---|---|---|
| ನ | ಮ | ಶಿ | ವಾ | ಯ | ಶಿವಪಂಚಾಕ್ಷರೀ ಮಹಾ ಮಂತ್ರ ಬೀಜಾಕ್ಷರಗಳು |
| ಮುಖ ಪೂರ್ವ | ಮುಖ ದಕ್ಷಿಣ | ಮುಖ ಪಶ್ಚಿಮ | ಮುಖ ಉತ್ತರ | ಮುಖ ಊರ್ಧ್ವ | ಪರಮೇಶ್ವರನ ಪಂಚಮುಖಗಳೇ ಪಂಚ ದಿಕ್ಕುಗಳು. ಮತ್ತೆ ವೇ ಶ್ರೀ ಮತ್ಪಂಚಾಚಾರ್ಯರ ಮುಖಗಳಾಗಿ ಪ್ರತಿನಿಧಿಸುತ್ತಲಿರುವುವು. |
| ವೀರ ಗೋತ್ರ<br>ಪಡ್ವಿಡಿ ಮಹಾ ಸೂತ್ರ | ನಂದಿ ಗೋತ್ರ<br>ವೃಷ್ಟಿ ಮಹಾ ಸೂತ್ರ | ಭೃಂಗಿ ಗೋತ್ರ<br>ಲಂಬನ ಮಹಾ ಸೂತ್ರ | ವೃಷಭ ಗೋತ್ರ<br>ಮುಕ್ತಾ ಗುಚ್ಛ ಮಹಾ ಸೂತ್ರ | ಸ್ಕಂದ ಗೋತ್ರ<br>ಪಂಚವರ್ಣ ಮಹಾ ಸೂತ್ರ | ಜಗದ್ಗುರು ಶ್ರೀ ಮದ್ರೇಣುಕಾದಿ ಪಂಚಾಚಾರ್ಯರುಗಳ ಪಂಚಗೋತ್ರ ಮಹಾ ಸೂತ್ರಗಳ ಹೆಸರುಗಳು. |
| ಅಶ್ವತ್ಥ ದಂಡ (ಅರಳಿ) | ಪಲಾಶ ದಂಡ (ಮುತ್ತುಲ) | ವೇಣು ದಂಡ (ಬಿದುರು) | ನ್ಯಗ್ರೋಧದಂಡ (ಆಲ) | ಬಿಲ್ವದಂಡ | ಶ್ರೀ ಮತ್ಪಂಚಾಚಾರ್ಯರುಗಳ ಪಂಚದಂಡಗಳ ಹೆಸರುಗಳು. |

॥ ಶ್ರೀ ಗುರುಭ್ಯೋನಮಃ ॥

ಓಂ

| ನ | ಮ | ಶಿ | ವಾ | ಯ | ಶಿವಪಂಚಾಕ್ಷರೀ ಮಹಾ ಮಂತ್ರ ಬೀಜಾಕ್ಷರಗಳು |
|---|---|---|---|---|---|
| ಹರಿದ್ವರ್ಣಮಯ ಧಾತು ಕಮಂಡಲ | ತಾಮ್ರ ಕಮಂಡಲ | ಲಸಲ್ಲೋಹ ಕಮಂಡಲ | ಕಂಚಿನ ಕಮಂಡಲ | ಸುವರ್ಣ ಕಮಂಡಲ | ಶ್ರೀ ಮತ್ಪಂಚಾಚಾರ್ಯರುಗಳ ಪಂಚ ಕಮಂಡಲಗಳು. |
| ಹಸರು ಕಂಥೆ | ಕೆಂಪು ಕಂಥೆ | ನೀಲಿ ಕಂಥೆ | ಬಿಳಿ ಕಂಥೆ | ಹಳದಿ ಕಂಥೆ | ಶ್ರೀ ಮದಾಚಾರ್ಯರುಗಳ ಪಂಚ ಕಂಥೆಗಳು. |
| | | | | | ಯುಗ ಭೇದದಿಂದ ಪ್ರಸಿದ್ಧವಾದ ಶ್ರೀ ಪಂಚಾಚಾರ್ಯರ ಹೆಸರುಗಳು. |
| ಏಕಾಕ್ಷರ ಶಿವಾಚಾರ್ಯ | ದ್ವ್ಯಕ್ಷರ ಶಿವಾಚಾರ್ಯ | ತ್ರ್ಯಕ್ಷರ ಶಿವಾಚಾರ್ಯ | ಚತುರಕ್ಷರ ಶಿವಾಚಾರ್ಯ | ಪಂಚಾಕ್ಷರ ಶಿವಾಚಾರ್ಯ | ಕೃತಯುಗದಲ್ಲಿನ ಪಂಚಾಚಾರ್ಯರುಗಳ ಹೆಸರುಗಳು. |

॥ ಶ್ರೀ ಗುರುಭ್ಯೋನಮಃ ॥

ಓಂ

| | | | | | |
|---|---|---|---|---|---|
| ನ | ಮ | ಶಿ | ವಾ | ಯ | ಶಿವಪಂಚಾಕ್ಷರೀ ಮಹಾ ಮಂತ್ರ ಬೀಜಾಕ್ಷರಗಳು |
| ಏಕವಕ್ತ್ರ ಶಿವಾಚಾರ್ಯ | ದ್ವಿವಕ್ತ್ರ ಶಿವಾಚಾರ್ಯ | ತ್ರಿವಕ್ತ್ರ ಶಿವಾಚಾರ್ಯ | ಚತುರ್ವಕ್ತ್ರ ಶಿವಾಚಾರ್ಯ | ಪಂಚವಕ್ತ್ರ ಶಿವಾಚಾರ್ಯ | ತ್ರೇತಾಯುಗದಲ್ಲಿನ ಶ್ರೀ ಪಂಚಾಚಾಯು ರ ನಾಮಗಳು. |
| ರೇಣುಕ ಶಿವಾಚಾರ್ಯ | ದಾರುಕ ಶಿವಾಚಾರ್ಯ | ಘಂಟಾ ಕರ್ಣ ಶಿವಾಚಾರ್ಯ | ಧೇನು ಕರ್ಣ ಶಿವಾಚಾರ್ಯ | ವಿಶ್ವ ಕರ್ಣ ಶಿವಾಚಾರ್ಯ | ದ್ವಾಪರ ಯುಗದಲ್ಲಿನ ಶ್ರೀ ಪಂಚಾಚಾರ್ಯರ ನಾಮಗಳು |
| ರೇವಣಸಿದ್ಧ (ರೇವಣಾರಾಧ್ಯ) | ಮರುಳ ಸಿದ್ಧ (ಮರುಳಾರಾಧ್ಯ) | ಏಕೋ ರಾಮಾ ರಾಧ್ಯ | ಪಂಡಿತಾರಾಧ್ಯ | ವಿಶ್ವಾರಾಧ್ಯ | ಶ್ರೀ ಮತ್ಪಂಚಾಚಾರ್ಯರ ಕಲಿಯುಗದ ಹೆಸರುಗಳು. |

ಶಿವನು ತನ್ನ ಈ ಶಾನ ಮುಖಪ್ರೋಕ್ತ ಶಿವಾಗಮಗಳಲ್ಲಿ ಗಿರಿಜೆ ಷಣ್ಮುಖರಿಗೆ ಶೃತಪಡಿಸುತ್ತಾ :–

॥ ಮತ್ಪಂಚ ವದನೋದ್ಭೂತಾಃ ಸರ್ವಏವಗುರೂತ್ತಮಾಃ । ತತ್ಸೃಷ್ಟಾನಾಂಚ ಸರ್ವೇಷಾಂ, ತತ್ಸಾಮರ್ಥ್ಯಂ ಕಥಂ ಭವೇತ್ ॥ ತಸ್ಮಾತ್ಪಂಚವಿಧಾಚಾರ್ಯಾಃ ಪಂಚಪೀಠಾಧಿದೇವತಾಃ। ಪಂಚಸಿಂಹಾಸನಾಧೀಶಾ ಜಗದ್ಗುರುವರಾಶ್ಚ ತೇ॥

(ಸುಪ್ರಬೋದಾಗಮ)

. ॥ ಪಂಚಪೀಠಾಧಿ ದೇವಾನಾಂ ಯೇ ಜಾನಂತಿ ಸಮಾನತಾಂ।
ತೀ ಗರ್ದಭಾಶ್ಚ ಸಂಪ್ರೋಕ್ತಾ ಜ್ಞಾನಶೂನ್ಯ ತ್ವತಃ ಶಿವೇ ॥
ತಸ್ಮಾತ್ತಸ್ಮಾಚ್ಚ ಗಿರಿಜೇ ಪಂಚಾನನ ಸಮುದ್ಭವಾಃ ।
ಮದಾದಿ ಸರ್ವಲೋಕಾನಾಂ ಜಗದ್ಗುರುವರೋತ್ತಮಾಃ ॥
(ಸುಪ್ರಬೋದಾಗಮ)

ಕುಂಭ ಸಂಭವರಾದ ಆದಿ ಶ್ರೀ ಅಗಸ್ತ್ಯ ಮಹರ್ಷಿಗಳಂತೆ "ಶ್ರೀ ಶಂಕರಾಚಾರ್ಯ ಸನ್ನಾಮ ಯೋಗೀಂದ್ರಾಯ ಮಹೋಜ್ವಲಂ", ಶ್ರೀ ಶೃಂಗೇರಿ ಅದ್ವೈತಮೂಲ ಪೀಠಾಧಿಪತಿಗಳಾದ ಆದಿ ಶ್ರೀ ಶಂಕರಾಚಾರ್ಯರೂಸಹ ತಮ್ಮ ಅನುಭವ ಪೂರ್ಣ ಸ್ವಪ್ರೇರಣೆಯುಂತೆ, ಲಿಂಗಸಂಭವರಾದ ಪೂಜ್ಯ ಭಗವತ್ಪಾದ ಶ್ರೀಮದ್ರೇವಣಸಿದ್ಧ (ರೇಣುಕಾಚಾರ್ಯ) ಜಗದ್ಗುರು ಶಿವಾಚಾರ್ಯ ಮಹಾಪಾದಂಗಳವರಲ್ಲಿ ಶರಣಾಗತರಾಗಿ, ಶ್ರೀಮದ್ರೇಣುಕಾಚಾರ್ಯರ ಅನಂತಕೋಟಿ ಶಿಷ್ಯವರ್ಗದಲ್ಲಿ ಪೂಜ್ಯಸ್ಥಾನವನ್ನು ಪಡೆದು ಭಾನುಕೋಟಿ ಪ್ರಕಾಶಮಾನರಾಗಿ ಜಗತ್ತಿನಲ್ಲಿ ವಿರಾಜಿತರಾಗಿರುವರು. "ಶಂಕರಂ ಶಂಕರಾಚಾರ್ಯಂ" ಎಂದು ಸ್ತುತಿಸಿರುವಂತೆ ಶಂಕರನ ತೇಜೋಂಶವೇ ಆರ್ಯಾಂಬೆಯ ಸುಗರ್ಭಾಂಬುಧಿಯಲ್ಲಿ ಉದಿಸಿ ಜಗತ್ತಿನ ಜಗದ್ಗುರುಗಳಾಗಿ ಅವತರಿಸಿ, ದುಷ್ಟನಿಗ್ರಹ ಶಿಷ್ಟರಕ್ಷಣೆ ಹಾಗೂ ಸದ್ಧರ್ಮಸ್ಥಾಪನೆ ಗೈದು, ಮುಕ್ತಿಗೋಸ್ಕರ ॥ ಧರ್ಮೋ ಲಿಂಗಾರ್ಚನಾತ್ಮಕಃ ॥ ಎಂಬಂತೆ, ಜಗದ್ಗುರು ಸಾರ್ವಭೌಮ ಶ್ರೀ ರೇವಣಸಿದ್ಧ ಮಹಾಶಿವ ಯೋಗಿಗಳಿಂದ ಅನುಗ್ರಹಿಸಲ್ಪಟ್ಟ ಶ್ರೀ ಚಂದ್ರಮೌಳೀಶ್ವರಲಿಂಗಾರ್ಚನೆ ನಿತ್ಯಪೂಜಾ ವಿಧಾನಗಳನ್ನು ತಾವು ವಿಧಿವತ್ತಾಗಿ ಆಚರಿಸಿ, ತಮ್ಮ ಅದ್ವೈತ ಮೂಲ ಪೀಠಾನುವರ್ತಿಗಳಾದ ಆಚಾರ್ಯ ಪರಂಪರೆಯುವರು ಭುವಿಯಲ್ಲಿ ಅನವರತ ಈ ಪೂಜಾನುಷ್ಠಾನ ಶಿವಜ್ಞಾನ ಮಹಾಯಜ್ಞವನ್ನು ಬಿಡದೆ ಶ್ರದ್ಧಾ ಭಕ್ತಿ ಭಾವಗಳಿಂದ ಆಚರಿಸಬೇಕೆಂದು, ಶ್ರೀ ಶೃಂಗೇರಿ ಪೀಠಕ್ಕೆ ಶ್ರೀ ಸುರೇಶ್ವರಾಚಾರ್ಯರನ್ನು ಅಧಿಪತಿಗಳನ್ನಾಗಿ ಮಾಡುವ ಮಂಗಳ ಸಂಧರ್ಭದಲ್ಲಿ ಆದಿ ಶ್ರೀಶಂಕರರು, "ಹೇ ಸುರೇಶ್ವರಾ ! ॥ ಶ್ರೀ ಚಂದ್ರಮೌಳೀಶ್ವರ ಲಿಂಗಮಸ್ಮೈ । ಸದ್ರತ್ನ ಗರ್ಭಂ ಗಣನಾಯಕಂ ಚ । ಸ ವಿಶ್ವರೂ

ಪಾಯ ಸುಸಿದ್ಧ ದತ್ತಂ । ದತ್ವಾನ್ಯಗಾದೀ ಚ್ಚಿರಮರ್ಚಯೇತಿ " (ಗುರುವಂಶ ಕಾವ್ಯ ಅ. 3, ಶ್ಲೋ. 33) ಶ್ರೀ ರೇವಣಸಿದ್ಧ ಮಹಾ ಶಿವಯೋಗಿ ಪುಂಗವ ರಿಂದ ತಮಗೆ ಅನುಗ್ರಹೀತವಾಗಿರುವ ದೇವತಾ ಸಾರ್ವ ಭೌಮ ವಿಶ್ವಾಧಿಕನಾದ ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು, "ಚಿರಮರ್ಚಯೇತಿ" ನಿತ್ಯವೂ ಅನವ ರತ ವಿಧಿವತ್ತಾಗಿ ಪೂಜಿಸಬೇಕೆಂದೂ ಮತ್ತು ಇದರೊಂದಿಗೆ ರೇಣುಕರಿಂದ ಅನುಗ್ರಹಿಸಲ್ಪಟ್ಟಿರುವ ರತ್ನಗರ್ಭ ಗಣಪತಿಯನ್ನೂ ಪೂಜಿಸಿ ಇವು ತಮ್ಮ ಪೀಠ ದ ಪ್ರಾಣ ಸ್ವರೂಪವಾದ ಪರಮ ಆರಾಧಿತ ದೈವಗಳೆಂದು ಉಪದೇಶಿಸಿರುವುದು ಸ್ಪಷ್ಟವಿರುತ್ತೆ.

ಹನ್ನೆರಡನೇ ಶತಮಾನದಲ್ಲಿ ತಲೆದೋರಿದ ಶೂನ್ಯ ಸಿಂಹಾಸನ ಪ್ರವರ್ತ ಕರಾದ ಶ್ರೀ ಅಲ್ಲಮ ಪ್ರಭುದೇವರು, ಶಿವಯೋಗಿನಿಯಾದ ಶರಣೆ ಅಕ್ಕ ಮಹಾ ದೇವಿ ಮೊದಲಾದವರು, ಶ್ರೀ ಮಜ್ಜಗದ್ಗುರು ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ದೇಶಿಕೇಂದ್ರ ಮಹಾಚಾರ್ಯರು ಅವತರಿಸಿದ ಶ್ರೀ ಶೈಲಕ್ಷೇತ್ರ ಪ್ರವಿರಾಜಮಾನ ಶ್ರೀ ಮಲ್ಲಿಕಾರ್ಜುನ ಮಹಾ ಜ್ಯೋತಿರ್ಲಿಂಗದಲ್ಲಿ ಶರಣಾಗತಿಭಾವದಿಂದ ಮೊ ರೆಹೊಕ್ಕು ಶ್ರೀ ಪರ್ವತ ಲಿಂಗದಲ್ಲಿ ಸಾಮರಸ್ಯವನ್ನು ಹೊಂದಿರುವರು.

ಶ್ರೀ ಅಲ್ಲಮಪ್ರಭು, ಚೆನ್ನಬಸವಣ್ಣ ಮತ್ತು ಶ್ರೀ ಬಸವಾದಿಗಳಿಗೆ ಪೂರ್ವಜರೆನಿಸಿದ, ಶಿವಶರಣ ದೇವರದಾಸಮಯ್ಯಾದಿ ಪರಮ ವೀರಶೈವ ಮಹಾ ವ್ರತಿಗಳು, ದ್ರಾಕ್ಷಾರಾಮ ಸುಕ್ಷೇತ್ರ ಪ್ರವಿರಾಜಮಾನ ಶ್ರೀ ರಾಮ ನಾಥ ಲಿಂಗೋದ್ಭವರಾದ, ಹಿಮವತ್ಕೇದಾರ ಪರಮ ವೈರಾಗ್ಯ ಪೀಠಾಧ್ಯಕ್ಷ ಜಗದ್ಗುರು ಸಾರ್ವಭೌಮಭಗವತ್ಪಾದಶ್ರೀಘಂಟಾಕರ್ಣ (ಏಕೋರಾಮಾರಾಧ್ಯ) ದೇಶಿಕೇಂದ್ರಶಿವಾಚಾರ್ಯ ಮಹಾ ಪಾದಂಗಳರವರ ತಪೋವ್ಯಾಪ್ತಿಯಲ್ಲಿ ಅಡಗಿ, ಶ್ರೀ ರಾಮನಾಥ ಜ್ಯೋತಿರ್ಲಿಂಗದಲ್ಲಿ ಶರಣಾಗತರಾಗಿ ಬೈಲಾಗಿರುವರು ಶಿವಶರಣ ಶ್ರೇಷ್ಠರಾದ ವೈರಾಗ್ಯ ಮೂರ್ತಿ ದೇವರದಾಸಮಯ್ಯನವರು ತಮ್ಮ ಪ್ರತಿಯೊಂದು ವಚನಾಂತ್ಯದಲ್ಲಿ " ರಾಮನಾಥ " ಎಂದುಚ್ಚರಿಸಿರುವುದೇ

ಇದಕ್ಕೆ ಪರಮ ಸಾಕ್ಷಿಯಾಗಿರುತ್ತೆ. ಶಿವಯೋಗಿ ಚಕ್ರವರ್ತಿಗಳೆನಿಸಿದ ಶ್ರೀ ಮರಿತೋಂಟದಾರ್ಯರೂ, ವಿರಕ್ತವೃಂದ ಶಿಖಾಮಣಿಗಳೆನಿಸಿದ ಗೋಸಲ ಶ್ರೀ ಗುರುಸಿದ್ಧೇಶ್ವರರ ಪರಂಪರೆಯಲ್ಲಿ ಬಂದ ಶ್ರೀ ಗುರು ಚನ್ನಬಸವೇಶ್ವರರ ಕರ ಕಂಜಾತರಾದ ಹರದನಹಳ್ಳಿ, ಎಡೆಯೂರು, ತೋಂಟದ ಶ್ರೀ ಸಿದ್ಧಲಿಂಗೇಶ್ವರ ರೇ ಆದಿಯಾಗಿ ಅಸಂಖ್ಯಾತರಾದ ನಿರಂಜನ ಸಿಂಹಾಸನಾಧಿ ಪತಿಗಳೂ ಸಹ ಶಿವಲಿಂಗೋದ್ಭವ ಮೂರ್ತಿಗಳಾದ ಜಗದ್ಗುರು ಸಾರ್ವಭೌಮ ಶ್ರೀಮದ್ರೇಣು ಕಾದಿ ಪಂಚಾಚಾರ್ಯರುಗಳ ಘನ ಕೃಪಾ ಛತ್ರಿಯ ದಿವ್ಯಾಶ್ರಯದಲ್ಲಿ ಬೆಳಗಿ, ಸ್ವಾತ್ಮನಿ ತಾವು ಕಂಡ ದಿವ್ಯ ಬೆಳಕನ್ನು ಜಗತ್ತಿಗೆ ಬೀರಿ ಪರಾಕಾಶವ ಪರಂಜ್ಯೋತಿಯಲ್ಲಿ ಜ್ಯೋತಿಯಾಗಿ ಬೈಲಾಗಿರುವರು. ಎಡೆಯೂರು ಶ್ರೀ ಸಿದ್ಧಲಿಂಗೇಶ್ವರರ ಕಾಲ ಕ್ರಿ. ಶ. 1470ತ್ತೆಂದು ಊಹಿಸಲು ಅವಕಾಶವಿರುತ್ತೆ.

ಸನಾತನವಾದೀ ಪರಮ ವೀರಶೈವ ಮತದ ನಿಜಸ್ವರೂಪವೆನಿಸಿ ಜಗತ್ಸೃ ಷ್ಟ್ಯಾರಂಭ ಕಾಲದಿಂದಲೂ, ಶ್ರೀಮಜ್ಜಗದ್ಗುರು ಪಂಚಾಚಾರ್ಯೋತ್ಪತ್ತಿ ನಾಮಕ ಮಹಾ ಕಲ್ಪ ವೃಕ್ಷದ ವಿವರಣೆ, ಮೇಲೆ ಉದಹರಿಸಿರುವಂತೆ ಅಖಿಲಾಗ ಮೋಪ ನಿಷತ್ತುಗಳಲ್ಲಿ ಪ್ರತಿಪಾದಿತವಾಗಿರುವುದು ಲೋಕ ಪ್ರಸಿದ್ಧವೇ ಇರುತ್ತೆ. ದೈವಾಂಶಭರಿತವಾದೀ ಮಹಾ ವೃಕ್ಷವು ಅನಾದಿ ಕಾಲದಿಂದಲೂ ಪ್ರಕಾಶಿತವಾಗಿ ಪ್ರಚಲಿತಗೊಂಡು, ಯುಗಯುಗಾಂತರ ಗಳಿಂದಲೂ ವಿಸ್ತರಿಸಿ ಬೆಳಗಿ ಪ್ರವರ್ತಿಸುತ್ತ ಲೋಕದವರಿಗೆ ಹಿತೈಷಿಯಾಗಿ ಆಶ್ರ ಯವನ್ನು ನೀಡುತ್ತ ಐಹಿಕಾಮುಷ್ಮಿಕ ಫಲಪ್ರದವಾಗಿ ರಂಜಿಸಿ, ನಿವೃತ್ತಿ ಧರ್ಮದ ತಿರುಳನ್ನು ಹೊರಸೂಸುತ್ತಿರುವ ಸನಾತನ ಸದ್ಧರ್ಮ ಚಕ್ರವೆನಿಸಿರುವುದು.

ವಿಶ್ವಧರ್ಮವನ್ನಳವಡಿಸಿಕೊಂಡು ವಿರಾಜಿಸುವ ಅವಿಕಾರ ಪರಿಣಾಮರೂಪ ಅಶ್ವತ್ಥ ಮಹಾ ವೃಷದ (ಧರ್ಮಧೃಮದ) ಮೂಲ ಬೇರುಗಳು (ತಾಯಿ ಬೇರುಗಳು) ಊರ್ಧ್ವಲೋಕದಿಂದ ಹೊರಹೊರಟು, ಅಂಕುರಿಸಿ, ಪಲ್ಲವಿಸಿ, ಇದರ ರಂಭೆ ಕೊಂಬೆ ಎಲೆಗಳು ಅಧೋಗತಿಯಲ್ಲಿ ಹರಡಿ ವಿಸ್ತರಿಸಿ

ಬೆಳೆದು, ಅನುಕ್ರಮವಾಗಿ ಕೈಲಾಸ, ವೈಕುಂಟ, ಸತ್ಯಲೋಕ, ಇಂದ್ರಲೋಕ, ನಕ್ಷತ್ರಮಂಡಲ, ಧೃವ ಮಂಡಲ, ಸೂರ್ಯ ಲೋಕ, ಚಂದ್ರಲೋಕಾದಿಗಳೆಲ್ಲೆಲ್ಲಾ ಮಘಮಘಿಸಿ, ಭೂಲೋಕದಲ್ಲಿ ವಿಸ್ತಾರಗೊಂಡು ಪಲ್ಲವಿಸಿ, ಪಾತಾಳದವರವಿಗೂ ಈ ಮಹಾ ವೃಕ್ಷದ ಶಾಖೋಪ ಶಾಖೆಗಳು ಹಬ್ಬಿ ಬೃಹದಾಕಾರವಾಗಿಹರಡಿರುವುವು. ॥ ಛಂದಾಂಸಿ ಯಸ್ಯ ಪರ್ಣಾನಿ ॥ ಎಲೆಗಳೇ ವೇದಾಗಮಗಳೆನಿಸಿರುವುವು. ಗೀತಾಚಾರ್ಯನು–

॥ ಊರ್ಧ್ವ ಮೂಲ ಮಧಃ ಶಾಖಂ । ಅಶ್ವತ್ಥಂ ಪ್ರಾಹುರವ್ಯಯಂ ।
ಛಂದಾಂಸಿ ಯಸ್ಯ ಪರ್ಣಾನಿ । ಯಸ್ತಂ ವೇದ ಸ ವೇದವಿತ್ ॥

ಅವಿಕಾರ ಪರಿಣಾಮ ಅನಾದಿ ತತ್ವದಿಂದ ವಿರಾಜಿಸುವ ಅಶ್ವತ್ಥಮಹಾ ವೃಕ್ಷದ ವಿವರವನ್ನು ಪಾರ್ಥನಿಗೆ ಅರುಹುತ್ತಾ ಯಾರು ಇದರ ಸ್ವರೂಪವನ್ನು ತಿಳಿದಿರುವರೋ ಅವರನ್ನು "ವೇದವಿತ್" ಎಂದು ಕರೆಯಲ್ಪಡುವರು. ಅಂದರೆ ಬ್ರಹ್ಮವನ್ನು ಅರಿತಂಥವರು ಅಥವಾ ಶಿವಾನುಭವಿಗಳೆಂದರ್ಥ. ಇಂತಪ್ಪ ಶರಣನು ಮುಕ್ತನೆನಿಸುವನು ॥ ಮುಕ್ತಃ ಶಿವಸಮೋ ಭವೇತ್ ॥ ಮತ್ತೂ ॥ ಬ್ರಹ್ಮವಿತ್ ಬ್ರಹ್ಮೈವ ಭವತಿ ॥ ಅಂದಹಾಗೆ, ಮುಕ್ತನಾದ ಶಿವಶರಣನು ನಿಜಕ್ಕೂ ಶಿವಸದೃಶನೇ ಇರುವನು.

॥ ಹೃತ್ಪದ್ಮಂ ಶಿವಧರ್ಮಕಂದ ಸಹಿತಂ ಸುಜ್ಞಾನ ನಾಳಂ ತಥಾ ।
ನಿತ್ಯೈಶ್ವರ್ಯ ದಳಾಷ್ಟ ಕಂ । ಶಶಿನಿಭಂ ವೈರಾಗ್ಯ ಸತ್ಕರ್ಣಿಕಂ ।
ಶ್ರೀರುದ್ರೇಶ್ವರ ಕೇಸರಾ । ನ್ವಿತಮಿದಂ ಸಂಚಿಂತ್ಯ ತನ್ಮಧ್ಯಮೇ ।
ಸೂರ್ಯೇಂ ದೂಜ್ವಲ ವಹ್ನಿ । ಮಂಡಲಗತಂ ಧ್ಯಾಯೇಚ್ಛಿವಂ ಚಿನ್ಮಯಂ ॥

ಹೃದಾಕಾಶದಲ್ಲಿ ವಿರಾಜಿಸುವ ಶಿವಧರ್ಮವೆಂಬ ಗಡ್ಡೆಯಿಂದ ಹೊರಹೊಮ್ಮಿ, ಸುಜ್ಞಾನ ನಾಳಗಳಿಂದಲೂ ಶಾಶ್ವತವಾದ ಅಷ್ಟೈಶ್ವರ್ಯ ವಿಭೂತಿಯಿಂದ

ಲೂ, ವೈರಾಗ್ಯವೆಂಬ ಕರ್ಣಿಕೆಯಿಂದಲೂ, ಶ್ರೀ ರುದ್ರೇಶ್ವರರೆಂಬ ಕೇಸರಗಳಿಂದಲೂ, ಶೋಭಿಸುವ ಚಂದ್ರ ಪ್ರಕಾಶದಂತೆ ಶಾಂತಿ ಭರಿತ ಹೃದಯ ಕಮಲದ ಮಧ್ಯೆ, ಚಂದ್ರಸೂರ್ಯಾಗ್ನಿಗಳೆಂಬ ಮಂಡಲತ್ರಯದಲ್ಲಿ ಚಿನ್ಮಯ ರೂಪನಾದ ನಿಜೇಷ್ಟಲಿಂಗವನ್ನು ನೆನೆದು ಧ್ಯಾನಾಸಕ್ತನಾಗಿರುವುದೇ ಶಿವಶರಣನ ಶಿವಯೋಗ ವೆನಿಸುವುದು ॥ ಶಿವಸ್ವರೂಪ ಚಿಂತೈವ ಧ್ಯಾನ ಮಿತ್ಯಭಿಧೀಯತೇ ॥

ಶಿವಂ ಶಾಂತಂ ಸುಂದರಂ



# XV

ಪೃಥ್ವಿ, " ನ " ಬೀಜಾಕ್ಷರ ಪೃಥ್ವಿ ಲಿಂಗದ ಆಧಾರದ ಮೇಲೆ ನಿಂತು ಬೆಳಗುತ್ತಲಿದೆ. ಜಗದ್ಗುರು ರೇಣುಕರು ಉದಯಿಸಿದ ಹಾಗೂ ನಿಜೈಕ್ಯ (ಅಂತರ್ಧಾನ) ರಾದ, ಕುಲ್ಯಪಾಕ ವಿರಾಜಮಾನ ಶ್ರೀ ಸೋಮನಾಥಲಿಂಗ ಪೃಥ್ವಿಲಿಂಗವೆಂಬುದು ಗಮನಾರ್ಹ. ದಕ್ಷಿಣದಲ್ಲಿ ವಿರಾಜಿಸುವ ಶ್ರೀ ಕಂಚಿ ಏಕಾಂಬರೇಶ್ವರನೂ ಸಹ ಪೃಥ್ವಿಲಿಂಗವಾದ್ದರಿಂದ, ಭಗವತ್ಪಾದ ಶ್ರೀ ರೇಣುಕಾಚಾರ್ಯರು ತಾವು ಕೈಲಾಸಕ್ಕೆ ಹಿಂತಿರುಗುವ ಮೊದಲು, ತಮ್ಮ ಪೀಠಕ್ಕೆ ಯೋಗ್ಯ ಉತ್ತರಾಧಿಕಾರಿಯನ್ನು ಪಡೆಯುವ ಸಲುವಾಗಿ, ಪೃಥ್ವಿ ಲಿಂಗವಾದ ಕಂಚಿ ಶ್ರೀ ಏಕಾಂಬರೇಶ್ವರನಲ್ಲಿಗೆ ಹೋಗಿ ಪ್ರಾರ್ಥಿಸಲಾಗಿ, ಭಗವಂತನ ಪ್ರೇರಣೆಯಿಂದ, ಪ್ರಣವ ಸಹಿತ ಶಿವಪಂಚಾಕ್ಷರಿ ಮಹಾ ಮಂತ್ರವನ್ನು ಜಪಿಸುತ್ತ ಧ್ಯಾನಾರೂಢರಾಗಿ ಏಕಾಂಬರೇಶ್ವರನ ಮಹಾ ಸನ್ನಿಧಿಯಲ್ಲಿ ಭುವಿಯನ್ನು ಸ್ಪರ್ಶಿಸುತ್ತಲೇ, ಭೂಗರ್ಭದಿಂದ ಶಿವನ ತೇಜಸ್ಸಿನಿಂದ ಶಿವಲಾಂಛನ ಲಾಂಛಿತರಾಗಿ ಪ್ರಾದುರ್ಭಾವರಾದ ಶ್ರೀ ರುದ್ರಮುನಿ ಶಿವಾಚಾರ್ಯರನ್ನು ಶ್ರೀಮದ್ರಂಭಾಪುರಿವೀರ ಪೀಠಾ ರೋಹಣರನ್ನಾಗಿ ನೇಮಿಸಿದರೆಂದು ಶ್ರೀ ಸಿದ್ಧನಾಥ ಶಿವಾಚಾರ್ಯ ಕೃತ ಸಂಸ್ಕೃತ ರೇಣುಕ ವಿಜಯ ಪುರಾಣದಲ್ಲಿ ಉಕ್ತವಾಗಿದೆ.

ಪರಮಶಿವನ ಸದ್ಯೋಜಾತ ಮುಖ " ನ " ಮಂತ್ರಮಯ.

ಸದ್ಯೋಜಾತ ಮುಖ ಸಂಭೂತರಾದ ರೇಣುಕನು "ನ" ಮಂತ್ರ ಸ್ವರೂಪಿ.

ರೇಣುಕನುದಯಿಸಿ ನಿಜೈಕ್ಯನಾದ ಲಿಂಗ "ನ " ಮಂತ್ರ ಬೀಜಾಕ್ಷರಮಯ.

" ನ " ಬೀಜ ಮಂತ್ರಾಕ್ಷರದ ಆಧಾರದ ಮೇಲೆ ಪೃಥ್ವಿ ನಿಂತು ಬೆಳಗುವುದರಿಂದ, ಪೃಥ್ವಿ ಲಿಂಗಮಯನಾದ ರೇಣುಕನು ಜಗತ್ತಿನ ಜಗದ್ಗುರುವೆಂದು ಶೃತ್ಯಾದಿಗಳಲ್ಲಿ ಪ್ರತೀತಿಯಿರುವುದು. ಈ ರಹಸ್ಯವನ್ನು ಜ್ಞಾನ ದೃಷ್ಟಿಯಿಂದ ಮನಗಂಡ ಆದಿ ಅಗಸ್ತ್ಯರು ಮತ್ತು ಆದಿ ಶಂಕರಾಚಾರ್ಯರೂ ನಮ್ರಭಾವದಿಂದ ಶರಣಾಗತರಾಗಿ ಮುಕ್ತರಾಗಿರುವರೆಂಬ ಮಹದಂಶಗಮನಾರ್ಹ. ಇದರಿಂದ

ತಿಳಿದು ಬರುವುದೇನೆಂದರೆ ರೇಣುಕರು ಪೃಥ್ವಿ ತತ್ವಕ್ಕೆ ಅಧಿಪತಿಗಳೆಂದೂ ಇದ ರಿಂದಾಗಿ ಇವರು ನಿಜಕ್ಕೂ ಜಗತ್ತಿಗೆ ಪ್ರಪ್ರಥಮ ಜಗದ್ಗುರು ಸಾರ್ವ ಭೌಮ ರೆಂಬುದು ಸ್ಪಷ್ಟಪಡುತ್ತೆ. ಪಂಚಾಕ್ಷರಿ ಮಂತ್ರ ಸೂಕ್ಷ್ಮ ಪಂಚಾಕ್ಷರಿ ಎಂತಲೂ ಸ್ಥೂಲ ಪಂಚಾಕ್ಷರಿ ಎಂತಲೂ ಎರಡು ಪ್ರಕಾರ ವಾಗಿರುವುದರಿಂದ, ಮೇಲ್ಕಂಡ ಎರಡು "ನ" ಕಾರ ಮಂತ್ರ ಮಯ ಪೃಥ್ವಿ ಲಿಂಗಗಳಲ್ಲಿ ಒಂದು ಸೂಕ್ಷ್ಮ ಮತ್ತೊಂದು ಸ್ಥೂಲ ಶಿವಪಂಚಾಕ್ಷರಿ ಬೀಜ ಮಂತ್ರವನ್ನು ಪ್ರತಿನಿಧಿಸುವುವು. ಭಗವತ್ಪಾದ ರೇಣುಕರು ಈ ಎರಡು ಮಹಾ ಲಿಂಗಗಳ ಪ್ರತೀಕವಾಗಿ ಪ್ರಜ್ವಲಿ ಸುತ್ತಿರುವರು.

ಇದರಂತೆಯೇ, " ಆಪ್‌ಲಿಂಗ " ವೆನಿಸಿದ ವಟಕ್ಷೇತ್ರ ಪ್ರವಿರಾಜಮಾನ ಶ್ರೀ ಸಿದ್ದೇಶ್ವರಲಿಂಗ ಹಾಗು ದಕ್ಷಿಣದ ತಿರುಚಿನಾಪಳ್ಳಿಯಿಂದ ಶ್ರೀ ರಂಗಕ್ಕೆ ಹೋಗುವ ಮಾರ್ಗ ಮಧ್ಯೆ ಇರುವ, ತಿರುವಾನೈ ಕಾವಲ್ ಕ್ಷೇತ್ರ ಪ್ರವಿರಾಜ ಮಾನ ಶ್ರೀ ಜಂಬುಕೇಶ್ವರ ಮಹಾ ಲಿಂಗಗಳ ಪ್ರತೀಕದಂತೆ ಜಗದ್ಗುರು ದಾರು ಕಾಚಾರ್ಯರಿರುವರು. ದ್ರಾಕ್ಷಾರಾಮ ಕ್ಷೇತ್ರದ ಶ್ರೀ ರಾಮನಾಥ ಲಿಂಗವೂ ದಕ್ಷಿಣದ ತಿರುವಣ್ಣಾಮಲೆ ಕ್ಷೇತ್ರ ಪ್ರವಿರಾಜಮಾನ ಶ್ರೀ ಅರುಣಾಚಲೇಶ್ವರ ಲಿಂಗಗಳೂ ಅಗ್ನಿ (ತೇಜಸ್) ತತ್ವಕ್ಕೆ ಆಧಾರವಾದ "ಶಿ" ಕಾರಬೀಜಾಕ್ಷರ ಮಹಾ ಮಂತ್ರದ ಪ್ರತೀಕವಾಗಿ, ಹಾಗೂ ಪರಮ ಸನಾತನ ವೈರಾಗ್ಯ ಪೀಠ ವೆಂದೆನಿಸಿದ ಕೇದಾರೇಶ್ವರನ ಸದೃಶರಾಗಿ ಜಗದ್ಗುರು ಘಂಟಾಕರ್ಣ ಶಿವಾಚಾ ರ್ಯರು (ಏಕೋರಾಮಾ ರಾಧ್ಯರು) ಪ್ರಕಾಶಿತರಾಗಿರುವರು. ಸುಧಾಕುಂಡ ಕ್ಷೇತ್ರ ಪ್ರವಿರಾಜಮಾನ (ಶ್ರೀ ಶೈಲ) ಶ್ರೀ ಮಲ್ಲಿಕಾರ್ಜುನ ಪರ್ವತಲಿಂಗವೂ ದಕ್ಷಿಣದಲ್ಲಿನ ಶ್ರೀ ಕಾಳಹಸ್ತೇಶ್ವರ ಮಹಾ ಲಿಂಗವೂ ವಾಯು ತತ್ವಕ್ಕೆ ಆಧಾರ ವಾಗುಳ್ಳ "ವ" ಕಾರ ಬೀಜಾಕ್ಷರ ಮಹಾ ಮಂತ್ರದ ಪ್ರತೀಕವಾಗಿ ಜಗದ್ಗುರು ಪಂಡಿತಾರಾಧ್ಯರು ಪರಿಶೋಭಿತರಾಗಿರಲು, ಶ್ರೀ ಕಾಶಿವಿಶ್ವೇಶ್ವರ ಹಾಗೂ ದಕ್ಷಿಣದ ಚಿದಂಬರ ಕ್ಷೇತ್ರ, ಪ್ರವಿರಾಜಮಾನ ಶ್ರೀ ಚಿದಂಬರೇಶ್ವರನ ಶಿವಲಿಂಗ ಗಳು ಆಕಾಶ ತತ್ವಕ್ಕೆ ಆಧಾರವಾಗುಳ್ಳ ಶಿವಪಂಚಾಕ್ಷರೀ ಮಹಾ ಮಂತ್ರದ

"ಯ" ಕಾರ ಬೀಜಾಕ್ಷರದ ಪ್ರತೀಕವಾಗಿ ಜಗದ್ಗುರು ಶ್ರೀ ವಿಶ್ವಾರಾಧ್ಯರೂ, ಈ ಪ್ರಕಾರವಾಗಿ ಪ್ರಥಮಾಶ್ರಮ ಸಂಭವರೂ ಪ್ರಪ್ರಥಮಾಚಾರ್ಯರುಗಳಾಗಿ ವಿರಾಜಿಸುತ್ತಲಿರುವರು.

ಶ್ರೀ ಮದ್ರೇವಣ ಸಿದ್ಧಸ್ಯ । ಕೊಲ್ಲಿಪಾಕಿ ಪುರೋತ್ತಮೇ ॥
ಸೋಮೇಶ ಲಿಂಗಾಜ್ಜನನಂ । ಆವಾಸಃ ಕದಳೀಪುರೇ ॥೧॥

॥ ತದ್ವನ್ಮರುಲ ಸಿದ್ಧಸ್ಯ । ವಟಕ್ಷೇತ್ರೇ ಮಹತ್ತರೇ ॥
ಸಿದ್ಧೇಶಲಿಂಗಾ ಜ್ಜನನಂ । ಸ್ಥಾನ ಮುಜ್ಜಯಿನೀ ಪುರೇ ॥೨॥

॥ ದ್ರಾಕ್ಷಾರಾಮಾ ಖ್ಯ ಸುಕ್ಷೇತ್ರೇ । ರಾಮನಾಥಾ ಖ್ಯ ಲಿಂಗತಃ ॥
ಏಕೋ ರಾಮಸ್ಯ ಜನನಂ । ಆವಾಸಸ್ತು ಹಿಮಾಲಯೇ ॥೩॥

॥ ಸುಧಾ ಕುಂಡಾಖ್ಯ ಸುಕ್ಷೇತ್ರೇ । ಮಲ್ಲಿಕಾರ್ಜುನ ಲಿಂಗತಃ ॥
॥ ಜನನಂ ಪಂಡಿತಾರ್ಯಸ್ಯ । ನಿವಾಸಃ ಶ್ರೀ ಗಿತಾಶಿವೇ ॥೪॥

॥ ಕಾಶ್ಯಾಂ ವಿಶ್ವೇಶ ಲಿಂಗಾಚ್ಚ । ವಿಶ್ವಾರಾಧ್ಯಸ್ಯ ಸಂಭವಃ ॥
ಸ್ಥಾನಂ ಶ್ರೀ ಕಾಶಿಕಾಕ್ಷೇತ್ರೇ । ಶೃಣು ಪಾರ್ವತಿ ಸಾದರಂ ॥೫॥

(ಸುಪ್ರಬೋದಾಗಮ)

(ಈ ಗ್ರಂಥ ಕುಸುಮದಲ್ಲಿ ಮಕರಂಧದೂಟವನ್ನು ಪುನಃ ಪುನಃ ಉಂಡೂಟವನ್ನೇ ಅಲ್ಲಲ್ಲಿ ಉಣಬಡಿಸಿರುವುದರಿಂದ ಓದುಗರಾದ, ಕ್ಷಮಾ ವಿಭೂಷಿತರೂ ಸಹೃದಯ ಅತಿಥಿಗಳು "ಪುನರುಕ್ತಿ ದೋಷ" ವೆಂದು ಭಾವಿಸದೆ, ಓದಿ ಸ್ಮರಿಸಿದಷ್ಟೂ ಪುಣ್ಯವನ್ನು ಮೇಲಿಂದ ಮೇಲೆ ತಂದೊಡ್ಡುವ ಸದ್ಗುರು ಚರಿತಾಮೃತವನ್ನು ॥ ಚರ್ವಿತ ಚರ್ವಣಃ ॥ ಎಂಬೋಕ್ತಿಯಂತೆ ಮನ್ನಿಸಿ, ಕಡೆದಷ್ಟೂ ನವನೀತವನ್ನು ಹೊರಗೆಡಹಿ ಆತ್ಮ ಪ್ರಕಾಶವನ್ನು ಹೊಂದಬೇಕೆಂದು ವಿನಯಾನ್ವಿತನಾಗಿ ಪ್ರಾರ್ಥಿಸುವೆನು.)

ಅಧ್ಯಾತ್ಮ ವಿಚಾರ, ಸಾಗರದ ಅನಂತ ತರಂಗಗಳಂತೆ ಆಕರ್ಷಣೀಯವೂ ಅತಿಗಂಭೀರಯುತವೂ ಆಗಿರುವುದು. ನದಿ ತಟದ ಮರಳುಭೂಮಿಯನ್ನು ತೋಡಿದಷ್ಟೂ ಜಲವು ಉಕ್ಕಿಬರುವಂತೆ, ವಿಚಾರ ಮಾಡಿದಷ್ಟೂ ಗ್ರಾಹ್ಯವಾದ ಹೊಸ ಹೊಸ ಅಂಶಗಳು ಮನೋಬುದ್ಧಿ ಪಟಲಗಳಲ್ಲಿ ಸ್ಫೂರ್ತಿದಾಯಕವಾಗಿ ಪ್ರಕಾಶವಾಗುತ್ತಲಿರುವುವು. ಶ್ರೀ ತ್ಯಾಗರಾಜರು ತಮ್ಮ ಕೀರ್ತನೆಯೊಂದರಲ್ಲಿ ಇದೇ ಅಂಶವನ್ನು ॥ ಚನಿತೋಡಿ ತೀವೆ ! ಓ ಮನಸಾ ॥ ಎಂದು ಮನಸ್ಸಿಗೆ ಬೋಧಿಸಿರುವರು. ಮಾನವನು ಮುಮುಕ್ಷುತ್ವಾ ಕಾಂಕ್ಷೆಯಿಂದ ನಿತ್ಯಾನಿತ್ಯ ವಸ್ತು ವಿವೇಚನೆಯಿಂದ ವಿಚಾರ ಪರನಾಗಿ ॥ ಅಸತೋಮಾ ಸದ್ಗಮಯ । ತಮಸೋಮಾ ಜ್ಯೋತಿರ್ಗಮಯ । ಮೃತೋರ್ಮಾ ಅಮೃತಂಗಮಯ ॥ ಎಂಬ ವೇದ ವಾಣಿಯಂತೆ, ಅನಿತ್ಯ ಅಸತ್ಯವಾದವುಗಳಿಂದ ದೂರನಾಗಿ, ನಿತ್ಯ ಸತ್ ಸ್ವರೂಪಿಯಾದ ಪರಮಾತ್ಮನಿಗಭಿಮುಖವಾಗಿ ಧ್ಯಾನಯೋಗ ಪೂಜಾ ಫಲದಿಂದ ಅವನಲ್ಲಿ ಲೀನನಾಗಬೇಕು. ಈ ಸಾಧನೆಗೆ ಅಂತರಂಗ ಶುದ್ಧಿ ಬಹಿರಂಗ ಶುದ್ಧಿ, ಅತ್ಯಾವಶ್ಯಕ. "ಓ! ಪರಮಾತ್ಮ ನನ್ನನ್ನು ಅವಿದ್ಯೆಯೆಂಬ ಅಜ್ಞಾನಂಧಕಾರದಿಂದ ಉದ್ಧರಿಸಿ, ಪ್ರಜ್ಞಾನಾನಂದ ಘನಮಯ ದಿವ್ಯ ಜ್ಞಾನ ಜ್ಯೋತಿಕಡೆ ಕರೆದುಕೋ ಮತ್ತೂ ಮೃತ್ಯುಭೀತಿಯಿಂದ ನನ್ನನ್ನು ಪಾರುಮಾಡಿ ಅಮೃತಮಯನನ್ನಾಗಿ ಮಾಡೆಂದು" ಹಗಲಿರುಳು ಶರಣಾಗತಿ ಭಾವದಿಂದ ಹರನನ್ನು ಸ್ಮರಿಸಿ ಪ್ರಾರ್ಥಿಸಬೇಕೆಂಬುದೇ ಸಾರಾಂಶ. ಪರಂಜ್ಯೋತಿ ಸ್ವರೂಪಿಯಾದ ಪರಶಿವನು ನಮ್ಮ ಹೃನ್ಮಂದಿರದಲ್ಲಿ ನೆಲಸಿರುವ ಅಂಶ ವಿದಿತವೇ ಇರುತ್ತೆ.

ಉತ್ಕೃಷ್ಟವಾದ ಮಾನವನ ದೇಹದಲ್ಲಿ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಮೂರು ಸ್ಥಾನಗಳನ್ನು ಗುರ್ತಿಸುತ್ತಾ, ಭಗವತ್ಪಾದ ಶ್ರೀ ರೇಣುಕಾಚಾರ್ಯರು ಸಿದ್ಧಾಂತ ಶಿಖಾಮಣಿಯಲ್ಲಿ ॥ ಮೂಲಾಧಾರೇಚ ಹೃದಯೇ । ಭ್ರೂಮಧ್ಯೇ ಸರ್ವದೇಹಿನಾಂ । ಜ್ಯೋತಿರ್ಲಿಂಗಂ ಸದಾಭಾತಿ । ಯದ್ಬ್ರಂಹೋ ತ್ಯಾಹು ರಾಗಮಾಃ ॥ ಹೇ ಕಲಸೋದ್ಭವನಾದ ಅಗಸ್ತ್ಯನೇ, ಕುಂಡಲಿನಿ ಶಕ್ತಿಗೆ ಆಶ್ರಯವಾದ ಮೂಲಾಧಾರ ಚಕ್ರದಲ್ಲೂ, ಪರಮ ಗೂಢವಾದ ಕೋಮಲ ಹೃನ್ಮಂ

ದಿರದಲ್ಲೂ ಮತ್ತೂ ಲಲಾಟ ಪ್ರದೇಶದ ಮಧ್ಯಾಂತ ವರ್ತಿಯಾಗಿ ವಿರಾಜಿಸುವ ಭ್ರೂಮಧ್ಯ ಸ್ಥಾನದಲ್ಲೂ ಈ ಮೂರು ಸ್ಥಾನಗಳಲ್ಲಿ ಪರಶಿವನು ಜ್ಯೋತಿರ್ಲಿಂಗ ಮಯನಾಗಿ ಬೆಳಗುವನೆಂದು ಬೋಧಿಸಿರುವರು. ಹೃದಯವು ಅತ್ಯಂತ ಪ್ರಿಯ ತಮವೆನಿಸಿರುವುದು. ಕಠೋಪನಿಷತ್ ಈ ಅಂಶವನ್ನು ಪ್ರತಿಪಾದಿಸುತ್ತಾ ॥ ಅಂಗುಷ್ಟಮಾತ್ರಃ ಪುರುಷೋಂತರಾತ್ಮ । ಸದಾಜನಾನಾಂ ಹೃದಯೇ ಸನ್ನಿ ವಿಷ್ಟಃ ॥ ಅಂಗುಷ್ಟ ಗಾತ್ರದಲ್ಲಿ ಕಂಗೊಳಿಸುವ ಕೋಮಲ ಹೃದಯ ಸ್ಥಾನದಲ್ಲಿ ಪರಮ ಪುರುಷನಾದ ಪರಮಾತ್ಮನು ಸರ್ವ ಜನರಲ್ಲಿ ಸರ್ವದಾ ಬೆಳಗುತ್ತಿರುವ ನೆಂದು ಸ್ಪಷ್ಟಪಡಿಸಿದೆ. ಆದ್ದರಿಂದ ಶರಣ ಸ್ಥಲದ ಶಿವಶರಣನು ॥ ಪರಂಜ್ಯೋತಿ ರುಪಸಂಪದ್ಯ । ಸ್ವೇನರೂಪೇಣಾಭಿ ನಿಷ್ಪದ್ಯತೇ ॥ ಅಂದಂತೆ, ಈ ಜನ್ಮದಲ್ಲೇ ಜೀವಂತನಾಗಿರುವಾಗ ತನ್ನ ಹೃನ್ಮಂದಿರದಲ್ಲಿ ಪ್ರಕಾಶಿತನಾಗಿ " ಸನ್ ಹೃದಯ ಪ್ರಕಾಶಃ " ಜಾಜ್ವಲ್ಯ ಮಾನವಾಗಿ ಪರಿಶೋಭಿಸುವ ಆತ್ಮಾದೇವನಾದ ಸ್ವ ಯಂ ಜ್ಯೋತಿಯಲ್ಲಿ ಸಮಾವೇಶಿತನಾಗಿ ದಿವ್ಯಾಮೃತ ಸ್ಥಿತಿಯನ್ನು ಹೊಂದು ವನೆಂಬ ಸರ್ವಧರ್ಮ ಸಾರವನ್ನು ಶಿವಾಗಮಗಳು ಪ್ರತಿಪಾದಿಸುತ್ತಲಿರುವುವು. ಜಡೇಂದ್ರಿಯಗಳು ಆತ್ಮ ಪ್ರಕಾಶದ, ಸಾನ್ನಿಧ್ಯದಲ್ಲಿ ಚೇಷ್ಟಿತವುಗಳಾಗಿ ತಂತಮ್ಮ ಕಾರ್ಯಗಳನ್ನು ನಿರ್ವಹಿಸುತ್ತಿರುವುವು.

ಆತ್ಮ ಕಲ್ಯಾಣದ ಅರಿವನ್ನು ಗುರುವು ಶಿಷ್ಯಕೋಟಿಗಳಲ್ಲಿ ಉಂಟು ಮಾಡುವನಾದ್ಧರಿಂದ, " ಸದಾಗುರು ಭಕ್ತಿಂ ಕುರ್ಯಾತ್ ", " ಗುರುಚರಣಂ ಭವಹರಣಂ । ಸದ್ಗುಗು ಚರಣಂ ಭವಹರಣಂ " ಎಂಬಂತೆ ದುಃಖ ಮಯವಾ ದ ಭವಸಾಗರವನ್ನು ದಾಟಲು ನೌಕೆಯಂತಿರುವ ಗುರು ಚರಣ ಕಮಲಾಲಯ ಗಳನ್ನು ನಾವು ಸರ್ವದಾ ಅನನ್ಯ ಭಕ್ತಿ ಭಾವದಿಂದ ಭಜಿಸಿ ಧ್ಯಾನಿಸಿ ಧನ್ಯ ರಾಗಬೇಕು.

ದಿವ್ಯ ಮೂರ್ತಾ ಮೂರ್ತ ಸ್ವರೂಪದಿಂದ ವಿರಾಜಿಸುವ ಇಷ್ಟಲಿಂಗಾ ರಾಧನೆ, ಶಿವಪಂಚಾಕ್ಷರೀ ಮಹಾ ಜಪಾನುಸಂಧಾನ ಧ್ಯಾನಾದಿಗಳಲ್ಲಿ

ರಮಿಸುವುದರ ಮೂಲಕ, ಸ್ವಸ್ವರೂಪ ನಿತ್ಯಸುಖವನ್ನು ಹೊಂದುವಂಥಾ ಪರಮ ವೀರಶೈವ ದರ್ಶನದಲ್ಲಿ ಸರ್ವಧರ್ಮ ಸಮನ್ವಯ ತತ್ವವು ಸಹಜವಾಗಿ, ಗರ್ಭೀಕೃತವಾಗಿರುವುದು ಕಂಡುಬರುತ್ತೆ. ಶ್ರೀ ಶೈಲ ಸೂರ್ಯಸಿಂಹಾಸನಾಧಿಪತಿಗಳಾದ ೧೧೧ಂಲ ಜಗದ್ಗುರು ಶ್ರೀ ಶ್ರೀ ಶ್ರೀಪತಿ ಪಂಡಿತರು, ತಮ್ಮಿಂದ ರಚಿತವಾದ ಘನ ಶ್ರೀಕರ ಭಾಷ್ಯದಲ್ಲಿ ಮೇಲ್ಕಂಡ ಮಹದಂಶವನ್ನು ವಿಶದವಾಗಿ ವಿವರಿಸಿರುವರು.

ಸನಾತನವೂ ಸರ್ವ ಸ್ವತಂತ್ರವೂ ಆಗಿ ವಿರಾಜಿಸುವ ಉತ್ಕೃಷ್ಟವಾದ ಶೈವಧರ್ಮವು ಎರಡು ಪ್ರಮುಖ ಭಾಗಗಳಾಗಿ ಕವಲೊಡೆದು, ಅಲಿಂಗಿಧರ್ಮವೆಂತಲೂ, ಲಿಂಗಿಧರ್ಮವೆಂತಲೂ ಎರಡು ಪ್ರಕಾರ ಜಗತ್ತಿನಲ್ಲಿ ಯುಗ ಯುಗಾಂತರಗಳಿಂದಲೂ ಅನೂಚಾನವಾಗಿ ಬೆಳೆದು ಪ್ರವರ್ಧಮಾನವಾಗುತ್ತಲಿರುವ ಮಹದಂಶ ಪಂಡಿತ ಪಾಮರರಾದಿಯಾಗಿ ಸರ್ವರಿಗೂ ತಿಳಿದ ವಿಷಯವೆ ಆಗಿರುತ್ತೆ. ಈ ಎರಡು ಧರ್ಮಗಳು ವೇದವಿಹಿತವೆನಿಸಿ ಶಿವಾಗಮಗಳಲ್ಲೂ ಪ್ರೋಕ್ತವಾಗಿ ಜಗತ್ತಿನಲ್ಲಿ ಅನಾದಿಕಾಲದಿಂದಲೂ ಪ್ರಕಾಶಿತವಾಗಿರುವುವು. ಜೀವ ಬ್ರಹ್ಮೈಕ್ಯ ಅಥವಾ ಲಿಂಗಾಂಗ ಸಾಮರಸ್ಯವೆಂಬ ಪರಮ ಐಕ್ಯ ಸ್ಥಿತಿಯಲ್ಲಿ ಇವೆರಡು ವಿಧಾನಗಳ ಗುರಿ ಹಾಗು ಫಲವಂದೇ ಆಗಿದ್ದರೂ, ಪ್ರಾರಂಭ ಸ್ಥಿತಿಯಲ್ಲಿ ಇವೆರಡರ ಆಚರಣೆ ಅನುಷ್ಠಾನ, ಆಚಾರ ವಿಚಾರ ಸಾಂಪ್ರದಾಯಿಕ ಪದ್ಧತಿಗಳು ಭಿನ್ನ ಭಿನ್ನನಾಗಿರುವುದು ಕಂಡುಬರುತ್ತೆ. ಪ್ರಮುಖ ಭೇದ ಪ್ರಭೇದಗಳು ಕಾರಣಾಂತರಗಳಿಂದ ನೈಮಿತ್ತಿಕವೇ ಹೊರತು ಅನ್ಯಥಾ ಇರಲಿಕ್ಕಿಲ್ಲ. ಅಲಿಂಗಿ ಬ್ರಾಹ್ಮಣರು ಅಂದರೆ ಯಜ್ಞ ಯಾಗಾದಿ ಕಾಮ್ಯಕರ್ಮಗಳಲ್ಲೂ ಅಗ್ನಿಹೋತ್ರಾದಿ ವೈದಿಕ ಕರ್ಮಗಳಿಗೆ ಬದ್ಧರಾದ ದ್ವಿಜರು, ಸ್ಥಾವರ ಲಿಂಗಾರಾಧಕರಾದ್ದರಿಂದ ಇವರನ್ನು ಅಲಿಂಗಿ ಧರ್ಮಿಗಳೆಂದೂ, ಅಥವಾ ಅಲಿಂಗಿ ಬಾಹ್ಮಣರೆಂದು ಎನಿಸಿರುವರು. ಇಷ್ಟಲಿಂಗಾರಾಧಕರಾದ ಲಿಂಗಧಾರಿಗಳೆನಿಸಿದ ವೀರಶೈವಾಚಾರ ಸಂಪನ್ನರು ಲಿಂಗಿಧರ್ಮಿಗಳೆನಿಸಿ ವೀರಶೈವ ಬ್ರಾಹ್ಮಣರೆಂದು ಪರಿಗಣಿಸಲ್ಪಟ್ಟಿರುವ ಅಂಶ ಸನಾತನವೂ ಶಾಸ್ತ್ರೀಯುವೆನಿಸಿರುವುದು. ಲಿಂಗಿ

ಬ್ರಾಹ್ಮಣ ಅಲಿಂಗಿ ಬ್ರಾಹ್ಮಣರೆಂಬ ಎರಡು ವರ್ಗದವರೂ ಪೂಜ್ಯರೆನಿಸಿದ್ದರೂ, ಮಹಾಭಾರತದ ಅನುಶಾಸನ ಪರ್ವದಲ್ಲಿ ಧರ್ಮನಂದನನು, ವೃದ್ಧ ಪಿತಾಮಹ ನಾದ ಭೀಷ್ಮಾಚಾರ್ಯರನ್ನು ಮೇಲ್ಕಂಡ ಎರಡು ವರ್ಗದ ಬ್ರಾಹ್ಮಣರಲ್ಲಿ ಯಾರು ಶ್ರೇಷ್ಠರೆಂದು ಪ್ರಶ್ನಿಸಲು, ಭೀಷ್ಮರು ಇವರೀರ್ವರೂ ಶ್ರೇಷ್ಠರೇ ಇರು ವರು. ಇದ್ದರೂ ಇವರಿಬ್ಬರಲ್ಲಿ ಲಿಂಗಿ ಬ್ರಾಹ್ಮಣರು ಪ್ರಥಮಜರು ಹಾಗೂ ಶ್ರೇಷ್ಠರೆಂದು ಅರುಹಿರುವುದಾಗಿ ಕಂಡುಬರುತ್ತೆ. ಹೇಗೆಂದರೆ ಸ್ಥಾವರಲಿಂಗ ದಂತಲ್ಲದೆ, ಇಷ್ಟಲಿಂಗವನ್ನು ಸದ್ಗುರುವು ಶಿಷ್ಯನಿಗೆ ಅನುಗ್ರಹಿಸುವ ಕಾಲದಲ್ಲಿ, ಶಿಷ್ಯನ ಶಿರಸ್ಸಿನ ಸಹಸ್ರಾರ ಚಕ್ರದಲ್ಲಿ ಶೋಭಿಸುವ ಸ್ವಯಮಾತ್ಮ ಸ್ವರೂಪ ವೆನಿಸಿದ ಅವನ ಚಿತ್ಕಳೆಯನ್ನು ಗುರುವು ತನ್ನ ಶಿವಯೋಗ ಶಕ್ತಿಯಿಂದ ಆಕ ರ್ಷಿಸಿ, ಹೊರಹೊಮ್ಮಿಸಿ ಶಿಷ್ಯನ ಕರಸ್ಥಲಕ್ಕೆ ॥ ಕರಾಬ್ಜಪೀಠೇವಿನ್ಯಸ್ಯ । ತದ್ಯೋಗಾಸಕ್ತಮಾನಸಃ । ಎಂಬಂತೆ, ಕರಕಮಲ ಪೀಠದಲ್ಲಿ ಪರಿಶೋಭಿಸುವ ಇಷ್ಟಲಿಂಗರೂಪದಲ್ಲಿ ತಂದಿರಿಸಿ, ಶಿಷ್ಯನ ಆತ್ಮೋದ್ಧಾರನಿಮಿತ್ತ, ಅವನ ನಿತ್ಯಾ ರಾಧನ ಉಪಾಸನ ಧ್ಯಾನಾದಿ ಶಿವಯೋಗಾನುಸಂಧಾನಕ್ಕೆ ಅಣಿಮಾಡಿ, ಪ್ರಣವ ಸಹಿತ ಶಿವಪಂಚಾಕ್ಷರೀ ಮಹಾಮಂತ್ರವನ್ನು ಉಪದೇಶಿಸುವನು. ಇಷ್ಟಲಿಂಗ ಧಾರಣೆ ನಿತ್ಯ ಪೂಜಾನುಸಂಧಾನ, ಧ್ಯಾನ, ಅರ್ಪಣೆಗಳಿಂದ, ಬೆಂಕಿಮುಟ್ಟಿದ ಬೆಣ್ಣೆ – ತುಪ್ಪವಾಗುವಂತೆ, ಪರುಷ ಸೋಂಕಿದ ಕಬ್ಬಿಣ ಕನಕವಾಗುವಂತೆ, ಶುಕ್ತಿಯೊಳಗಿನ ಜಲಬಿಂದು ಮುತ್ತಾಗುವಂತೆ, ಲಿಂಗ( ಇಷ್ಟಲಿಂಗ) ಸೋಕಿದ ಅಂಗ (ತನುವು) ಲಿಂಗಮಯವೇ ಆಗುವುದು. ಅಂಗಶಬ್ಧಕ್ಕೆ ಜೀವಾತ್ಮವೆಂಬ ರ್ಥವೂ ವುಂಟು. ಇದರಿಂದಾಗಿ ಜೀವಬ್ರಹ್ಮೈಕ್ಯವೆಂಬ ಲಿಂಗಾಂಗ ಸಾಮರಸ್ಯ ಸುಖವೇ ನಿತ್ಯಸುಖವೆನಿಸಿರುವುದರಿಂದ, ಇದನ್ನು ಹೊಂದಲು ಲಿಂಗಿಧರ್ಮ ಅತ್ಯಂತ ಪ್ರಿಯಕರವೂ ಸುಸುಖಮಯವೂ ಆತ್ಮೀಯವೂ ಆಗಿ ವಿರಾಜಿತವಾಗಿ ರುವುದರಿಂದ, ಇಂತಪ್ಪಧರ್ಮದಲ್ಲಿ ನಿಷ್ಠೆಯುಳ್ಳ ಲಿಂಗೀಬ್ರಾಹ್ಮಣನೇ ಶ್ರೇಷ್ಠ ಪುರುಷನೆಂಬರ್ಥದಲ್ಲಿ, ಜ್ಞಾನವೃದ್ಧರಾದ ಭೀಷ್ಮಾಚಾರ್ಯರು ಯುಧಿಷ್ಠಿರ ಮಹಾರಾಜನಿಗೆ ಬೋಧಿಸಿದುದಾಗಿ ಕಂಡುಬರುತ್ತೆ. ಅಲಿಂಗಿ ಧರ್ಮವು ಚತು ರ್ಮುಖಬ್ರಹ್ಮನ ಸೃಷ್ಟಿಗೊಳಪಟ್ಟದ್ದಾಗಿ ಪ್ರಾಕೃತವೆನಿಸಿರುವುದು. ಲಿಂಗಿಧರ್ಮವು

ಶಿವಾಗಮಗಳೋಕ್ತಿಯಂತೆ ಶಿವನಿಂದ ಪ್ರೋಕ್ತವಾದುದಾಗಿ, ಷಣ್ಮುಖ ಶಾಂಭವಿಯೇ ಆದಿಯಾಗಿ, ವಿಷ್ಣುಬ್ರಹ್ಮೇಂದ್ರಾದಿ ಸಮಸ್ತದೇವಗಣ, ಮುನಿಜನ, ಬ್ರಹ್ಮಜನ, ಋಷಿಜನಸ್ತೋಮಗಳಿಂದ ಆದರಿಸಿ ಅನುಷ್ಠಿತವಾಗಿ ಅಪ್ರಾಕೃತವೂ ಅತಿವರ್ಣಾಶ್ರಮಧರ್ಮವೆನಿಸಿ ಅನಾದಿಕಾಲದಿಂದ ಸನಾತನವೂ ಶಾಸ್ತ್ರೀಯವೆನಿಸಿ ಭುವನಾಂಡಕೋಟಿಗಳಲ್ಲಿ ಪ್ರಕಾಶಿತವಾಗಿರುವುದಾಗಿ ವೇದೋಪನಿಷದಾದಿಗಳಿಂದ ವೇದ್ಯವೇ ಇರುತ್ತೆ. ಇಷ್ಟಲಿಂಗಧಾರಣ, ಪೂಜಾ. ಶಿವಧ್ಯಾನ, ಶಿವಯೋಗಗಳಿಂದ ವಿರಾಜಿತವಾದೀಲಿಂಗಿಧರ್ಮವು, ಸರ್ವದೇವತಾಮೂರ್ತಿಸ್ವರೂಪವೂ ಹಾಗೂ ಸ್ವಯಮಾತ್ಮಸ್ವರೂಪನೆನಿಸಿ ಶಿಷ್ಯನ ಮೂರ್ಧನ್ಯದ ಮಧ್ಯೆ ವಿಕಾಸಗೊಂಡ ಸಹಸ್ರಾರ ಕಮಲದಲ್ಲಿ ಸ್ವಯಂಜ್ಯೋತಿಯಾಗಿ ಬೆಳಗುವ ಮಕರಂದದ ಮರಕದ ಮಣಿಯೆನಿಸಿದ ಪರಶಿವನ ಚಿತ್ಕಳೆಯನ್ನು ಪರಮ ಗುರುವು ಅರಿತು ತನ್ನ ನಿಜಯೋಗ ಶಕ್ತಿಯಿಂದ ಆ ಶಿಷ್ಯನ ಚಿತ್ಕಳೆಯನ್ನು ಆಕರ್ಷಿಸಿ ಹೊರಹೊಮ್ಮಿಸಿ, ಶಿಷ್ಯನ ಇಷ್ಟಲಿಂಗದಲ್ಲಿ ವಿಧಿವತ್ತಾಗಿ ಸಮಾವೇಶಗೊಳಿಸಿ, ಮೂರ್ತಿವತ್ತಾಗಿ ಸಾಕ್ಷಾತ್ಕಾರಗೊಳಿಸಿ, ಶಿಷ್ಯನ ವಾಮಕರಾಬ್ಜ ಪೀಠದಲ್ಲಿರಿಸಿ, ಪೂಜಾನುಕ್ರಮವನ್ನು ಅರುಹಿ ಮೂಲಶಿವ ಪಂಚಾಕ್ಷರೀಮಂತ್ರವನ್ನು ಬೋಧಿಸಿದ, ಲಿಂಗಾಂಗ ಸಂಪರ್ಕದಿಂದ ನಿಜಸುಖಿ ಎನಿಸಿದ ಅಂಗನು (ಜೀವನು) ಲಿಂಗಾಂಗ ಸಾಮರಸ್ಯ ನಿತ್ಯಾನಂದವನ್ನು ತನ್ನ ಜೀವಿತಕಾಲದಲ್ಲೇ ಹೊಂದಿ ಶಿವಾನಂದದಲ್ಲಿ ಅನವರತ ಸುಖಿಸುವುದೇ ಆಗಿರುತ್ತೆ.

॥ ಏಕೇನ ಜನ್ಮನಾಮುಕ್ತಿ – ರ್ವೀರಾಣಾಂತು ಮಹೇಶ್ವರಿ ॥ ಮತ್ತೂ ॥ ಲಿಂಗಾಂಗ ಸಂಗಿನೋವತ್ಸ–ಪುನರ್ಜನ್ಮನ ವಿದ್ಯತೆ॥ ಎಂಬೀ ಶಿವಾಗಮೋಕ್ತಿಗಳು, ಉಪನಿಷದರ್ಥಗಳಿಗೆ ತಾಯ್ಮನೆಎನಿಸಿ ಜೀವನನ್ನು ಪಶುಪಾಶಗಳಿಂದ ಮುಕ್ತನನ್ನಾಗಿಸಿ, ಅಂಗನನ್ನು ಲಿಂಗಮುಖದಲ್ಲಿ ವಂದುಗೂಡಿಸಿ "ಶರಣಸತಿ – ಲಿಂಗಪತಿ" ಎಂಬ ಪರಮೋತ್ಕೃಷ್ಟಧರ್ಮಾವಲಂಬನೆಯಿಂದ ಕೂಡಿ, ಮಹೋನ್ನತವಾದ "ತತ್ವಮಸಿ" ಮಹಾವಾಕ್ಯದ ಸಾರಾರ್ಥವನ್ನೊಳಗೊಂಡು ಲಿಂಗಿಧರ್ಮವು ವಿರಾಜಿತವಾಗಿರುವುದು.

ಅಲಿಂಗಿ ಬ್ರಾಹ್ಮಣಧರ್ಮವು ವೇದವಿಹಿತವೆನಿಸಿದ್ದರೂ, ಲಿಂಗಿಬ್ರಾಹ್ಮಣ ಧರ್ಮದಂತಲ್ಲದೆ ಸ್ಥಾವರಲಿಂಗಾರ್ಚನೆಯನ್ನು ಮಾಡುತ್ತ ಶಿವಾಗಮೋಕ್ತಪದ್ಧತಿಗಳನ್ನು ಅನುಸರಿಸುತ್ತ ಗಾಯಿತ್ರಿ ಮಹಾಮಂತ್ರಾನುಸಂಧಾನದೊಂದಿಗೆ ಯಜ್ಞಯಾಗ ಹೋಮ - ಹವನ ಹವ್ಯಕವ್ಯಾದಿ ಸತ್ಕರ್ಮಾನುಷ್ಠಾನಗಳಿಂದ ಪ್ರಕಾಶಿತವಾಗಿರುವುದು. ಇವರಲ್ಲಿ ಶೈವಪರವಾದ ದ್ವೈತಿಗಳೆಂತಲೂ, ವಿಶಿಷ್ಟಾದ್ವೈತಿಗಳೆಂತಲೂ ಅದ್ವೈತಿಗಳೆಂತಲೂ ಮೂರು ಪ್ರಕಾರದಿಂದಿರುವರು. ಇವರು ವಿಭೂತಿ ರುದ್ರಾಕ್ಷಿ ಮುಂತಾದ ಶಿವಲಾಂಛನಲಾಂಛಿತರಾಗಿದ್ದರೂ, ಶ್ರೀರಾಮ, ಕೃಷ್ಣ, ವಿಷ್ಣ್ವಾದಿದೇವತಾ ವಿಗ್ರಹಾರಾಧಕರಾಗಿಯೂ ಇರುವರು. ಬ್ರಾಹ್ಮಣ ಅದ್ವೈತ ಪೀಠಾನುಯಾಯಿಗಳಾದ ಚತುರಾಶ್ರಮದವರೂ, ಹರಿ ಹರರ ಭೇದಭಾವವಿಲ್ಲದೆ ದೇವತಾರಾಧಕರಾಗಿದ್ದರೂ, ಮೂಲ ಪೀಠಾಚಾರ್ಯರು ಶ್ರೀಚಂದ್ರಮೌಳೀಶ್ವರ ಲಿಂಗಾರ್ಚನೆಯನ್ನು ಆದಿಯಿಂದಲೂ ಪ್ರಧಾನವಾಗಿಟ್ಟುಕೊಂಡಿರುವುದು ಗಮನಾರ್ಹ. ಆತ್ಮಸಾಕ್ಷಾತ್ಕಾರದ ಶಿವಾನುಭವವು ಕರತಲಾಮಲಕದಂತೆ ಕಂಡು "ಅಹಂಬ್ರಹ್ಮಾಸ್ಮಿ" ಅಥವಾ "ತ್ವಮೇವಾಹಂ" ಮಂತ್ರಾನುಸಂಧಾನಮಾಡುತ್ತಿದ್ದರೂ, ಲಿಂಗಾರ್ಚನಾದಿ ನಿತ್ಯನೈಮಿತ್ತಿಕಾದಿಕರ್ಮಾನುಷ್ಠಾನವನ್ನು ಬಿಡದೆ ಆಚರಿಸುತ್ತಲೇ ಇರುವರು. ಕೇವಲಾದ್ವೈತಿಗಳೂ ಸಹ ಮೇಲ್ಕಂಡಂತೆ ನಿತ್ಯಕರ್ಮಾನುಷ್ಠಾನ ಪರರಾಗಿರುವುದರಿಂದ, ಇಂತಪ್ಪ ಆಚರಣೆ ಅದ್ವೈತದಲ್ಲಿ ದ್ವೈತವೋ ಅಥವಾ ಲಿಂಗಾಂಗಿಗಳು ಹೇಳುವಂತೆ ದ್ವೈತಾದ್ವೈತ ಅಥವಾ ವಿಶೇಷಾದ್ವೈತವೋ ತಿಳಿಯಲಿಲ್ಲ.

ಮತ್ತೊಂದು ವಿಶೇಷವೇನೆಂದರೆ - ಸ್ಮಾರ್ತ ಸಂಪ್ರದಾಯಾನುಸಾರ ನಿತ್ಯಪೂಜಾಕ್ರಮದಲ್ಲಿ "ದೇವತಾ-ಪಂಚಾಯತನ ಪೂಜೆ" ಎಂಬುದು ಪ್ರಧಾನವಾಗಿ ಕಂಡುಬರುತ್ತೆ. ಈ ಶ್ರೇಷ್ಠ ಪೂಜಾಚೌಕಟ್ಟನಲ್ಲಿ ವಿರಾಜಿಸುವ ದೇವತಾ ವಿಗ್ರಹಗಳಾವುವೆಂದರೆ "ಆದಿತ್ಯ - ಮಂಬಿಕಾಂ - ವಿಷ್ಣುಂ - ಗಣನಾಥಂ - ಮಹೇಶ್ವರಃ ॥ ಸವಿತಾ ದೇವನಾದ ಸೂರ್ಯನೂ, ಚಾಮುಂಡಾಂಬಿಕೆಯಾದ ಪರಾಶಕ್ತಿಯೂ, ಶ್ರೀಮನ್ನಾರಾಯಣನೂ, ವಿಘ್ನೇಶ್ವರನೂ ಮತ್ತೂ ಮಹಾ

ದೇವಸೂ ಆದ ದಿವ್ಯ ಪಂಚಮೂರ್ತಿ ಪೂಜೆ, ದೇವತಾ ಪಂಚಾಯತನ ಪೂಜೆ ಎಂದು ಪ್ರಸಿದ್ಧವಿದೆ.

ಪಂಚಾಯತನದ ಪೂಜ್ಯ ಪಂಚಮೂರ್ತಿಗಳು ಶ್ರೀ ಮದ್ರೇಣುಕಾದಿ ಪಂಚಾಚಾರ್ಯರ ಪ್ರತೀಕವೆಂದು ಪ್ರತೀತಿ. ಹೇಗೆಂದರೆ ಆದಿತ್ಯನು ಮಹೇಶ್ವರನ ನೇತ್ರವಾಗಿರುವನು. ಜ ಗ ದಾಂ ಬಿ ಕೆ ಯಾ ದ ಶ್ರೀ ಪರಮೇಶ್ವರಿಯು ಮಹೇಶ್ವರನ ಪ್ರಾಣವೆನಿಸಿರಲು, ವಿಷ್ಣು ಅವನ ಪರಮಭಕ್ತನೆನಿಸಿ, ಗಣನಾಥನು ಮಹೇಶ್ವರನ ಸಾಕ್ಷಾತ್ ಸುತನೆನಿಸಿರುವುದರಿಂದ ಮಹೇಶ್ವರನೇ ಅಖಂಡ ಲಿಂಗಸ್ವರೂಪನಾಗಿ, ಜಗದ್ವ್ಯಾಪಾರಗಳನ್ನು ಲೀಲೆಯಿಂದ ನಡೆಸುತ್ತ ಗುರುರೂಪದಲ್ಲಿ ಲೋಕದವರನ್ನು ಅನುಗ್ರಹಿಸಲಿಕ್ಕಾಗಿ, ತನ್ನ ಸ್ವಮುಖಗಳಿಂದ ಐದು ಚಿತ್ಕಳಾ ರೂಪದಿಂದ ಹೊರಹೊಮ್ಮಿ ಶ್ರೀ ಮದ್ರೇಣುಕಾದಿ ಪಂಚಾಚಾರ್ಯರ ರೂಪದಿಂದ ಆವಿರ್ಭಾವಗೊಂಡಿರುವನು. ಆದ್ದರಿಂದ ಮಹೇಶ್ವರನನ್ನು ಅಥವಾ ಪಂಚಾಚಾರ್ಯರನ್ನೋ ಭಕ್ತಿಯಿಂದ ಆರಾಧಿಸಿದರೆ-ಆದಿತ್ಯ ಅಂಬಿಕೆ ವಿಷ್ಣು ಇವರುಗಳನ್ನು ಆರಾಧಿಸಿದಂತಾಗಿ ಇವರುಗಳಿಗೆ ತೃಪ್ತಿ ವುಂಟಾಗುವುದೆಂಬುದರಲ್ಲಿ ಸಂದೇಹವಿಲ್ಲ. ಒಂದು ದೊಡ್ಡ ಸಂಸ್ಥೆಯ ಉನ್ನತಾಧಿಕಾರಿಯನ್ನು ಗೌರವಿಸುವುದರಿಂದ ಹೇಗೆ ಅಲ್ಲಿಯ ಸರ್ವರನ್ನೂ ಗೌರವಿಸಿದಂತಾಗಿ ಎಲ್ಲರಿಗೂ ತೃಪ್ತಿ ಸಮಾಧಾನವೇರ್ಪಡುವುದೋ ಅದರಂತೆ ಎಂದ ಭಾವಿಸಿತಕ್ಕದ್ದು. ದೇವಾದಿ ದೇವನಾದ ಮಹೇಶ್ವರನನ್ನೇ ಮೊದಲು ಮಾಡಿ ಅಖಿಲರಿಗೂ ಶ್ರೀಮಜ್ಜಗದ್ಗುರು ರೇಣುಕಾದಿ ಪಂಚಾಚಾರ್ಯರು ಗುರು ಸಾರ್ವಭೌಮರಾಗಿರುವುದರಿಂದ, ಆದಿತ್ಯ, ಚಂದ್ರ, ಇಂದ್ರ, ದೇವೇಂದ್ರ, ಅಂಬಿಕೆ, ವಿಷ್ಣು ಹಾಗೂ ಯಮ, ವರುಣ, ವಾಯು, ಅಗ್ನಿ, ಕುಬೇರ ಇತ್ಯಾದಿ ದೇವಾನು ದೇವತೆಗಳಿಗೆ ಜಗದ್ಗುರು ರೇಣುಕಾದಿಗಳು ಗುರುಗಳೆನಿಸಿ ಅವರವರುಗಳಿಗೆ ಶಿವ ಲಿಂಗಗಳನ್ನನುಗ್ರಹಿಸಿ, ಶಿವಾದ್ವೈತವನ್ನು ಬೋಧೆಮಾಡಿ ಧನ್ಯರನ್ನಾಗಿ ಮಾಡಿರುವರು. ಸಿದ್ಧಾಂತ ಶಿಖೋಪನಿಷತ್ತಿನಲ್ಲಿ :-

"ಆದಿತ್ಯ ಃ" ಶ್ರೀ ಸೂರ್ಯನಾರಾಯಣನಿಗೆ-"ಅಥಾದಿತ್ಯೈ ಃ ಸ್ತಾಮ್ರಂ" (ಅಥಾಧಿತ್ಯೈ - ದ್ವಾದಶಾದಿತ್ಯೈ ಃ) ತಾಮ್ರಂ - ತಾಮ್ರನಿರ್ಮಿತಂ ಲಿಂಗಂ ಎಂದರ್ಥ: ಜಗಚ್ಚಕ್ಷುವಾದ ಸೂರ್ಯನಿಗೂ ಹಾಗೂ ದ್ವಾದಶ ಆದಿತ್ಯರಿಗೂ ಜಗದ್ಗುರು ರೇಣುಕನು ತಾಮ್ರಲಿಂಗವನ್ನು ಅನುಗ್ರಹಿಸಿರುವುದಾಗಿ ಕಂಡುಬರುವುದು. ಸೂರ್ಯ ಮಂಡಲ ಮಧ್ಯಾಂತವರ್ತಿ ಹಿರಣ್ಮಯನಾದ ಸ್ವಾಮಿಯ ಪ್ರತೀಕವಾದ ತಾಮ್ರ ನಿರ್ಮಿತ ಶಿವಲಿಂಗನ್ನು ಸೂರ್ಯನೂ ಹಾಗೂ ದ್ವಾದಶಾದಿತ್ಯರೂ ಸಹ ನಿತ್ಯ ಆರಾಧಿಸುತ್ತಲಿರುವರು.

ಮಹಾ ವಿಷ್ಣುವಿಗೆ —

"ಐದ್ರಂ ನೀಲಂ ಪೂಜಿತಂ ವಿಷ್ಣು ಃ"

ಐಂದ್ರೇತಿ - ವಿಷ್ಣುನಾ, ಆದಿನಾರಾಯಣೇನ; ಐಂದ್ರನೀಲಂ = ಇಂದ್ರ ನೀಲ ರತ್ನಮಯಂ ಲಿಂಗಂ, ಪೂಜಿತಂ = ಅರ್ಚಿತಂ. ಅಂದರೆ ವೈಕುಂಠಪತಿಯಾದ ಶ್ರೀ ಮಹಾವಿಷ್ಣು, ಇಂದ್ರನೀಲ ರತ್ನಮಯ ಶಿವಲಿಂಗವನ್ನು ಅನುದಿನ ಪೂಜಿಸುತ್ತಲಿರುವನು. ಸ್ಮಾರ್ತ ಬ್ರಾಹ್ಮಣ ಶ್ರೇಷ್ಠರು ವಿಧಿವತ್ತಾಗಿ ನಿತ್ಯ ಆರಾಧಿಸುವ ಪಂಚದೇವತಾ ಪಂಚಾಯತನದ ಐದು ಪೂಜ್ಯ ದೇವತೆಗಳಲ್ಲಿ ಆದಿತ್ಯ, ವಿಷ್ಣು, ಆದಮೇಲೆ "ಅಂಬಿಕಾ, ಗಣನಾಥಂ, ಮಹೇಶ್ವರ ಃ" ಈ ಮೂವರೂ ಶಿವನಿಗೆ ಅಭಿನ್ನರಾದುದರಿಂದ ಶಿವಲಿಂಗಾರಾಧಕರೂ ಹಾಗೂ ಶಿವಮಯರೇ ಆಗಿರುವರು. ಇವರುಗಳಿಗೂ ಸಹ ಶಿವಾಗಮೋಕ್ತಿಯಂತೆ ಶ್ರೀಮದ್ರೇಣುಕಾದಿ ಪಂಚಾಚಾರ್ಯರು ಜಗದ್ಗುರುಗಳಾಗಿ ವಿರಾಜಿತರಾಗಿರುವರು. ದೇವತಾ ಪಂಚಾಯತನದ ಚೌಕಟ್ಟಿನ ಹೊರಗೆ ವಿರಾಜಿತರಾದ, ಸೃಷ್ಟಿಕರ್ತ ಚತುರ್ಮುಖ ಬ್ರಹ್ಮನಿಗೂ, ಇಂದ್ರ, ಚಂದ್ರ, ಕುಬೇರ, ಯಮ, ವರುಣ, ವಾಯು, ಅಗ್ನಿ, ಇತ್ಯಾದ್ಯನೇಕ ದೇವಗಣ ಸಮುದಾಯದವರಿಗೂ ಲಕ್ಷ್ಮಿ, ಸರಸ್ವತಿ, ದುರ್ಗಿ ಮೊದಲಾದ ಶಕ್ತಿ ದೇವತೆಗಳಿಗೂ ಸಹ ಶಿವಲಿಂಗಗಳನ್ನು ರೇಣುಕಾದಿಗಳು ಅನುಗ್ರಹಿಸಿ ಶಿವಾದ್ವೈತ ತತ್ವಬೋಧೆ ಗೈದಿರುವರು.

ಚತುರ್ಮುಖ ಬ್ರಹ್ಮನಿಗೆ –

॥ ಆ ಸೀಲ್ಲಿಂಗಂ ವೈಢೂರ್ಯಂ ವಿಧಿನಾ ॥

" ವಿಧಿನಾ " ಚತುರ್ಮುಖೇನ - ಶಿವಸ್ಯ ಪ್ರಥಮ ಪುತ್ರೇಣ, "ವೈಢೂರ್ಯಂ" ವೈಢೂರ್ಯರೂಪಂ – ಲೋಕ ಪ್ರಸಿದ್ಧಂ ಲಿಂಗಂ ಪೂಜಿತಮಾಸೀದಿತ್ಯರ್ಥಃ ಅಂದರೆ ಶಿವನ ಪ್ರಥಮ ಮಾನಸ ಪುತ್ರನೂ ಸೃಷ್ಟಿಕರ್ತನೂ ಆದ ಚತುರ್ಮುಖ ಬ್ರಹ್ಮನು ಅತ್ಯಮೋಘವಾದ ವೈಢೂರ್ಯಮಯ ಮಹಾಶಿವಲಿಂಗವನ್ನು ಹೊಂದಿ ಹಗಲಿರಳು ಪೂಜಿಸುತ್ತಲಿರುವನು.

"ಶಕ್ರೇಣ" ॥ ಇಂದ್ರೇಣ ಪದ್ಮರಾಗಂ ॥ – ಪದ್ಮರಾಗ ನಾಮಕ ಮಣಿ ಮಯಂ ಲಿಂಗಂ ಪೂಜಿತ ಮಾಸೀತ್. ದೇವೇಂದ್ರನು ತನ್ನ ಇಂದ್ರಲೋಕ ದಲ್ಲಿ ಥಳಥಳಿಸುವ ಮಹಿಮಾನ್ವಿತವಾದ ಪದ್ಮ ರಾಗಮಣಿಮಯ ಶಿವಲಿಂಗ ವನ್ನು ಪಡೆದು ನಿತ್ಯ ವಿಧಿವತ್ತಾಗಿ ಪೂಜಿಸುತ್ತಿರುವನು.

"ವಾಯುನಾ" ವಾಯುದೇವೇನ ದಾರುಕೂಟಂ ಗೋಲಾಕಾರೇಣ ನಿರ್ಮಿತಂ ಲಿಂಗಂ ಪೈತ್ತಲಕಂ ಲಿಂಗಂ -ಅರ್ಥಾತ್.

"ವಾಯುಃ ಪೂಜಯ ತೇನಿತ್ಯಂ ಲಿಂಗಂ ಪೈತ್ತಲಕಂ ಶುಭಂ" ಅತ್ಯಂತ ಪಾವನವೂ ಶುಭಪ್ರದವೂ ಆಗಿ ಪರಿಶೋಭಿಸುವ, ಹಿತ್ತಾಳೆಯಿಂದ ನಿರ್ಮಿತ ವಾದ ಗೋಲಾಕಾರದ ಶಿವಲಿಂಗವನ್ನು ವಾಯುದೇವನು ಅತ್ಯಾದರದಿಂದ ಪೂಜಿಸಿ ಆರಾಧಿಸುತ್ತಲಿರುವನು. ವಾಯುದೇವನ ಮಗನಾದ ವೀರಾಂಜನೇ ಯನು ರುದ್ರಾಂಶದಿಂದುದಿಸಿ, ಪಂಚಮುಖಿ ಆಂಜನೇಯನೆಂದೂ, ಶ್ರೀರಾಮ ಕಾರ್ಯ ಸೇವಾರ್ಥ ಅಪ್ರತಿಹತ ಪರಾಕ್ರಮಿಯೆಂದೂ ಶ್ರೀಮದ್ರಾಮಾಯಣ ದಲ್ಲಿ ಸ್ತುತ್ಯನಾಗಿ ವಂದ್ಯನಾಗಿರುವುದು ಸರಿಯಷ್ಟೆ. ವೀರಭದ್ರಸ್ವಾಮಿಯಿಂದ ವೀರಾಂಜನೇಯನಿಗೂ ಶಿವದೀಕ್ಷಾ ಪೂರ್ವಕ ಶಿವಲಿಂಗಧಾರಣೆಯಾಗಿ,

ಶಿವಾಂಶದಿಂದ ಆಂಜನೇಯಸ್ವಾಮಿ ವಿರಾಜಿತನಾಗಿರುವ ಅಂಶ ಶಾಸ್ತ್ರ ಪ್ರಸಿದ್ಧವೇ ಇರುವುದು. ವಾಯ್ವಂಶ ಶಿವಾಂಶಗಳಿಂದ ಮಹಾರುದ್ರ ಸದೃಶನಾದ ಅಂಜನಾಸೂನು ಶ್ರೀ ಆಂಜನೇಯನ ದೇಹದ ರೋಮ ಕೋಟಿಗಳೊಂದೊಂದೂ ಶಿವಲಿಂಗ ಯುಕ್ತವಾಗಿ ವಿರಾಜಿತಗೊಂಡಿದ್ದವೆಂದ ಬಳಿಕ, ವೀರಾಂಜನೇಯನು ವೈಷ್ಣವ ಪರವಾಗಿ ಸ್ತುತ್ಯನಾಗಿರುವಷ್ಟೇ ಮಹತ್ವಾಂಶದಿಂದ ಶೈವಸಂಪ್ರದಾಯದಲ್ಲೂ ಪೂಜ್ಯ ಸ್ಥಾನವನ್ನು ಅಲಂಕರಿಸಿರುವನು. ಮತ್ತೂ ಎರಡನೆ ಮಹಾರುದ್ರನೆನಿಸಿರುವನು.

ಲಂಕಾಧಿಪನಾದ ದಶಕಂಠ ರಾವಣನು ದರ್ಪದಿಂದ ಒಮ್ಮೆ ಶಿವದರ್ಶನಾರ್ಥ ಕೈಲಾಸವಲ್ಲಿ ಸ್ವೇಚ್ಛೆಯಿಂದ ನುಗ್ಗುತ್ತಿರಲು, ಶಿವನ ಒಡ್ಡೋಲಗದ ಮಹಾ ದ್ವಾರದಲ್ಲಿ ನಿಂತಿದ್ದ ನಂದೀಶ್ವರನು ಅವನನ್ನು ಬಾಗಿಲಲ್ಲಿ ತಡೆದು "ನಿಲ್" ಎನಲು, ಉದ್ರಿಕ್ತನಾದ ಲಂಕೇಶನು, ಕೋತಿ ಮುಖದಂತಿರ್ಪ ಈ ನಂದಿಗೆ ನನ್ನ ತಡೆಯುವಷ್ಟು ಧೈರ್ಯವೆಲ್ಲಿಯದು ಎಂದು ಗುಡುಗುಡಿಸಿ ಘರ್ಜಿಸಿದನು. ಕರ್ಣಕಠೋರವಾದ ರಾವಣೇಶ್ವರನ ನುಡಿಯನ್ನು ಕೇಳಿದ ನಂದಿ, ದಶಕಂಠನನ್ನು ಶಪಿಸಿ, ತಾನು ಕೋಡಗನಾಗಿ ಬಂದು ಲಂಕೆಯನ್ನು ಸುಟ್ಟು ಧ್ವಂಸ ಮಾಡುವುದಾಗಿ ಶಾಪವಿಟ್ಟಂತೆ, ದ್ವಿಶಂಭುವೆನಿಸಿದ ನಂದೀಶ್ವರನೇ ವೀರಾಂಜನೇಯನಾಗಿ ಅವತರಿಸಿದನೆಂದು ಶ್ರೀಮದ್ರಾಮಾಯಣದಲ್ಲಿ ಪ್ರತೀತಿ ಇವೆ.

ರಾಮೇಶ್ವರದಲ್ಲಿ ಶ್ರೀ ರಾಮಾಜ್ಞೆಯಂತೆ ಕಾಶಿಕ್ಷೇತ್ರದಿಂದ ಆಂಜನೇಯನು ಪ್ರೇಮಾದರದಿಂದ ತಂದಿದ್ದ ಶಿವಲಿಂಗವನ್ನೂ ಶ್ರೀರಾಮಚಂದ್ರನು ತಾನು ಆ ಮುಂಚಿತವೇ ಪ್ರತಿಷ್ಠಾಪನೆ ಗೈದಿದ್ದ ಮರಳು ಲಿಂಗ ಅಂದರೆ ಶ್ರೀರಾಮೇಶ್ವರಲಿಂಗದ ಪಕ್ಕದಲ್ಲಿ ಪ್ರತಿಷ್ಠೆ ಗೈದು, ಆಂಜನೇಯನಿಂದ ತರಲ್ಪಟ್ಟ ಶಿವಲಿಂಗಕ್ಕೆ ಅಗ್ರಪೂಜೆ ಸಲ್ಲಿಸಬೇಕೆಂದು ನಿರೂಪಿಸಿದುದಾಗಿ ಶ್ರೀಮದ್ರಾಮಾಯಣ ಮಹಾ ಕಾವ್ಯದಿಂದ ವೇದ್ಯವೇ ಇರುತ್ತದೆ. ಮೇಲ್ಕಂಡೀ ಅಂಶಗಳಿಂದ ಶ್ರೀ ಆಂಜನೇಯಸ್ವಾಮಿ, ರುದ್ರಾಂಶ ಸಂಭೂತನೆಂದೂ, ದ್ವಿಶಂಭುವೆನಿಸಿದ

ಶ್ರೀ ಸಂದೀಶ್ವರನೇ ಶಿವಕಿಂಕರನೆಂದೆನಿಸಿ ಶಿವನ ಸೇವೆಗೈದಸ್ವಾಮಿ, - ಮಹಾ ವಿಷ್ಣುವು. ॥ ಪ್ರೋಡ್ಯಮಾನೇ ಜಗನ್ನಾಥಂ । ಸರ್ವಲೋಕ ನಮಸ್ಕೃತಂ ॥ ಎಂಬಂತೆ–ಶ್ರೀ ರಾಮಾವತಾರವನ್ನು ತಾಳಿದಾಗ, ರಾಮಸ್ವಾಮಿ ದೂತನಾಗಿ ಶ್ರೀಮದಾಂಜನೇಯನು ಅವತರಿಸಿ ಶ್ರೀ ಸೀತಾರಾಮರ ಘನಸೇವಾ ಕೈಂಕರ್ಯ ದಲ್ಲಿ ಪೂರ್ಣ ನಿರತನಾಗಿದ್ದ ಮಹದಂಶ ಜಗತ್ಪ್ರಸಿದ್ಧವೇ ಆಗಿರುತ್ತೆ.

ಪಾವನನಾದ ಪವನಾತ್ಮಜನ ಅಂದರೆ ಶ್ರೀ ಆಂಜನೇಯಸ್ವಾಮಿಯ ದಿವ್ಯಾವತಾರ ರಹಸ್ಯವನ್ನು ಇಲ್ಲಿ ಸ್ವಲ್ಪ ಸ್ಮರಿಸಲು ಆಶಿಸುವೆನು.

॥ ಅಂಜನಾ ನಂದನಂ ವೀರಂ । ಜಾನಕೀ ಶೋಕನಾಶನಂ ।
ಕಪೀಶ ಮಕ್ಷಹಂತಾರಂ । ವಂದೇ ಲಂಕಾ ಭಯಂಕರಂ
"ಬುದ್ಧಿರ್ಬಲಂ ಯಶೋಧೈರ್ಯಂ । ನಿರ್ಭಯತ್ವಮರೋಗತಂ ।
ಅಜಾಡ್ಯಂ ವಾಕ್ಪಟುತ್ವಂಚ । ಹನುಮತ್‌ಸ್ಮರಣಾದ್ಭವೇತ್ ॥

ವೀರಕೇಸರಿಯ ಪತ್ನಿ, "ಸತಿಗೆ ಪಾತಿವ್ರತ್ಯವೇ ಭೂಷಣಂ" ಎಂಬಂತೆ ಮಹಾಪತಿವ್ರತೆ ಅಂಜನಾದೇವಿ. ಇವರಿಗೆ ಪುತ್ರ ಸಂತಾನವಿಲ್ಲದ್ದ ರಿಂದ, ಸ್ವಾಧ್ವಿಮಣಿ ಅಂಜನಾದೇವಿಯು ಪರಮೇಶ್ವರನನ್ನು ಕುರಿತು ಭೂ ಕೈಲಾಸವೆಂದೆಣಿಸಿದ, ಹಿಮಾಲಯ ಪುಣ್ಯ ಪ್ರಶಾಂತ ಪ್ರದೇಶದಲ್ಲಿ ವ್ರತಾನು ಷ್ಠಾನದಿಂದ ತಪಸ್ಸನ್ನಾಚರಿಸುತ್ತಿದ್ದಳು. ಇತ್ತ ದುಷ್ಟ ಶಿಕ್ಷಣೆ, ಶಿಷ್ಟ ರಕ್ಷಣ ಧರ್ಮಸ್ಥಾಪನೆಗಾಗಿ ಮಹಾವಿಷ್ಣು ಭುವಿಯಲ್ಲಿ ಶ್ರೀರಾಮನಾಗಿ ಅವತರಿಸಲು, ಶ್ರೀ ಲಕ್ಷ್ಮೀದೇವಿಯು ಭೂಮಿಸುತೆ ಸೀತೆಯಾಗಿ ಅವತರಿಸಿ ಮಿಥಿಲಾಪಟ್ಟಣ ದರಸ, ರಾಜರ್ಷಿ ಜನಕಮಹಾರಾಜನ ಅರಮನೆಯಲ್ಲಿ ಬೆಳೆಯುತ್ತಿದ್ದಳು. ಇದಕ್ಕೆ ಪೂರ್ವವೇ ಶ್ರೀ ರಾಮಕಾರ್ಯ ಸೇವಾ ತತ್ಪರರಾಗಿ ಅನೇಕಾನೇಕ ದೇವತೆಗಳೂ, ಯಮ, ವರುಣ, ಇಂದ್ರ, ಅಗ್ನಿ, ವಾಯು ಇತ್ಯಾದಿ ದೇವಾಂಶ ಸಂಭವರಾದ ಸಹಸ್ರಗಟ್ಲೆ ದೈವಾಂಶ ಸಂಭೂತರು ಭುವಿಯಲ್ಲಿ ಉದ

ಯಿಸಿ ಅಲ್ಲಲ್ಲಿ ಬೆಳೆಯುತ್ತ ಶ್ರೀ ಸೀತಾರಾಮರ ಸುಖಾಗಮನವನ್ನು ನಿರೀಕ್ಷಿಸುತ್ತಲಿದ್ದರು. ಸಹಸ್ರ ಫಣಾಮಣಿಯಾದ ಆದಿಶೇಷನು ಶ್ರೀ ಲಕ್ಷ್ಮಣಸ್ವಾಮಿಯಾಗಿಯು, ಮಹಾವಿಷ್ಣುವಿನ ಶಂಖಚಕ್ರಗಳು ಭರತಶತೃಜ್ಞರುಗಳಾಗಿ ಅವತರಿಸಿ, ಶ್ರೀ ರಾಮನ ಸೋದರರೆನಿಸಿದರು. ಸ್ವರ್ಗದ ಬ್ರಹ್ಮನಾದಿಯಾಗಿ ಎಲ್ಲಾ ದೇವತೆಗಳೂ ಶ್ರೀರಾಮಚಂದ್ರನ ಲೀಲಾವತಾರ ಮಹಾ ಕಾರ್ಯದಲ್ಲಿ ಭುವಿಯಲ್ಲಿ ಅವತರಣಗೊಂಡು ಪ್ರಕಾಶಿತರಾಗಿದ್ದರು. ಶಿವನು ಯಾವ ಭಾಗವನ್ನೂ ವಹಿಸದಿರುವುದನ್ನರಿತ ಭೂದೇವಿಯು ಪರಮೇಶ್ವರನ ನೆರವನ್ನು ಕೋರಿ ಪ್ರಾರ್ಥಿಸಿದಳು. ಆರ್ಥತ್ರಾಣ ಪರಾಯಣನೂ ಕರುಣಾಭರಣನೂ ಆದ ಶಿವನು, ಭೂದೇವಿಯ ಪ್ರಾರ್ಥನೆಯನ್ನು ಮನ್ನಿಸಿ ಶ್ರೀರಾಮಕಾರ್ಯ ಸಹಾಯಕನಾಗಿ ಭುವಿಯಲ್ಲಿ ಅವತರಿಸಲು ಸಂಕಲ್ಪಿಸಿದನು. ಅಂಜನಾದೇವಿಯು ಪುತ್ರಕಾಮೇಚ್ಛೆಯಿಂಧ ಶಿವನಲ್ಲಿ ನೆಟ್ಟ ಮನಸ್ಕಳಾಗಿ ಧ್ಯಾನಾರೂಢಳಾಗಿದ್ದುದು ಸರಿಯಷ್ಟೆ. "ಇಚ್ಛಾಮಾತ್ರಪ್ರಭೋಸ್ಸೃಷ್ಟಿಃ" ಈಶ್ವರಾನುಗ್ರಹವೋ ಎಂಬಂತೆ, ಸರ್ವಶಕ್ತನಾದ ಶ್ರೀಪರಮೇಶ್ವರನ, ಹಿರಣ್ಮಯ ಊರ್ಧ್ವರೇತಸ್ಸು ಹೊರಹೊಮ್ಮಲು, ಶಿವನು, ಅಗ್ನಿ, ವಾಯು, ದೇವತೆಗಳನ್ನು ಈಜಾಜ್ವಲ್ಯಮಾನವಾದ ಶಿವತೇಜಸ್ಸನ್ನು ಉಭಯತ್ರರೂ ಧಾರಣಮಾಡಿಪತಿವ್ರತಾ ಶಿರೋಮಣಿ ಅಂಜನಾದೇವಿಯ ಪುಣ್ಯವಪುವಿನಲ್ಲಿ ಸಮಾವೇಶಗೊಳಿಸುವಂತೆ ಆಜ್ಞೆಯಿತ್ತನು. ಇದರಿಂದಾಗಿ ಅಂಜನಾದೇವಿಯು ಗರ್ಭಧಾರಣೆಯನ್ನು ಹೊಂದಿ, ಕೋಟಿ ಸೂರ್ಯಪ್ರಕಾಶಮಾನನಾದ ವೀರಾಂಜನೇಯನನ್ನು ಸುತನಾಗಿ ಪಡೆಯುವ ಮಹಾಭಾಗ್ಯವತಿಯಾದಳು, ಮಹಾರುದ್ರಾಂಶ ಸಂಭೂತನಾದ ಮಾರುತಿಯ ದಿವ್ಯಾವತಾರವನ್ನು ಮನಗಂಡ ಮುವತ್ತುಮೂರು ಕೋಟಿ ದೇವತೆಗಳು ಪ್ರಸನ್ನರಾಗಿ ಆಂಜನೇಯನಿಗೆ ಅನಂತವರಗಳನ್ನು ಅನುಗ್ರಹಿಸಿ, ವಿಜಯುವನ್ನು ಕೋರಿದ ಪರಿಣಾಮವಾಗಿ, ಆಂಜನೇಯನು ಸಹಸ್ರಾಂಶ ಉಬ್ಬಿ ಭೀಮ ವಿಕ್ರಮನಾಗಿ ಜಗದಾಕಾರದಿಂದ ವಿಜೃಂಭಿತನಾಗಿ ಝೇಂಕರಿಸಲು, ಈ ನನಾದದಿಂದ ಭುವನಾಂಡಗಳುನಡುಗಿನಿಂತವು. ಇದನ್ನು ಕಂಡ ದೇವತೆಗಳು ಬೆದರಿ, ಆಂಜನೇಯನ ವೀರಪರಾಕ್ರಮ ಅವನಿಗೆ ತಿಳಿಯದಂತಾಗಿ

ಅಡಗಿದ್ದು, ಬೇಕೆನ್ನುವ ಸಂದರ್ಭಗಳಲ್ಲಿ ಅವನನ್ನು ಸ್ತುತಿಸಿ ಪ್ರಾರ್ಥಿಸಿದಾಗ ಆಂಜನೇಯನ ಅಗಣಿತ ಶಕ್ತಿ ಅವನಲ್ಲಿ ಅದ್ಭುತವಾಗಿ ಪ್ರಕಟಗೊಂಡು ವಿಜೃಂಭಿಸಲೆಂದು ಪುನಃ ವರವಿತ್ತರೆಂಬ ಅಂಶ ಸ್ತೋತ್ರಾರ್ಹವೇ ಆಗಿರುವುದು. ತ್ರೇತಾಯುಗದ ಸ್ತ್ರೀರತ್ನ ಅಂಜನಾದೇವಿ, ಆಂಜನೇಯನು ಉದಯಿಸುತ್ತಲೇ ತನ್ನ ಸ್ಥನದ ಮೊದಲ ಕ್ಷೀರವನ್ನು ಹೊರಗೆ ಹಿಂಡಲು ಅದು ರಾಮಬಾಣದಂತೆ ಹಾದು ಎದುರಿಗಿದ್ದ ದೊಡ್ಡ ಬಂಡೆಯೊಂದನ್ನು ಒಡೆದು ಸಾವಿರ ಚೂರಾಗಿಸಿ ನುಚ್ಚು ನೂರಾಯಿತೆಂಬ ಘನ ವೃತ್ತಾಂತ ಯಾರಿಗೆ ತಾನೆ ಆಶ್ಚರ್ಯವನ್ನುಂಟು ಮಾಡದೆ ಇರದು. ಬಲಿಷ್ಠವಾದ ತಾಯಿಯ ಸ್ಥನ್ಯಕ್ಷೀರಾಮೃತವನ್ನು ಪಾನ ಮಾಡಿದ, ವೀರ ವಿಕ್ರಮಿಯಾದ ವೀರಾಂಜನೇಯನು ತನ್ನ ಶೈಶವ ಸ್ಥಿತಿಯಲ್ಲಿ ತಾಯಿಯ ಪರ್ಯಂಕದ ಮೇಲೆ ಮಲಗಿ ಸ್ಥನಕ್ಷೀರವನ್ನು ಪಾನಮಾಡುತ್ತಾ, ಪೂರ್ವ ದಿಕ್ಕಿನಲ್ಲಿ ಆಗ ತಾನೆ ಉದಯಿಸುತ್ತಲಿದ್ದ ಹೊಂಬಣ್ಣದ ಹಿರಣ್ಮಯ ಬಾಲ ಸೂರ್ಯನನ್ನು ಕಂಡು ಆ ಶಿಶುವು, ಅದೊಂದು ಅಪೂರ್ವ ಹಣ್ಣೆಂದು ಹಿಡಿಯಲು ಜಗ್ಗನೆ ಊರ್ಧ್ವಗತಿಯಲ್ಲಿ ಹಾರಿ ಕ್ಷಣಾರ್ಧದಲ್ಲಿ ಸೂರ್ಯ ಮಂಡಲವನ್ನು ಮುಟ್ಟಿ ನೇರವಾಗಿ ಸೂರ್ಯನನ್ನು ಹಿಡಿಯಲು, ಕುಪಿತನಾದ ಶ್ರೀ ಸೂರ್ಯನು ಮುಷ್ಟಿಘಾತದಿಂದ ಆಂಜನೇಯ ಶಿಶುವನ್ನು ಹಿಮ್ಮೆಟ್ಟಿಸಿದು ದಾಗಿ ಹನುಮ ದ್ವಿಜಯ ವೃತ್ತಾಂತದಿಂದ ವೇದ್ಯವೆ ಇರುತ್ತೆ. ಇಂದಿನ ಯಾವ ಘನ ವಿಜ್ಞಾನಿಗಳು ಚಂದ್ರ, ಸೂರ್ಯ, ಮಂಗಳ ಬುಧ ಗ್ರಹ ಮಂಡಲಗಳನ್ನು ಊರ್ಧ್ವಗತಿಯಲ್ಲಿ ಅಹಂಭಾವಿತರಾಗಿ ಹಾದು ಲಕ್ಷಾಂತರ ಮೈಲಿಗಳ ಪ್ರಮಾಣ ಮೇಲೆ ಹೋಗಿ ಭಗ್ನಮನೋರಥರಾಗಿ ಹಿಂದಿರುಗುತ್ತ ಲಿರುವರೋ, ಅಂಥಾ ಸಾಹಸ ಕೃತ್ಯಗಳನ್ನು "ದೈವಬಲೇ ಬಲೇ। ಮಾನುಷ ಬಲೇ ದುರ್ಬಲೇ" ಎಂಬಂತೆ, ದೈವಬಲವನ್ನು ಮುಂದುವರಿಸಿಕೊಂಡು ಆಸ್ತಿಕರಾದ ನಮ್ಮ ಪೂರ್ವಜರು ಅನಾಯಾಸವಾಗಿ ಘಟನೀಯವೆನಿಸುತ್ತ ಲಿದ್ದರು. ಆಂಜನೇಯನು ಬಾಲಕನಾಗಿರುವಾಗ ವಿದ್ಯಾರ್ಜನಾಸಕ್ತನಾಗಿ, ಮತ್ತೊಮ್ಮೆ ಅತಿ ಗಹನವಾದ ಸೂರ್ಯ ಮಂಡಲಕ್ಕೆ ಲೀಲಾ ಜಾಲವಾಗಿ ನೆಗೆದು ಶ್ರೀ ಸೂರ್ಯನಾರಾಯಣನನ್ನು ವಿನಯಾನ್ವಿತನಾಗಿ ಪ್ರಾರ್ಥಿಸಿ,

ಅವನ ಅನುಗ್ರಹದಿಂದ, ಏಳು ಕುದುರೆಗಳಿಂದ ಎಳೆದು ವೇಗವಾಗಿ ಚಲಿಸುವ ಸೂರ್ಯನ ಮಹಾ ರಥದ ಎರಡು ಚಕ್ರಗಳ ಕಡಾಣೆಗಳ ಮೇಲೆ ತನ್ನೆರಡು ಕಾಲುಗಳನ್ನು ಬಲವಾಗಿ ಊರಿ ನಿಂತು ಸವಿತಾ ದೇವನ ಮುಖಕ್ಕೆ ಸಮೀಪ ದಲ್ಲಿ ಓರೆಯಾಗಿ ಬಗ್ಗಿ ಕಿವಿಗೊಟ್ಟು ಮುಮ್ಮೂರ್ತ್ಯಾತ್ಮಕನಿಂದ ಗಗನಾಂಗಣ ದಲ್ಲಿ ಗಹನವಾದ ನವ ವ್ಯಾಕರಣ ಶಾಸ್ತ್ರವನ್ನು ಕಲಿತು ಪಾರಂಗತನಾಗಿ, ನವವ್ಯಾಕರಣ ಘನ ಪಂಡಿತನೆಂಬ ಖ್ಯಾತಿಯನ್ನು ಪಡೆದು ಆಂಜನೇಯನು ಅಮರನಾಗಿ ವಿಶ್ವವಂದ್ಯನಾಗಿ ರಾರಾಜಿಸುತ್ತಲಿರುವನು. ಈ ಮಹೋಪ ಕಾರಾರ್ಥವೇ ರವಿ ವಂಶಜನಾದ ಶ್ರೀರಾಮನಿಗೆ ಭಂಟನಾಗಿ ಶ್ರೀ ಆಂಜನೇಯನು ಅಮೋಘ ತ್ಯಾಗದಿಂದ ಅಪಾರ ಸೇವೆಯನ್ನು ಅನನ್ಯಭಾವದಿಂದ ಸಲ್ಲಿಸಿರುವ ನೆಂದು ಸ್ಮರಿಸಲು ಸಂತೋಷವೆನಿಸುವುದು. ಆಂಜನೇಯನಿಗೆ ಶ್ರೀರಾಮನಲ್ಲಿದ್ದ ಭಕ್ತಿ ವರ್ಣನಾತೀತವಾಗಿರುವುದು. ರಾಮಭಕ್ತಿಯ ಉತ್ಕರ್ಷ ಸ್ಥಿತಿಯಲ್ಲಿ ಆಂಜನೇಯನು ಮೈ ಮರೆತು (God intoxicated) ಶ್ರೀರಾಮ ತಾರಕ ಮಂತ್ರ ಜಪಾನು ಸಂಧಾನದಲ್ಲಿ ತಲ್ಲೀನನಾಗಿ, ಆನಂದೋಬ್ರಹ್ಮದಿಂದ –

ಮಾತಾ ರಾಮೋ ಮತ್ಪಿತಾ ರಾಮಚಂದ್ರಃ ।
ಭ್ರಾತಾ ರಾಮೋ ಮತ್ಸಖಾ ರಾಘವೇಶಃ ॥
ಸರ್ವಸ್ವಂಮೇ ರಾಮಚಂದ್ರೋದಯಾಳುಃ ।
ನಾನ್ಯಂ ದೈವಂ ನೈವಜಾನೇನಜಾನೇ ॥

ಎಂದು ಧ್ಯಾನಿಸುತ್ತಾ ಆತ್ಮಾರ್ಪಣ ಪೂರ್ವಕ ಶ್ರೀ ಸೀತಾರಾಮರಲ್ಲಿ ಶರಣಾಗತ ನಾದ ಅದ್ವಿತೀಯ ಶರಣನೆಂದರೆ ಆಂಜನೇಯನೇ ಹೌದು. ಮಾರುತಿಯ ಮಹೋಪಕಾರವನ್ನು ಸ್ಮರಿಸಿ ಶ್ರೀರಾಮನು ಮೂರು ವರಗಳನ್ನು ಅನುಗ್ರಹಿ ಸಿರುವನು. ಒಂದನೆಯದಾಗಿ, ಮುಂಬರುವ ಕೃಷ್ಣಾವತಾರ ಕಾಲದಲ್ಲಿ ಆಂಜನೇಯನ ಪ್ರೀತಿಗಾಗಿ ಒಮ್ಮೆ ದ್ವಾರಕೆಯಲ್ಲಿ, ಕೋದಂಡಪಾಣಿಯಾಗಿ ಶ್ರೀ ಸೀತಾರಾಮ ಲಕ್ಷ್ಮಣ ಸಮೇತ ದಿವ್ಯ ದರ್ಶನವನ್ನು ದಯಪಾಲಿಸುವು

ದಾಗಿ ವಚನವಿತ್ತು ಚಿರಂಜೀವಿಯಾಗಿರುವಂತೆ ಆಶೀರ್ವದಿಸಿರುವನು. ಎರಡನೆಯದಾಗಿ ಮುಂಬರುವ ಬ್ರಹ್ಮ ಪಟ್ಟವನ್ನು ಶ್ರೀ ಆಂಜನೇಯಸ್ವಾಮಿಗೆ ಶ್ರೀರಾಮನು ಕಾದಿರಿಸಿರುವುದಾಗಿ ಅಭಯವಿತ್ತಿರುವನು. ಮೂರನೆಯದಾಗಿ ಸಮೀರಜನ (ಆಂಜನೇಯನ)ಮಹೋಪಕಾರವನ್ನು ನೆನೆ ನೆನೆದು, ಶ್ರೀರಾಮನು ಸಮರ್ಪಕವಾಗಿ ಪ್ರತ್ಯುಪಕಾರ ರೂಪದಲ್ಲಿ ಮಾರುತಿಗೆ ಸಹಾಯ ಮಾಡಲ ಬೇರಾವ ವಸ್ತುವನ್ನು ಕಾಣದಿರಲು; ಜಗನ್ಮಾತೆ ಸೀತಾ ಸಮೇತ " ನೀಲ ಸರೋಜ ಕೋಮಲ ರುಚಿಂ । ರಾಮಂಭಜೆ ಶ್ಯಾಮಲಂ " ಎಂಬ ಪ್ರಕಾರ ಪ್ರಕಾಶಿಸುವ ಲೋಕಾಭಿರಾಮನು-ಶ್ರೀ ಆಂಜನೇಯಸ್ವಾಮಿಯ ಮಂಗಳಮಯ ಹೃನ್ಮಂದಿರವನ್ನೇ ತನ್ನ ವಾಸಸ್ಥಾನವಾದ ವೈಕುಂಠವಾಗಿಸಿ, ನಿತ್ಯ ಕಲ್ಯಾಣ ರಾಮನಾಗಿ ನೆಲೆಸಿರುವುದಾಗಿ ತನ್ನ ಭಕ್ತನಿಗೆ ಅಭಯವಿತ್ತು ॥ ಮದ್ಭಕ್ತಾಃ ಮಮಾಧಿಕಂ ॥ ನನಗಿಂತಲೂ ನನ್ನ ಭಕ್ತರಧಿಕರೆಂದು ಸ್ವಾಮಿ ಅಪ್ಪಣೆ ಕೊಡಿಸಿರುವನು. ಇದೇ ಅಶ್ವಾಸನವನ್ನು ಗೀತೆಯಲ್ಲೆ ಅರ್ಜುನನಿಗೆ ಅರುಹುತ್ತಾ ಶ್ರೀಕೃಷ್ಣನು –

॥ ಕ್ಷಿಪ್ರಂಭವತಿ ಧರ್ಮಾತ್ಮಾ । ಶಶ್ವಚ್ಛಾಂತಿಂನಿಗಚ್ಛತಿ ।
ಕೌಂತೇಯ ಪ್ರತಿಜಾನೀಹಿ । ನಮೇ ಭಕ್ತಃ ಪ್ರಣಶ್ಯತಿ ॥ ಗೀ ॥

ಎಲೈ ಅರ್ಜುನನೆ ! ನನ್ನಲ್ಲಿ ಪರಿಪೂರ್ಣ ಭಾವದಿಂದ ಶರಣಾಗತನಾದವನು ಬಹು ಬೇಗನೆ ಸತ್ಪುರುಷನಾಗಿ ಶಾಶ್ವತವಾದ ಪರಮಶಾಂತಿಯನ್ನು(ನಿಗಚ್ಛತಿ) ಹೊಂದುತ್ತಾನೆ. ಮೇ=ನನ್ನ, ಭಕ್ತ=ಭಕ್ತನು, ನಪ್ರಣಶ್ಯತಿ=ನಾಶವಾಗುವುದಿಲ್ಲವೆಂಬುದನ್ನು, ಪ್ರತಿಜಾನೀಹಿ=ತಿಳಿ, ಎಂಬುವುದಾಗಿ ಆಶ್ವಾಸನವಿತ್ತಿರುವನು. ಇದಕ್ಕನುಗುಣವಾಗಿ —

॥ ಮನ್ಮನಾ ಭವ ಮದ್ಭಕ್ತೋ । ಮದ್ಯಾಜೀಮಾಂ ನಮಸ್ಕುರು ।
ಮಾಮೇ ವೈಷ್ಯಸಿಯುಕ್ತ್ವೈವ । ಮಾತ್ಮಾನಂ ಮತ್ಪರಾಯಣಃ ॥ಗೀ॥

ನನ್ನಲ್ಲಿ ಮನಸ್ಸುಳ್ಳವನಾಗಿ, ನನ್ನ ಭಕ್ತನಾಗಿ, (ಮದ್ಯಾಜೀ) ನನ್ನನ್ನು ನಿರಂತರ ಪೂಜಿಸುವವನಾಗಿ, (ಭವ) ಆಗು. ನನ್ನನ್ನು ಅನವರತ ಕಾಯಾ ವಾಚಾ, ಮನಸಾ, ನಮಸ್ಕರಿಸುವಂಥವನಾಗು. ಏವಂ=ಹೀಗೆ, ಆತ್ಮಾನ =ಆತ್ಮನನ್ನು, ಯುಕ್ತ್ವಾ=ಸೇರಿಸಿ, ನನ್ನ ಧ್ಯಾನದಲ್ಲಿ ಮನೋ ಬುದ್ಧೀಂದ್ರಿಯಗಳನ್ನು ಸಮರಸಗೊಳಿಸಿದರೆ, ಮಾಮೇವ ಏಷ್ಯಸಿ=ನನ್ನನ್ನೇ ಹೊಂದುತ್ತೀಯೆಂಬುದಾಗಿ ಅಮೃತವಾಣಿಯಿಂದ ಅರ್ಜುನನನ್ನು ವ್ಯಾಜವಾಗಿಟ್ಟುಕೊಂಡು ಜಗತ್ತಿಗೆ ಗೀತಾಚಾರ್ಯನು ಉಪದೇಶಿಸಿರುವನು.

ಶ್ರೀ ಆಂಜನೇಯಸ್ವಾಮಿಯ ಭಕ್ತಿ ಮೇಲುದಹರಿಸಿದಂತೆ ಶ್ರೇಷ್ಠತರವಾದುದಾಗಿರುತ್ತೆ. ॥ ಯತ್ರ ಯತ್ರ ರಘುನಾಥ ಕೀರ್ತನಂ । ತತ್ರ ತತ್ರ ಕೃತಮಸ್ತಕಾಂಜಲಿ ॥ ಭಾಷ್ಪವಾರಿ ಪರಿಪೂರ್ಣಲೋಚನಂ । ಮಾರುತಿಂನಮತ ರಾಕ್ಷಸಾಂತಕಂ ॥ ಶ್ರೀರಾಮ ಭಜನೆ, ರಾಮಭಕ್ತಿ, ಶ್ರೀ ಸೀತಾರಾಮ ಕಥಾನುವಾದವಾಗುವ ಸ್ಥಳಗಳಲ್ಲೆಲ್ಲಾ ಆಂಜನೇಯನು ನಮ್ರಭಾವದಿಂದ ಸುಪ್ರಸನ್ನನಾಗಿ ಹಾಜರಿರುವನೆಂಬ ನಂಬಿಗೆ ಆಸ್ತಿಕರಾದ ನಮ್ಮಲ್ಲಿ ಆದಿಕಾಲದಿಂದಲೂ ಬೆಳೆದುಬಂದಿರುತ್ತೆ.

ಎರಡು ಭಾಗ ಶಿವಾಂಶ( ಮಹಾರುದ್ರನ ಅಂಶ) ಒಂದು ಭಾಗ ಅಗ್ನಿ ಅಂಶ ಒಂದು ಭಾಗ ವಾಯುವಿನ ಅಂಶಗಳ ಸಮಾವೇಶದಿಂದ ಅವತರಿಸಿ ಅಮೃತಮಯ ತೇಜಸ್ ಶರೀರದಿಂದ ಕೂಡಿ ವೀರ ವಿಕ್ರಮಿಯಾದ ವೀರಾಂಜನೇಯನು, ವೀರಭದ್ರ ದೇವನಿಂದ ವೀರಶೈವಾಚಾರ ವಿಧಿಗನುಗುಣ ಇಷ್ಟಲಿಂಗ ದೀಕ್ಷಿತನಾಗಿ ವಿರಾಜಿಸಿ, ಕೋದಂಡಪಾಣಿಯಾದ ಶ್ರೀ ಸೀತಾರಾಮರ ಭಂಟ, ರಾಮಧೂತನೆಂದು ಜಗದ್ವಿಖ್ಯಾತನಾಗಿ ಚಿರಂಜೀವಿಯಾಗಿರುವ ಪವನಜನು (ಆಂಜನೇಯನು) ದ್ವಿಶಂಭುವೆನಿಸಿದ ನಂದೀಶ್ವರನ ಅಂಶವೆಂದರೆ ಉತ್ಪ್ರೇಕ್ಷೆಯಾಗಲಾರದಷ್ಟೆ. ವಾಯು ಸುತನಾದ ಶ್ರೀ ಮದಾಂಜನೇಯನು ಲಿಂಗಧಾರಿಯಾಗಿ ಶಿವಲಿಂಗಾರಾಧಕನಾಗಿರುವುದು ಸ್ಪಷ್ಟವೇ ಆಯಿತಷ್ಟೆ. ವಾಯು

ವಾದರೋ ॥ ವಾಯುಃ ಪೂಜಯತೇ ನಿತ್ಯಂ । ಲಿಂಗಂ ಪೈತ್ತಲಕಂ ಶುಭಂ ॥ ವಾಯುದೇವನು ನಿತ್ಯ ಹಿತ್ತಾಳೆಯಿಂದ ನಿರ್ಮಿತವೂ, ಶುಭಪ್ರದವೂ ಆದ ಲಿಂಗವನ್ನು ಪ್ರೇಮಾದರಗಳಿಂದ ಆರಾಧಿಸಿ ಇಷ್ಟಾರ್ಥಗಳನ್ನು ಪಡೆಯುತ್ತಲಿರುವನು.

ಶ್ರೀ ಲಕ್ಷ್ಮೀದೇವಿಯು " ಶ್ರೀ ವೃಕ್ಷರೂಪಂಚಲಕ್ಷ್ಮ್ಯಾಶ್ರೀ " ಅಂದರೆ ॥ ಲಕ್ಷ್ಮೀದೇವ್ಯಾ ಶ್ರೀ ವೃಕ್ಷರೂಪಂ ಲಿಂಗಂ । ಬಿಲ್ವವೃಕ್ಷ ರೂಪಲಿಂಗಂ ಪೂಜಯತೇ ಸದಾ ॥.

ಶ್ರೀಮನ್ಮಹಾವಿಷ್ಣುವಿವ ವಕ್ಷಸ್ಥಲ ನಿವಾಸಿನಿಯಾದ ಶ್ರೀ ಮಹಾಲಕ್ಷ್ಮಿ ದೇವಿಯು, ಪರಮೋತ್ಕೃಷ್ಟವಾದ ಬಿಲ್ವವೃಕ್ಷರೂಪ ಮಹಾಶಿವಲಿಂಗವನ್ನು ಅನುದಿನದಲ್ಲು ಪೂಜಿಸುತ್ತಲಿರುವಳು. ಪರಮಪಾವನವೆನಿಸಿರುವ ಬಿಲ್ವ ವೃಕ್ಷದ ಹಾಗೂ ಬಿಲ್ವ ದಳಗಳ ಮಹಿಮೆ ಮಹಾದೇವನ ಮಹಿಮೆಗೆ ಸದೃಶವೆನಿಸಿರುವುವು. ಹರಿಹರ ಬ್ರಹ್ಮಾದಿ ಸಕಲ ದೇವತೆಗಳೂ ಬಿಲ್ವ ವೃಕ್ಷದಲ್ಲಿ ಪ್ರಸನ್ನರಾಗಿ ನೆಲಸಿರುವರೆಂದು ಪ್ರತೀತಿ. ಬಿಲ್ವದಳದ ತ್ರಿಪತ್ರಗಳು ತ್ರಿಮೂರ್ತಿಗಳನ್ನು ಪ್ರತಿಬಿಂಭಿಸಿ ತ್ರಿಗುಣಮಯವೆಂದೆನಿಸಿರುವುವು. ಪ್ರರಮೇಶ್ವರನ ಸೂರ್ಯ ಚಂದ್ರಾಗ್ನಿಲೋಚನಗಳನ್ನು ಪ್ರತಿನಿಧಿಸುವಂತೆ ಬಿಲ್ವದ ಮೂರು ದಳಗಳು ಕೂಡಿರುವುವು. ಶಿವನನ್ನು ಮೂರು ದಳಗಳಿಂದ ಕೂಡಿರುವ ಬಿಲ್ವಾರ್ಚನೆಯಿಂದ ಪೂಜಿಸಿದರೆ ಮೂರು ಜನ್ಮಗಳಲ್ಲಿ ನಾವು ಹಿಂದೆ ಮಾಡಿದ ಪಾಪಕೋಟಿಗಳನ್ನು ತ್ರಿಶೂಲ, ಕುಠಾರ, ಖಡ್ಗೇತಿ ಆಯುಧಗಳಿಂದ ಛಿಂದಿ ಛಿಂದಿಗೊಳಿಸಿ, " ನರಕ ಭಯಾನ್ಮಾಮುದ್ಧರೋದ್ಧಾರ – ಶಿವಕವಚೇನ ಮಾಮಾಚ್ಛಾದಯಾಚ್ಛಾದಯ, ಮೃತ್ಯುಂಜಯ ತ್ರ್ಯಂಬಕ ಸದಾಶಿವ ನಮಸ್ತೇ ನಮಸ್ತೇ " ಎಂಬುದಾಗಿ, ಸೋಮ ಸೂರ್ಯಾಗ್ನಿ ತತ್ವಗಳನ್ನು ಪ್ರತಿಬಿಂಭಿಸುವಂತೆ ಪರಿಶೋಭಿಸುವ ಬಿಲ್ವ ಪತ್ರಗಳಿಂದ ಶಿವನನ್ನು(ಇಷ್ಟಲಿಂಗವನ್ನು)ಆರಾಧಿಸುವುದು ಮೋಕ್ಷಪ್ರದವೆನಿಸಿರುವುದು.

॥ ತ್ರಿದಲಂ ತ್ರಿಗುಣಾಕಾರಂ । ತ್ರಿನೇತ್ರಂಚ ತ್ರಿಯಾಯುಧಂ ॥
ತ್ರಿಜನ್ಮ ಪಾಪಸಂಹಾರಂ । ಏಕಬಿಲ್ವಂ ಶಿವಾರ್ಪಿತಂ ॥

" ಶಿವಾ " ಎಂದೊಮ್ಮೆ ಭಕ್ತಿಯಿಂ ತ್ರಿದಲಯುಕ್ತ ಬಿಲ್ವಪತ್ರೆಯೊಂದನ್ನು ಇಷ್ಟಲಿಂಗಕ್ಕರ್ಪಿಸಿ ಪೂಜಿಸಿದರೆ - ಆದಿತ್ಯ, ಮಂಬಿಕಾಂ, ವಿಷ್ಣುಂ, ಗಣ ನಾಥಂ, ಮಹೇಶ್ವರಃ,-ಎಂಬ ದೇವತಾ ಪಂಚಾಯತನದ ಶ್ರೇಷ್ಠ ದೇವತೆ ಗಳಾದಿಯಾಗಿ ಅಖಿಲ ದೇವತೆಗಳೂ ಹಾಗೂ ಸಮಸ್ತ ಭೂತಗಣಗಳೂ ಸಂಪ್ರೀತರಾಗಿ, ಆರಾಧಕನ ಜನ್ಮತ್ರಯಂಗಳಲ್ಲಿನ ॥ ಮಹಾ ಪಾಪಾದಿ ಪಾಪಾನಿ ॥ ಪೂರ್ವಕೃತ ಬಹು ಘೋರ ಪಾತಕರಾಶಿಗಳೆಲ್ಲಾ ॥ ಭಸ್ಮೀ ಭಾವಂ ಗಮಿಷ್ಯತಿ ॥ ಬೂದಿಯಾಗಿ ಕಣ್ಮರೆಯಾಗುವುವು. ಶಿವನ ಕರುಣ ಕಟಾಕ್ಷವೂ ಲಭಿಸುವುದು. ಇಂತಪ್ಪಮಹಿಮಾನ್ವಿತವಾದ ಬಿಲ್ವ ವೃಕ್ಷರೂಪ ಶಿವಲಿಂಗವನ್ನು ಮಹಾಲಕ್ಷ್ಮಿಯು ॥ ಭಕ್ತ್ಯಾ ಪೂಜಯತೇ ಸದಾ ॥ ಸದಾ ಪರಮ ಭಕ್ತಿಯಿಂದ ಪೂಜಿಸುತ್ತಲಿರುವಳು.

ವಿದ್ಯಾಂಬೆಯಾದ ಶ್ರೀ ಶಾರದಾಂಬೆಯು – " ಅಥ ಸರಸ್ವತೀ ರತ್ನ ರೂಪಂ " – ಅಂದರೆ ॥ ಅಥಚ ಸರಸ್ವತೀ ಭಾರತೀ । ರತ್ನರೂಪಂ ರತ್ನ ಮಯಂ ಲಿಂಗಂ ಪೂಜಯತೇ ಸದಾ ॥ ಚತುರ್ಮುಖನು ಲೋಕ ಪ್ರಸಿದ್ಧ ವಾದ ವೈಢೂರ್ಯಮಯ ಶಿವಲಿಂಗವನ್ನು ಪೂಜಿಸುತ್ತಿರಲು, ಪನ್ನಗವೇಣಿ ವೀಣಾಪಾಣಿಯಾದ, " ನಮೋ ವಾಕ್‌ತತ್ವ ತಂತವೇ ", ವಾಕ್ ಸುಧಾ ರಸ ಸಿಂಧುವೆನಿಸಿ, " ಯಾ ಬ್ರಹ್ಮಾಚ್ಯುತ ಶಂಕರ ಪ್ರಭೃತಿಭಿಃರ್ದೇವೈಸದಾ ಪೂಜಿತಃ ", ಹರಿಹರ ಬ್ರಹ್ಮಾದಿ ಅಖಿಲ ದೇವತೆಗಳಿಂದಲೂ ಸ್ತುತ್ಯಳಾದ ಮತ್ತೂ ಸೃಷ್ಟಿಕರ್ತನ " ಜಿಹ್ವ ಸಿಂಹಾಸನಾಗ್ರೇ ಉಪನಯತು ", ನಾಲಗೆ ಯೆಂಬ ಸಿಂಹಾನಾಗ್ರದಲ್ಲಿ ಮಂಡಿಸಿ ಸಂಗೀತ ಸಾಹಿತ್ಯಗಳೆಂಬ ಕಲಸ ಕುಂಭ ಗಳಿಂದ ವಿರಾಜಿಸುತ್ತ " ಯಾಕುಂದೇಂದು ತುಷಾರಹಾರ ಧವಳಾ ಯಾ ಶುಭ್ರ ವಸ್ತ್ರಾವೃತಾ ", ಶ್ವೇತ ಪೀತಾಂಬರ ಧಾರಿಯಾಗಿಯೂ, ಕುಂದೇಂದು ಸದೃಶ

ವಾದ ಅಂದರೆ, ಪೂರ್ಣ ಚಂದ್ರೋದಯವನ್ನು ಕಂಡ ತಟಾಕಂಗಳಲ್ಲಿನ ಕುಮುದ ಪುಷ್ಪರಾಜಿಗಳು ಅರಳಿ ರಮಣೀಯವಾಗಿ ಕಂಗೊಳಿಸುವಂಥಾ, ಧಾವಳ್ಯದಿಂದ ಮಿರುಗುವ ಮುತ್ತು ಹವಳಗಳ ಹಾರಗಳುಳ್ಳ ಕಂಬು ಕೊರಳಿನ ಬ್ರಹ್ಮನ ರಾಣಿ, ಪೂರ್ಣೇಂದುವದನೆಯಾದ ವಿದ್ಯಾಭಾರತಿ ಸರಸ್ವತಿಯು – ॥ ರತ್ನ ರೂಪಲಿಂಗಂ ಪೂಜಯತೇ ಸದಾ ॥, ಅನರ್ಘ್ಯ ರತ್ನಾಭರಣಮಯ ಚಿನ್ ಘನರೂಪ ಮಹಾಶಿವಲಿಂಗವನ್ನು ಅತುಲಾನಂದ ಭಕ್ತಿಭಾವದಿಂದ ಸರ್ವದಾ ಪೂಜಿಸುತ್ತಲಿರುವಳು; ॥ ಸೂಕ್ಷ್ಮಾಯ ಶುಚಯೇ ತಸ್ಮೈ। ನಮೋ ವಾಕ್‌ತತ್ವ ತಂತವೇ ವಿಚಿತ್ರೋ। ಯಸ್ಯ ವಿನ್ಯಾಸೋ ವಿಧದಾತಿ ಜಗತ್ಪಟಂ॥ ಇಂತಪ್ಪ ಶ್ರೀ ಶಾರದಾಂಬೆಯನ್ನು ಸರ್ವಕಾಲದಲ್ಲೂ ಸ್ತುತಿಸಿ ವಂದಿಸಿ ಭಕ್ತ್ಯಾ ಸ್ಮರಿಸಿ ನಮಸ್ಕರಿಸುವೆನು.

ಜಗನ್ಮಾತೆಯಾದ ಶ್ರೀ ಚಾಮುಂಡಾಂಬೆಯು ಅಂದರೆ ಶ್ರೀ ದುರ್ಗಾ ದೇವಿಯು – " ದುರ್ಗಾ ಹೈಮಲಿಂಗಂ ಪೂಜಯ ಮಾಸ ಭಕ್ತ್ಯಾ ", ಬಂಗಾರ ದಿಂದ ನಿರ್ಮಿತವಾದ ಮಹಾಶಿವಲಿಂಗವನ್ನು ನಿತ್ಯ ಪೂಜಿಸುತ್ತಲಿರುವಳು.

ಅಂದ ಬಳಿಕ ಇತರ ದೇವತೆಗಳೂ –

॥ ಯಕ್ಷರಾಜೇನ ಕುಬೇರೇಣ । ಹೈಮಂ ಸೌವರ್ಣಂ ಲಿಂಗಂ ॥
ಕುಬೇರನು ಸುವರ್ಣಮಯ ಶಿವಲಿಂಗವನ್ನು ಪೂಜಿಸುತ್ತಲಿರುವನು;
॥ ವಿಶ್ವೈರ್ದೇವೈಃ ದೇವತಾವಿಶೇಷೈಃ । ತಾಪ್ಯಕಂ ರಾಜತಂ ಲಿಂಗಂ ॥
ವಿಶ್ವ ದೇವತೆಗಳು ಬೆಳ್ಳಿಯ ಶಿವಲಿಂಗವನ್ನೂ;
॥ ವಸುಭಿಃ ವಸುದೇವತಾಭಿಃ । ಕಾಂಶ್ಯಕಂಚ; ಕಾಂಶ್ಯರೂಪ ಮಿಶ್ರಧಾತು । ನಿರ್ಮಿತ ಲಿಂಗಂ ॥, ವಸುದೇವತೆಗಳು ಕಂಚಿನ ಲಿಂಗವನ್ನೂ;
॥ ಅಶ್ವಿಭ್ಯಾಮಶ್ವಿನಾಮಕ ದೇವತಾಭ್ಯಾಂ । ಪಾರ್ಥಿವಂ ಮೃಣ್ಮಯಂ ಲಿಂಗಂ ॥
ಅಶ್ವಿನಿ ದೇವತೆಗಳೆಲ್ಲರೂ ಮೃಣ್ಮಯ ಶಿವಲಿಂಗವನ್ನೂ;

॥ ವರುಣೇನ ಸ್ಫಾಟಿಕಂ ಸ್ಫಟಿಕ ಶಿಲಾ ನಿರ್ಮಿತಂ ಲಿಂಗಂ ॥
ವರುಣ ದೇವನು ಸ್ಫಟಿಕಮಯ ಶಿವಲಿಂಗವನ್ನೂ;
॥ ದೈವತೈಃ ಸೋಮರಾಡ್‌ನಾಮಕೈಃ । ಮೌಕ್ತಿಕಂ, ಮುಕ್ತಾಫಲನಿರ್ಮಿತಂ ಲಿಂಗಂ ॥
ಚಂದ್ರನು ಮತ್ತು ಸೋಮರಾಟ್ ಎಂಬ ದೇವತೆಗಳು ಮುದ್ದಾದ ಮುತ್ತಿನ ಲಿಂಗವನ್ನೂ;
॥ ಅನಂತಾದ್ಯೈಃ ಆದಿಶೇಷಾದಿಭಿಃ ಫಣಿಭಿಶ್ಚ । ಸರ್ಪೈಶ್ಚ ಪ್ರವಾಳಂ ವಿದ್ರುಮಮಯಂ ಲಿಂಗಂ ॥
ಅನಂತ, ಆದಿಶೇಷಾದಿ ನಾಗಫಣಾಮಣಿ ಸರ್ಪಗಳು ಪ್ರವಾಳ ಶಿವಲಿಂಗವನ್ನೂ
॥ ದೈತ್ಯೈರ್ದಿತಿಪುತ್ರೈಃ ಜಾಲಂ, ಜಾಲಕ ಮಯೋಮಯಂ ಲಿಂಗಮಿತ್ಯರ್ಥ। ರಾಕ್ಷಸೈಶ್ಚ ರಕ್ಷೋಭಿಶ್ಚ ತದೇವಾಯೋಮಯಂ ಲಿಂಗಂ ॥
ಅಂದರೆ ದೈತ್ಯರೂ ರಾಕ್ಷಸರೂ ಉಕ್ಕಿನಿಂದ ನಿರ್ಮಿತವಾದ ಶಿವಲಿಂಗವನ್ನೂ;
॥ ಗುಹ್ಯಕೈಃ ತ್ರಿಲೋಹಂ, ತ್ರಿಲೋಹ ನಿರ್ಮಿತ ಲಿಂಗಂ ॥
ಗುಹ್ಯಕರು ಅಂದರೆ, ಯಕ್ಷರೂ, ಕಿನ್ನರರೂ ಮತ್ತು ಕಿಂಪುರುಷರೂ ತ್ರಿಲೋಹದಿಂದ ನಿರ್ಮಿತವಾದ ಶಿವಲಿಂಗವನ್ನೂ;
॥ ಗಣೈಃ ಪ್ರಮಥೈಃ, ವೀರನಂದ್ಯಾದಿಭಿಃ । ಶೈಲಂ ಸರ್ವಲೋಹ ಪ್ರಚುರಂ । ಶ್ರೀ ಶೈಲರೂಪಂ, ಶ್ರೀ ಶೈಲೋದ್ಭವಂ ಲಿಂಗಮಿತ್ಯರ್ಥಃ ॥
ಅಂದರೆ, ವೀರ, ನಂದಿ, ಮೊದಲಾದ ಪ್ರಮಥ ಶ್ರೇಷ್ಠರುಗಳು ಶ್ರೀಶೈಲ ಕ್ಷೇತ್ರದಲ್ಲಿ ಉದ್ಭವಿಸುವ ಪವಿತ್ರವಾದ ಶ್ರೀ ಶೈಲ ಶಿಲೆಯಿಂದ ನಿರ್ಮಿತವಾದ ಮಹಾ ಶಿವಲಿಂಗವನ್ನೂ;
। ಮಾತೃಕಾಭಿಃ ಬ್ರಾಹ್ಮ್ಯಾದಿ ಸಪ್ತಮಾತೃಕಾಭಿಃ । ಸೈಕತಂ ಸಿಕತಾ ಮಯಂ ಲಿಂಗಂ ॥
(ಬ್ರಾಹ್ಮೀ ಮಾಹೇಶ್ವರೀ ಚೈವ ಕೌಮಾರೀ ವೈಷ್ಣವೀ ತಥಾ । ವಾರಾಹೀ ಚೈವ ಚೇಂದ್ರಾಣೀ ಚಾಮುಂಡಾ ಸಪ್ತಮಾತರಃ)ಎಂಬೀ ಬ್ರಾಹ್ಮೀತ್ಯಾದ್ಯಾಸ್ತು ಸಪ್ತ ಮಾತೃಕೆಯರು, ಉಸುಕಿನ (ಮರಳು) ಲಿಂಗವನ್ನೂ;

॥ ನೈರ್ಋತಿ ನಾ ದಾರೂದ್ಭವಂ ಕಾಷ್ಠನಿರ್ಮಿತಂ ಲಿಂಗಂ ॥
ಅಷ್ಟದಿಕ್ಪಾಲಕರಲ್ಲಿ ಒಬ್ಬನಾದ ನೈಋತಿಯು ಮರದಿಂದ ನಿರ್ಮಿತವಾದ ಕಾಷ್ಠ ಲಿಂಗವನ್ನೂ;
॥ ಯಮೇನ ಮಾರಕತಂಚ । ಮರಕತಮಣಿ ನಿರ್ಮಿತಂ ಲಿಂಗಂ
ಸು ಪೂಜ್ಯ ಮಾಸೀತ್ ॥
ಯಮಧರ್ಮರಾಯನು ಪರಮೋತ್ಕೃಷ್ಟವಾದ ಮರಕತಮಣಿಯಿಂದ ನಿರ್ಮಿತ ವಾದ ಶಿವಲಿಂಗವನ್ನೂ;
॥ ರುದ್ರೈಃ ನೀಲಾದಿರುದ್ರೈಃ, ಸು ಭಸ್ಮರೂಪಂ । ಸಮೀಚೀನ ಭಸ್ಮಸ್ವರೂಪಂ
ಲಿಂಗಮಿತ್ಯರ್ಥಃ ॥

ನೀಲಾದಿ ಏಕಾದಶ ರುದ್ರರು ಪವಿತ್ರವಾದ ಭಸ್ಮದಿಂದ ನಿರ್ಮಿತವಾದ ಶಿವಲಿಂಗವನ್ನೂ, ಈ ಪ್ರಕಾರ ಅನಂತ ಕೋಟಿ ಸುರಾಸುರ ನರಾದಿಯಾಗಿ, ಸರ್ವರೂ ಶಿವಲಿಂಗಾರ್ಚನೆಯಲ್ಲಿ ತತ್ಪರರಾಗಿರುವರೆಂಬುದಾಗಿ, ಶಿವಲಿಂಗ ಧಾರಣ ಇಷ್ಟಲಿಂಗ ಪೂಜಾ ಮಹಿಮೆಯನ್ನು ಘಂಟಾಘೋಷವಾಗಿ ಜಗದ್ಗುರು ಶ್ರೀ ರೇಣುಕರು ಸರ್ವತ್ರ ಸಾರುತ್ತ ॥ ಧರ್ಮೋಲಿಂಗಾರ್ಚನಾತ್ಮಕಃ ಸತತ ಇಷ್ಟ ಲಿಂಗಾರ್ಚನ ಜ್ಞಾನ ಯಜ್ಞಾನುಷ್ಠಾನವೇ ಧರ್ಮವೆನಿಸಿರುವುದಾಗಿ ಉಪದೇಶಿಸಿರುವರು. ಲಿಂಗದ ಕುರುಹು, ಶಿವಲಿಂಗದ ನಿಜ ಸ್ವರೂಪವನ್ನು ಗುರುಕಾರುಣ್ಯದಿಂದಲ್ಲವೇ ನಾವು ಅರಿತು ಕೃತಾರ್ಥರಾಗಬೇಕು. ಶಿವಲಿಂಗಾ ರಾಧನೆಯ ರಹಸ್ಯವನ್ನರಿತ ನೇಮನಾರಾಧ್ಯನು ಎಲ್ಲಾ ಮತಗಳಿಗಿಂತಲೂ " ಲಿಂಗಮತವೇಗೊಪ್ಪ " ಅಂದರೆ ವೀರಶೈವ ಮತವು ಶ್ರೇಷ್ಠವಾದ ಮತ ವೆಂದು ಶೃತಪಡಿಸಿರುವನು. ಪುರಾಣ ಪುರುಷನಾದ ಶ್ರೀ ವ್ಯಾಸಾಚಾರ್ಯರು " ವಿಶ್ವಾಧಿಕಂ ಶಂಕರಂ " ಎಂದು ಉಚ್ಛ ಧ್ವನಿಯಿಂದ ಹೃತ್ಪೂರ್ವಕ ಕೈ ಎತ್ತಿ ಸಾರಿ ಮಹೋನ್ನತವಾದೀ ಲಿಂಗಿ ಬ್ರಾಹ್ಮಣ ಧರ್ಮಕ್ಕೆ ಶರಣಾಗತರಾಗಿರುವ ಅಂಶ ಲೋಕ ವಿಶ್ರುತವೇ ಇರುವುದು.

—

# XVI

ಪಾವನವಾದ ಶಿವ ಮಹಿಮ್ನ ಸ್ತೋತ್ರದಲ್ಲಿ ಪುಷ್ಪದಂತನು ಶಿವ ಸರ್ವೋತ್ತಮತ್ವವನ್ನು ಭಕ್ತ್ಯಾ ಪ್ರತಿಪಾದಿಸುತ್ತಾ –

॥ ಮಹೇಶಾನ್ನಾ ಪರೋದೇವೋ । ಮಹಿಮ್ನೋನ್ನಾ ಪರಾಸ್ತುತಿಃ ॥
॥ ಅಘೋರಾನ್ನಾ ಪರೋಮಂತ್ರೋ । ನಾಸ್ತಿ ತತ್ವಂ ಗುರೋಃ ಪರಮ್ ॥

ಆದಾಗಿ ಏನೆಂದರೆ " ಇಡಬೇಕೀಶ್ವರನಲ್ಲಿ ಭಕ್ತಿರಸಮಂ— ಶಿವನೇ ದೇವ ರೊಳುತ್ತಮಂ " ಎಂದೆಂಬ ಪಾಲ್ಕುರಿಕೆ ಸೋಮನಾಥನ ನುಡಿಯಂತೆ, ಪುಷ್ಪದಂತನು ದೇವಾದಿ ದೇವನಾದ ಮಹಾದೇವನಿಗಿಂತ ಅತ್ಯಧಿಕರು ಬೇರಿಲ್ಲ, ಶಿವನ ಮಹಿಮೆಯನ್ನು ಅಖಂಡವಾಗಿ ಪ್ರತಿಪಾದಿಸುವಂಥಾ ಶಿವ ಮಹಿಮ್ನಾ ಸ್ತೋತ್ರಕ್ಕಿಂತ ಹೆಚ್ಚಿನದು ಬೇರೊಂದು ಕಾಣೆ, "ಶಿವ" ಎಂಬೆರಡಕ್ಷರಕ್ಕಿಂತ ಅಧಿಕವಾದ್ದು ಬೇರಿಲ್ಲ, ಎಂದೆಲ್ಲಾ ವರ್ಣಿಸಿರುವನು. ಶಿವನಾದರೋ — ॥ ನಾಸ್ತಿ ತತ್ವಂ ಗುರೋಃ ಪರಮ್ ॥ " ಗುರೂಣಾಂಗುರುಃ " ಎಂಬ ಗುರುತರ ಬಿರುದಾಂಕಿತನೂ, ಶ್ರೀ ದಕ್ಷಿಣಾಮೂರ್ತಿ ಸದೃಶನೂ ಆದ ಶ್ರೀ ಮಜ್ಜಗದ್ಗುರು ರೇಣುಕ ಕಲ್ಪತರುವಿಗಿಂತ ಅತ್ಯಧಿಕವಾದ ಗುರುತತ್ವ ಮತ್ತೊಂದಿಲ್ಲವೆಂದು ಸ್ಪಷ್ಟವಾಗಿ ವೇದಾಗಮಗಳಲ್ಲಿ ಸಾರಿರುವನು. " ಶಿವ " ಎಂಬ ಅಕ್ಷರದ್ವಯ ಮಹಾಮಂತ್ರೋಚ್ಚಾರಣೆಯಿಂದ, ನರರ ಪಾಪಕೋಟಿಗಳು "ಶಿ" ಕಾರ ಮಂತ್ರಾಗ್ನಿಯಿಂದ ಬೆಂದು ಬೂದಿಯಾಗಲು, " ವ " ಮಂತ್ರೋಚ್ಚಾರ ಪ್ರಭಾವದಿಂದ ಪರ್ವತಾಕಾರವಾದ ಪಾಪದಬೂದಿರಾಶಿಗಳು ಪ್ರಚಂಡ ಮಾರುತ (ವಾಯುವಿನ)ದ ಹೊಡೆತದಿಂದ ಅಂತರಿಕ್ಷಕ್ಕೆದ್ದು ಕಣ್ಮರೆಯಾಗಲು, ಪರಿಶುದ್ಧ ನಾದ ಜೀವಾತ್ಮನು ಆಗ " ತತ್ವಮಸಿ " ಮಹಾ ವಾಕ್ಯಾನು ಸಂಧಾನದ ತಿರುಳನ್ನರಿತು ಲಿಂಗಾಂಗ ಸಾಮರಸ್ಯಾನುಭವೈಕ್ಯನಾಗಿ ಪರಮಾತ್ಮನಲ್ಲಿ ಒಂದಾಗುವನೆಂಬ ಗೂಡತತ್ವವನ್ನು ಸದ್ಗುರು, ಸತ್ಪಾತ್ರನಾದ ಶಿಷ್ಯನಿಗೆ ಬೋಧಿಸಿ ಶಿಷ್ಯನು ಶಿವಸಾಕ್ಷಾತ್ಕಾರಗೊಳಿಸಿಕೊಂಡು ಧನ್ಯನಾಗಲು, ನೆರವಾಗಿ

ರುವ ಬೋಧಕ ಗುರುವಿಗಿಂತ ಮೊಡ್ಡವನು ಬೇರಿಲ್ಲ.

" The Holy Guru, (Spiritual Preceptor) who unfolds knowledge divine is the resplendent and perennial channel of wisdom. His Divine Mercy flows towards uplifting the yearning - disciples incessantly. As such, Guru is one with God: One who has known the Real Spiritual Teacher has been hailed to have known God ".

ಸದ್ಗುರುವಿನನುಗ್ರಹದಿಂದ ಶಿವಾನುಭವಿಯಾದ ಶಿವಶರಣನು ತನ್ನ ನಿತ್ಯ ಇಷ್ಟಲಿಂಗ ಪೂಜಾರಾಧನ ವೇಳೆಯಲ್ಲಿ ಅಂತರ್ಮುಖಿಯಾಗಿ, ಬಾಹ್ಯ ಪ್ರಾಪಂಚಿಕ ಹವ್ಯಾಸಗಳನ್ನು ಮರೆತು ಪೂಜ್ಯ ಪೂಜಕದೈವ ಲೀಲಾ ನಿಜಾ ನಂದ ಸುಧಾಸಿಂಧುವಿನಿಂದ ಹೊರಹೊಮ್ಮುವ ಶರಣನ ಸಾಹಿತ್ಯಾಮೃತದ ಘನ ರಸಾಸ್ವಾದನೆಯನ್ನು; ಶಿವಾನುಭವಿಗಳಲ್ಲಿ ಅಗ್ರಜರಾದ ಶ್ರೀ ಮಗ್ಗೆ ಮಾಯಿದೇವರು, ಕೃಪೆಯಿಂದ ಲೋಕದವರ ಹಿತಕ್ಕಾಗಿ ರಚಿಸಿರುವ ತಮ್ಮ ಶತಕತ್ರಯದಲ್ಲಿ – ಶಿವಲಿಂಗಾಂಗಗಳ ನಿತ್ಯ ಸಂಪರ್ಕ –

॥ ನೆನೆವುದರಿಂ ನಿರೀಕ್ಷಿಸುವುದತ್ಯಧಿಕಂ ।
ನೆನಹಿಂ ನಿರೀಕ್ಷೆಯಿಂದನುದಿವಸಂ ।
ಸಮರ್ಚಿಸುವುದತ್ಯಧಿಕಂ ॥
ನೆನಹಿಂ ನಿರೀಕ್ಷೆಯಿಂದನು ದಿವಸಂ ।
ಸಮರ್ಚಿಪುದರಿಂ, ಶಿವಲಿಂಗ ।
ಮನಂಗದಲ್ಲಿ ಸುಮ್ಮನೆ ಧರಿಸಿರ್ಪು ।
ದತ್ಯಧಿಕಮತ್ಯಧಿಕಂ ನಿರುತಂ ಶಿವಾಧವಾ ॥

|| ಶ್ರವಣಂ ಕೀರ್ತ್ತನಂ ಶಂಭೋಃ ಸ್ಮರಣಂ | ಪಾದ ಸೇವನಂ ಅರ್ಚನಂ ವಂದನಂ ದಾಸ್ಯಂ ಸಖ್ಯಂ ಆತ್ಮ ನಿವೇದನಂ || ಎಂಬುದಾಗಿ ಭಗವತ್ಪಾದ ಜಗದ್ಗುರು ಶ್ರೀ ರೇಣುಕಾಚಾರ್ಯರು ಕಲಸೋದ್ಭವನಾದ ಅಗಸ್ತ್ಯ ಮಹರ್ಷಿಗಳಿಗೆ ಸಿದ್ಧಾಂತ ಶಿಖಾಮಣಿನಾಮ ರೇಣುಕ ಗೀತೆಯಲ್ಲಿ ನವ ವಿಧ ಭಕ್ತಿಯ ಪ್ರಭಾವವನ್ನು ವಿವರಿಸುವಾಗ, "ನೆನೆವುದರಿಂ - ಶಂಭೋಃ ಸ್ಮರಣಂ ", ಶಂಭುವಿನ ನಾಮರೂಪಗಳ ಸ್ಮರಣೆ ಪಾವನವಾದುದೆಂದು ಅರುಹಿರುವರು. ಶಿವ ಸ್ಮರಣೆಯೊಂದಿಗೆ ಶಿವಲಿಂಗ ದರ್ಶನವು ಅಧಿಕವಾದುದು. ಸ್ಮರಣೆ ದರ್ಶನಾದಿಗಳೊಂದಿಗೆ, ಭಕ್ತಿ ಭಾವದಿಂದ ಇಷ್ಟಲಿಂಗವನ್ನು ಅನು ದಿನ ಕರಪೀಠದಲ್ಲಿರಿಸಿ ಪೂಜಿಸುವುದು ಅತ್ಯಧಿಕವಾದುದು. ನೆನಹು ನಿರೀಕ್ಷಣೆ ಅರ್ಚನಾದಿಗಳಿಗಿಂತ, ಇಷ್ಟಲಿಂಗವನ್ನು ದೇಹದಲ್ಲಿ ಸುಮ್ಮನೆ ಸದಾ ಅಗಲದಂತೆ ಧರಿಸಿರುವುದು, ಎಲ್ಲಪಕ್ಕಿಂತಲೂ ಅತ್ಯಧಿಕ ಮತ್ಯಂತ ಅಧಿಕವಾದುದೆಂದು ಮಗ್ಗೆಮಾಯಿ ದೇವರು ಬೋಧಿಸಿ ಪೂಜ್ಯಪೂಜಕ ಭಾವದ ವೈಶಿಷ್ಟ್ಯವನ್ನು ವಿವರಿಸಿರುವರು. ಮುಂದೆ ಲಿಂಗ ಸಂಪರ್ಕದಿಂದ ಕ್ಷಣಾರ್ಧವೂ ಅಗಲಿರದೆ ಶಿವಪೂಜಾನಿಷ್ಠೆಯಲ್ಲಿ ನಿರತನಾಗುತ್ತ –

|| ಲಿಂಗದೊಳಿಟ್ಟ ದೃಷ್ಟಿ, ನಿಜದೃಷ್ಟಿಯೊಳಿರ್ದ ಮನಂ,
ಮನಸ್ಸಿನೋಳ್ | ಪಿಂಗದೆನಿಂದ ಭಾವ ಮದರೋಳ್
ನೆಲೆಗೊಂಡ ಶಿವಾತ್ಮ ಲಿಂಗವಾ || ಲಿಂಗದೊಳಿರ್ದು
ನಿತ್ಯ ಸುಖಿಯಾಗಿ ವಿರಾಜಿಸುವಂಗೆ ಬಾಹ್ಯ ಕರ್ಮಂ |
ಗಳ ವೇತಕಯ್ಯಾ | ಪರಮ ಪ್ರಭುವೇ ಮಹದೈಪುರೀಶ್ವರಾ ||

ವಿಭೂತಿ ದಿವ್ಯ ಗಂಧಾಕ್ಷತೆ ಬಿಲ್ವ ಪತ್ರಗಳಿಂದ – ಕರಕಮಲದಲ್ಲಿ ಪೂಜೆಗೊಂಡು ಅಲಂಕೃತವಾಗಿ ವಿರಾಜಿಸುವ ಇಷ್ಟಲಿಂಗದೊಳಿಟ್ಟ ದೃಷ್ಟಿ, ಆ ದೃಷ್ಟಿಯೊಳು ಮನದ ನಿಲುಕಡೆ, ಮತ್ತಾ ನಿಲುಕಡೆಯಲ್ಲಿ ವಿಲೀನವಾದ ಶಿವಾರ್ಪಿತ ಮನೋಭಾವ, ಆ ನಿರ್ಮಲ ಭಾವದಲ್ಲಿ ಸ್ಫೂರ್ತಿಗೊಂಡು ಬೆಳಗುವ

ಮಂಗಳಮಯ ಮಹಾಲಿಂಗ ಅಥವಾ ಆತ್ಮಲಿಂಗದ ದರ್ಶನದಿಂದ ನಿತ್ಯ ನಿರತಿಶಯಾನಂದದಲ್ಲಿ " ಶಿವೋಽಹಂ " ಭಾವನೆಯಿಂದ || ಆನಂದಂ ಬ್ರಹ್ಮೇತಿ ವಿಜಾನಾತ್ || ಎಂಬಂತೆ ಶಿವಾನಂದದಲ್ಲಿ ಚಿನ್ಮಯಾತ್ಮಕನಾಗಿ ವಿರಾಜಿಸುವಾತಂಗೆ || ಬಾಹ್ಯ ಕರ್ಮಂಗಳವೇತಕಯ್ಯಾ || ' ಶರಣಸ್ಯ ಪ್ರಾಪಂಚಿಕ ಸುಖಂನಾಸ್ತಿ ' ಎಂಬಂತೆ ಅಂತರ್ಮುಖಿಯಾಗಿ ಅಸಂ ಪ್ರಜ್ಞಾತ ಸಮಾಧಿಯಲ್ಲಿ ಮಗ್ನನಾದ ಶರಣ ಸ್ಥಲದ ಪೂರ್ಣ ಶಿವಾನುಭವಿಗೆ – ಬಾಹ್ಯ ಕರ್ಮಗಳಿಂದೇನು ಫಲ. ಆತ್ಮಾರ್ಥವಾಗಿ ಅವನಿಗೆ ಬಾಹ್ಯ ಕರ್ಮಗಳಿಂದ ಆಗಬೇಕಾದುವೇನೂ ಇಲ್ಲದೆ ಇದ್ದರೂ, ಲೋಕದವರಿಗೆ ಜ್ಞಾನಿ (ಶಿವಶರಣ)ಆದರ್ಶಪ್ರಾಯನಾಗಿರುವುದರಿಂದ, ಸರ್ವರ ಉದ್ಧಾರಕ್ಕಾಗಿ ಇವನು ಪೂಜಾದಿ ಕರ್ಮಾನುಷ್ಠಾನಗಳನ್ನು ಬಿಡದೆ ಆಚರಿಸುತ್ತಲಿರಬೇಕು. ಇದು ಶಾಸ್ತ್ರ ನಿಯಮ. ಸ್ಥೂಲ ಸೂಕ್ಷ್ಮ ಕಾರಣ ದೇಹತ್ರಯಂಗಳಲ್ಲೂ ಶಿವಾನುಭೂತಿಯುಳ್ಳವನಾಗಿ –

|| ಸ್ಥೂಲ ಶರೀರ ಸೂಕ್ಷ್ಮತನು, ಕಾ | ರಣ ದೇಹವೆನಿಪ್ಪವಮೂರರೊಳ್ |
ಮೇಲೆ ಗುರೂಪದಿಷ್ಟ ಶಿವಲಿಂಗ | ಮಖಂಡಿತ ನಿತ್ಯ ಚಿತ್ಪ್ರಕಾ |
ಶಾಲಯ ಮಾಗಿ ತೋರಲು, ತನು | ತ್ರಯದೊಳ್ ತೆರಹಿಲ್ಲದಿರ್ಪತ |
ಲ್ಲೀಲೆಯ ಶುದ್ಧ ಪೂಜೆ ಪರಮ | ಪ್ರಭುವೇ ಮಹದೈಪುರೀಶ್ವರಾ ||

ಗುರುದೇವನಿಂದ ಹಸ್ತಮಸ್ತಕ ಮಂತ್ರ ಸಂಯೋಗ ದೀಕ್ಷೆಯಿಂದ ಅನುಗ್ರಹಿಸಲ್ಪಟ್ಟ ಇಷ್ಟಪ್ರಾಣ ಭಾವಾತ್ಮಕವಾದ ಶಿವಲಿಂಗವು, ಸ್ಥೂಲ ಸೂಕ್ಷ್ಮ ಕಾರಣವೆಂಬ ಶರೀರತ್ರಯಂಗಳಲ್ಲಿ ಅಭಿನ್ನವೂ ಅಖಂಡವೂ, ಅನಂತವೂ ಆಗಿ ನಿತ್ಯಾನಂದ ತೇಜೋರಾಶಿಯಾಗಿ ಬೆಳಗಿ, ಹೃದಯ ದರ್ಪಣದಲ್ಲಿ || ಹೃದಾಕಾಶೇ ಚಿದಾದಿತ್ಯಃ ಸದಾಭಾಸತಿ ಭಾಸತಿ | ಉದಯಾಸ್ತಮಯೌನಾಸ್ತಿ ಕುತಃ ಸಂಧ್ಯಾವಿಧೀಯತೇ ||, ಚಿದಾದಿತ್ಯನಾದ ಮಹಾಲಿಂಗವು ಉದಯಾಸ್ತಮಾನಗಳಾವೂ ಇಲ್ಲದೆ, ಸರ್ವಕಾಲದಲ್ಲೂ ದೇದೀಪ್ಯಮಾನವಾಗಿ ವಿರಾಜಿಸಿ, ಮೂರು ಶರೀರಗಳಲ್ಲೂ ಏಕ ಪ್ರಕಾರವಾಗಿ ಪ್ರಕಾಶಿಸುವ ದೈವೀ ವಿಲಾಸದ

ಸ್ವಾನುಭೂತಿಯು ಇಷ್ಟಲಿಂಗ ಪೂಜೆಯಿಂದ ಶರಣನ ಸಾಹಿತ್ಯರೂಪದಲ್ಲಿ ಹೊರಹೊಮ್ಮಿ ಅರಳಿ, ಅರಿವಿನ ಮೊನೆಯಲ್ಲಿ ಬೆಳಗಿ ಸ್ವಾನುಭೂತಿಯುಳ್ಳಳ ವಡಿಸಿ, ಅಮರವಾಣಿಯಾಗಿ, ಅಭಯಾನ್ವಿತವಾಗಿ ರಾರಾಜಿಸುತ್ತಲಿರುವುದು. ಶಿವಾನುಭವದ ಸವಿಯೂಟವನುಂಡ ಶಿವಶರಣನು ಸದಾ –

॥ ಲಿಂಗದೊಳಿದ್ದು ಲಿಂಗಮನೆತಾಳ್ದು ।
ನಿರಂತರ ಲಿಂಗಪೂಜೆಯಂ ಲಿಂಗದಿ । ನೊಲ್ದು
ವಿಸ್ತರಿಸಿ ಲಿಂಗಕೆ ಲಿಂಗಮನರ್ಪಿಸುತ್ತು ॥
ಮಾಲಿಂಗ ಪದಾರ್ಥಮಂ ಸವಿದು । ಲಿಂಗ
ಸುಖಾಸ್ಪದನಾಗಿ ರಾಜಿಪಂ ಲಿಂಗನಿ ।
ಜೈಕ್ಯನಯ್ಯ ಪರಮ ಪ್ರಭುವೇ ಮಹದೈಪುರೀಶ್ವರಾ ॥

ಪರಮಾಚಾರ್ಯವರ್ಯರಾದ ಶ್ರೀ ಮಗ್ಗೆಮಾಯಿ ದೇವರು, ಈ ಮೇಲಿನ ಮಂಗಳಮಯ ಶ್ಲೋಕಾರ್ಥವನ್ನು ಗಹನಾರ್ಥ ಗರ್ಭಿತವಾಗಿ ಕಂಗೊಳಿಸುವಂತೆ ರಚಿಸಿರುವರು. ಪದ ಪದಕ್ಕೂ ಪಂಕ್ತಿ ಪಂಕ್ತಿಗೂ ಭಕ್ತಿ ಭಾವ ಜ್ಞಾನೋದ್ರೇಕ ಮಯವಾಗಿರುವುದು. ಶರಣ ಸಾಹಿತ್ಯದ ತಿರುಳಾಗಿ ಸ್ವಾನುಭೂತಿಗೆ ಗೋಚರಿಸುವಂಥಾ ಉಪನಿಷತ್ ಸಾರ ಇದರಲ್ಲಿ ಹೃದಯಂಗಮವಾಗಿ ಎದ್ದು ಕಾಣುವುದು. ಪೂಜಾವೇಳೆಯಲ್ಲಿ ಶಿವಶರಣನು ಶಿವನಿಗೆ ಅಭಿನ್ನನಾಗಿ ರಂಜಿಸುವ ಸದ್ಭಾವದಿಂದ ವಿಜೃಂಭಿತನಾಗಿ, ಶಿವಮಂತ್ರ ಜಪಧ್ಯಾನಾದಿಗಳಿಂದ ತಾನು ಶಿವಲಿಂಗದೊಳಿದ್ದು, ಮತ್ತಾ ಪವಿತ್ರವಾದ ಲಿಂಗವನ್ನು ಅಂಗದಲ್ಲಿ ಒಳಗೂ ಹೊರಗೂ ಧಾರಣೆಯನ್ನು ಮಾಡಿ ಶಿವಲಿಂಗ ಸಂಪರ್ಕದಿಂದ ಸಂಪ್ರೀತನಾಗುತ್ತಾ, ಲಿಂಗಕ್ಕರ್ಪಿಸಿದ ಭಕ್ಷ್ಯ ಭೋಜ್ಯ ಪದಾರ್ಥಗಳನ್ನು ಪರಮಾಮೃತ ಪ್ರಸಾದವೆಂಬ ಭಾವನೆಯಿಂದ ಸೇವಿಸುತ್ತಾ, ಯಾವ ಶರಣನು ನಿಜೇಷ್ಟ ಲಿಂಗ ಸಂಗಿಯಾಗಿ ವಿರಾಜಿಸಿ, ಅನಿರ್ವಚನೀಯವಾದ ಸುಖ ಶಾಂತಿ ತೃಪ್ತಿಗಳಿಂದ ಶಿವಾನಂದದಲ್ಲಿ ವಿಹರಿಸುವನೋ ಅಂತಪ್ಪ ಶರಣನು

ನಿಜಕ್ಕೂ " ಶರಣಮೇವಲಿಂಗಂ । ಲಿಂಗಮೇವ ಶರಣಃ " ಎಂಬ ಘನ ತರವಾದ ಅನ್ಯೋನ್ಯಭಾವದಿಂದ ಅಭೇದ ಸ್ಥಿತಿಯನ್ನು ಹೊಂದಿ ಆನಂದಿಸು ತ್ತಿಗುವನೆಂದು ಮಹದೈಪುರೀಶ್ವರನಲ್ಲಿ ಮೊರೆ ಹೊಕ್ಕಿರುವರು.

॥ ಲಿಂಗದೇಹೀ ಶಿವಾತ್ಮಾಯಂ । ಲಿಂಗಾಚಾರೋನಲೌಕಿಕಃ ।
ಸರ್ವಂ ಲಿಂಗಮಯಂ ರೂಪಂ । ಲಿಂಗೇನ ಸಮುಮಶ್ನುತೇ ॥
ಸರ್ವಾಂಗಲಿಂಗಮೇವಸ್ಯಾತ್ । ಅನ್ನಪಾನಾದ್ಯಮರ್ಪಿತಂ ।
ಪ್ರಸಾದ ಸ್ತೃಪ್ತಿ ರೇವಸ್ಯಾತ್ । ಸರ್ವಂ ಲಿಂಗಮಯತ್ವತಃ ॥

॥ ಬ್ರಹ್ಮಾರ್ಪಣಂ ಬ್ರಹ್ಮ । ಬ್ರಹ್ಮಾಗ್ನೌಬ್ರಹ್ಮಣಾಹುತಂ ।
ಬ್ರಹ್ಮೈವ ತೇನ ಗಂತವ್ಯಂ । ಬ್ರಹ್ಮಕರ್ಮಸಮಾಧಿನಾ ॥ ॥ ಗೀತೆ ॥

ಎಂಬುದಾಗಿ ಪ್ರತಿಪಾದಿಸಿರುವಂತೆ, – ಮೇಲುದಹರಿಸಿದ ಬ್ರಾಹ್ಮೀಸ್ಥಿತಿಯು ಶರಣನ ಅಂತರ್ಮುಖೀಯ ಸಾಹಿತ್ಯಾನುಭವಕ್ಕೆ ಅನ್ವಯಿಸಿದವುಗಳಾಗಿರುವುವು. ಶಿವನ ಸಾಕ್ಷಾತ್ಕಾರವನ್ನು ಶಿವಶರಣನು ಶಿವಲಿಂಗದಲ್ಲಿ ಭಕ್ತಿಯುತವಾದ ದಿವ್ಯ ಜ್ಞಾನ ದೃಷ್ಟಿಯಿಂದ ಅರಿಯುತ್ತ –

॥ ಲಿಂಗಮಧ್ಯೇ ಮಹಾದೇವಃ । ಸಾಕ್ಷಾನ್ನಿತ್ಯಂ ವ್ಯವಸ್ಥಿತಃ ॥
ಅನುಗ್ರಹಾಯ ಲೋಕಾನಾಂ । ತಸ್ಮಾಲ್ಲಿಂಗಂ ಪ್ರಪೂಜಯೇತ್ ॥

ಲೋಕಾನುಗ್ರಹಾರ್ಥ ಸರ್ವಲೋಕ ಶರಣ್ಯನಾದ ತ್ರ್ಯಂಬಕನು ಸಾಕ್ಷಾತ್ತಾಗಿ ಶಿವಲಿಂಗದ ಮಧ್ಯೆ ಸುಪ್ರತಿಷ್ಠಿತನೂ ಸು ಪ್ರಸನ್ನನೂ ಆಗಿ ರಂಜಿಸುತ್ತ, ಅಖಿಲ ವರ ಪ್ರಶಸ್ತ ಅಭಯ ಪ್ರದಾನ ಹಸ್ತಾನ್ವಿತನಾಗಿರುವುದರಿಂದ, ನಾವು ಸದಾ ಸರ್ವಕಾಲಗಳಲ್ಲೂ ಸಾವಧಾನ ಚಿತ್ತದಿಂದ ॥ ಲಿಂಗಂ ಪ್ರಪೂಜಯೇತ್ ॥ ಭಾವ ಶುದ್ಧಿಯಿಂದ ಇಷ್ಟಲಿಂಗಾರಾಧನೆಯಲ್ಲಿ ನಿರತ

## " ಪ್ರಸ್ತಾವನೆ "

ರಾಗಿ ಶಿವ ವ್ರತ ಶಿವದೀಕ್ಷಾಬದ್ಧರಾಗಿರಬೇಕು. ಈ ಮಹಾ ವ್ರತದಿಂದ ಸಾಮವೇದಾಂತರ್ಗತವಾದ ತಿರುಳು ಅಂದರೆ " ತತ್ವಮಸಿ " ಮಹಾವಾಕ್ಯಾರ್ಥವು ನಮ್ಮ ಪರಿಶುದ್ಧಾಂತ ರಂಗದಲ್ಲಿ ಸ್ಫೂರ್ತಿಯಿಂದ ಪ್ರಕಾಶಿತವಾಗಿ :

॥ ಅಂಗಂ ತ್ವಂ ಪದಮಾತ್ಮ ರೂಪಮಮಲಂ ।
ಲಿಂಗಂ ಶಿವಂ ತತ್ಪದಂ ಸಂಗಂ ಸತ್ಯಮಸಿ ।
ಪ್ರಸಿದ್ಧ ಪದಮೆಂಬೀತತ್ವ ಮಸ್ಯರ್ಥದಿಂ ॥
ಲಿಂಗಾಂಗೈಕ್ಯ ವಿಶಿಷ್ಟ ಜೀವ ಪರಮೈ ।
ಕ್ಯಾಭಿನ್ನ ಭಾವ ಪ್ರಸಾದಾಂಗೀಕಾರ ಮದಕ್ಕೆ ।
ನಿನ್ನ ಕೃಪೆಯಿಂದೆನ್ನೋಳ್ಪಿವಾವಲ್ಲಭಾ ॥

ಜೀವಬ್ರಹ್ಮೈಕ್ಯ ಅಥವಾ ಅಂಗಲಿಂಗ (ಲಿಂಗಾಂಗ) ಸಾಮರಸ್ಯ ಎಂಬೀ ನಾದ ಬ್ರಹ್ಮಗಳು, ನಾದಬಿಂದು ಕಲಾತೀತವೂ ವೇದಮಂತ್ರ ಸ್ವರೂಪವೂ ಆಗಿ ವಿರಾಜಿಸುವ ಮುಕ್ತಿ ಸ್ವರೂಪವನ್ನು ನಿರ್ದೇಶಿಸುವಂಥಾ ಮುಕ್ಕಣ್ಣನ ದಿವ್ಯ ಕೃಪಾನುಗ್ರಹಕ್ಕೆ ನಮ್ಮನ್ನು ಮುದದಿಂದ ಮುಂದೋಯಿದು ಮುಕ್ತರನ್ನಾಗಿಸುವಂಥಾ ಪ್ರಭಾವಾನ್ವಿತವಾಗಿರುವುವು. ಜೀವ ನದಿಯಾದ ಭಾಗೀರಥಿಯು ಮುಂದೆ ಮುಂದೆ ಹರಿದು ಉದ್ದಕ್ಕೂ ಪಾವನಗೈಯುತ್ತಾ ಮಹಾ ಸಾಗರದಂಚನ್ನು ಮುಟ್ಟುತ್ತಲೇ – ಸಮುದ್ರವ ಮುಟ್ಟಿದ ನದಿ ಸಮುದ್ರವೇ ಆಗುವಂತೆ – ಅಂಗನೆನಿಸಿದ ಜೀವಾತ್ಮನು ಶಿವ ಚೈತನ್ಯಾಂಶನೇ ಆಗಿರುವುದರಿಂದ, ಷಟ್ಸ್ಥಲಾತ್ಮಕ ಇಷ್ಟಲಿಂಗಾರ್ಚನೋಪಾಸನೆ ಧ್ಯಾನಾದಿಗಳಿಂದ ಮುಂದೆ ಮುಂದೆ ಬ್ರಾಹ್ಮೀ ಸ್ಥಿತಿಯಲ್ಲಿ ಸಾಗುತ್ತ, ಪರಿಪೂರ್ಣ ಹಂತದಲ್ಲಿ ಮಹಾಲಿಂಗ (ಆತ್ಮಲಿಂಗ) ವೆಂಬ ಅಖಂಡಾಕಾರ ಪರಂಜ್ಯೋತಿಯಲ್ಲಿ ವಿಲೀನನಾಗಿ, ಶಿಖಿಯನ್ನು ಸ್ಪರ್ಶಿಸಿದ ಕರ್ಪೂರ ಶಿಖಿಯೇ ಆಗುವಂತೆ ಅಂಗನು (ಜೀವಾತ್ಮನು) ಪರಂಜ್ಯೋತಿಯಲ್ಲಿ ಜ್ಯೋತಿಯಾಗಿ ಬೆಳಗುವನು.

॥ ಮಮೈವಾಂಶೋ ಜೀವಲೋಕೇ । ಜೀವ ಭೂತಃ ಸನಾತನಃ ॥ ಎಂಬ ಭಗವದ್ವಾಣಿಯಿಂದ ಮತ್ತೂ ॥ ಜೀವೋ ಬ್ರಹ್ಮೈವನಾಪರಃ ॥ ಎಂಬ ಭಗವತ್ಪಾದ ಜಗದ್ಗುರು ಶ್ರೀ ಶಂಕರಾಚಾರ್ಯರ ನುಡಿಯಂತೆ ಸ್ಪಷ್ಟಪಡುವು ದೇನೆಂದರೆ ಶಿವನ ಅಂಶವೇ ಜೀವನೆಂದೂ, ಮುಕ್ತ ಜೀವರುಗಳು " ಸಿಂಧೋ ಸ್ಸರಿದ್ವಲ್ಲಭಂ " ಎಂಬಂತೆ ಎಲ್ಲಾ ನದಿಗಳೂ ತಮ್ಮ ಪ್ರಭುವಾದ ರತ್ನಾಕರನ ಅಂದರೆ – ಸಮುದ್ರಾಭಿಮುಖವಾಗಿ ಭರದಿಂ ಓಡಿ ಕಡಲಿನಲ್ಲಿ ಸಂಗಮವಾಗಿ ಉಪರತಿ ಹೊಂದುವಂತೆ, ಸಂಸಾರ ಬಂಧನಗಳಿಂದ ಬಿಡುಗಡೆ ಹೊಂದಿರುವ ಮುಕ್ತ ಜೀವಾತ್ಮರುಗಳು, ಅವಿಚ್ಛಿನ್ನವಾದ ದೈವೀ ಸಂಪದ್ಯೋಗ ವಿಶೇಷದಿಂದ ಪರಮ ಪ್ರಭುವೆನಿಸಿದ, ಶುದ್ಧಬ್ರಹ್ಮ ಪರಾತ್ಪರ ವಸ್ತುವೆನಿಸಿದ ಪರಶಿವಾಭಿ ಮುಖವಾಗಿ ಸಾಗಿ, ಸ್ವಯಂ ಜ್ಯೋತಿಯಾದ ಪರಬ್ರಹ್ಮದಲ್ಲಿ ಸಮರಸವಾಗಿ ಲಿಂಗಾಂಗ ಸಾಮರಸ್ಯವೆಂಬ ಶಿವಾದ್ವೈತಾನಂದದಲ್ಲಿ ಆತ್ಮಾರಾಮರಾಗುವರು.

" ಅಂಗ " ಶಬ್ದವು ಶಿವಾಭಿನ್ನವಾಗಿರುವುದು. ಅಂ+ಗ=ಅಂಗ ಎನಿಸಿದೆ. ಜೀವಾತ್ಮನನ್ನು ಸೂಚಿಸುವ " ಗ " ಕಾರವು ಗಮನಾಗಮನ ಗಳಿಂದ ಕೂಡಿ ತ್ರಿಗುಣಮಯವೂ ಅಲ್ಪಜ್ಞತಾ ಚಿನ್ಹೆಗಳಿಂದ ಕೂಡಿ ಭವ ಬಂಧನದಲ್ಲಿ ಮುಳುಗಿರುವ ಭಾವವನ್ನು ತೋರಿಸುವಂತಿದೆ. " ಅಂ " ಶಬ್ಧವು ಪರಶಿವ ಸ್ವರೂಪದರ್ಶಕವಾಗಿ ಶೋಭಿತವಾಗಿದೆ. ಗೀತೆಯಲ್ಲಿ ಶ್ರೀಕೃಷ್ಣನು ॥ ಅಕ್ಷರಾಣಾಂ ಅಕಾರೋಸ್ಮಿ ॥ ಅಕ್ಷರಗಳೊಳಗೆ " ಅ " ಕಾರವು ನಾನಾಗಿರುವೆನೆಂದು ಹೇಳಿರುವನು. ॥ ಅಕಾರಃ ಸರ್ವಶಾಸ್ತ್ರಾನಾಂ, ರತ್ನಾನಾಮಿವಸಾಗರಂ ॥ ಅಂದರೆ ಹೇಗೆ ರತ್ನವು ಸಮುದ್ರದಲ್ಲಿ ಸಿಗುವ ಪದಾರ್ಥಗಳೊಳಗೆ ಅಮೂಲ್ಯವೋ ಹಾಗೆ ಅಕ್ಷರಗಳೊಳಗೆ ಅಕಾರವು ಪ್ರಥಮವೂ ಪೂಜ್ಯವೂ ಆಗಿರುವುದೆಂದರ್ಥ. ಶಿವಾಗಮೋಪನಿಷದಾದಿಗಳಲ್ಲಿ " ಅಕ್ಷರಂ ಬ್ರಹ್ಮ ಪರಮಂ " ಸಾಕ್ಷಾತ್ಪರ ಶಿವನು ಅಕ್ಷರನೆಂದೆನಿ ಸಿರುವನು ಎಂದು ಸ್ಪಷ್ಟವೇ ಇರುತ್ತೆ. ಓಂಕಾರ ಪ್ರಣವದಲ್ಲೂ ಸ್ವರಾಕ್ಷರವೆನಿಸಿದ ' ಅ ' ಕಾರಕ್ಕೆ ಪ್ರಥಮ ಸ್ಥಾನವೇ ಇರುವುದು. " ಅಂ " ಎಂಬೆಡೆಯ " ಂ " ಪೂಜ್ಯವು ಪರಬ್ರಹ್ಮದ ಪರಿಪೂರ್ಣತೆಯನ್ನು

ಸೂಚಿಸುವ ಪೂರ್ಣ ಚಿನ್ಹೆಯಾಗಿರುತ್ತೆ. ಇದರಿಂದಾಗಿ ' ಅಂ ' ಎಂದರೆ ಪರಬ್ರಹ್ಮವೆಂಬುದು ದೃಢವಾಯಿತು. ' ಗ ' ಕಾರದಿಂದ ನಿರ್ದೇಶಿತನಾದ ಬದ್ಧ ಜೀವನು ತಾನು ಮುಕ್ತನಾಗಲು, " ಅಂ-ಗಚ್ಛಯತೀತಿ ಅಂಗಃ " ಎಂಬ ಪ್ರಯೋಗದಿಂದ ಪರಶಿವನಲ್ಲಿ ಸಮರಸ ಹೊಂದಲು ' ಅಂ ' ವೊಂದಿಗೆ ಕೂಡಿ ' ಅಂಗ ' ಎನಿಸಿರುವನು. ಅಂಗತತ್ವವು ಲಿಂಗತತ್ವಕ್ಕೆ ಅಭಿನ್ನವೇ ಇರುವುದು. ಪೂಜ್ಯ ಪೂಜಕ ಭಾವಲೀಲಾ ವಿನೋದಾರ್ಥ ಲಿಂಗಾಂಗಗಳು ಸ್ವೇಚ್ಛೆಯಿಂದ ಪ್ರಾದುರ್ಭಾವಗೊಂಡು ॥ ಏಕತ್ವಮನುಪಶ್ಯತಃ ॥ ಅವಿನಾ ಭಾವ ಸಂಬಂಧದಿಂದ ಒಂದೆನಿಸಿರುವುವು.

ಸಾಮವೇದಾಂತರ್ಗತವಾದ ಮಂತ್ರ ' ತತ್ವಮಸಿ ' ಮಹಾ ವಾಕ್ಯವು ತತ್ + ತ್ವಂ + ಅಸಿ ಎಂಬೀ ಮೂರು ರೂಪದಲ್ಲಿ ಪ್ರತಿಪಲಿಸಿ ಅಂತರ್ಗತ ವಾಗಿರುವುದು. ' ತತ್ ' ಶಬ್ಧವು ಲಿಂಗರೂಪಿ ಪರಶಿವನನ್ನೂ ' ತ್ವಂ 'ಪದವು ಜೀವಾತ್ಮನನ್ನೂ ಸೂಚಿಸಿ, " ಅಸಿ " ಶಬ್ಧವು ಶಿವಜೀವರ ಸಾಮರಸ್ಯ ರಹಸ್ಯ ವನ್ನು ಹೊರಸೂಸುವಂತೆ ಪ್ರಕಾಶಿತವಾಗಿರುವುದು. ಲಿಂಗಾಂಗಗಳ ಅವಿನಾ ಭಾವ ಸ್ವರೂಪ ಸಂಬಂಧಗಳ ಜ್ಞಾನವು ಈ ಕೆಳಗಿನ ಶ್ರೀ ಸ್ವಪ್ರಭಾನಂದ ಶಿವಾಚಾರ್ಯ ವಿರಚಿತ ಶಿವಾದ್ವೈತ ಮಂಜರಿಯ ಪ್ರತಿಪಾದನೆಯಿಂದ ಸ್ಪಷ್ಟವೇ ಇರುವುದು :-

॥ ತತ್ರಾಧಿಕ ಭಾವಾಪನ್ನ ಸ್ವಪ್ರಕಾಶತಾಯಾಂ ।
ಪ್ರತಿಸ್ಫುರಣಗತ್ಯಾ ಪ್ರವಿಷ್ಟ ಮೂಲ ಪ್ರಣವ । ರೂಪ
ಶಿವಚೈತನ್ಯಮೇವ ಲಿಂಗತತ್ವಂ ಭವತಿ ॥

ಏನೆಂದರೆ, ಅತ್ಯಂತ ಸಮರಸವಾಗಿ ಅಧಿಕ ಭಾವವನ್ನು ಹೊಂದಿರುವ ಸ್ವತಂತ್ರ ಸ್ವಪ್ರಕಾಶತ್ವಾಂಶದಲ್ಲಿ ಪ್ರತಿಫಲನ ಕ್ರಮದಿಂದ ಪ್ರವೇಶಿಸಿ, ಸ್ಫುರಿಸುತ್ತಿರುವ ಮೂಲ ಪ್ರಣವಾತ್ಮಕವಾದ ಶಿವಚೈತನ್ಯವೇ ಲಿಂಗತತ್ವವೆಂದೆನಿಸಿರುವುದು.

॥ ನ್ಯೂನೀಭೂತ ಸ್ವಪ್ರಕಾಶತಾಯಾಂ । ತಥೈವ ಪ್ರವಿಷ್ಟ
ಶಿವ ಚೈತನ್ಯ ಮೇವ । ಅಂಗತತ್ವಂ ಭವತಿ ॥

ಸ್ಫುರಣಮಯನಾದ ಪರಮಾತ್ಮನಿಂದ " ತದೈಕ್ಷತ ಬಹು ಸ್ಯಾಂ ಪ್ರಜಾಯೇಯ " ಎಂಬ ಇಚ್ಛಾಶಕ್ತಿ ವಿಶೇಷ ಲಹರಿಯೂ ಸಹ ಸ್ಫುರಣಮಯವೇ ಆಗಿರುವುದರಿಂದ, ಯತ್ಕಿಂಚಿತ್ ನ್ಯೂನ ಭಾವವನ್ನು ಹೊಂದಿರುವ ಸ್ವಪ್ರಕಾಶತ್ವಾಂಶದಲ್ಲಿ ಅದೇ ರೀತಿಯಾಗಿ ಪ್ರತಿಫಲಿಸಿ ಸ್ಫುರಿಸುತ್ತಿರುವ ಮತ್ತದೇ ಶಿವ ಚೈತನ್ಯವು ಅಂಗತತ್ವವೆಂದೆನಿಸಿ, ಜೀವೇಶ್ವರರ ಅರ್ಥಾತ್ ಲಿಂಗಾಂಗಗಳ ಸಾಮರಸ್ಯವು, " ತತ್ವಮಸಿ " ಮಹಾ ವಾಕ್ಯದಲ್ಲಿ ಗೂಢವಾಗಿ ಎಣೆಯಲ್ಪಟ್ಟು ಏಕವೂ ಅದ್ವಿತೀಯವೂ ಆಗಿ ಸ್ವಯಂ ರಂಜಿಸುತ್ತಲಿರುವುದರಿಂದ, ಶಿವಾಗಮಾಮ್ನಾಯಾದಿಗಳು ಪರಶಿವನನ್ನು

॥ ವೇದಾಃ ಸ್ತುವಂತಿ ಸ್ಮೃತಯಃ ಪ್ರತಿಪಾದಯಂತಿ ।
ತ್ವಾಮಕ್ಷರಂ ಶಿವಮನಂತಮನೇಕ ರೂಪಂ ॥
ಶಕ್ತ್ಯಾ ವಿಶಿಷ್ಟಮು ಭಯಾತ್ಮಕಮೇಕಮಾದ್ಯಂ ।
ಶ್ರೀ ಮಲ್ಲಿಕಾರ್ಜುನ ವಿಭೋ । ತವಸುಪ್ರಭಾತಂ ॥

ಸ್ತುತಿಸಿರುವಂತೆ, ಶ್ರೀಶೈಲಗಿರಿರಾಜ ಸೂರ್ಯಸಿಂಹಾಸನಾಧೀಶ್ವರ ಶ್ರೀ ಶ್ರೀ ಜಗದ್ಗುರು ಶ್ರೀ ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು ಶ್ರೀ ಮಲ್ಲಿಕಾರ್ಜುನ ಸುಪ್ರಭಾತ ಸ್ತೋತ್ರ ಮಾಲಿಕೆಯಲ್ಲಿ ಅಪ್ಪಣೆ ಕೊಡಿಸಿರುವರು. ಮೇಲ್ಕಂಡಂಶಗಳಿಂದ ಕಂಡುಬರುವುದೇನೆಂದರೆ " ತತ್ " = ಅದೇ ಅಂದರೆ – ಪರಶಿವ ರೂಪಿ ಪರಬ್ರಹ್ಮವೆ, " ತ್ವಂ " = ನೀನು, " ಅಸಿ " = ಆಗಿರುವೆ. ಅಂದರೆ – ತತ್ = ಶಬ್ಧವು ಲಿಂಗರೂಪಿ ಪರಶಿವನನ್ನೂ, ತ್ವಂ = ಪದವು ಜೀವಾತ್ಮನನ್ನೂ ಬೋಧಿಸಿ, ಅಸಿ = ಪದವು ಶಿವ ಜೀವರ ಅಥವಾ ಲಿಂಗಾಂಗಗಳ ನಡುವಣ ಸಾಮರಸ್ಯವನ್ನು ಸ್ಫೂರ್ತಿಗೊಳಿಸುವ ಮಹಾ

ವಾಕ್ಯಾರ್ಥವು "ತತ್ವಮಸಿ" ಮಹಾಮಂತ್ರದಿಂದ ಭಾಸವಾಗುತ್ತಲಿದೆ.

॥ ಲಿಂಗಾಂಗೈಕ್ಯ ವಿಶಿಷ್ಟಜೀವ ।
ಪರಮೈಕ್ಯಾ ಭಿನ್ನಭಾವ ಪ್ರಸಾದಾಂ ॥
ಗೀಕಾರ ಮದಕ್ಕೆ ನಿನ್ನ ಕೃಪೆಯಿಂ ।
ದೆನ್ನೋೞ್ ಶಿವಾವಲ್ಲಭಾ ॥

ಲಿಂಗಾಂಗ ಸಾಮರಸ್ಯಾನುಭೂತಿ, ಶಿವಾಭಿನ್ನತಾಭಾವ, ಶಿವಾನುಭವವು ನಮ್ಮನ್ನು ಶಿವನೊಲುಮೆಗೆ ಪಾತ್ರರನ್ನಾಗಿ ಮಾಡುವುವು. It is by constent and continued devout rememberence of God, coupled with sublimity of notions and spontanity of pure and precious love (ನಾಮಸಂಕೀರ್ತನೆ ಮತ್ತು ಸ್ವಸ್ವರೂಪ ಧ್ಯಾನ) that one is enabled to realise within himself, the Athman, i.e., Bliss Divine, and enjoy the infinite Grace of God abundently. ಪ್ರೇಮರಸ ಮಾಧುರ್ಯದಿಂದ ಕೂಡಿರುವ ಪರಮಾತ್ಮನ ದಿವ್ಯ ಪ್ರಸಾದಾಂಗೀಕಾರ ಮತ್ತೂ ಸಿಜೇಷ್ಟಲಿಂಗದ ದಿವ್ಯ ಕೃಪಾನುಗ್ರಹ ಬಲದಿಂದ ಸಾಯುಜ್ಯ ಮುಕ್ತಿಯು ಸಾಧ್ಯವೇ ಹೊರತು, ಅನ್ಯಥಾ ಸಾಧ್ಯವಿಲ್ಲ. ಗುರುವಿನನುಗ್ರಹದಿಂದ ಶಿವಾನುಗ್ರಹವು ಕರಗತವಾಗುವುದರಿಂದ, ಶಿವಲಿಂಗೋದ್ಭವ ದಿವ್ಯಮೂರ್ತಿಗಳೂ ಭುವನಾಚಾರ್ಯವರೇಣ್ಯರೆಂದೆನಿಸಿದ ಶ್ರೀಮಜ್ಜಗದ್ಗುರು ಸಾರ್ವಭೌಮ ಶ್ರೀ ರೇಣುಕಾದಿ ಪಂಚಾಚಾರ್ಯರುಗಳನ್ನೂ, ವೈರಾಗ್ಯ ಚಕ್ರವರ್ತಿ ಎಂದೆನಿಸಿ ಪ್ರಸಿದ್ಧರಾದ ಶ್ರೀ ಅಲ್ಲಮಪ್ರಭು ದೇವರನ್ನೂ, ಭಕ್ತಿ ಭಂಡಾರಿ ಶ್ರೀ ಬಸವಣ್ಣನವರನ್ನೂ, ಶ್ರೀ ಷಣ್ಮುಖಾಂಶನೆಂದು ವಿಖ್ಯಾತನಾದ ಜ್ಞಾನಕ್ಕೊಡೆಯ ಶ್ರೀ ಶ್ರೀ ಚೆನ್ನಬಸವಣ್ಣನನ್ನೂ ಮತ್ತೂ ಅನಂತ ಪ್ರಮುಖ ಪ್ರಮಥಗಣಾಧೀಶ್ವರರುಗಳನ್ನೂ ಶಿವಾ ಭಿನ್ನತಾ ಭಾವದಿಂದ ಧ್ಯಾನಿಸಿ ಅವರ ದಿವ್ಯಾನುಗ್ರಹ ಪ್ರಸಾದ

ದಿಂದ ಹಾಗೂ ನಮ್ಮಿಂದ, ಅನುಷ್ಠಿತವಾದ ಶಿವಜ್ಞಾನ ಯಜ್ಞದ ಪ್ರಭಾವದಿಂದ, ನಮ್ಮಲ್ಲಿರುವ ನಿಕೃಷ್ಟವಾದ ತನುಕರಣಗಳನ್ನೂ ಜೀವ ಭಾವವನ್ನೂ ತೊಲಗಿಸಿ, ತನುಕರಣಗಳನ್ನು ಶಿವಾನುಗ್ರಹ ಬಲದಿಂದ ಶಿವಕರಣಗಳಾಗಿಸಿ, ಪರಮೋತ್ಕೃಷ್ಟವಾದ ದೈವೀ ಸಂಪದ್ವಿಭೂತಿಯೋಗದಿಂದ ಶಿವನಲ್ಲಿ ವಿಲೀನರಾಗಿ, ತಾದಾತ್ಮ್ಯಸುಖ (ಮೋಕ್ಷ)ವನ್ನು ಹೊಂದುವುದೇ ಪರಮಾರ್ಥವೆನಿಸುವುದು. ನಮ್ಮಲ್ಲಿ ಶಿವನ ಕೃಪಾ ಉಂಟಾಗುವ ನಿಮಿತ್ತ ಶಿವಾಭಿನ್ನಭಾವದಿಂದ ಶಿವಶರಣರನ್ನು ಶಿವನಂತೆಯೇ ಭಾವಿಸಿ – ಅನನ್ಯ ಭಕ್ತಿ ಭಾವದಿಂದ ಸ್ತುತಿಸುವುದು ನಮ್ಮ ಆದ್ಯ ಕರ್ತವ್ಯವೇ ಆಗಿರುತ್ತೆ. ॥ ಮದ್ಭಕ್ತಾಃ ಮಮಾಧಿಕಂ ॥ ಮತ್ತೂ ॥ ಮುಕ್ತಃ ಶಿವಸಮೋ ಭವೇತ್ ॥ ಎಂಬ ಭಗವದ್ವಾಣಿ ಇದಕ್ಕೆ ಪ್ರಮಾಣವೆನಿಸಿರುತ್ತೆ. ಅನನ್ಯ ಭಕ್ತಿ ಭಾವದಿಂದ ಸ್ತುತಿಸುವುದು ನಮ್ಮ ಆದ್ಯ ಕರ್ತವ್ಯವೇ ಆಗಿರುತ್ತೆ.

॥ ಜಯ ಬಸವೇಶ ಭಕ್ತಜನ ಭಾಗ್ಯ ।
ಶುಭೋದಯ ವೀರಶೈವ ನಿರ್ಣಯ ।
ಪರಮಾವತಾರ ಶರಣಾಗತ ರಕ್ಷಕ ।
ಚಿದ್ಘನ ಪ್ರಭಾ ॥ ಮಯ ಜಗದಾದಿದೇಶಿಕ ।
ಪುರಾತನ ಪುಂಗವ ಶಾಂಭವ್ಯೈ ಪುರಾ ।
ಶ್ರಯ ಜಯ ಸೋಮನಾಥ ಜಯ ।
ದೇವ ಜಯಾ ವಿರತಂ ಶಿವಾಧವಾ ॥

ಶ್ರೀ ಮಗ್ಗೆಮಾಯಿ ದೇವರು ತಮ್ಮ ಶತಕತ್ರಯುದಲ್ಲಿ ಶ್ರೀ ಬಸವಾದಿ ಪ್ರಮಥರುಗಳನ್ನು ಭಕ್ತಿ ಭಾವದಿಂದ ಹಾಗೂ ಶಿವಾಭಿನ್ನ ಗಂಭೀರವಾದ ಮುಕ್ತ ಮನೋಭಾವದಿಂದ ಅಖಂಡವಾಗಿ ಸ್ತುತಿಸುತ್ತಾ ನಮಗೆ ಮಾರ್ಗದರ್ಶಕ ಕೈದೀವಿಗೆಯಂತೆ ಮುಂದುವರಿದು,

|| ಬಸವ ಪುರಾತನರಾಚರಿಸಿ ತೋರಿದ ।
ಷಟ್ಸ್ಥಲ ಮಾರ್ಗದೊಳ್ಪ್ರವರ್ತಿಸುತ ।
ಮನೂನ ಭಕ್ತಿರತಿಯಿಂತನು, ವಿತ್ತ ।
ಮನಂಗಳಂ ಸಮರ್ಪಿಸಿ ಗುರುಲಿಂಗ ।
ಜಂಗಮಕೆ ವಂಚನೆಯಿಲ್ಲದೆ ಮಾಡಿ ।
ಕೂಡಿ ರಾಜಿಸುವ ಮಹಾತ್ಮರಂನೆನೆ ।
ವುದೇ ಘನ ಮುಕ್ತಿ ಪದಂ ಶಿವಾಧವಾ ||

ಶ್ರೀ ಅಲ್ಲಮುಪ್ರಭು ದೇವರು, ಶ್ರೀ ಬಸವಣ್ಣನವರು ಹಾಗೂ ಶ್ರೀ ಚೆನ್ನ ಬಸವಣ್ಣ ಮೊದಲಾದ ಅನೇಕ ಶಿವಶರಣ ಶರಣೆಯರು ಆಚರಿಸಿ ತೋರಿದ ಪರಮ ವೀರಶೈವಾಚಾರವೆನಿಸಿದ ಷಟ್ಸ್ಥಲ ಮಾರ್ಗದಲ್ಲಿ ನಡೆದು, ವೀರ ಮಾಹೇಶ್ವರಾದಿ ಗುರುಲಿಂಗ ಜಂಗಮರಿಗೆ ತಮ್ಮ ತನು, ಮನ, ಧನಗಳನ್ನು ಅನನ್ಯಭಾವೇನ ನಿಷ್ಕಾಮದಿಂದ ಅರ್ಪಿಸಿ ನಿರಾಮಯರಾದ ಮಹಾ ಶಿವಶರಣೆ ಶರಣರನ್ನು ಸದಾ ಸ್ಮರಿಸುವುದೇ ಮಹೋನ್ನತವಾದ ಮುಕ್ತಿಪದವೆಂದು ಸ್ಪಷ್ಟ ಪಡಿಸಿರುವರು. || ಮದ್ಭಕ್ತಾಃ ಮಮಾಧಿಕಂ || ಎಂಬ ಭಗವಂತನ ವಾಣಿ ಮೇಲಿನ ಅಭಿಪ್ರಾಯವನ್ನು ಹೊರಸೂಸುವಂತಿರುವುದು. ತನ್ನ ಸರ್ವಸ್ವ ವನ್ನೂ ಶಿವಾರ್ಪಿತವಾಗಿ ಅರ್ಪಿಸಿ ಸರ್ವ ಸಂಗ ಪರಿತ್ಯಾಗಮಾಡಿದ ಶರಣನು ಶಿವಾರಾಧನೆಯಲ್ಲಿ ಮಗ್ನನಾಗಿ – ಊರ್ಧ್ವಗಾಮಿಯಾಗುತ್ತಾ, ಶಿವಭಾವ ಗರ್ಭಿತನಾಗಿ ರಂಜಿಸುತ್ತಲಿರ್ಪನು.

ಸಿದ್ಧಾಂತ ಶಿಖಾಮಣಿಯ ಒಂಭತ್ತನೇ ಪರಿಚ್ಛೇದದಲ್ಲಿ ಭಗವತ್ಪಾದ ಜಗದ್ಗುರು ಶ್ರೀ ರೇಣುಕಾಚಾರ್ಯರು ಕಲಸೋದ್ಭವ ಮುನಿ ಅಗಸ್ತ್ಯ ಮಹರ್ಷಿಗೆ ಶಿವ ಭಕ್ತಿಯ ಸ್ವರೂಪವನ್ನು ಬೋಧಿಸುತ್ತಾ ಭಕ್ತಿಯ ದ್ವಿಮುಖ ದಂತೆಸೆವ ಪರಾಭಕ್ತಿ ಅಪರಾಭಕ್ತಿಗಳನ್ನು ಹೃದಯಂಗಮವಾಗಿ ವಿವರಿಸಿರು ವುದು ಸರಿಯಷ್ಟೆ. ಅದರಂತೆ ಭಕ್ತಿ ಭರಿತ ಭಾವ ಪೂರ್ಣ ಶಿವಾನುಸಂಧಾನದ

ರಸಾಸ್ವಾದನೆಯನ್ನು ಮಗ್ಗೆ ಮಾಯೀ ದೇವಾಚಾರ್ಯರೂ ಸಹ ವಿವರಿಸುತ್ತ, ಪರಾತ್ಪರ ವಸ್ತುವಾದ ಜ್ಯೋತಿರ್ಲಿಂಗದ ಅವಿಚ್ಛಿನ್ನವಾದ ಸ್ಮರಣೆಗಿಂತಲೂ ಶಿವಲಿಂಗ ದರ್ಶನವು ಅಧಿಕವಾದುದು. ಸ್ಮರಣೆ ದರ್ಶನಾದಿಗಳಿಗಿಂತಲೂ ಅರ್ಚನೆ ಶಿವಪೂಜಾದಿಗಳನ್ನೆಸಗುವುದು ಶ್ರೇಷ್ಠವಾದುದೆಂತಲೂ; ಶಿವ ಸ್ಮರಣೆ ದರ್ಶನ ಪೂಜಾದಿಗಳಿಗಿಂತಲೂ, ಮಂಗಳಾತ್ಮಕವಾದ ಶಿವಲಿಂಗವನ್ನು ದೇಹ ದಲ್ಲಿ ಸುಮ್ಮನೆ ಧರಿಸಿ ಶ್ರೀ ಗುರುದತ್ತವಾದ ಮತ್ತೂ ನಮ್ಮೊಳಗಿನ ಆತ್ಮಕಲೆಯ ಚಿತ್ಕಳಾಂಶವಾದ ಇಷ್ಟಲಿಂಗದ ನಿತ್ಯ ಸಂಪರ್ಕವನ್ನು ಅಗಲದೆ ಹೊಂದಿರುವುದು ಎಲ್ಲದಕ್ಕಿಂತಲೂ ಹೆಚ್ಚಿನದು ಮತ್ತೂ ಬಹು ದೊಡ್ಡದೆಂದು ಶಿವಾನುಭೂತಿಯ ಸಾರವನ್ನು ತಿಳಿಸಿರುವರು.

॥ ನುಡಿವೆಡೆಯಲ್ಲಿ ನೋಡುವೆಡೆ । ಯಲ್ಲಿ ರಮಿಪ್ಪೆಡೆಯಲ್ಲಿ ವಸ್ತುವಂ ।
ಪಿಡಿವೆಡೆಯಲ್ಲಿ ಭೋಗಿಪೆಡೆ । ಯಲ್ಲಿ ಸುಖಂಬಡೆವಲ್ಲಿ ದೇಹಮಂ ॥
ಬಿಡುವೆಡೆಯಲ್ಲಿ ಲಿಂಗಕಳೆ । ಲಿಂಗಗುಣಂ ಘನಲಿಂಗ ಯೋಗಮಾ ।
ದೊಡೆ ಬಳಿಕಾ ಮಹಾತ್ಮನ ನ । ದೇ ನೆನಬರ್ಪುದದಂ ಶಿವಾಧವಾ ॥

ನುಡಿಯುವಾಗಲೂ, ನಡೆಯುವಾಗಲೂ, ನೋಡುವಾಗಲೂ, ಪ್ರತಿಯೊಂದು ಕ್ರಿಯೆಯನ್ನು ಎಸಗುತ್ತಿರುವಾಗಲೆಲ್ಲಾ ಅಂತರಂಗದಲ್ಲಿ ತನ್ನಾತ್ಮ ಚಿತ್ಕಳೆ ಎನಿಸಿದ – ಮಹಾಲಿಂಗದ ಅನುಭೂತಿಯುಳ್ಳ ಶರಣಸ್ಥಲದವನ ಶಿವಯೋಗವು, ಪ್ರೇಮಾಮೃತದಿಂದ ತುಂಬಿ ಪರಿಪೂರ್ಣವೂ ಅನಿರ್ವಚನೀಯವೂ ಎನಿಸಿರುವುದು. ಇದನ್ನು ಗೀತೆಯಲ್ಲಿ –

॥ ಬ್ರಹ್ಮಾರ್ಪಣಂ ಬ್ರಹ್ಮಹವಿ । ಬ್ರಹ್ಮಾಗ್ನೌ ಬ್ರಹ್ಮಣಾಹುತಂ ॥
ಬ್ರಹ್ಮೈವತೇನ ಗನ್ತವ್ಯಂ । ಬ್ರಹ್ಮಕರ್ಮ ಸಮಾಧಿನಾ ॥

ಸಂಯಮಿಗಳಾದ ಮುಕ್ತರು ಕರ್ಮ ಬಂಧನದಿಂದ ಬಿಡುಗಡೆಯನ್ನು ಹೊಂದಿರು

ವುದರಿಂದ ಜೀವನ್ಮುಕ್ತ ಮಹಾಶರಣರೆನಿಸಿ ॥ ಯದ್ಯತ್ಪಶ್ಯತಿ ತತ್ಸರ್ವಂ । ಯದ್ಯತ್ಕರೋತಿ ತತ್ಸರ್ವಂ ॥ ಏನೇನು ನೋಡುತ್ತಾರೆಯೋ ಮತ್ತು ಏನೇನು ಮಾಡುತ್ತಾರೆಯೋ ಅದೆಲ್ಲಾ ಬ್ರಹ್ಮವಾಗಿಯೇ ಕಾಣುವರೆಂಬುದೇ ಮೇಲಿನ ಶ್ಲೋಕಾರ್ಥ. ಹೀಗೆ ಸಮಸ್ತ ಕರ್ಮಗಳನ್ನೂ ತತ್ಸಾಧನಗಳನ್ನೂ ಬ್ರಹ್ಮ ಸ್ವರೂಪವಾಗಿಯೇ ನೋಡುವಾತನು, ಹೊಂದುವ ಸ್ಥಾನವೂ ಸಹ ಶಾಶ್ವತಾ ನಂದಮಯವಾದ ಬ್ರಹ್ಮಸ್ವರೂಪವೇ ಆಗಿರುವುದು. ಮಣ್ಣಿನಿಂದ ಮಾಡಿದ ಕುಡಿಕೆ ಮಡಕೆ ಗುಡಾಣಾದಿ ವಸ್ತುಗಳು ಯಾವ ರೂಪನಾಮಗಳಿಂದ ಕಂಡು ಬಂದರೂ ಅವುಗಳೆಲ್ಲಾ ವಾಸ್ತವದಲ್ಲಿ ಹೇಗೆ ಮಣ್ಣೇ ಆಗಿರುವುವೋ ಹಾಗೆ, ಜಗದೀಶ್ವರನ ಸೃಷ್ಟಿಯಲ್ಲಡಗಿರುವ ಚರಾಚರಾತ್ಮಕವಾದ ಅಖಿಲವೂ, ಶಿವ ಶರಣನಿಗೆ ಶಿವರೂಪವಾಗಿ ಇದ್ದು ಶಿವನಾಗಿ ಕಂಡು ತಾನೂ ಶಿವಸ್ವರೂಪದಲ್ಲಿ ತನ್ಮಯನಾಗಿರ್ಪನು. ಈ ಸ್ವರೂಪಾನಂದವನ್ನು ವರ್ಣಿಸಲು ಸಹಸ್ರ ನಾಲಗೆ ಯುಳ್ಳ ಆದಿಶೇಷನಿಂದಲೂ ಅಸದಳವೆನಿಸಿರುವುದು.

ಕನಕದಾಸರು ಮೇಲೆ ಉಲ್ಲೇಖಿಸಿರುವ ಅನುಭವಾಮೃತವನ್ನು ಹೇಳಲು ದ್ಯುಕ್ತರಾಗಿ – ಭೋ ! ಹರಿ !

॥ ಸವಿಯು ಸಕ್ಕರೆಯೊಳಗೊ । ಸಕ್ಕರೆಯು ಸವಿಯೊಳಗೊ ॥
ಸವಿಯು ಸಕ್ಕರೆಗಳೆರಡೂ । ಜಿಹ್ವೆಯೊಳಗೋ ॥
ಜಿಹ್ವೆ ಮನಸಿನೊಳಗೊ । ಮನಸ್ಸು ಜಿಹ್ವೆಯೊಳಗೊ ॥
ಜಿಹ್ವೆ ಮನಸುಗಳೆರಡೂ । ನಿನ್ನೊಳಗೋ ॥

ಎಂಬಂತೆ ಭಕ್ತ ಭಗವಂತ ಇವರ ನಿಕಟವಾದ ಅವಿನಾಭಾವ ಸಂಬಂಧದ ಸಮರಸವು, ಭಕ್ತಿ ಎಂಬ ದಿವ್ಯ ಮೂಸೆ (ಮಣ್ಣಿನ ಕುಡಿಕೆ) ಯಲ್ಲಿ ದ್ರವವಾಗಿ ಅಪರಂಜಿ ಸ್ವರೂಪವನ್ನೈದ ಅಂಶ ಸ್ಪಷ್ಟಪಡುವುದು. ಶ್ರೀ ಷಣ್ಮುಖನ ತೇಹೋಂಶದಿಂದ ಉದಯಿಸಿದ ಶ್ರೀ ಚೆನ್ನಬಸವಣ್ಣನವರನ್ನು ಕುರಿತು

ಮಗ್ಗೆ ಮಾಯಿದೇವರು –

॥ ಬಸವ ಕುಮಾರ ಭಾಕ್ತಿಕ ಪುರ ! ಸ್ಸರ ಷಟ್ಸ್ಥಲಧೀರ ಚಿತ್ಸುಧಾ ।
ರಸಭರಿತಾಂತರಂಗ ಸಕಲಾ । ಕ್ಷ ಸಮರ್ಪಿತಲಿಂಗಂ ತತ್ಪ್ರಸಾ ॥
ದ ಸುಖ ವಿಶೇಷ ತೃಪ್ತ ಶಿವ । ಯೋಗ ಪದೈಕ ಸಮಾಪ್ತಿನೀನೇ ರ ।
ಕ್ಷಿಸು ಗಡ ಜೀಯ ಚೆನ್ನ ಬಸ । ವಯ್ಯ ಕೃಪಾನಿಧಿಯೇ ಶಿವಾಧವಾ ॥

ಶ್ರೀ ಬಸವೇಶ್ವರರ ನೆಚ್ಚಿನ ಅನುಯಾಯಿ ಎಂದೆನಿಸಿ, ಭಕ್ತ್ಯಾದಿ ಐಕ್ಯಾಂತ ಮಾದ ಷಟ್ಸ್ಥಲ ವಿದ್ಯೆಯಲ್ಲಿ ಪಂಡಿತನೆನಿಸಿ ಲಿಂಗಾರ್ಪಿತ ಶುದ್ಧ ಮನೋ ಭಾವದಿಂದ ಲಿಂಗ ಭೋಗೋಪ ಭೋಗಿಯಾಗಿ ಸಕಲೇಂದ್ರಿಯ ಮುಖ ಗಳಿಂದಾಗತವಾದ, ಅಖಿಲ ಸುಖ ಸಂತೋಷಗಳನ್ನು ಆಯಾ ಲಿಂಗಗಳಿಗೆ ಸಮರ್ಪಿಸುತ್ತಾ, ಶಿವಲಿಂಗ ಮುಖದಿಂದಾಗತವಾದವುಗಳನ್ನು ದಿವ್ಯ ಪ್ರಸಾದ ವೆಂಬ ಭಾವನೆಯಿಂದ ಪಡೆದು ಅನುಭವಿಸಿ ಶಾಂತಿ ಮತ್ತೂ ತೃಪ್ತನಾಗಿ, ಇಂತಪ್ಪ ಶಿವಯೋಗ ಪದದಿಂದ ವಿರಾಜಿತನಾದ ಸ್ಕಂದಾಂಶ ದಿವ್ಯ ಜ್ಞಾನ ಜ್ಯೋತಿ ಚೆನ್ನಬಸವಣ್ಣಾ, ನಮ್ಮನ್ನು ಅನವರತ ರಕ್ಷಿಸು ಎಂದು ಕೊಂಡಾಡಿ ಸ್ತುತಿಸಿರುವುದು ಪುಣ್ಯಮಯವೇ ಆಗಿರುವುದು.

ಶ್ರೀ ಅಲ್ಲಮಪ್ರಭು ದೇವರನ್ನು ಮನಸಾ ಸ್ಮರಿಸಿ –

॥ ಪ್ರಭುವೆ । ಮಹಾಗುರು ಪ್ರಭುವೆ । ಲಿಂಗಕಳಾ ಪ್ರಭುವೇ ಚರಾಭಿಧ ।
ಪ್ರಭುವೆ ಶಿವಾತ್ಮವಿತ್ಪ್ರಭುವೆ । ಯೋಗಿ ವರಪ್ರಭುವೇಚಿದಂಗನಾ ।
ಪ್ರಭುವೆ ಸದಾಮಲ ಪ್ರಭುವೆ । ರಕ್ಷಿಸು ದೇವ ಗುಹೇಶ್ವರಾಲ್ಲಮ ।
ಪ್ರಭುವೇ ನಿರಂಜನ ಪ್ರಭುವೇ । ಮತ್ಪ್ರಭುವೇ ಪ್ರಭುವೇ ಶಿವಾಧವಾ ॥

ತಮ್ಮಿಂದ ರಚಿತವಾದ ಶತಕತ್ರಯದಲ್ಲಿ ಸುಜ್ಞಾನಿಗಳಾದ ಮಗ್ಗೆ ಮಾಯಿ

ದೇವಾಚಾರ್ಯರು ಅಲ್ಲಮಪ್ರಭು ದೇವರನ್ನು ಶಿವಾಭಿನ್ನವಾದ ನಿಸ್ಪೃಹ ಭಕ್ತಿ ಭಾವದಿಂದ ಹೃದಯಂಗಮವಾಗಿ ಸ್ತುತಿಸುತ್ತಾ, ನಿಗ್ರಹಾನುಗ್ರಹ ಸಮರ್ಥ ನಾದ ಪ್ರಭುವೇ, ಶಿವತತ್ವಮಂಬಲ್ಲವರ್ಗೆ ವೊಡೆಯನೇ, ನಿರ್ಮಲಾಂತಃಕರಣ ವುಳ್ಳ ಗುರುವೇ, ಮಾಯಾರಹಿತನಾದ ಶಿವಯೋಗಿವರೇಣ್ಯನೇ, ಶ್ರೀ ಅಲ್ಲಮ ಪ್ರಭುವೇ, ಶ್ರೀ ಗುಹೇಶ್ವರ ಸಂಪ್ರದಾಯಕ, ಶ್ರೀ ಗುರುಮಲ್ಲಿಕಾರ್ಜುನ ಕೃಪಾನ್ವಿತ, ಶೂನ್ಯ ಸಿಂಹಾಸನೇಶ್ವರಾ ಮಹಾಪ್ರಭುವೇ! 'ರಕ್ಷಿಸು ರಕ್ಷಿಸು ನಮ್ಮನನವರತ ಎಂಬುದಾಗಿ ಮನಬಿಚ್ಚಿ ಶರಣಾಗತಿ ಭಾವದಿಂದ ಕೊಂಡಾಡಿ ರುವರು.

॥ ಯದ್ಯದಾಚರತಿ ಶ್ರೇಷ್ಠಾಃ। ಸ್ತತ್ತದೇವೇತರೇಜನಾಃ ॥ ಎಂಬ ಶಾಸ್ತ್ರೋಕ್ತಿಯಂತೆ, ಈ ಗ್ರಂಥಕರ್ತನು ತನ್ನ ಕುಲದೈವವಾದ ಶ್ರೀ ಬಸವೇಶ್ವರ ರನ್ನು ಶಿವಾಭಿನ್ನಭಾವದಿಂದ ಹಾಗೂ ಶ್ರದ್ಧಾ ಭಕ್ತಿಯುತನಾಗಿ ನಿತ್ಯಾರಾಧನೆ ಯಲ್ಲಿ ಸ್ತುತಿಸುತ್ತಾ –

॥ ಬಸವಾ ಬಸವ ಬಸವೇಶ್ವರ ಬಸವ।  
ಬಸವಣ್ಣಾ ಬಸವ ಬಸವರಾಜಾ ಬಸ। ವ  
ಬಸವಯ್ಯಾ ಬಸವ, ಬಸವಾ, ಬಸವ ಪ್ರಭೋ।  
ಬಸವ ಪ್ರಮಥಾಧಿದೇವ ಬಸವ ರಕ್ಷಿಸು।  
ರಕ್ಷಿಸು ನಮ್ಮನನವರತ ॥

ಬಸವ ತಾಯಿ ಬಸವ ತಂದೆ ಬಸವ।  
ಬಂಧು ಬಸವ ಬಳಗ ಬಸವ ವಿದ್ಯೆ।  
ಬಸವ ಬುದ್ಧಿ ಬಸವ ಗುರು ಬಸವ।  
ಲಿಂಗ ಬಸವ ಜಂಗಮ ಬಸವ ಕೃಪಾಬ್ಧೇ  
ಬಸವಾ ಬಸವ ಶ್ರೀ ಬಸವೇಶ್ವರ।  
ರಕ್ಷಿಸು ರಕ್ಷಿಸು ನಮ್ಮನನವರತ ॥

ಎಂಬುದಾಗಿ ಪ್ರಾರ್ಥಿಸುವುದು ಎನ್ನಯ ನಿತ್ಯಕರ್ಮವಾಗಿರುವುದು. ಪರಮ ವೀರಶೈವ ಮತೋದ್ಧಾರಕ್ಕಾಗಿ ಕರದಲ್ಲಿ ಕಂಕಣವ ತೊಟ್ಟು ಸನಾತನವಾದ ಅಷ್ಟಾವರಣ, ಪಂಚಾಚಾರ ಮತ್ತು ಷಟ್ಸ್ಥಲಗಳೆಂಬ ಪರಿಪೂರ್ಣ ಧರ್ಮ ವನ್ನೊಳಗೊಂಡ ಶಿವಾದ್ವೈತ ಮಹಾತತ್ವವನ್ನು ಭುವಿಯಲ್ಲಿ ಅಚ್ಚಗನ್ನಡ ನುಡಿಯಲ್ಲಿ ವಿಶಾಲಾರ್ಥ ಗರ್ಭಿತವಾದ ಶುದ್ಧಭಾವದಿಂದ ಪ್ರತಿಪಾದಿಸಿ, ನಡೆ ನುಡಿಗಳಲ್ಲಿ ಒಂದಾಗಿ, ಪ್ರತಿಪಾದಿಸಿದಂತೆ ವಿಶ್ವಸಿಸಿ, ವರ್ತಿಸಿ, ಲಿಂಗಧರ್ಮ ವನ್ನು ಪುನರೋಧ್ಧಾರ ಮಾಡಿದ ಶಾಶ್ವತ ಘನಕೀರ್ತಿ, ಧೃವತಾರೆಯಂತೆ ಮಹಾನುಭಾವರಾದ ಶ್ರೀ ಬಸವಣ್ಣನವರ ಪಾಲಿಗೆ ಬಿದ್ದ ಭಾಗ್ಯವಾಗಿದೆ. ||**ನಾರಾಯಣನೆಂಬೋ ನಾಮದ ಬೀಜವ ನಾರದ ಭಿತ್ತಿದ ಧರೆಯೊಳಗೆ**|| ಎಂಬಂತೆ ||**ಶಿವನೆಂಬೋ ನಾಮದ ಬೀಜವ ಬಸವ ಭಿತ್ತಿದ ಜಗದೊಳಗೆ**|| ಎಂದು ಕೈ ಎತ್ತಿ ಸಾರುವಷ್ಟು ಮಹತ್ವ ಪೂಜ್ಯ ಬಸವಣ್ಣನವರದಾಗಿದೆ. ಸನಾತನವಾದ ಪರಮ ವೀರ ಶೈವಾಚಾರ ವಿಧಿ ದೀಕ್ಷೆಯನ್ನು ಶ್ರೀ ಸಂಗಮೇಶ್ವರ ಶಿವಾಚಾರ್ಯರ ಕೃಪೆಯಿಂದ ಪಡೆದ ಶ್ರೀ ಬಸವಣ್ಣ, ಸ್ವಾತಿ ಮಳೆಯ ಹನಿ ಶುಕ್ತಿಯಲ್ಲಿ ಬಿದ್ದು ಮುತ್ತಾಗುವಂತೆ ಅನುಭವ ಮಂಟಪದಲ್ಲಿ ಶಿವಾನುಭವ ವನ್ನೊಳಗೊಂಡ ಪ್ರಣವ ಪಂಚಾಕ್ಷರೀ ಮಹಾಮಂತ್ರದ ನಿಜ ಸ್ವರೂಪವನ್ನು ಅರಿತು ಬಸವಣ್ಣ ಹೃದಯಂಗಮವಾಗಿ ಪ್ರತಿಪಾದಿಸಿ, ಶಿವಭಕ್ತಿ ಬೀಜವನ್ನು ಸದ್ಭಕ್ತರ ಹೃದಯ ಕ್ಷೇತ್ರದಲ್ಲಿ ಭಿತ್ತಿ ಸೊಂಪಾದ ಶಿವಪ್ರೋಕ್ತ, ||**ಸಕಲನಿಗಮ ವಲ್ಲೀ ಸತ್ಫಲಂ ಚಿತ್ಸ್ವರೂಪಂ**|| ಎಂಬಂತೆ ಶಿವಭಕ್ತಿರೂಪ ಬೆಳೆಯನ್ನು ಹಚ್ಚ ಹಸುರಾಗಿ ಬೆಳೆದು ಅದರಲ್ಲಿ ಮಾಗಿ ಪಕ್ವವಾದ ಚಿತ್ ಸ್ವರೂಪ ಸತ್ಫಲವನ್ನು ಜಗತ್ತಿನ ಜಂಗಮ ಕೋಟಿಗಳಿಗೆ, ಉಳವೆ ಮಹಾಮನೆಯಲ್ಲಿ ದಿನ ಚರಿ ದಾಸೋಹ ಕೂಟದಲ್ಲಿ ಮುದದಿಂದ ಉಣ ಬಡಿಸಿದ ಹಿರಿಮೆ ಬಸವಣ್ಣನವರದು. ಕನ್ನಡನಾಡಿನ ಕನ್ನಡಾಂಬೆಯ ಅನರ್ಘ್ಯ ಮಕುರದ ಮಣಿಯ ರತ್ನಾಭರಣ ದಂತೆಸೆವ, ಜೀವರತ್ನ ಕಳೆಯಿಂದ ಪ್ರತಿಫಲಿಸುವಂಥ ಕನ್ನಡ ಉಪನಿಷತ್ತು ಗಳೆಂದು ವಿಖ್ಯಾತವಾದ ಶ್ರೀ ಬಸವಾದಿಗಳ ವಿಚಾರಭರಿತ ವಚನ ವಾಙ್ಮಯ ಶಾಸ್ತ್ರದ, ಚಿಚ್ಛಿಂದು ಪ್ರವಾಹದ ಶಾಶ್ವತವಾದ ಸೌರಭ ಸುಗಂಧವನ್ನು ಜಗತ್ತಿನ

ಜನತೆಯ ಮುಂದಿಟ್ಟು, ಬಸವಣ್ಣನವರು ತಮ್ಮಂತೆ ಇತರರನ್ನೂ ಅಮರ ರನ್ನಾಗಿಸಿ, ಯಶಃ ಕಾಯದಿಂದ ಬೆಳಗಿ ಸ್ತುತ್ಯರಾಗಿ ಅಜರಾಮರರಾಗಿರುವರು.
|| ಶ್ರೀ ಬಸವಾದಿ ಪ್ರಮಥ ಗಣಾಧೀಶ್ವರೇಭ್ಯೋನಮಃ ||

## XVII

ಶಕ್ತಿ ವಿಶಿಷ್ಟಾದ್ವೈತ ತತ್ವವನ್ನೊಳಗೊಂಡು ಬೆಳಗುವ ವೀರಶೈವ ಮತ ಸ್ಥಾಪನಾಚಾರ್ಯರು, ದೃಗ್ಗೋಚರವಾಗಿ ಕಾಣುವ ಅಖಿಲ ಎಂಭತ್ನಾಲ್ಕು ಕೋಟಿ ಜೀವರಾಶಿಗಳಿಗೆ ವಿನೋದಕರ ವಿಹಾರ ಕ್ಷೇತ್ರವೆಂದೆನಿಸಿದ ಪಾಂಚ ಭೌತಿಕವಾದ ಪ್ರಪಂಚ ಪರಮೇಶ್ವರನ ಸಾಕಾರಮೂರ್ತವೇ ಆಗಿದ್ದು-ಪೃಥ್ವಿ, ಅಪ್, ತೇಜಸ್, ವಾಯು, ಆಕಾಶ, ಚಂದ್ರ, ಸೂರ್ಯ ಮತ್ತು ಆತ್ಮ ಎಂಬ ಅಷ್ಟ ಮೂರ್ತ್ಯಾತ್ಮಕನಾಗಿ ವಿರಾಜಮಾನವಾಗಿರುವುದೆಂದು ಶೃತ್ಯಾದಿ ಗಳಲ್ಲಿ ಪ್ರೋಕ್ತವಾದಂತೆ ಉದ್ಘೋಶಿಸಿರುವರು. ಈ ಮಹದಂಶವನ್ನು ವರಕವಿ ಕುಲ ಸಾರ್ವಭೌಮ ಕಾಳಿದಾಸ ಮಹೋದಯನು ತನ್ನಿಂದ ರಚಿತವಾದ ರಘು ವಂಶ ಮಹಾಕಾವ್ಯದ ಸ್ತೋತ್ರ ಭಾಗದಲ್ಲಿ ಪರಮಾತ್ಮನನ್ನು ಅಷ್ಟ ಮೂರ್ತ್ಯಾ ತ್ಮಕವಾಗಿ ಕಂಡು ಸ್ತುತಿಸಿ ನಮಸ್ಕರಿಸಿರುವನು. || ಪೂರ್ಣಮದಃ ಪೂರ್ಣ ಮಿದಂ || ಎಂಬ ಉಪನಿಷದ್ವಾಣಿಯು, ಜೀವಾತ್ಮ ಜಗತ್ತುಗಳನ್ನು ಜಗದೀಶ್ವರ ನಲ್ಲಿ " **ಸೂತ್ರೇ ಮಣಿಗಣಾ ಇವ** " ಎಂಬ ಗೀತೋಕ್ತಿಯಂತೆ ಒಳಗೂ ಹೊರಗೂ ಹಾಗೂ ಕೂಟಸ್ಥವೂ ಆಗಿ ಸರ್ವವೂ ತಾನೊಬ್ಬನೇ ಆಗಿ ವ್ಯಾಪಿಸಿ ಸರ್ವಾಂತರ್ಯಾಮಿಯಾಗಿ ವಿರಾಜಿಸುತ್ತಲಿರುವನೆಂದು ಸಾರುತ್ತಿರುವುದು. "All are parts of that Stupendous Whole" ಎಂಬುದು ಸ್ಪಷ್ಟವೇ ಇರುತ್ತೆ. The all round visible and tangible world (Universe) is nothing but a projection from that Eternal Reality ಎಂದು ಹೇಳುವ ಪಾಶ್ಚಿಮಾತ್ಯ ದೀರ್ಘದರ್ಶಿಗಳ ನಿರ್ಧಾರವು ಸತ್ಯಕ್ಕೂ ಸಮಂಜಸಕರವಾಗಿರುವುದು. In fact the whole world is the manifestation from that un-

manifested Infinite Divine Potentirlity. No body can deny this sterling Truth. ಜಗತ್ತು ಮಿಥ್ಯೆಯಾದರೆ ಇದನ್ನು ಕಟ್ಟಿಕೊಂಡು ನಾವು ಬಾಳುವುದರಲ್ಲಿ ಅರ್ಥವು ತಾನೇ ಏನಿದೆ. ಪೃಥ್ವಿಯನ್ನು ಆಶ್ರಯಿಸಿ ಪೃಥ್ವಿಗಾಗಿ ಹೋರಾಡಿ ನಿಜ ಭಾರತೀಯರೆನಿಸಿಕೊಳ್ಳುವುದರಲ್ಲಿ ಹೆಮ್ಮೆಪಡುತ್ತಿರುವೆವು. ॥ ಜನನೀ ಜನ್ಮ ಭೂಮಿಶ್ಚ ಸ್ವರ್ಗಾದಪಿ ಗರೀಯಸಿ ॥ ಅಂದರೆ ಸ್ವರ್ಗಕ್ಕಿಂತಲೂ ಜನನೀ, ಜನ್ಮ ಭೂಮಿಗಳು, ಅತ್ಯಂತ ಪ್ರೇಮಾಸ್ಪದವಾದವುಗಳೆಂಬ ಮಾತು, ಜಗತ್ತನ್ನು ಸುಳ್ಳೆನ್ನುವ ಅದ್ವೈತಿಗಳೂ ಸಹ ತಲೆದೂಗಿ ನಂಬಿ, ನೆಚ್ಚಿ, ವಿಶ್ವದ ಸ್ವರೂಪದಲ್ಲಿ ಪರಮಾತ್ಮನನ್ನು ಕಾಣುತ್ತಲಿರುವರು. ನಮ್ಮ ಜೀವದ ಮತ್ತೂ ಜೀವನದ ನಿಜ ತೇಜಸ್ಸು, ಧರಣಿಯಿಂದುದ್ಭವಿಸುವ ಪದಾರ್ಥಗಳಿಂದೆಲ್ಲವೇ ಪ್ರಾದುರ್ಭವಿಸಿ ಪ್ರಚಲಿತಗೊಂಡು ಪ್ರತೀತಿಯನ್ನು ಪಡೆದಿರುವುವು. ಆದ್ದರಿಂದ ಈ ಜಗತ್ತು " ಸರ್ವಂ ಬ್ರಹ್ಮಮಯಂ ", " ವಾಸುದೇವಸ್ಸರ್ವಮಿತಿ ", ಮತ್ತೂ " ಸರ್ವಂ ಖಲ್ವಿದಂ ಬ್ರಹ್ಮ " ಎಂಬ ಉಪನಿಷದ್ ಮೂರ್ಧನ್ಯ ಮಹಾಮಂತ್ರಗಳಲ್ಲಿನ ॥ ಸರ್ವಂ ॥ ಎಂಬ ಶಬ್ಧವು ಚರಾಚರಾತ್ಮಕವಾದ ಅಖಿಲವನ್ನೂ ನಿರ್ದೇಶಿಸಿ ಬಳಸಿಕೊಂಡಿರುವ ಸೂಕ್ಷ್ಮಾಂಶವನ್ನು ನಿಸ್ಸಂದೇಹವಾಗಿ ಹೊರಸೂಸುತ್ತಿರುವುದು ಮಾಯಾವಾದಿಗಳು ಮಿಥ್ಯೆಯೆಂದು ಶೃತಿವಾಣಿ ಆಧಾರಗಳನ್ನು ಮುಂದಿಟ್ಟು ಹೇಳುವುದು ತಾನೆ ಏನನ್ನು ಎಂಬುದು ಗಮನಾರ್ಹ ? ಮಿಥ್ಯತ್ವ. ನಾಮರೂಪಾತ್ಮಕಗಳನ್ನೇ ಅನುಸರಿಸಿರುವುದು ಎಂಬುದು ದೃಢಪಡುತ್ತೆ. ಮಡಕೆ ಎಂಬ ನಾಮ ಮತ್ತೂ ಗೋಳಾಕಾರವಾದ ಅದರ ರೂಪ, ಮಿಥ್ಯೆ. ಮಡಕೆ ಯೊಡೆದರೆ ರೂಪ ನಷ್ಟವಾಯಿತು. ನಂತರ ಅದನ್ನು ಮಡಕೆ ಎಂದು ಯಾರೂ ಕರೆಯರು. " ಮಡಕೆಯ ಮಾಡಲು ಮಣ್ಣೇ ಮೊದಲು " ಅಂದ ಹಾಗೆ ಮಡಕೆ ಮಿಥ್ಯೆಯೇ ಹೊರತು ಮಣ್ಣು ಮಿಥ್ಯೆಯಲ್ಲ. ಪಂಚ ಭೂತಗಳೆನಿಸಿದ ಮಣ್ಣು ಮೊದಲಾದವುಗಳಲ್ಲಿ ಅರಿವು ಶಕ್ತಿ ಇಲ್ಲದ್ದರಿಂದ ಜಡವೆಂದೆನಿಸಿರುವುವು. ಆದರೂ ಅವುಗಳಲ್ಲಿ ಅದೃಶ್ಯವಾದ ಒಂದೊಂದು ಶಕ್ತಿ ಸಹಜವಾಗಿಯೇ ಅಂತರ್ಗತವಾಗಿರುವುದು. ಜಡ ಪೃಥ್ವಿಯಲ್ಲಿ ಆಕರ್ಷಣ ಶಕ್ತಿ Power of

Gravity ಸಹಜವಾಗಿರುವುದು. ಈ ಶಕ್ತಿ ಮತ್ತೂ ಧಾರಣ ಶಕ್ತಿ ಪೃಥ್ವಿಯಲ್ಲಿ ಕಂಡುಬರುವ ಧರ್ಮ. ಭೂದೇವಿಯು ಸ್ಥಾವರ ಜಂಗಮಾತ್ಮಕವಾದ ಅಖಿಲ ವಿಶ್ವವನ್ನೂ ಆಕರ್ಶಿಸಿ ಧರಿಸಿರುವಳು. ಅನಂತಕೋಟಿ ಜೀವ ಜಂತುಗಳಿಗೆ ಆಶ್ರಯಸ್ಥಾನವಾಗಿದ್ದು ರಕ್ಷಕ ಪೋಷಕ ಉಣವನ್ನೂ ಓಷಧಿಗಳನ್ನೂ ಪಂಚಲೋಹಗಳನ್ನೂ ನವಪಾಷಾಣಗಳ ಉತ್ಪತ್ತಿಗೆ ಆಗರವಾಗಿರುವಳು. The most precious and valuable lively jems and diamonds (ಜೀವಂತ ವಜ್ರಗಳು) are laid hidden and are found embeded in the worthless charcoal which is burried underneath the Earth. ಚೇತನಾತ್ಮಕವಾದ ಅಂಶ ಓಷಧಿಗಳಲ್ಲೂ ವನಸ್ಪತಿ ವರ್ಗದ ನಾನಾ ತರುಗುಲ್ಮಲತಾದಿಗಳಲ್ಲೂ ಅಂಕುರಿಸಿ, ಪಲ್ಲವಿಸಿ ಚೈತನ್ಯಾತ್ಮಕವಾಗಿದ್ದು, ಚೇತನನಿಗೆ ನವ ಚೈತನ್ಯವನ್ನುಂಟುಮಾಡುವುದರಲ್ಲಿ ಶಕ್ತಿವರ್ಧಕವಾಗಿರುವುದು. ಅರಿವು ಇಲ್ಲವಾದರೂ ಅಗೋಚರವಾದ ಶಕ್ತಿ ಅಂದರೆ ಆಕರ್ಷಣ ಹಾಗೂ ಧಾರಣ ಶಕ್ತಿಧಾರಣೆಯಲ್ಲಿ ಸಹಜವಾಗಿದ್ದು, ಶಬ್ಧ, ಸ್ಪರ್ಶ, ರೂಪ, ರಸ ಮತ್ತೂ ಗಂಧಗಳೆಂಬ ಪಂಚ ಗುಣಗಳಿಂದ ಕೂಡಿರುವುದು ಸರಿಯಷ್ಟೆ. ಭೂದೇವಿಯು, ಪೃಥ್ವಿಗೆ ಅಧಿಷ್ಟಾನ ದೇವತೆ, ಎಂಬುದು ಪ್ರಾಜ್ಞರೂ, ಆಸ್ತಿಕರೂ ಆದ ನಮ್ಮ ಹಿರಿಯರ ಅಭಿಮತ. ಭೂದೇವಿಯ ಮಗಳೇ ಸೀತಾ, ಶ್ರೀರಾಮನ ಪತ್ನಿ. ಅಂತ್ಯದಲ್ಲಿ ಸೀತೆಯ ಕೋರಿಕೆಯಂತೆ - ಭೂಮಿಯೊಳಗಿನಿಂದ ರತ್ನಮಯ ಸಿಂಹಾಸನವು ಬರಲು, ಸೀತಾದೇವಿಯು ಆ ಸಿಂಹಾಸನಾರೋಹಣವಂಗೈದು ಭೂಗರ್ಭ ಸೇರಿದಳೆಂದು ಧರ್ಮಗ್ರಂಥವಾದ ಶ್ರೀಮದ್ರಾಮಾಯಣವು ನಮಗೆ ಬೋಧಿಸುತ್ತಲಿರುವುದು. ದೃಗ್ಗೋಚರವಾಗಿರುವ ಮೃಣ್ಮಯ ಪೃಥ್ವಿ ಮಿಥ್ಯೆಯೂ ಅಲ್ಲದೆ ಶಾಶ್ವತವೆನಲು ಬಾರದೆ ಲಯಕಾಲದಲ್ಲಿ ಸೂಕ್ಷ್ಮಾಂಶದಿಂದ ತನಗಿಂತಲೂ ದೊಡ್ಡದಾದ " ಅಪ್ " ತತ್ವದಲ್ಲಿ ವಿಲೀನವಾಗುವುದು. ಇದಗಿಂದಾಗಿ ಪೃಥ್ವಿತತ್ವ ಮಿಥ್ಯೆ ಅಥವಾ ನಶ್ವರವೆಂದು ಹೇಳಲಿಕ್ಕೆ ಬರುವುದಿಲ್ಲ. ಬಹು ಪೂರ್ವದಲ್ಲಿ ಪರ್ವತಗಳಿಗೆ ರೆಕ್ಕೆಗಳಿದ್ದವೆಂದೂ ಒಂದು ಸ್ಥಳದಿಂದ ಮತ್ತೊಂದು

ಸ್ಥಳಗಳಿಗೆ ಪರ್ವತಗಳು ಹಾರುತ್ತಿದ್ದವೆಂದೂ ಇದರಿಂದಾಗುವ ಅನರ್ಥಗಳನ್ನು ತಪ್ಪಿಸಲಿಕ್ಕಾಗಿ ದೇವೇಂದ್ರನು ತನ್ನ ವಜ್ರಾಯುಧದಿಂದ ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿದನೆಂದೂ ಪ್ರತೀತಿ ಇದೆ. ಧರಣಿ ಚಲಿಸುವುದೆಂದೂ ಚಂದ್ರ ಸೂರ್ಯರನ್ನು ಸುತ್ತುತ್ತಿರುವುದೆಂದೂ ಭೂಗೋಳ ಶಾಸ್ತ್ರ ನಮಗೆ ತಿಳಿಸುತ್ತಲಿದೆ. ಪರಮಾತ್ಮನ ಸನ್ನಿಧಾನದಲ್ಲಿ ಜಡವಸ್ತುಗಳಿಗೆ ಚೈತನ್ಯಶಕ್ತಿ ಉಂಟಾಗುವುದು ನಿಜ. ಪರಮಾತ್ಮನು " ಸದಸತ್ " ಸ್ವರೂಪಿಯಾದುದರಿಂದ ಅಸತ್ ಪದಾರ್ಥಗಳು ಅವನನ್ನು ಬಿಟ್ಟಿಲ್ಲವಾದ್ದರಿಂದ ಜಡವಸ್ತುಗಳಲ್ಲೂ ವಿಲಕ್ಷಣವಾದ ಒಂದೊಂದು ಶಕ್ತಿಯನ್ನು ಸ್ಥಾಪಿಸಿ ॥ ತತ್ಸೃಷ್ಟ್ವಾ ತದೇವಾನುಪ್ರಾವಿಶತ್ ॥ ಅಂದಂತೆ ತಾನೇ ವಿಶ್ವವಾಗಿ ಪರಿಣಮಿಸಿ ಅದೆಲ್ಲದರಲ್ಲೂ ಸದ್ರೂಪದಿಂದ ಜಡವಸ್ತುಗಳಲ್ಲೂ, ಚಿದ್ರೂಪದಿಂದ ಜೀವರುಗಳಲ್ಲಿ ನೆಲಸಿ ವಿಚಿತ್ರಮಯ ಜಗದ್ರೂಪ ನಾಟಕವನ್ನು ನಡೆಸಿ ವಿನೋದಿಸುವ ಸ್ವಯಂಭುವಾಗಿರುವನು. ॥ ಪ್ರಕೃಷ್ಟಾಕೃತಿಃ ಪ್ರಕೃತಿಃ ॥ ಪುರುಷನು ತನ್ನಿಚ್ಛೆಯಿಂದ ತಾನೇ ಪ್ರಕೃತಿಯಾಗಿ, ಪ್ರಕೃತಿ ಪುರುಷರೆನಿಸಿರುವನು. ಶಿವನ ಅವಿನಾಭಾವ ಸಂಬಂಧದಿಂದ ತೋರಿದ ಪ್ರಕೃತಿ ಸ್ವರೂಪಿಣಿಯಾದ ಶಕ್ತಿಯ ವಿಮರ್ಶೆಯೇ ಅದ್ಭುತ ಕಾರ್ಯಕ್ಷೇತ್ರವಾಗಿ ಪ್ರಕಟಿಸಿ ಪ್ರಪಂಚವೆನಿಸಿರುವುದು.

" ಅಪ್ " ತತ್ವ (ಜಲ) ದಲ್ಲಿಯೂ ಸಹ ಒಂದು ಶಕ್ತಿ ಇದ್ದೇಯಿದೆ. ಇದನ್ನೇ ಆಪ್ಯಾಯನ ಶಕ್ತಿ ಎನ್ನುವರು. Water always finds its level ಅಂದಂತೆ ನೀರು ಚಲಿಸಿ ಹರಿದು ಹರಡಿ ಹಳ್ಳವನ್ನು ತುಂಬಿ ಸಮತ್ವವನ್ನು ವ್ಯಕ್ತಪಡಿಸುವ ಅದ್ಭುತ ಶಕ್ತಿ ನೀರಿನಲ್ಲಿ ಸಹಜವಾಗಿರುವುದು. ಅಷ್ಟೇ ಅಲ್ಲದೆ ಪ್ರವಹಿಸಿ ಛಿಮ್ಮಿ ಧುಮ್ಮಿಕ್ಕುವ ನೀರಿನಿಂದ ಉತ್ಪಾದಿತವಾದ Hydraulic ಮತ್ತೂ Hydrogen ಎಂದು ರಸಾಯನ ಶಾಸ್ತ್ರದಲ್ಲಿ ಪರಿಗಣಿಸಲ್ಪಟ್ಟ ಅಗೋಚರ ಶಕ್ತಿ ಸಂಪತ್ತುಗಳ ಯೋಗ್ಯ ಬಳಕೆಗಳಿಂದ, ಬೃಹತ್ಕಾರ್ಯ ಸಾಧನೆಗಳನ್ನು ಕಂಡು ಸಾಧಿಸಿ ಲಾಭವನ್ನು ಹೊಂದುತ್ತಲಿರುವೆವು. ನೀರು ಕೇವಲ ಮಿಥ್ಯೆ ಆಗಿರುವುದಾದರೆ ಮೇಲ್ಕಂಡ ವಿಶ್ವಸಿಸತಕ್ಕ

ಶಕ್ತಿ ಅಪ್ಪಿನಲ್ಲಿ ಇರಲಿಕ್ಕಿಲ್ಲವಷ್ಟೆ. ಆಪ್ ತತ್ವಕ್ಕೆ ಅಧಿಷ್ಠಾನ ದೇವತೆ ಗಂಗೆ. ಗಂಗೆಯು ಶಿವನ ಜಟಾಭಾರವನ್ನಲಂಕರಿಸಿ ಶಿವನರ್ಧಾಂಗಿಯಾಗಿರುವಳು. ಶಕ್ತಿ ಸ್ವರೂಪಿಣಿಯಾದ ಯಾವ ಗಂಗೆಯು ಕ್ಷಣಕಾಲ ವಿಲ್ಲವಾದರೆ ಜೀವ ಕೋಟಿಗಳು ತಲ್ಲಣಿಸುವವೋ, ಯಾವ ಗಂಗೆಯು ಕಾಲ ಕಾಲದಲ್ಲಿ ಅಂತ ರಿಕ್ಷದಿಂದ ಮಳೆಯಾಗಿ ಧರಣಿಯ ಮೇಲೆ ಬೀಳದಿದ್ದರೆ, ಅಖಿಲ ಜೀವ ಕೋಟಿ ಗಳ ಜೀವಿತಕ್ಕೆ ಧಕ್ಕೆ ಏರ್ಪಡುವುದೋ ಅಂಥಾ ಪಾವನ ಗಂಗೆ ॥ ಅಪೋನಾರಾಯಣಃ ॥ ಶ್ರೀ ಮನ್ನಾರಾಯಣನಂಶವೆಂಬುದು ಗಮನಾರ್ಹ. ರಾಮಾವತಾರಾಂತ್ಯದಲ್ಲಿ ಶ್ರೀಮನ್ಮಹಾವಿಷ್ಣುವಿನ ಅಂಶಾವತಾರಿ ಎನಿಸಿದ ಶ್ರೀ ಸೀತಾಪತಿ, ಸರಯೂ ನದಿಯದ್ನು ಹೊಕ್ಕು ಜಲದಲ್ಲಿ ಅಂತರ್ಧಾನನಾದು ದಾಗಿ ಪ್ರತೀತಿ. ಅಂದ ಬಳಿಕ ಅಪ್ ತತ್ವವನ್ನು ಮಿಥ್ಯೆಯೊಂದೋ ಅಥವಾ ನಶ್ವರವಂದೋ ಹೇಳುವುದು ತಾನೇ ಹೇಗೆ ? ಪೃಥ್ವಿ ಅಪ್‌ನಲ್ಲಿ ಮುಳುಗಿರಲು, ಪೃಥ್ವಿ ಅಪ್ ತತ್ವಗಳು ಅಗ್ನಿ ತತ್ವದಲ್ಲಿ ಕಣ್ಮರೆಯಾಗುವುವು, ಅಂದರೆ ವಿಲೀನ ವಾಗುವುವು ಎಂದರ್ಥ.

ಅಗ್ನಿ ತತ್ವವು ನೆಲ ಜಲ ತತ್ವಗಳಿಗಿಂತ ದೊಡ್ಡದಾಗಿದ್ದು ಅವೆರಡನ್ನೂ ತನ್ನೊಳಗೆ ಗರ್ಭೀಕರಿಸಿಕೊಂಡಿರುವಷ್ಟು ಪ್ರಮಾಣದಲ್ಲಿ ಹಿರಿದಾಗಿ, ದಾಹಕ ಶಕ್ತಿವರ್ಧಕವಾಗಿರುವುದು. ಒಂದರಲ್ಲಿ ಮತ್ತೊಂದು ಆಶ್ರಯು ಪಡೆದು ಪೂರಕವಾಗಿ ಅಂತರ್ಗತವಾಗಿರುವಾಗ, ಕಣ್ಮರೆಯಾದ ಅಥವಾ ಕಾಣುವ ಪ್ರಪಂಚವನ್ನು ಮಿಥ್ಯೆಯೆಂದು ಹೇಳಲಿಕ್ಕೆ ವಿಚಾರಧಾರೆ ಎಡೆ ಕೊಡುವುದಿಲ್ಲ ವಷ್ಟೆ. "ನಾಮ" ಮತ್ತು "ರೂಪ", ಇವೆರಡೂ ವಸ್ತುಗಳಲ್ಲವಾದ್ದರಿಂದ, ಇವು ನಮ್ಮನ್ನು ಮೋಹದ ಮಾಯಾಬಲೆಗೆ ಸಿಕ್ಕಿಸಿ ಬಾಧಿಸುತ್ತಲಿರುವುವು. ನಾಮರೂಪಗಳು ಮಾಯೆ ಎಂದರೆ ಒಪ್ಪುವ ಮಾತೇ ಆಗಿರುತ್ತೆ. ಇದರಂತೆಯೇ ಸತ್ಯಸಂಕಲ್ಪನಾದ ಪರಮಾತ್ಮನ ಸತ್‌ಸಂಕಲ್ಪದಿಂದುಂಟಾದ ಜಗತ್ತೂ ಜಗತ್ತಿನ ದ್ರವ್ಯಗಳೂ ಮಿಥ್ಯೆ ಎಂದು ಹೇಳಲಿಕ್ಕೆ ಬರುವುದಿಲ್ಲವೆಂದೇ ದ್ವೈತ ಶೈವ ಸಿದ್ಧಾಂತ, ವಿಶಿಷ್ಟಾದ್ವೈತ ಮತಗಳ ನಿರ್ಣಯವೂ ಆಗಿರುವುದು.

ಪಾಶ್ಚಿಮಾತ್ಯ ಪಂಡಿತರೂ ಸಹ ಜಗನ್ಮಿಥ್ಯಾವಾದವನ್ನು ಒಪ್ಪುವುದೇಯಿಲ್ಲ. ಬುದ್ಧನು ಮತ್ತು ಬೌದ್ಧ ಜನಸಾಮಾನ್ಯ ಮಿಥ್ಯಾವಾದಿಗಳು, ಆ ಜನಸ್ತೋಮದ ಮನೋಗತಿಯ ಹಾದಿಯನ್ನು ಹಿಡಿದು ಆಗ್ಗೆ ಅವತರಿಸಿದ ಆದಿ ಶ್ರೀ ಶಂಕರಾ ಚಾರ್ಯರು ಮತ್ತೂ ಇಂದಿನ ಅವರ ಅನುಯಾಯಿಗಳು, ಜಗನ್ಮಿಥ್ಯೆಯೆಂದೇ ಸಾರುತ್ತಿರುವರು. ಶಾಸ್ತ್ರ ಮತ್ತೂ ಶೃತಿಗಳು, ನಾಮರೂಪಗಳು ಮಿಥ್ಯೆ ಎಂಬುದರಲ್ಲಿ ಗಹನವಾದ ಅರ್ಥವನ್ನು ಹೊರಸೂಸುತ್ತಿರುವವೇ ವಿನಃ ದ್ರವ್ಯ ಮಿಥ್ಯೆ ಎಂದಲ್ಲ. ಸಾಕಾರವಾದ ಪರಮಾತ್ಮನ ವಿಶ್ವರೂಪವೇ ಇಡಿ ಜಗತ್ತು.

ಮಹಾನುಭಾವರಾದ ಶ್ರೀ ಬಸವಣ್ಣನವರು ತಮ್ಮೊಂದು ವಚನದಲ್ಲಿ,

ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ ।
ಸಕಲ ವಿಸ್ತಾರವಾದ ರೂಪ ನೀನೇ ದೇವಾ ।
ವಿಶ್ವತೋಚಕ್ಷು ನೀನೇ ದೇವಾ ।
ವಿಶ್ವತೋಬಾಹು ನೀನೇ ದೇವಾ ।
ವಿಶ್ವತೋಪಾದ ನೀನೇ ದೇವಾ ।
ಕೂಡಲ ಸಂಗಮ ದೇವಾ ॥

ಎಂದು ಜಗದ್ರೂಪಿ ಪರಶಿವನನ್ನು ಅಖಂಡವಾಗಿ ಸ್ತುತಿಸಿರುವರು. ಈ ವಿವ ರಣೆ ವೇದೋಕ್ತವಾದ ನುಡಿಯೇ ಆಗಿರುವುದು.

॥ ಓಂ ಸಹಸ್ರ ಶೀರ್ಷಾ ಪುರುಷಃ । ಸಹಸ್ರಾಕ್ಷಸ್ಸಹಸ್ರಪಾತ್ ।
ಸ ಭೂಮಿಂ ವಿಶ್ವತೋವೃತ್ವಾ । ಅತ್ಯತಿಷ್ಠದ್ದ ಶಾಂಗುಲಂ ॥

ಪುರುಷ ಸೂಕ್ತದಲ್ಲಿನ ಮಹಾಮಂತ್ರಾರ್ಥವನ್ನೇ ಬಸವಣ್ಣನವರು ತಿಳಿಗನ್ನಡ ದಲ್ಲಿ ಸ್ಪಷ್ಟಪಡಿಸಿರುವರು.

ಪಾಶ್ಚಿಮಾತ್ಯ ವಿದ್ವನ್ಮಣಿ ನ್ಯೂಟನ್ ಎಂಬ ವಿಜ್ಞಾನಿ ಧರಣಿಯಲ್ಲಡಗಿ

ರುವ Power of Gravity ಗುರುತ್ವಾಂಶ ಗ್ರಹಣ ಶಕ್ತಿ, ಭಾರವಾದ ಪದಾರ್ಥಗಳನ್ನು ಮೇಲೆಸೆದರೆ, ಧರಣಿ ಅದನ್ನು ತನ್ನ ಕಡೆಗೆ ಆಕರ್ಷಿಸುವುದೆಂಬುದನ್ನು ಸ್ಪಷ್ಟಪಡಿಸಿರುವನು. ಪಾಶ್ಚಿಮಾತ್ಯ ಕೋವಿದ ಮತ್ತೊಬ್ಬ ಡಾರ್ವಿನ್ ಎಂಬ ದೀರ್ಘದರ್ಶಿ (ವಿಜ್ಞಾನಿ) ಜಗತ್ತಿನ ನಿರ್ಮಾಣ ಮಾನವ ಜನ್ಮದ ಪ್ರಗತಿಯನ್ನು ಕುರಿತು ಅನುವಾದ ಮಾಡುತ್ತಾ Process of Evolution ಎಂಬ Theory ಯನ್ನು ಅಂದರೆ ಸನಾತನವಾದ ಹಿಂದೂ ಧರ್ಮದಲ್ಲಿನ ಪರಿಣಾಮವಾದವನ್ನು ವಿಶ್ವಸಿಸಿ ಪ್ರತಿಪಾದಿಸಿರುವನು.

ಅಗ್ನಿತತ್ವವು ಜಗತ್ತಿನ ಜೀವಾಳವಾಗಿದೆ. ಅಗ್ನಿ ಪುಟವಿಲ್ಲವೆಂದರೆ ಯಾವುದೂ ಇರಲಿಕ್ಕಿಲ್ಲ. ಪೃಥಿವ್ಯಾದಿ ಪಂಚತತ್ವಗಳು ಒಂದರಲ್ಲೊಂದು ಪೂರಕವಾಗಿದ್ದು ಪೋಷಕವೂ ಆಗಿರುವುವು. ನಮ್ಮ ಉದರದಲ್ಲಿ ಜಾಠರಾಗ್ನಿ ಎನಿಸಿ ಪೋಷಕವಾಗಿರುವುದು. ಭೂಗರ್ಭದಲ್ಲೂ ಜಲದ ಮಧ್ಯೆಯೂ ಅಗ್ನಿ ಅಂಶ ಅಡಕವಾಗಿರುವುದು ತಿಳಿದ ವಿಷಯವೇ ಆಗಿದೆ. ಪೃಥ್ವಿ ಅಪ್ ತತ್ವಗಳು ಅಗ್ನಿಯಲ್ಲಿ ವಿಲೀನವಾಗುವುವು. ಅಗ್ನಿತತ್ವ ಅಖಂಡ ವಿಶ್ವವನ್ನು ಕಬಳಸುವಷ್ಟು ವ್ಯಾಪಕವೂ ಊರ್ಧ್ವಗತಿಯುಳ್ಳದ್ದಾದರಿಂದ ಇದಕ್ಕೆ ವೈಶ್ವಾನರನೆಂಬ ಅನ್ವರ್ಥನಾಮವೂ ಉಂಟು. ಸೂರ್ಯ ಮಂಡಲ ಮಧ್ಯಾಂತವರ್ತಿಯಾಗಿ ವಿರಾಜಿಸಿ ಬೆಳಗುವ ಪರಂಜ್ಯೋತಿ ಪರಶಿವನ ಯತ್ಕಿಂಚಿತ್ ಅಂಶವೇ ಅಗ್ನಿತತ್ವ. ಯಾಗ ಯಜ್ಞ ಹೋಮಾದಿಗಳ ಮೂಲಕ ನೀಡುವ ಹವಿರ್ಭಾಗಗಳನ್ನು ಮಹಾರುದ್ರನಿಗೆ ಅಗ್ನಿದೇವತೆಯ ಮೂಲಕವೇ ಸಲ್ಲಿಸಲ್ಪಡುವುದು. ಅಗ್ನಿ ಮಹಾರುದ್ರನ ಮುಖವೆಂದೆನಿಸಿ ತೇಜೋರಾಶಿಯಿಂದ ಬೆಳಗುತ್ತಿರುವುದು. ಅಪ್ ತತ್ವವು ಶಬ್ಧ, ಸ್ಪರ್ಶ, ರೂಪ, ರಸಗಳಿಂದ ಕೂಡಿದ್ದರೆ, ಅಗ್ನಿ ಶಬ್ಧ, ಸ್ಪರ್ಶ, ರೂಪ ಗುಣಗಳಿಂದ ಕೂಡಿರುವುದು. " ಪೃಥ್ವಿ " ಯನ್ನು ಭಸ್ಮೀಭೂತಗೊಳಿಸಿ " ಅಪ್ " ಅನ್ನು ಇಂಗಿಸಿ ತನ್ನ ಗರ್ಭದಲ್ಲಿರಿಸಿಕೊಳ್ಳುವಂಥ ಆಗಾಧ ಶಕ್ತಿಯುಳ್ಳ ಅಗ್ನಿಭೂತವು ವಾಯು ತತ್ವದಲ್ಲಿ ಅಡಗುವುದು.

ವಾಯುವು ಎಷ್ಟಕ್ಕೆಷ್ಟು ಸೂಕ್ಷ್ಮವೋ ಅಷ್ಟಕ್ಕಷ್ಟು ಅವ್ಯಕ್ತವೂ ವ್ಯಾಪಕವೂ ಆಗಿರುವುದು. ಅಗ್ನಿದೇವನಿಗೆ ವಾಯು ಪರಮ ಮಿತ್ರ. ವಾಯು ಶಬ್ಧ ಸ್ಪರ್ಶಗಳೆಂಬ ಎರಡು ಗುಣಗಳಿಂದ ಕೂಡಿ ಅದ್ಭುತ ಶಕ್ತಿ ಮಯವಾಗಿದೆ. ವಾಯುವಿನಲ್ಲಿ ಸ್ಪಂದನಶಕ್ತಿ ಕಂಡು ಬರುತ್ತೆ. ಭಿಮ್ಮಿ, ಭಿಮ್ಮಿ ಧುಮ್ಮಿ ಧುಮಿಕುತ್ತ ವೇಗವಾಗಿ ದಶ ದಿಕ್ಕುಗಳನ್ನೂ ವ್ಯಾಪಿಸಿಕ್ಕೊಂಡು ಹರಡಿ ಮುಂದೆ ಮುಂದೆ ಓಡುವ ವಾಯುವೇಗವನ್ನು ತಡೆಗಟ್ಟಲು ಪಂಚಭೂತಗಳಲ್ಲಿ ವಾಯುವಿನಃ ಬೇರೊಂದಕ್ಕೆ ಶಕ್ತಿಯಿಲ್ಲ. ಪೃಥ್ವಿ ಅಪ್ ಅಗ್ನಿ ಭೂತಗಳು ಮಹಾ ವಾಯುತತ್ವದಲ್ಲಿ ಅಳವಡಿಸಲ್ಪಟ್ಟು ಅಂತರ್ಗತವಾಗುವುವು. ಪ್ರಚಂಡ ಮಾರುತವೆದ್ದು ಭೂಮ್ಯಾಕಾಶಗಳನ್ನು ಧೂಳಿನಿಂದ ಮುಚ್ಚಿದರೆ ಏನು ತಾನೆ ಕಾಣುತ್ತೆ. ಎಲ್ಲಾ ಆಟಪಾಟಗಳೂ ಸ್ಥಗಿತವಾಗುವುವು.

ವಾಯುವಿನ ಆವಶ್ಯಕತೆ ಹಾಗೂ ಸ್ಥಾನ ಮನುಷ್ಯನ ದೇಹದಲ್ಲಿ ಅತ್ಯಂತ ಪ್ರಾಮುಖ್ಯತೆ ಹೊಂದಿರುವುದು. ದಶವಾಯುಗಳಿಂದ ಪೂರಕವಾದೀ ಮನುಷ್ಯ ದೇಹದಲ್ಲಿ ಪ್ರಾಣವಾಯು, ಅಪಾನವಾಯು, ಸಮಾನವಾಯು, ಉದಾನ ವಾಯು ಮತ್ತು ವ್ಯಾನವಾಯು ಇವೈದೂ ಮುಖ್ಯವಾದ ಪಂಚಪ್ರಾಣಗಳು.

॥ ಪ್ರಾಣೋಽಪಾನಸ್ಸಮಾನಶ್ಚೋ । ದಾನವ್ಯಾನೌಚವಾಯವಃ ।
ಹೃದಿಪ್ರಾಣೋ ಗುದೇಽಪಾನಃ । ಸಮಾನೋಽನಾಭಿಸಂಸ್ಥಿತಃ ।
ಉದಾನಃ ಕಂಠ ದೇಶಸ್ಥೋ ! ವ್ಯಾನಸ್ಸರ್ವಶರೀರಗಃ ॥

ಅಂದರೆ ಪ್ರಾಣವಾಯುವು ಹೃದಯದಲ್ಲೂ, ಅಪಾನವಾಯು ಗುದಸ್ಥಾನದಲ್ಲೂ, ಸಮಾನವಾಯುವು ನಾಭಿಯಲ್ಲೂ ಉದಾನವಾಯುವು ಕಂಠದಲ್ಲೂ ಮತ್ತು ವ್ಯಾನವೆಂಬ ವಾಯುವು ಶರೀರಾದ್ಯಂತದಲ್ಲೂ ಹುಟ್ಟಿ ವ್ಯಾಪಿಸಿ ತಂತಮ್ಮ ಕರ್ಮಗಳನ್ನೆಸಗುತ್ತಿರುವುವು. ಪಂಚ ಪ್ರಧಾನವಾದೀ ಪಂಚವಾಯುಗಳಿಗೆ, ಪಂಚ ಉಪವಾಯುಗಳು ಉಪ ಮಂತ್ರಿಗಳಂತೆ ದೇಹದ ಆದ್ಯಂತ ಅವ

ಯುವಗಳ ನಿರ್ವಹಣೆಗೆ ಸಹಕಾರಿಯಾಗಿರುವುವು.

॥ ನಾಗಶ್ಚ ಕೂರ್ಮಃ ಕೃಕರೋ । ದೇವದತ್ತೋ ಧನಂಜಯಃ ॥
ವಾಗ್ದ್ವಾರೇನಾಗ ಆಖ್ಯಾತಃ । ಕೂರ್ಮ ಉನ್ಮೀಲನೇಸ್ಮೃತಃ ॥
ಕೃಕರಾಚ್ಚಕ್ಷುತಂಜ್ಞೇಯಂ । ದೇವದತ್ತಾದ್ವಿಜೃಂಭಣಮ್ ।
ನಜಹಾತಿ ಮೃತಂವಾಪಿ । ಸರ್ವವ್ಯಾಪೀ ಧನಂಜಯಃ ॥

ನಾಗ, ಕೂರ್ಮ, ಕೃಕರ, ದೇವದತ್ತ ಮತ್ತು ಧನಂಜಯ ಇವೇ ಶರೀರದಲ್ಲಿರುವ ಪಂಚ ಉಪ ವಾಯುಗಳು ನಮ್ಮ ವಾಕ್ ದ್ವಾರದಲ್ಲಿ ನಾಗವೆಂಬ ಉಪವಾಯುವು ಇದ್ದು, ಸಂಗೀತ ಸಾಹಿತ್ಯಾದಿ ವಾಗುತ್ಪತ್ತಿಗೆ ಸಹಾಯಕರವಾಗಿರುವುದು. ಕೂರ್ಮವು ರೆಪ್ಪೆಗಳ ಬಡಿತಕ್ಕೂ. ಕೃಕರವು ಹಸಿವು ಬಾಯಾರಿಕೆಗಳಿಗೂ, ದೇವದತ್ತವು ದೇಹದಲ್ಲಿ ಆಗಾಗ್ಗೆ ಉಂಟಾಗುವ ಕಂಪನ, ವಿಜೃಂಭಣೆ, ಪುಳುಕಾಂಕತಾದಿಗಳಿಗೆ ಆಶ್ರಯವಾಗಿದ್ದು, ಕಡೆಯದಾದ ಧನಂಜಯವೆಂಬ ಉಪವಾಯುವು ದೇಹಾದ್ಯಂತ ಪ್ರಸನ್ನವಾಗಿರುತ್ತೆ. ಸ್ಫಂದನಮಯವೂ ಚೈತನ್ಯಾತ್ಮಕವಾದೀ ದಶವಾಯುಗಳ ಶಕ್ತಿ ಸಂಪರ್ಕವಿಲ್ಲವೆಂದರೆ, ಜೀವಿತವೇ ಅಸ್ತವ್ಯಸ್ತವಾಗುವುದು. ದಶವಾಯುಗಳ ಗಮನಾಗಮನಗಳಿಗೆಂದೇ ॥ ನವದ್ವಾರೇ ಪುರೇದೇಹಿ ॥ ಈ ದೇಹವು ಒಂಭತ್ತು ಮಹಾ ಬಾಗಿಲುಗಳುಳ್ಳದ್ದಾಗಿರುವುದೆಂದು ಕಾಣುವುದು. ದಶವಾಯುಗಳಿಗೆ ರಾಜನಂತೆ ಹೃದ್ಗತವಾದ ಪ್ರಾಣವಾಯು ವಿರಾಜಿಸುತ್ತಿರುವುದು.

ಅಂಜನಾನಂದನನಾದ ವಾಯುಪುತ್ರ ಶ್ರೀ ಆಂಜನೇಯನು ಜನ್ಮಿಸಿ, ತಾಯಿಯ ಪರ್ಯಂಕದಲ್ಲಿ (ತೊಡೆಯಲ್ಲಿ) ಆಟವಾಡುತ್ತಿದ್ದಂತೆ ಪೂರ್ವದಿಕ್ಕಿನಲ್ಲಿ ಆಗ ತಾನೇ ಕೆಂಡಾಕಾರವಾಗಿ ಉದಯಿಸುತ್ತಲಿದ್ದ ಬಾಲಸೂರ್ಯನನ್ನು ಕಂಡ ಕೋಮಲ ಶಿಶು (ಆಂಜನೇಯನು) ಅದೊಂದು ಅಪೂರ್ವ ಹಣ್ಣೆಂದು ತಿಳಿದು ಥಟ್ಟನೆ ಗಗನಕ್ಕೆ ಹಾರಿ, ಕ್ಷಣಾರ್ಧದಲ್ಲಿ ಸೂರ್ಯಮಂಡಲವನ್ನು

ಮುಟ್ಟಿ ಸೂರ್ಯ ಬಿಂಬವನ್ನು ಹಿಡಿದು ಕೀಳಲುದ್ಯುಕ್ತನಾದನು. ಏನಾಶ್ಚರ್ಯ ! ಇದೆಂತಃ ಆಶ್ಚರ್ಯ ! ಇಂದು ಯಾವ ಪಾಶ್ಚಿಮಾತ್ಯ ಪೌರ್ವಾತ್ಯ ವಿಜ್ಞಾನ ಪ್ರಮುಖ ಮುಖಂಡ ವಿಜ್ಞಾನಿಗಳು, ಕೇವಲ ಬುಧ ಗ್ರಹ, ಚಂದ್ರ ಗ್ರಹಗಳ ಸೀಮೆಯನ್ನು ಮುಟ್ಟಲು ಹವಣಿಸಿ ಭಗ್ನಮನೋ ರಥರಾಗುತ್ತಿರುವರೋ, ಅಂಥಾ ಮಹಾಕಾರ್ಯದಲ್ಲಿ ತ್ರೇತಾಯುಗದಾದಿಯಲ್ಲೇ ಸೀಮಾತೀತವಾದ ಚಂದ್ರಮಂಡಲಕ್ಕೂ ಕೋಟಿ ಕೋಟಿ ಮೈಲಿಗಳ ಊರ್ಧ್ವಗತಿಯಲ್ಲಿ ಕಂಗೊಳಿಸುವ ತೇಜಃ ಪುಂಜವಾದ ಸೂರ್ಯಮಂಡಲವನ್ನು ಕೋಮಲ ಶಿಶುವಾದ ಮಾರುತಿ ಹಿಡಿದನೆಂದರೆ, ಅವನೆಂಥಾ ಅಪ್ರತಿಹತ ಪ್ರತಿಭಾ ಸಂಪನ್ನ ಪರಂತಪಃ ಮತ್ತೂ ಭಾರತೀಯ ಆಧ್ಯಾತ್ಮಿಕ ಶಕ್ತಿಯಿಂದಂತರ್ಗತವಾದ ಅದೆಂತಹ ವಿಜ್ಞಾನ ಪುಂಜವಾಗಿರಬೇಕು. ಮಾರುತಿ ಮಗುವು ತನ್ನ ಹಿಡಿಯಲು ಬಂದ ಕಾರಣದಿಂದ ಕುಪಿತನಾದ ಆದಿತ್ಯ ದೇವನು (ಸೂರ್ಯನು) ಥಟ್ಟನೆ ಛಳಾರೆಂದು ಒಮ್ಮೆ ಬಲವಾದ ಪೆಟ್ಟನಿಂದ ತಾಡಿಸಲು, ಆ ಪೆಟ್ಟಿಗೆ ತಾಮ್ರಮುಖನಾಗಿ ಆಂಜನೇಯನು ಭುವಿಗೆ ಹಿಂದಿರುಗಿ ಬಿದ್ದನು. ತನ್ನ ಮುದ್ದು ಕುವರನಿಗೆ ಸೂರ್ಯದೇವನು ತಾಡಿಸಿದುದನ್ನು ಕಂಡ ವಾಯುದೇವನು ಕುಪಿತನಾಗಿ ಸರ್ವತ್ರ ವ್ಯಾಪಕವಾಗಿದ್ದ ತನ್ನ ಮಹಾ ವಾಯು ಅಂಶವನ್ನು ತನ್ನೊಳಗೆ ಪೂರ್ಣ ಸಂಗ್ರಹಿಸಿಕ್ಕೊಂಡು ಗಾಢವಾದ ಗವಿಯೊಂದರಲ್ಲಿ ಅಡಗಿಕ್ಕೊಂಡನು. ಎಲ್ಲೆಲ್ಲೂ ಸ್ವರ್ಗ ಮರ್ತ್ಯ ಪಾತಾಳ ಲೋಕಂಗಳಲ್ಲೂ ಕಿಂಚಿತ್ತೂ ವಾಯುವಿನ ಸಂಚಾರವೇ ಇಲ್ಲವಾಗಿ ಭುವನಾಂಡ ಕೋಟಿಗಳು ಉಸುರ್ಗಟ್ಟಿ, ತಲ್ಲಣಿಸಿ, ಕಂಪಿಸಿ, ಗತಿಕಾಣದೆ ಪ್ರಾಣೋತ್ಕ್ರಮಣ ಸ್ಥಿತಿಯಿಂದ ಕೂಡಿ ನೊಂದು ದಿಗಿಲ್‌ಗೊಂಡು ಜಗದ್ರಕ್ಷಕನಾದ ಸ್ವಾಮಿ, ಮಹಾದೇವನಲ್ಲಿ ತಂತಮ್ಮ ಪ್ರಾಣ ಬಿಕ್ಷೆಗಾಗಿ ಆರ್ಥ ಧ್ವನಿಯಿಂದ ವಾಯುವಿಲ್ಲದೆ ಕಂಗೆಟ್ಟು ರಕ್ಷಣೆಗಾಗಿ ಶರಣಾಗತಿ ಭಾವದಿಂದ ರೋಧಿಸಿದರು. ಆಗ ಮುಕ್ಕಣ್ಣನು ಮುಂದೇನು ಗತಿಯೆಂದು ಮುಮ್ಮೂರ್ತಿಯುತನಾಗಿ ಮಾರುತಿಯ ಜನಕನಾದ ವಾಯುವಿದ್ದೆಡೆಯನ್ನು ಸೇರಿ, ವಾಯುವಿನಿಂದ ನಿಜ ವೃತ್ತಾಂತವನ್ನು ಅರಿತು, ಅವನನ್ನು ಸಂತೈಸಿಸಿ ಸಕಲ ಲೋಕಗಳ ಉದ್ಧಾರ

ಕ್ಕಾಗಿ ಮಹಾವಾಯುವನ್ನು ಹಿಂದಿನಂತೆ ಸರ್ವತ್ರ ವ್ಯಾಪಿಸಿ ಸ್ಪಂದಿಸುವಂತೆ ಸ್ವಾಮಿ ಹೊರಗೆಡಹಿದನೆಂಬ ವೃತ್ತಾಂತ ಶ್ರೀ ಮದ್ರಾಮಾಯಣ ಮಹಾ ಕಾವ್ಯದಲ್ಲಿ ಪ್ರೋಕ್ತವೆಇರುವುದು ಸರಿಯಷ್ಟೆ. ಶರೀರವೆಂಬುವ ಹುತ್ತದಲ್ಲಿ ಪ್ರಾಣಾದಿ ದಶವಾಯುಗಳೆಂಬ ಸರ್ಪಗಳು ಬುಸುಗುಟ್ಟುವಂತೆ, ಕುಂಡಲಿನಿ, ಷಡ್‌ಚಕ್ರ ಹಾಗೂ ದಶವಾಯುಗಳು ಸದಾ ಹರಿದಾಡುತ್ತಾ ಚೈತನ್ಯಮಯ ವಾಗಿರುವುವು. ವಾಯುವೇ ಸರ್ಪಗಳಿಗೆ ಪ್ರಧಾನ ಆಹಾರ. ಸರ್ಪಗಳಾ ಯುಷು ಸಾವಿರ ವರ್ಷಗಳೆಂಬ ಅಂಶ ಗಮನಾರ್ಹವೇ ಸರಿ. ವಾಯುವಿನಿಂದ ಭರಿತವಾದ ಸರ್ಪಗಳ ದೇಹ ರಬ್ಬರಿನಂತೆ (Spring Cusion) ಮೆತ್ತಗಿರು ವುದು. ಶ್ರೀ ಮಹಾ ವಿಷ್ಣು ಇದರಿಂದಾಗಿ ಆದಿಶೇಷನನ್ನೇ ಹಾಸಿಗೆಯಾಗಿ ಮಾಡಿ ಸುಖಾಸೀನನಾಗಿರುವನು. ಪರಮೇಶ್ವರನಾದರೋ ನಾಗಾಭರಣ ನೆಂದು ಸ್ತುತ್ಯನಾಗಿರುವುದು ಸರಿಯಷ್ಟೆ. ಮಹಾ ವಾಯುತತ್ವವು ಶಬ್ಧ ಸ್ಪರ್ಶ ಗುಣಗಳಿಂದ ಕೂಡಿ ಪೃಥ್ವಿ, ಅಪ್ ತೇಜಸ್ ಭೂತಗಳನ್ನು ಕಬಳೀ ಕರಿಸಿ, ಸರ್ವತ್ರ ಸೂಕ್ಷ್ಮ ಸ್ಥಿತಿಯಿಂದ ನಿಬಿಡೀಕೃತವಾಗಿರುವುದು. ಈ ವಾಯುಭೂತವು ಮಹಾಕಾಶ ತತ್ವದಲ್ಲಿ ಅಡಗಿ ಹೋಗಿರುವುದು.

ಆಕಾಶ ತತ್ವವು ಅತಿ ಸೂಕ್ಷ್ಮವೂ, ಗಹನವೂ, ಗಂಭೀರವೂ ಆಗಿ ಅರಿಯಲು ವಿಚಾರ ಪೂರಿತ ವಿಷಯವಾಗಿರುವುದು. ಕೇವಲ ಶಬ್ದೈಕ ಗುಣ ದಿಂದ ಕೂಡಿರುವುದು. ಆಕಾಶ ತತ್ವದಲ್ಲಿ ಪೃಥ್ವ್ಯಾದಿ ವಾಯು ಪರ್ಯಂತರ ಎಲ್ಲಾ ಭೂತಗಳು ಅಡಕವಾಗಿದ್ಧರೂ ಮತ್ತೂ ಆಕಾಶವು ಪೃಥ್ವಿ, ಅಪ್, ತೇಜಸ್, ವಾಯು ಭೂತಾದಿಗಳಲ್ಲಿ ಹುದುಗಿ ಒಳಗೂ, ಹೊರಗೂ ಸರ್ವತ್ರ ಪರಿಪೂರ್ಣವಾಗಿ ವ್ಯಾಪಿಸಿದ್ದರೂ, ಒಂದಕ್ಕೂ ಕಿಂಚಿತ್ತೂ ಅಂಟದೆ ನಿರ್ಲೇಪಿತ ವಾಗಿ ಅಸಂಗದಿಂದ ಆಕಾಶವು ವಿರಾಜಿತವಾಗಿರುವುದು. ಯಾವುದಕ್ಕೂ ಅಂಟದೆ ಇದ್ದು ಪೂರಕವಾಗಿ ಅವಕಾಶವನ್ನು ಕೊಡುವುದು ಯಾವುದೋ ಅದನ್ನೇ ಆಕಾಶವೆನ್ನುವರು. ಆಕಾಶ ನೀಲಿವರ್ಣ ಉಳ್ಳದ್ದಾಗಿದೆ. ಇದರ ವಿಸ್ತೀರ್ಣ ಹಾಗೂ ಎತ್ತರ ಇಷ್ಟೇ ಎಂದು ಹೇಳಲು ಸಾಧ್ಯವಿಲ್ಲ. ಮುಂದೆ

ಮುಂದೆ ಮತ್ತು ಮೇಲೆ ಮೇಲೆ ಹೋದ ಹಾಗೆಲ್ಲಾ ಸೀಮಾತೀತವಾಗಿ ಹರಡಿ ಅಖಂಡವಾಗಿ ವ್ಯಾಪಿತವಾಗಿದೆ. ನಮ್ಮೊಳಗೂ, ಹೊರಗೂ, ಮೇಲೂ ಸುತ್ತಲೂ ಮತ್ತೆಲ್ಲೆಲ್ಲೂ ಆಕಾಶ ವ್ಯಾಪಿಸಿದೆ. ಅಷ್ಟಕ್ಕೂ ಅವಕಾಶ ಕೊಡುವು ದಾಗಿಯೂ ಇದೆ. ಆಕಾಶ ತತ್ವದಲ್ಲಿ ಸಹಜವಾಗಿರುವ ಅಗಮ್ಯ ಶಕ್ತಿ ಎಂದರೆ ಸುಸೂಕ್ಷ್ಮ ಹಾಗೂ ಸರ್ವ ವ್ಯಾಪಕ ಶಕ್ತಿಗಳೇ ಆಗಿರುವುವು. ಆಕಾಶವೆಂದರೆ ಏನೂ ಇಲ್ಲ. ಆತ್ಯಂತಿಕ ಶೂನ್ಯವೆಂದಲ್ಲ. ನಮ್ಮ ಅಸ್ತಿತ್ವ, ನಮ್ಮ ಆಟ ಪಾಟಗಳು ಹಾಗೂ ಜಗತ್ತಿನ ಅಭ್ಯುದಯ ಲಯಾದಿಗಳು ಗಗನಾಂಬೆಯ ಒಡಲಿನಲ್ಲೇ ಅಡಕವಾಗಿರುವುವು. ಭೂಮಿ, ಬುಧ, ಚಂದ್ರ, ಸೂರ್ಯ, ನಕ್ಷತ್ರಗಳು, ಭುವನಾಂಡ ಕೋಟಿಗಳು ಅಂತರಿಕ್ಷದ ಗಂಭೀರವಾದ ಅಚಿಂತ್ಯ ಗರ್ಭಾಗರದಲ್ಲಿ ಹುದುಗಿರುವುವು ಮತ್ತಲ್ಲಿಂದಲೇ ಹೊರಹೊಮ್ಮಿ ವಿಕಾಸ ಗೊಂಡು ನೆಲಸಿರುವುವು. ನಮ್ಮೀ ದೇಹವು ಪಂಚ ಭೂತಗಳ ಪಂಚೀಕರಣ ದಿಂದ ಪರಮೇಶ್ವರಾನುಗ್ರಹ ಬಲದಿಂದ ಸೃಜಿಸಲ್ಪಟ್ಟಿದೆ. ನಮ್ಮ ದೇಹದ ಎಲುಬು ಅಸ್ತಿಪಂಜರ ಪೃಥ್ವಿ ಅಂಶಗಳಿಂದಲೂ; ರಕ್ತ, ಮಾಂಸ, ಮೂತ್ರ, ಬೆವರು, ಕಣ್ಣೀರು ಇತ್ಯಾದಿಗಳು ಅಪ್ ಅಂಶದಿಂದಲೂ; ನಮ್ಮ ದೇಹದೊಳ ಗಿನ ಉಷ್ಣಾಂಶ, ಜಾಠರಾಗ್ನಿ ಹಾಗೂ ಹೃದಯದೊಳಗಿನ ಬೆಳಕು ಜ್ಯೋತಿ (ಅಗ್ನಿ) ಅಂಶದಿಂದಲೂ, ಪ್ರಾಣಾದಿ ದಶ ವಿಧ ವಾಯುಗಳು ಹೊರಗಿನ ಮಹಾ ವಾಯುವಿನಂಶಗಳಿಂದ ಹೊಂದಿಕ್ಕೊಂಡಿರುವುವು.

ಆಕಾಶ ತತ್ವವು ಬಹು ಸೂಕ್ಷ್ಮವಾದುದಾಗಿರುತ್ತೆ. ಎಲ್ಲಾ ದೇಹ ಗಳೊಳಗೂ, ಹೊರಗೂ ಏಕ ಪ್ರಕಾರವಾಗಿ ಅವಿಚ್ಛಿನ್ನವಾಗಿರುವುದು. ದೇಹ ದೊಳಗಿನ ಆಕಾಶ ಅಂದರೆ - ಕಿವಿ ಮೂಗು ಕಣ್ಣು ಬಾಯಿಗಳ ರಂಧ್ರಗಳಲ್ಲಿ ಅವಕಾಶವನ್ನು ಕೊಡುವ ಖಾಲಿ ಪ್ರದೇಶವೇ ಆಕಾಶವೆನಿಸುವುದು. ಮಲ ಜಲ ಕೋಶಗಳೊಳಗೂ, ಪಿತ್ತಕೋಶ ಅನ್ನ ಕೋಶಗಳಲ್ಲೂ ಆಗಿಂದಾಗ ಏರ್ಪಡುತ್ತಿರುವ ಅವಕಾಶವೇ ಆಕಾಶವೆನಿಸಿರುವುದು. ಆಕಾಶ ತತ್ವ ಎಲ್ಲಾ ದೇಹಗಳೊಳಗೂ ಹಾಸುಹೊಕ್ಕಾಗಿರುವುದು. ಹೃದಯದೊಳಗೂ ಆವಕಾಶ

## — ಪ್ರಸ್ತಾವನೆ —

ವನ್ನು ನೀಡುತ್ತಿರುವ ಅತಿ ಸೂಕ್ಷ್ಮ ಪ್ರದೇಶವನ್ನು ದಹರಾಕಾಶವೆಂದು ಆಗಮಾಮ್ನಾಯಾದಿಗಳಲ್ಲಿ ಪ್ರತೀತಿ ಇರುತ್ತೆ. ॥ ಹೃದಾಕಾಶೇ ಚಿದಾದಿತ್ಯಃ। ಸದಾ ಭಾಸತಿ ಭಾಸತಿ ॥ ಎಂಬ ಶಾಸ್ತ್ರೋಕ್ತಿ ಪ್ರಸಿದ್ಧವೇ ಇರುವುದು. ಹೃದಾಕಾಶವು ದಹರಾಕಾಶವೆಂತಲೂ ಚಿದಂಬರವೆಂತಲೂ ಪ್ರೋಕ್ತವಾಗಿರುವುದು. ಇದರಿಂದ ಬ್ರಹ್ಮಾಂಡದಲ್ಲಿ ಕಾಣುವ ತತ್ವಗಳೇ ಪಿಂಡಾಂಡದಲ್ಲೂ ಅಡಕವಾಗಿರುವುವೆಂಬುದು ಸ್ಪಷ್ಟವೇ ಇರುತ್ತೆ. ದೇಹದ ನವ ದ್ವಾರಗಳಲ್ಲೂ, ರಂಧ್ರ, ರಂಧ್ರಗಳೊಳಗೂ, ಸೂಕ್ಷ್ಮದರೊಳಗೆ ಅತಿ ಸೂಕ್ಷ್ಮವಾಗಿ ಆಕಾಶ ವ್ಯಾಪಕವೆನಿಸಿರುವುದು. ನಮ್ಮೊಳಗೆ ಆಕಾಶವಿದ್ದರೆ ನಾವು ಆಕಾಶದೊಳಗಿರುವೆವು. ಭಗವಂತನ ಇರುವಿಕೆಯು ಆಕಾಶವತ್ ಅನವಚ್ಛಿನ್ನವಾಗಿರುವುದು. ಯದ್ವತ್ ಮಹಾಕಾಶವು ಪೂರ್ಣವೆಂದೆನಿಸಿರುವುದೋ ತದ್ವತ್ ಚಿದಾಕಾಶ ಸ್ವರೂಪಿಯಾದ ಪರಮಾತ್ಮನು ಪರಿಪೂರ್ಣನೆನಿಸಿರುವನು. ಚಿದಾಕಾಶ ಮಹಾಕಾಶಾದಿಗಳು ಗಹನವೂ ಅತಿ ಗಂಭೀರವೂ ಆಗಿ ಸೂಕ್ಷ್ಮದಲ್ಲೂ ಅತಿ ಸೂಕ್ಷ್ಮಗಳೆನಿಸಿ ಸರ್ವತ್ರ ವ್ಯಾಪಕತ್ವದಿಂದ ಅಲಿಪ್ತವಾಗಿ ವಿರಾಜಿಸಿ, ಆಕಾಶವು ತನ್ನ ಏಕೈಕ ಗುಣವಾದ ಶಬ್ಧ ಗುಣದಿಂದ ಕೂಡಿದ್ದರೆ, ಚಿದಾಕಾಶವು ನಿರ್ಗುಣವೂ, ನಿರವಯುವವೂ, ನಿರ್ದ್ವಂಧ್ವವೂ, ನಿರಾಮಯವೂ, ಅಪ್ರಮೇಯವೂ ಆಗಿ ಸ್ವಪ್ರಕಾಶದಿಂದ ಬೆಳಗುತ್ತಿರುವುದು. ಚೇತನಾ, ಚೇತನಾತ್ಮಕವಾದ ಬ್ರಹ್ಮಾಂಡ ಕೋಟಿಗಳು ಮಹಾಕಾಶ ತತ್ವದಲ್ಲಿ ಅಡಗುವುವು. ಇಂತು ಪೃಥ್ವ್ಯಾದಿ ವಾಯು ಪರ್ಯಂತರವುಳ್ಳ ಸಮಸ್ತ ಭೂತಗಳೂ ಮಹಾಕಾಶದಲ್ಲಡಗಲು, ಮಹಾಕಾಶವು ಪರಾಕಾಶದಲ್ಲಿ ವಿಲೀನಗೊಳ್ಳುವುದು. ಪರಾಕಾಶವು ಶಾಶ್ವತವೂ ಅವ್ಯಕ್ತವೂ ಆಗಿದ್ದು ವಿಶ್ವದ ಸೃಷ್ಟ್ಯಾದಿಗಳಿಗೆ "ಯಃ ಮೂಲಂ ಪ್ರಾದುರಾಸೀತ್" ಮತ್ತೂ "ಮೂಲ ಸ್ತಂಭಾಯ ಶಂಭವೇ" ಎಂಬ ಪ್ರಮಾಣಾನುಸಾರ ಅಖಿಲಕ್ಕೂ ಪರಮ ಮೂಲ ಕಾರಣ ಪರವಸ್ತುವೆನಿಸಿರುವುದು.

# XVIII

ಮೇಲ್ಕಂಡ ಮಹದಂಶಗಳನ್ನೊಳಗೊಂಡಂತೆ ಶೃತಿಮಾತೆಯು ಗಂಭೀರ ವಾಣಿಯಿಂದ ॥ ಆಕಾಶಾತ್ಸಂಭವತೀಹ ವಿಶ್ವ ॥ ಎಂದು ಸಾರುತ್ತಿರುವಳು. ಸೃಷ್ಟಿಕ್ರಮವು ಪರಶಿವಪರಂಜ್ಯೋತಿಯ ಇಚ್ಛಾಶಕ್ತಿಯಿಂದ ಪುರುಷನೂ, ಪುರುಷನಿಂದ ಪ್ರಕೃತಿಯೂ, ಪ್ರಕೃತಿ ಪುರುಷರುಗಳಿಂದ ಮಹಾಕಾಶವೂ, ಮಹಾಕಾಶದಿಂದ, "ಆಕಾಶಾತ್‌ವಾಯುಃ" ವಾಯುವೂ ; " ವಾಯೋರಗ್ನಿಃ " ವಾಯುವಿನಿಂದ ಅಗ್ನಿಯೂ ; ಅಗ್ನಿಯಿಂದ " ಆಪಃ " ಜಲತತ್ವವೂ, ಜಲಾಂಬುಧಿಯಿಂದ ಪೃಥ್ವಿಯೂ ; ಪೃಥ್ವಿಯಿಂದ " ಪೃಥಿವ್ಯಾಭ್ಯೋಽಷಧಯಃ " ಪಂಚ ಸಂಜೀವಿನ್ಯಾದಿ ಅನಂತ ಅಮೃತಮಯ ಓಷಧಿಗಳೂ ಅನ್ನವೂ ಹಾಗೂ ಉದ್ಭಿಜ, ಶ್ವೇತಜ, ಅಂಡಜ, ಮತ್ತೂ ಪಿಂಡಜಗಳೆಂಬ ಚತುರ್ವಿಧ ಸೃಷ್ಟಿಯ ಕ್ರಮದ ಒಂದೊಂದು ವರ್ಗದಲ್ಲೂ ಇಪ್ಪತ್ತೊಂದು ಲಕ್ಷ ರಾಶಿ ಜೀವಕೋಟಿಗಳಂತೆ ವೊಟ್ಟು ಎಂಭತ್ನಾಲ್ಕು ಲಕ್ಷ ರಾಶಿ ಜೀವಕೋಟಿಗಳು ವಿಚಿತ್ರಾಯಮಾನಕರವಾಗಿ ಸೃಜಿಸುವ ವಿಧಾನವು ವೇದಾಗಮಾದಿಗಳಲ್ಲಿ ವಿಧಿತವಾದಂತೆ ವೀರಶೈವ ಧರ್ಮವೆನಿಸಿದ ಪರಿಣಾಮವಾದದಲ್ಲಿ ಪರಿಯವಸಾನವನ್ನು ಹೊಂದುವುದರಿಂದ, "ಜಗನ್ಮಿಥ್ಯಾ" ಎಂಬ ವಾದಕ್ಕೆ ಅವಕಾಶವಿಲ್ಲವಷ್ಟೆ. ಪಿಂಡಜದ ೨೧ ಲಕ್ಷ ರಾಶಿ ಜೀವಕೋಟಿಗಳೆಂದರೆ ವೊಂದೊಂದು ರಾಶಿಯಲ್ಲೂ ಅಗಣಿತ ಸಂಖ್ಯೆಯಿಂದ ಕೂಡಿದ ಜೀವಕೋಟಿಗಳು, ಸಮುದ್ರ ತೀರದಲ್ಲಿನ ಮರಳು ಕಣಗಳನ್ನು ಮೀರಿಸುವಷ್ಟು ಸಂಖ್ಯಾಕುಲದಿಂದ ಕೂಡಿರುವುವು. ಪಿಂಡಜ ಸೃಷ್ಟಿಯೊಳಡಗಿರುವ ಇಪ್ಪತ್ತೊಂದು ಲಕ್ಷ ರಾಶಿಗಳಲ್ಲಿ, ನವಖಂಡ ಪೃಥ್ವಿ ಎನಿಸಿದ ಇಡಿ ಭೂಮಂಡಲದೊಳಗಿನ ಅನಂತಾನಂತ ಮಾನವ ಕೋಟಿ ಏನಿದೆ, ಅಂಡಜದ ೨೦ ಲಕ್ಷ ರಾಶಿಯೊಳಗೆ ಒಂದು ರಾಶಿ ಎಂದು ಪರಿಗಣಿಸಲ್ಪಟ್ಟಿರುತ್ತೆ. ಇಂತಪ್ಪ ರಾಶಿಗಳು ಉದ್ಭಿಜಾದಿ ಚತುರ್ವಿಧ ಸೃಷ್ಟಿಯೊಳಗಿನ ೮೪ ಲಕ್ಷ ರಾಶಿಗಳೆನಿಸಿ, ಈಶ್ವರ ಸೃಷ್ಟಿಯು ದೈವಲೀಲೆಯೆನಿಸಿರುವುದು. ಪ್ರಳಯ ಅಥವಾ ಮಹಾ ಪ್ರಳಯ ಸಂಭವಿಸಿದಾಗ ೮೪ ಲಕ್ಷ ಜೀವರಾಶಿಗಳೂ ಸ್ಥಾವರ ಜಂಗಮಾತ್ಮಕವಾದೀ ಅಖಂಡ ಭೂಮಂಡಲವೂ ಪೃಥ್ವಿ ತತ್ವದಲ್ಲಿ

ಅಡಗುವುವು. ಪೃಥ್ವಿ ಅಪ್ಪಿನಲ್ಲೂ (ಜಲದಲ್ಲೂ) ; ಜಲಚರಜಂತುಗಳೊಡನೆ ಅಪ್ ತತ್ವವು ಅಗ್ನಿ ತತ್ವದಲ್ಲೂ, ಅಗ್ನಿ ತತ್ವವು ತನ್ನ ಪಂಚಾಗ್ನಿಮಯ ತೇಜೋ ರಾಶಿಯನ್ನು ಮಹಾ ಸೂಕ್ಷ್ಮವಾದ ವಾಯು ತತ್ವದಲ್ಲಿ ಅಡ ಕಂಗೊಂಡಿರಲು ; ಪೃಥ್ವಿವ್ಯಾದಿ ಅಗ್ನಿ ತತ್ವಗಳನ್ನುಂಡ ವಾಯು ತತ್ವವು ಭೂತಾಕಾಶದಲ್ಲಿ ಲೀನವಾಗುವುದು. ಇವುಗಳನ್ನೆಲ್ಲಾ ಮಹಾಕಾಶವು ಗರ್ಭೀ ಕರಿಸಿಕ್ಕೊಂಡಿದ್ದರೂ ಅಲಿಪ್ತವೆನಿಸಿ ನಾದಮಯ ಸ್ವರೂಪದಲ್ಲಿ ಪ್ರಕೃತಿಯಲ್ಲಡ ಗಲು, ಪ್ರಕೃತಿದೇವಿಯು–

ಯಾಮಾಹುಃ ಸರ್ವಲೋಕಾನಾಂ ।
ಪ್ರಕೃತಿಂ ಶಾಸ್ತ್ರಪಾರಗಾಃ ॥
ತಾಂ ಧರ್ಮಚಾರಿಣೀಂ ಶಂಭೋಃ ।
ಪ್ರಣಮಾಮಿ ಪರಾಂಶಿವಾಂ ॥

ಎಂಬುದಾಗಿ, ಆಚಾರ್ಯಕುಲ ಸಂಜಾತರಾದ ಶಿವಜ್ಞಾನ ಸಿಂಧುವೆನಿಸಿದ ಶ್ರೀ ಶಿವಯೋಗಿ ಶಿವಾಚಾರ್ಯರು ತಮ್ಮಿಂದ ಪ್ರಣೀತವಾದ ಸಿದ್ಧಾಂತ ಶಿಖಾಮಣಿ ಮಹಾ ಸಂಸ್ಕೃತ ಆದಿಕಾವ್ಯದ ಶಕ್ತಿ ಸ್ತುತಿಯಲ್ಲಿ, ಪ್ರಕೃತಿ ಸ್ವರೂಪಿಣಿಯಾದ ಶಾಂಭವಿಯನ್ನು ಮುಕ್ತಕಂಠದಿಂದ ಸ್ತುತಿಸಿ ॥ತಾಂಧರ್ಮಚಾರಿಣೀಂ ಶಂಭೋಃ॥ ಎಂದು ಸ್ಪಷ್ಟ ಪಡಿಸಿರುವರು, ಈಶ್ವರನಲ್ಲಿ ಅರ್ಧಾಂಗಿ ಎನಿಸಿದ ಪ್ರಕೃತಿ ದೇವಿಯು ಪುರುಷನಲ್ಲಿ ಪ್ರಾಣ ಸ್ವರೂಪಿಣಿಯಾಗಿ ಶಕ್ತಿಮಯಳೆನಿಸಿ ಶಿವಶಕ್ತಿ ಸ್ವರೂಪದಿಂದ ಪರಶಿವನಲ್ಲಿ, ಅರ್ಥಾತ್, ಚಿದಾಕಾಶ ಸ್ವರೂಪದಲ್ಲಿ ವಿರಾಜಿತಳಾಗಿ ಅವಿನಾಭಾವ ಸಂಬಂಧದಿಂದ ಬೆಳಗುತ್ತಲಿರುವ ಪರಂಜ್ಯೋತಿ ತತ್ವಪರಿಣಾಮ ವಾದ ಸ್ವರೂಪದಲ್ಲಿ ಹೊರಹೊಮ್ಮಿ ಪ್ರಾದುರ್ಭವಿಸುತ್ತಲ್ಲೂ ಮತ್ತಲ್ಲೇ ಅಡಕಂ ಗೊಂಡು ಅಂತರ್ಧಾನವಾಗುತ್ತಲಿರುವ ಅಂಶ ಸತ್ಯವೆಂದು ನಿಗಮಾಗಮಗಳು ಸಮುದ್ರ ಘೋಶದಂತೆ ಅಹೋ ರಾತ್ರಿ ಘೋಶಿಸುತ್ತಲಿದ್ದರೂ " ಜಗನ್ಮಿಥ್ಯೆ " ಎಂದು ಸಾರುವುದು ಹೇಗೆತಾನೆ ಸಮಂಜಸವೆನಿಸೀತು.

ದ್ರವ್ಯಕ್ಕೆ (ಪ್ರಕೃತಿಗೆ) ಪೂರ್ಣ ಅಥವಾ ಆತ್ಯಂತಿಕ ಚ್ಯುತಿ ಅಥವಾ ನಾಶವೆಂಬುವುದಿಲ್ಲ. (When a candle is burnt nothing

is lost) ಎಂಬ ಅಂಶ ಗಮನಾರ್ಹವೆಯಿರುತ್ತೆ. ದ್ರವ್ಯವು ಅಂದರೆ ಪ್ರಕೃತಿಯ ಮೂಲ ತತ್ವಗಳು ಮಿಥ್ಯೆಯೆನಿಸಲಾರವು. ಕಠೋಪನಿಷತ್ತು, ಛಾಂದೋಗ್ಯ' ಈಶಾವಾಸ್ಯ, ಬೃಹದಾರಣ್ಯಕೋಪನಿಷತ್ತು ಮತ್ತು ಶ್ವೇತಾಶ್ವತರೋಪನಿಷತ್ತುಗಳಲ್ಲಿ ಪ್ರಕೃತಿಯು ಮತ್ತು ಶಿವಶಕ್ತಿ ತತ್ವದ ಬೀಜಾಂಶಗಳು ಉದಹರಿಸಲ್ಪಟ್ಟು ಶಿವಾಗಮಗಳಲ್ಲಿ ಶಿವಶಕ್ತಿಯರ ಅವಿನಾಭಾವ ಸಂಬಂಧದ ನೈಜತತ್ವವನ್ನು ಮನಗಾಣುವಂತೆ ಪ್ರಕಾಶಿತವಾಗಿರುವುವು. ಶೃತಿಗಳಲ್ಲಿ ಪ್ರೋಕ್ತವಾದ ಆಧ್ಯಾತ್ಮಿಕ ಮಹದಂಶಗಳನ್ನು ಪ್ರಾಜ್ಞರು ಏಕಪಕ್ಷೀಯ ದೃಷ್ಟಿಕೋನದಿಂದ ನೋಡದೆ, ಸ್ವಪಕ್ಷ ಪರಪಕ್ಷ ದೃಷ್ಟಿಕೋನಗಳ ಸಮನ್ವಯಾರ್ಥ, ಸರ್ವಸಮನ್ವಯ ಸಮ್ಮತವಾದ ಮಹತ್ಪೂರಿತ ಭಾವೈಕ್ಯತೆಯಿಂದ ಮನಗಂಡು ಆಸ್ವಾದಿಸುವುದೇ ಜಾಣರ ಜಾಣ್ಮೆ ಎನಿಸುವುದು.

ಚಕ್ರಾಕಾರವಾಗಿ ಪರಿವರ್ತನೆಹೊಂದುತ್ತ ಪರಿಣಾಮರೂಪ ದ್ರವ್ಯಕ್ಕೆ ಆಗಿದ್ದಾಂಗ್ಗೆ ಔಪಚಾರಿಕವಾಗಿ ಪ್ರಾಪ್ತವಾಗುವ " ರೂಪ-ನಾಮಗಳು " ಮಿಥ್ಯೆ ಎನಿಸುವುವೇ ವಿನಃ ದ್ರವ್ಯಮಿಥ್ಯ ಎನಿಸಲಿಕ್ಕೆ ಬರಲಿಕ್ಕಿಲ್ಲ. ನಾಮರೂಪಾದಿಗಳು ಪದಾರ್ಥವಲ್ಲವಷ್ಟೆ. ರೂಪ ಕಣ್ಮರೆಯಾದಂತೆ ನಾಮವೂ ಅಳಿಸಿ ಹೋಗುವುದು. ಲಂಕಾ, ದ್ವಾರಕಾ ನಗರಗಳ ವರ್ಣನೆ ಶ್ರೀ ಮದ್ರಾಮಾಯಣ ಹಾಗೂ ಶ್ರೀ ಮದ್ಭಾಗವತಾದಿಗಳಲ್ಲಿ ಅಪಾರವಾಗಿ ವರ್ಣಿತವಾಗಿರುವುದನ್ನು ಓದುತ್ತಲ್ಲಿದ್ದೇವೆ. ಆದರೆ ಇಂದು, ಅಂದಿನ ರೂಪಲಾವಣ್ಯದ ನಗರಗಳು ಕಣ್ಮರೆಯಾಗಿ ಅಳಿಸಿ ಹೋಗಿರುವುವು. ಇಂದಿನ ಸೌಭಾಗ್ಯ ಮುಂದೆ ಕಾಲಪ್ರವಾಹದಲ್ಲಿ ಮಾರಿ ಹೋಗುತ್ತ ಕಣ್ಮರೆಯಾಗುತ್ತಿರುವ ಲಕ್ಷಣದಿಂದ ಕೂಡಿರುವುವು. ಇದರಿಂದ ಪಾಂಚಭೌತಿಕ ದ್ರವ್ಯಕ್ಕೆ ಇತ್ತ ನಾಮರೂಪಗಳು ಮಾತ್ರ ಮಿಥ್ಯೆ ಎನಿಸುವುವೇ ಹೊರತು, ದ್ರವ್ಯ ಪರಿಣಾಮಗಳನ್ನು ಹೊಂದುತ್ತ ಸೂಕ್ಷ್ಮಸ್ಥಿತಿಯಲ್ಲಿ ಚ್ಯುತಿಯಾಗದೆಯಿರುವುದರಿಂದ ಮಿಥ್ಯೆ ಎನಿಸದು. ಭಗವಂತನ ಸಂಕಲ್ಪ ಸತ್ಸಂಕಲ್ಪವಷ್ಟೆ. ಅವನ ಸತ್ಸಂಕಲ್ಪಕ್ಕನುಗುಣವಾಗಿ ಪಂಚಭೂತಾತ್ಮಕ ಪ್ರಪಂಚವು ಸೃಜಿಸಿ ॥ ತೇ ನೈವ ತೃಣಮಪಿ ನ ಚಲತಿ ॥ ಎಂಬ ಶೃತಿವಾಕ್ಯದಂತೆ ಅವನಧೀನಕ್ಕೊಳಪಟ್ಟರುವುದಗಿಂದ, ಪ್ರಕೃತಿಯನ್ನು (ದ್ರವ್ಯವನ್ನು) ಮಿಥ್ಯೆಯೆಂದಲ್ಲಿ

ಜಗನ್ನಿಯಾಮಕನಾದ ಪರಮಾತ್ಮನ ಸತ್ಸಂಕಲ್ಪಕ್ಕೆ ಥಕ್ಕೆ ಏರ್ಪಡುವುದೆಂಬುದು ಗಮನಾರ್ಹ. ದ್ರವ್ಯಗಳನ್ನು ಮಾನವನು ತನ್ನ ನಿತ್ಯ ಬಳಕೆಯ ಉಪಯುಕ್ತತೆಗಾಗಿ, ಹಲವು ನಾಮರೂಪಗಳನ್ನು ಕೊಟ್ಟು ರೂಪಿಸಿರುವನು. ನಾಮರೂಪಗಳು ಮಿಥ್ಯೆಯೇ ಹೌದು.

ಅಖಿಲ ವ್ಯಕ್ತಾ ವ್ಯಕ್ತ ಹಾಗೂ ಚರಾಚರಮಯ ವಿಶ್ವವು ಪರಮಾತ್ಮನಲ್ಲಿ ಬೀಜದೊಳಗೆ ಆಲದ ಮರವು ಅಡಕವಾಗಿರುವಂತೆ ಅಡಗಿರುವುದರಿಂದ ಪರಮೇಶ್ವರನನ್ನು ಶ್ರೀ ವಿಶ್ವೇಶ್ವರ, ವಿಶ್ವಂಬರ, ಎಂದೆಲ್ಲಾ ಕೊಂಡಾಡುತ್ತಲಿರುವೆವು. ಪರಮಾತ್ಮನು ಆಕಾಶವತ್ ವಿಶ್ವಮಯ ನೆನಿಸಿದರೂ ಶೃತಿಮಾತೆ ಪರಮಾತ್ಮನನ್ನು ॥ ಆಕಾಶಾತ್ಪರತಃ ಪರಃ ॥ ಎಂದು ಮಹಾಕಾಶಕ್ಕಿಂತಲೂ ವಿಲಕ್ಷಣನೂ ಹಾಗೂ ಅತೀತನೆಂದು ಸಾರುತ್ತಿರುವಳು. ಆಹೋ ! ಆಶ್ಚರ್ಯ ಆಶ್ಚರ್ಯ ! ವೈಭವಲೀಲೆಯ ಅದ್ಭುತ ರಹಸ್ಯ ವೇದೋಪ ನಿಷದಾದಿಗಳಿಗೂ ಅಗೋಚರವೆಂದ ಬಳಿಕ, ಬಡ ಮಾನವರಿಗೆಂತು ಗೋಚರಿಸೀತು. ತನ್ನಿಂದು ದ್ಭವಿಸಿದ ಶಕ್ತಿಯು ಅವಿನಾಭಾವ ಸಂಬಂಧದಿಂದ " ಸ್ವಾಭಾವಕಿ " ಎನಿಸಿ ವಿಚಿತ್ರಾ್ರಯಮಾನವಾಗಿ ವಿರಾಜಿತವಾಗಿ, ಮಾಯೆ ಎನಿಸಿರುವುದು. ಈ ಮಾಯೆಬೌದ್ಧರೂ ಹಾಗೂ ಅದ್ವೈತಿಗಳೂ ಹೇಳುವ ಮಾಯೆಯಲ್ಲ. ಶಿವಾದ್ವೈತದಲ್ಲಿ ಪ್ರತಿಪಾದಿತವಾದ ಮಾಯೆ ಎಂದರೆ – ಜಗತ್ತನ್ನಾವರಿಸಿರುವ ಮನಮೋಹಕ ವೈಷ್ಣವೀಮಾಯೆ ಎನಿಸದೆ, ಶಿವಶಕ್ತಿಯುತವಾದ ಆತ್ಮಶಕ್ತಿಯ ಪ್ರಾದುರ್ಭಾವದ ವಿಕಾಸ ಹಾಗೂ ಅಂತರ್ಧಾನಗಳ ಚಿದ್ವಿಲಾಸವೆನಿಸಿರುವುದು, ಇಂತಪ್ಪ ಪರಾಶಕ್ತಿಯುತವಾದ ಮಹನ್ಮಾಯೆಯಿಂದ ಮಹಾಕಾಶವೂ, ಇದರಿಂದ ಪಂಚಭೂತಾತ್ಮಕ ಪಾಂಚಭೌತಿಕ ಜಗತ್ತೂ ಹೊರಹೊಮ್ಮಿ, ನಮ್ಮ ನಿಮ್ಮಗಳೆಲ್ಲರ ವಿಹಾರ ಕ್ಷೇತ್ರವೆನಿಸಿರುವುದು.

ಮಾಯಾ ಶಬ್ದವು ವಿಶಾಲಾರ್ಥ ಗರ್ಭಿತವಾಗಿದ್ದು ಸೃಷ್ಟಿಯಲ್ಲಿ ಕಾಣುವ ಅಸ್ತಿ, ಜಾಯತೆ, ವರ್ಧತೆ, ಪರಿಣಮತೆ, ಅಪಕ್ಷೀಯತೆ ಮತ್ತು ವಿನಶ್ಯತಿ ಎಂಬ ಆರು ಪರಿಣಾಮಗಳುಳ್ಳ ಲಕ್ಷಣಗಳು (ಇಲ್ಲಿ ವಿನಶ್ಯತಿ ಅಂದರೆ ಆತ್ಯಂತಿಕ

ವಿನಾಶವಲ್ಲ) ಪರಮಾತ್ಮನ ನ್ಯೂನೀಭೂತಮಹದಂಶವೆನಿಸಿದ ಇಚ್ಛಾ ಶಕ್ತಿಯ ವಿಕಾಸವೇ ಆಗಿ ಮಾಯೆ ಎನಿಸಿರುವುದು. ಶಿವಾಗಮಗಳಲ್ಲಿ ಪರಮೇಶ್ವರ ಪ್ರೋಕ್ತವಾದಂತೆ ॥ ಮಾಯಾಂತು ಪ್ರಕೃತಿಂ ವಿದ್ಧಿ । ಮಾಯಿನಂತು ಮಹೇಶ್ವರಃ ॥ ಮಾಯೆ ಎಂದರೆ ಪ್ರಕೃತಿ ಎಂದೂ ಮಾಯಿಯು ಪರಮ ಪುರುಷನಾದ ಪರಮೇಶ್ವರನೆಂದೂ ಪ್ರೋಕ್ತವಿರುತ್ತೆ. ಶಿವಶಕ್ತಿಯರೇ ಪ್ರಕೃತಿ ಪುರುಷರೆನಿಸಿರುವರು. ॥ ಲಿಂಗಂ ಚಿದಾತ್ಮಕಂ ಬ್ರಹ್ಮ । ತಚ್ಛಕ್ತಿ, ಪ್ರಾಣ ರೂಪಿಣಿ ॥ ಚಿದ್ರೂಪಿ ಶಿವಲಿಂಗದಲ್ಲಿ ಸದ್ರೂಪಿ ಮಾಯೆ ಎನಿಸಿ, ಪ್ರಕೃತಿ ಸ್ವರೂಪಿಣಿಯಾದ ಇಚ್ಛಾಶಕ್ತಿಯು ಪ್ರಾಣವೆನಿಸಿರುವಳು. ಅನಂತ ಕೋಟಿ ಬ್ರಹ್ಮಾಂಡಗಳು ಇಚ್ಛಾಶಕ್ತಿ ಕಾರ್ಯವಾಗಿದ್ದು ಸೃಷ್ಟಿಗುನ್ಮುಖನಾದ ಪರ ಮಾತ್ಮನ ಲೀಲಾಕ್ಷೇತ್ರವೆನಿಸಿರುವುದು. ॥ ಧರ್ಮಸಾರಮಿದಂಜಗತ್ ॥ ಎಂಬಂತೆ, ಸಚ್ಚಿದಾನಂದ ಸ್ವರೂಪಿಯಾದ ಪ್ರಕೃತಿ ದೇವಿಯು "ಆಲಯಂ ಭುವ ನಾಲಯಂ" ಕ್ರೀಡಾಸ್ಥಾನವೆನಿಸಿ ಅವನಿಗೆ ಅನ್ಯವೆನಿಸದ ಪರಮಾತ್ಮನಿಂದ ಅಗಲದ ಅವಿನಾಭಾವ ಸಂಬಂಧವುಳ್ಳದ್ದಾಗಿಡುವುದು.

ಶಿವಜೀವರ ಅಥವಾ ಶಿವಶಕ್ತಿಯರ ನಿಜ ಸಂಪರ್ಕದ ನಿತ್ಯ ಅರಿವನ್ನು ಪಡೆದು ಶಿವಾದ್ವೈತಾನಂದದಲ್ಲಿ ಮುಳುಗಿ ನರನು ಮುಕ್ತನಾಗಲು, ಶಿವಲಿಂಗ ಧಾರಣ, ಇಷ್ಟಲಿಂಗ ಪೂಜಾನು ಸಂಧಾನ, ಸತ್ಕರ್ಮಗಳು ಸಾಧಕಗಳಾಗಿರು ವವು. ಸ್ನಾನಾದಿಗಳಿಂದ ಬ್ರಾಹ್ಮೀಮುಹೂರ್ತದಲ್ಲೇ ಪರಿಶುದ್ಧನಾಗಿ, ಗುರೂಪ ದಿಷ್ಟವಾದ ಇಷ್ಟಲಿಂಗವನ್ನು ಕರಕಮಲದಲ್ಲಿರಿಸಿ ಶುದ್ಧೋದಕದಿಂದ ಅಭಿಷೇಕ ವಂಗೈದು ಪೂಜಿಸಿ ಧ್ಯಾನಿಸುವುದರಿಂದ, ಭಕ್ತನಾದ ಆರಾಧಕನಿಗೆ ಹೃದಯ ದೊಳಗಿವ ಆತ್ಮಾದೇವನ ನಿಜಾನಂದವು ಕ್ರಮೇಣ ಪ್ರಾಪ್ತವಾಗಲಿರುವುದು ಎಂದು ಲಿಂಗ ಪುರಾಣವೇ ಮೊದಲಾದ ವ್ಯಾಸೋಕ್ತ ಪುರಾಣಗಳಸಾರವಾಗಿ ರುವುದು :

॥ ಬ್ರಹ್ಮೇತಿಲಿಂಗಮಾಖ್ಯಾತಂ । ಬ್ರಹ್ಮಣಃ ಪತಿರೀಶ್ವರಃ ॥
ಪವಿತ್ರಂ ತದ್ಧಿ ವಿಖ್ಯಾತಂ । ತತ್ಸಂಪರ್ಕಾತನುಃ ಶುಚಿಃ ॥

ಋಗಿತ್ಯಾಹ ಪವಿತ್ರಂತೇ । ವಿತತಂ ಬ್ರಹ್ಮಣಸ್ಪತೇ ।
ತಸ್ಮಾತ್ ಪವಿತ್ರತಲ್ಲಿಂಗಂ । ಧಾರ್ಯಂ ಶೈವಮನಾಮಯಂ ॥

ಈ ಮೇಲ್ಕಂಡ ಪವಿತ್ರ ಶ್ಲೋಕವು ಋಗ್ವೇದದಲ್ಲಿ ಅಂತರ್ಗತವಾಗಿ ಪರಿಶೋಭಿತವಾಗಿರುವುದು. ಬ್ರಹ್ಮವು ಇಷ್ಟಲಿಂಗವೆಂದೂ ಪವಿತ್ರವಾದೀ ಇಷ್ಟ ಲಿಂಗಧಾರಣೋಪಾಸನೆಗಳಿಂದ ಶರೀರ ತ್ರಯಂಗಳೂ ಪವಿತ್ರವೆನಿಸುವುವು. ವೀರಶೈವಾಚಾರವಿಧಿಗನುಗುಣವಾದ ವೇಧಾ, ಮನು ಮತ್ತೂ ಕ್ರಿಯಾದೀ ಕ್ಷತ್ರಯದಿಂದ ಸುಸಂಸ್ಕಾರವುಳ್ಳಾತನು, ಲಿಂಗಾಂಗಗಳ ಸ್ವರೂಪಾನು ಸಂಧಾನ ಶಕ್ತಿಯನ್ನು ತನ್ನೊಳಗೆ ವೃದ್ಧಿಪಡಿಸಿ ನಿತ್ಯ ಸುಖಿ ಎನಿಸುವನು. ಸುಸಂಸ್ಕೃತ ನಾದ ಲಿಂಗಾರಾಧಕನು ಶಿವವ್ರತಿಯಾಗಿ ತ್ರಿವಿಧ ತಪಸ್ಸುಗಳನ್ನೆಸಗುವವ ನಾಗಿರಬೇಕು. ವಾಕ್, ಶಾರೀರಕ ಹಾಗೂ ಮಾನಸಿಕ ತಪಸುಗಳೇ ತ್ರಿವಿಧ ತಪಸ್ಸುಗಳೆನಿಸಿರುವುವು.

## ವಾಕ್ ತಪಸ್.

ವಾಕ್ತಪಸ್ಸೆಂದರೆ ಮೌನವೆಂದರ್ಥವಲ್ಲ. ಅನೃತವನ್ನು ನುಡಿಯದೆ ಮಿತಭಾಷಣದೆಂದರುವುದೇದರ್ಥ. ನಾಲಗೆಯು ವಾಗ್‌ರಚನೆಗೆ ಹಾಗೂ ಷಡ್ರಸಗಳ ರುಚಿಭೇದ ಮತ್ತು ಮಾಧುರ್ಯಗಳನ್ನರಿಯುವ ಮೂಲಕಾರಣ ವೆನಿಸಿದೆ. ಜಿಹ್ವಾಗ್ರ ಸಿಂಹಾಸನದಲ್ಲಿ ಶ್ರೀ ಶಾರದೆಯು ನಲಿದು ನರ್ತಿಸುತ್ತಿರು ವಳು. ನಾಲಗೆಯು ಗುರುಲಿಂಗದ ಸಾನ್ನಿಧ್ಯಕ್ಕೆ ಮೂಲಸ್ಥಾನವಾಗಿ ಸದಾ ಸುಧಾಮೃತಧಾರೆಯಿಂದ ರಂಜಿತವಾಗಿರುವುದು. ನಾಲಗೆಗೆ ಮೃದು ಮಧುರ ವಚನ ಭಗವನ್ನಾಮ ಸಂಕೀರ್ತನೆಗಳೇ ಭೂಷಣ, ॥ ಜಿಹ್ವೇಕೀರಯ ಕೇಶವಂ ॥ ಎಂದು ಕುಲಶೇಖರಾಳ್ವಾರ್‌ರವರು ಮುಕುಂದ ಮಾಲೆಯಲ್ಲಿ ನುಡಿದಿರುವಂತೆ, ನಾಲಗೆಯಿಂದ ಭಗವನ್ನಾಮ ಸಂಕೀರ್ತನೆ, ಶಿವಮಂತ್ರ ಪಠನೆ, ಜಪ, ಸ್ತುತಿ ಗಳನ್ನು ಸದಾ ನುಡಿಯುತ್ತ, ಇಷ್ಟಲಿಂಗಾರಾಧನೆಯ ಹಿರಿಮೆಯನ್ನು ವರ್ಣಿಸಿ ಕೊಂಡಾಡಿ ಆನಂದಿಸುವ ಸೌಭಾಗ್ಯವು ವಾಕ್ ತಪಸ್ಸೆನಿಸುವುದು. ಸ್ವಾರ್ಥ

ವತ್ಯಜಿಸಿ ಲೋಕಹಿತಕ್ಕಾಗಿ ಈಶ್ವರನನ್ನು ಭಜಿಸುವುದು ನಿಜವಾದ ತಪಸ್ಸೆನಿಸುವುದು. ಕಲಿಯುಗದಲ್ಲಿ ಭಗವನ್ನಾಮ ಸಂಕೀರ್ತನೆಯಿಂದ ಅನಂತ ಪಾಪಗಳು ತೊಲಗಿ ಕುಲಕೋಟಿಗಳು ಉದ್ಧಾರವಾಗುವ ಸದವಕಾಶವಿರುವುದು. ಬಾಹ್ಯ ಪ್ರಪಂಚದ ವ್ಯಾಮೋಹವ ಅಳಿದು, ಸತ್ಯ, ಧರ್ಮ, ಶಾಂತಿ, ಥಾಂತಿಗಳಿಂದ ಕೂಡಿ ಜಿತೇಂದ್ರಿಯನಾಗಿ, ಪರಮಾತ್ಮನ ಕಲ್ಯಾಣ ಗುಣಗಾನ ಮಾಡಿ ಕರ್ಮಬಂಧನದಿಂದ ಮುಕ್ತನಾಗುವ ಸ್ಥಿತಿಯು ವಾಕ್ ತಪಸ್ಸೆಂದೆನಿಸಿರುವುದು.

## ಶಾರೀರಕ ತಪಸ್.

ಶಿವಯೋಗದಲ್ಲಿ ಶರೀರವನ್ನು ಶ್ರಮಿಸುವುದು. ಯಾರು ನಿತ್ಯ ಸ್ನಾನಪಾನಾದಿಗಳಿಂದ ಶುಚಿರ್ಭೂತರೂ ಶೀಲವಂತರೂ ಆಗಿ, ಭಸ್ಮ ರುದ್ರಾಕ್ಷಮಾಲಾವಿಭೂಷಿತರಾಗಿ ಶಿವಲಾಂಛನ ಲಾಂಛಿತರಾಗಿರುವರೋ ಮತ್ತು ಶಿವಪಂಚಾಕ್ಷರಿ ಮಹಾಮಂತ್ರವನ್ನುಚ್ಛರಿಸುತ್ತ ಶಿವಕಾಯಕವನ್ನು ಶಿವಪ್ರೀತ್ಯರ್ಥ ಜರುಗಿಸಿ, ತ್ವಗಿಂದ್ರಿಯದಲ್ಲಿ ನೆಲಸಿರುವ ಜಂಗಮ ಲಿಂಗದ ಅರಿವಿನಿಂದ ಬೆಳಗುವರೋ ಅಂಥಾ ಸ್ಥಿತಿಯನ್ನು ಶಾರೀರಕ ತಪಸ್ಸೆನ್ನುವರು. ಶರೀರದ ಒಂದೊಂದವಯವಗಳಿಂದಲೂ ‖ ಶರೀರಮಾದ್ಯಂ ಖಲುಧರ್ಮ ಸಾಧನಂ ‖ ಎಂಬಂತೆ ಧರ್ಮವನ್ನು ಆಚರಣೆ ಮೂಲಕ ಸಂಗ್ರಹಿಸಿ, ಬ್ರಹ್ಮಚರ್ಯ ವ್ರತವನ್ನು ಪರಿಪಾಲಿಸುವುದು ಶಾರೀರಕ ತಪಸ್ಸೆನಿಸುವುದು. ತನು ಮನ ಧನಗಳನ್ನು ಗುರುಲಿಂಗ ಜಂಗಮರಿಗೆ ಅರ್ಪಿಸುತ್ತ, ದುರ್ಗುಣಗಳಿಂದ ದೂರರಾಗಿ ಸತ್ಯವ್ರತ, ಅಹಿಂಸೆ, ದಯೆ, ಶಾಂತಿ, ತ್ಯಾಗಾದಿ ಶುದ್ಧಾಂತಃಕರಣದಿಂದ ಅರ್ಚನೆ, ವಂದನೆ ಶಿವೋಪಾಸನೆಗಳಿಂದಿರುವುದು ಶಾರೀರಕ ತಪಸ್ಸೆನಿಸುವುದು.

## ಮಾನಸಿಕ ತಪಸ್.

ಮರ್ಕಟದಂತೆ ಸದಾ ವಿಷಯದತ್ತ ಚಲಿಸುವ ಮನಸ್ಸನ್ನು ಪ್ರಯತ್ನಪೂರ್ವಕ ನಿರೋಧಿಸಿ, ಒಂದೆಡೆ ನಿಲ್ಲಿಸುವುದು. ತಟಾಕದಲ್ಲಿನ ಜಲವು ಸದಾ ಚಲಿಸುತ್ತಲೇಯಿರುವುದು. ಅದಕ್ಕೆ ನಿಲುಕಡೆ ಎಂಬುದಿಲ್ಲ. ಚಂಚಲವಾದ ನೀರಿ

ಲ್ಲಿನ ನಮ್ಮ ಮುಖ ಹೇಗೆ ಸ್ಪಷ್ಟವಾಗಿ ಕಾಣುವುದಿಲ್ಲವೋ ಅದರಂತೆ ಚಂಚಲವಾದ ಮನಸ್ಸಿನಲ್ಲಿ ದೈವ ದರ್ಶನವಾಗುವುದಿಲ್ಲ. ಅಲುಗಾಡದ ನೀರಿನಲ್ಲಿ ನಮ್ಮ ಮುಖಬಿಂಬವು ಕಾಣುವಂತೆ, ಚಂಚಲರಹಿತವಾದ ಮನಸ್ಸಿನಲ್ಲಿ ಬುದ್ಧಿ ತತ್ವ ಪ್ರತಿಫಲಿಸುವುದು. ಮನಸ್ಸೆಂದರೇನು ? ನಮ್ಮ ದೇಹದಲ್ಲಿ ಯೆಲ್ಲಿ, ಯಾವರೂಪದಲ್ಲಿದೆ ? ಎಂಬುದನ್ನು. ತಿಳಿಯುವುದು ಮುಖ್ಯ.

ಛಾಂದೋಗ್ಯೋಪನಿಷತ್ತಿನಲ್ಲಿ ವಿವರಿಸಿರುವಂತೆ ಪುರುಷನು ಭುಜಿಸುವ ಅನ್ನದ ಸ್ಥೂಲ ಭಾಗವು ಪುರೀಷ (ಮಲ) ವಾಗಿಯೂ ಮಧ್ಯಭಾಗವು ದೇಹದೊಳಗಿನ ಮಾಂಸವಾಗಿಯೂ, ಅನ್ನದ ಸೂಕ್ಷ್ಮಭಾಗವು ಮನಸ್ಸಾಗಿ ಪರಿಣಾಮಹೊಂದುವುವು. ಇದರಂತೆಯೇ ನಾವು ಸೇವಿಸುವ ಉದಕ (ನೀರು) ಇತ್ಯಾದಿ ದ್ರವ ಪದಾರ್ಥಗಳಲ್ಲಿನ ಸ್ಥೂಲಭಾಗವು ಮೂತ್ರವಾಗಿಯೂ, ಮಧ್ಯಭಾಗವು ರಕ್ತವಾಗಿಯೂ ಮತ್ತು ಸೂಕ್ಷ್ಮಾಂಶವು ಪ್ರಾಣವಾಗಿ ಪರಿಣಮಿಸುವುವು. ತೈಲ ಘೃತಾದಿಗಳ ಸೇವನೆಯಿಂದ ಸ್ಥೂಲಭಾಗದಿಂದ ಎಮಕೆಗಳೂ, ಮಧ್ಯಭಾಗದಿಂದ ಮಜ್ಜೆ ಇತ್ಯಾದಿ ಸಪ್ತಧಾತುವರ್ಧಕವಾದ ದ್ರವ್ಯವೂ ಮತ್ತು ಸೂಕ್ಷ್ಮಾಂಶದಿಂದ ವಾಗ್ ರೂಪ ವಾಕ್ಪಟುತ್ವಾದಿಗಳು ಹೊರಹೊಮ್ಮುವುವು. ಈ ಒಂಭತ್ತು ಅಂಶಗಳಲ್ಲಿ ಪುರೀಷ ಮತ್ತು ಮೂತ್ರ ಈ ಎರಡನ್ನು ಬಿಟ್ಟು ಮಿಕ್ಕುಳಿದ ಏಳು ಅಂಶಗಳು ಸಪ್ತಧಾತುಗಳೆಂದೆನಿಸಿರುವುವು. ಇದರಲ್ಲಿ ಅನ್ನದ ಸೂಕ್ಷ್ಮಾಂಶದಿಂದ ಹೊರಹೊಮ್ಮಿದ ಮನಸ್ಸು ಚಿತ್ತವೃತ್ತಿ ರೂಪವಾಗಿ ಅಂದರೆ ಸಂಕಲ್ಪ ವಿಕಲ್ಪಾತ್ಮಕವಾಗಿ ಸರ್ವದಾ ವಾಯುವಿನ ತೆರದಲ್ಲಿ ನಮ್ಮೊಳಗೆ ಇದ್ದುಕೊಂಡಿರುವುದು. ಸರ್ವೇಂದ್ರಿಯಗಳಿಗೆ ಮನಸ್ಸು ಮಂತ್ರಿಯಂತೆ ಅಧಿಕವಾದುದು. ದೇಹವೆಂಬ ರಥವನ್ನು ಎಳೆಯುತ್ತಿರುವ ಪಂಚಜ್ಞಾನೇಂದ್ರಿಯಗಳೆಂಬ ಕುದುರೆಗಳ ಕಡಿವಾಣ (ಲಗಾಮು) ಮನಸ್ಸಾಗಿರುವುದು. ಲಗಾಮನ್ನು (ಮನಸ್ಸನ್ನು) ಸಡಿಲವಾಗಿ ಬಿಟ್ಟರೆ ಪಂಚೇಂದ್ರಿಯಗಳೆಂಬ ಕುದುರೆಗಳು ಮೇರೆದಪ್ಪಿ ದೇಹವೆಂಬ ರಥವನ್ನು ಅಪಾಯಕ್ಕೀಡು ಮಾಡುವುವು. ತಮಿಳುನಾಡಿನ ಅವ್ವೆಯಾರ್ ಎಂಬ ಅಜ್ಜಿ ಮನಸ್ಸಿನ ವಿಷಯದಲ್ಲಿ ನಮ್ಮನ್ನು ಎಚ್ಚರಿಸುತ್ತಾ ॥ ಮನಂ ಪೋನ ಪೋಕ್ಕೆಲ್ಲಾಂ । ಪೋಗವೇಂಡಾಂ ॥ ಎಂದು

ಬೋಧಿಸಿರುವಳು. ಯಾಕೆಂದರೆ ॥ ಮನ ಏವ ಮನುಷ್ಯಾಣಾಂ । ಕಾರಣಂ ಬಂಧ ಮೋಕ್ಷಯೋಃ ॥ ಬಂಧಾಯ ವಿಷಯಾಸಕ್ತಿಃ । ಮುಕ್ತಯೇ ನಿರ್ವಿಷಯೈರಿವ ॥ ಮಾನವನು ಬಂಧನಕ್ಕೊಳಗಾಗಲು ಅಥವಾ ಅದರಿಂದ ಬಿಡುಗಡೆ ಹೊಂದಲಿಕ್ಕು ಮನಸ್ಸೇ ಮುಖ್ಯ ಕಾರಣ. ಪ್ರಾಪಂಚಿಕ ವಿಷಯಾದಿಗಳಲ್ಲಿ ಆಸಕ್ತಿಯಿಂದಿರುವುದೇ ಬಂಧನವೆನಿಸುವುದು. ಇದಕ್ಕೆ ಬದಲಾಗಿ ನಿರಂತರ ಕರ್ತವ್ಯನಿಷ್ಠೆಯಿಂದ ಕಾರ್ಯತತ್ಪರನಾಗಿದ್ದರೂ ಮೋಹವನ್ನು ತ್ಯಜಿಸಿ ವಿರಕ್ತಿಯುತನೂ, ಅನಾಸಕ್ತನೂ ಆಗಿರುವುದೇ ಮೋಕ್ಷವೆನಿಸುವುದು. ಇದನ್ನೇ ॥ ಮನೋಹಿದ್ವಿವಿಧಂ ಪ್ರೋಕ್ತಂ । ಶುದ್ಧಂ ಚಾ ಶುದ್ಧ ಮೇವಚ । ಅಶುದ್ಧಂ ಕಾಮ ಸಂಕಲ್ಪಂ । ಶುದ್ಧಂ ಕಾಮ ವಿವರ್ಜಿತಂ ॥ ಅಂದರೆ, ಕಾಮಕ್ರೋಧ ರಾಗಾದಿಗಳಿಂದ ಕೂಡಿರುವ ಮನಸ್ಸು ಅಶುದ್ಧ ಮನಸ್ಸೆಂತಲೂ, ಕಾಮ ವಿವರ್ಜಿತವಾದ ಸಾತ್ವಿಕ ಶುದ್ಧ ಸ್ಫಟಿಕದಂತ ಮನಸ್ಸೇ ಶುದ್ಧ ಮನಸ್ಸೆಂದೂ ಕರೆಯಲ್ಪಡುವದು. ಅಶುದ್ಧ ಮನಸ್ಸಿನಲ್ಲಿ ಅಹಂಕಾರ ಮಮಕಾರಗಳು ಬೇರೂರಿ ವ್ಯಾಪಿಸಿ ಮಾನವನನ್ನು ಹಾಳು ಮಾಡುತ್ತಿರುವುವು.

॥ ಮಮೇತಿ ಬಧ್ಯತೇ ಲೋಕೇ । ನಿರ್ಮಮೇತಿ ವಿಮುಕ್ತಯೇ ॥

ನಾನು, ನನ್ನದು ॥ ಎಂಬುದೇ ದೊಡ್ಡ ಬಂಧನವಾಗಿ ದುಃಖಕ್ಕೀಡು ಮಾಡುವುವು. ನಿಸ್ಪೃಹಭಾವದಿಂದ, ॥ ಕೆರೆಯ ನೀರನು ಕೆರೆಗೆ ಚೆಲ್ಲಿ । ವರವ ಪಡೆದವರಂತೆ ಕಾಣಿರೋ ॥

ಎಂಬ ದಾಸರ ಬೋಧೆಯಂತೆ ರಾಗ ರಹಿತರಾಗಿ " ತೇನೈವ ತೃಣಮಪಿ ನ ಚಲತಿ " ಎಂಬಂತೆ ಎಲ್ಲಾ ಈಶ್ವರೇಚ್ಛೆಯಂತೆ ಜರಗುವುದು. ನಾನು ನಿಮಿತ್ತ ಮಾತ್ರನೆಂದು ಅಸಂಗನಾಗಿದ್ದರೆ, ಅಂಥವನು ಮನಸ್ಸನ್ನು ಜಯಿಸಿದವನೆಂದು ಹೇಳಬಹುದು. ಮನಸ್ಸು ಹರಿಯುವ ನೀರಿನಂತೆ, ಓಡುತ್ತಿರುವ ಗಾಳಿಯಂತೆ ಚಂಚಲಾತ್ಮಕವಾದ್ದರಿಂದ, ಅರ್ಜುನನು ॥ ಚಂಚಲಂ ಹಿ ಮನಃ ಕೃಷ್ಣಾ ವಾಯೋರಿವ ಸುದುಷ್ಕರಂ ॥ ಎಂದು ಓಡುವ ಗಾಳಿಯನ್ನಾದರೂ ಒಮ್ಮೆ ಹಿಡಿಯಬಹುದು ಆದರೆ ಮನಸ್ಸು ಅದಕ್ಕಿಂತಲೂ ಅತಿ ಸೂಕ್ಷ್ಮವಾದ್ದರಿಂದ, ಮನಸ್ಸನ್ನು ಹಿಡಿದು ಸ್ವಾಧೀನಪಡಿಸಿಕೊಳ್ಳುವುದು ದುಸ್ಸಾಧ್ಯವೆಂದಿರುವನು.

॥ ಅಭ್ಯಾಸೇನತು ಕೌಂತೇಯ ॥ ಎಂಬ ಶ್ರೀಕೃಷ್ಣನ ಉಪದೇಶದಂತೆ, ಸಾಧನೆ ಹಾಗೂ ಅಭ್ಯಾಸ ಯೋಗಗಳಿಂದ ಮನಸ್ಸನ್ನು ನಿಗ್ರಹಿಸಬಹುದೆಂದು ಸ್ವಾಮಿ ದೃಢ ಪಡಿಸಿರುವನು. ತನುಕರಣೇಂದ್ರಿಯಗಳೂ ಮನಸ್ಸು ಬುದ್ಧಿ ಇವುಗಳೆಲ್ಲಾ ಶಿವನಿಂದನುಗ್ರಹೀತವಾದವುಗಳಾದ್ದರಿಂದ, ಸರ್ವವನ್ನೂ ಅವನಿಗೆ (ಭಗವಂತನಿಗೆ) ಸರ್ವಾರ್ಪಣ ಆತ್ಮಾರ್ಪಣ ಬುದ್ಧಿಯೋಗದಿಂದ, ಅರ್ಪಿತಾರ್ಪಣವನ್ನುಗೈದು ಸರ್ವ ಸಂಗಪರಿತ್ಯಾಗಿಯಾಗಿ ಶಿವಯೋಗದಲ್ಲಿ ಸದಾ ತಲ್ಲೀನ ಭಾವದಿಂದಿರುವುದೇ ಮಾನಸಿಕ ತಪಸ್ಸೆನಿಸುವುದು. ನಮ್ಮ ಅಂತಃಕರಣ ಶುದ್ಧ ಸ್ಫಟಿಕದಂತೆ ಪರಿಶುದ್ಧವಾಗಿದ್ದು ಅದರೊಳಗೆ ಆತ್ಮಸ್ವರೂಪ ಪ್ರತಿಫಲಿಸಿ ದರ್ಶನವಾಗಬೇಕು. ದಾಸರು ॥ ಅಂತರಂಗದಲ್ಲಿ ಹರಿಯ ಕಾಣದವ ಹುಟ್ಟುಕುರುಡ ॥ ಎಂದು ಹಾಡಿರುವುದು ಸಂಸ್ಮರಣೀಯವೇ ಆಗಿರುತ್ತೆ. ಮೇಲುಕ್ತವಾದೀ ತ್ರಿವಿಧ ತಪಸ್ಸುಗಳ ಫಲವಾಗಿ ತ್ರಿಕರಣಗಳೂ ಪವಿತ್ರವಾಗುವುವು. ಇಷ್ಟಲಿಂಗಾರ್ಚನೆ, ಆರಾಧನೆ, ಅನುಸಂಧಾನಾದಿಗಳು ಫಲಕಾರಿಯಾಗಿ, ಜೀವಾತ್ಮನನ್ನು ಉದ್ಧರಿಸಿ ಮುಕ್ತನನ್ನಾಗಿಸುವುವು. ಆದ್ದರಿಂದ ಕುಶಲಮತಿಯಾದ ಧೀರನು ಸರ್ವೇಂದ್ರಿಯಗಳಿಗೂ ಮಂತ್ರಿ ಎನಿಸಿ, ದೇಹವೆಂಬ ರಥಕ್ಕೆ ಕಡಿವಾಣ (ಲಗಾಮು) ವಾಗಿರುವ ಮನಸ್ಸನ್ನು ಭಗವದ್ಭಕ್ತಿ ಎಂಬ ಸುಭದ್ರ ಸೂತ್ರದಿಂದ ಬಿಗಿದು

ಅಭ್ಯಾಸಯೋಗ ಯುಕ್ತೇನ । ಚೇತಸಾನಾನ್ಯಗಾಮಿನಾ ॥
ಪರಮಂ ಪುರುಷಂ ದಿವ್ಯಂ । ಯಾತಿ ಪಾರ್ಥಾನು ಚಿನ್ತಯನ್ ॥

ಏನೆಂದರೆ ಮನಸ್ಸು ಇಂದ್ರಿಯಗಳಿಂದೊಡಗೂಡಿ ವಿಷಯಾದಿಗಳಲ್ಲಿ ಮುಳುಗಿ ವ್ಯಾಮೋಹಭರಿತವಾದ ಸ್ವಭಾವವುಳ್ಳದ್ದು. ಇದನ್ನು ಸಕಾಲದಲ್ಲಿ ನಿರೋಧಿಸದಿದ್ದರೆ, ಲಗಾಮನ್ನು ಸಡಿಲಬಿಟ್ಟ ಕುದುರೆ ಸ್ವೇಚ್ಛೆಯಿಂದೋಡಿ ರಥದೊಂದಿಗೆ ಹಳ್ಳದಲ್ಲಿ ಬಿದ್ದು ಅನರ್ಥಕ್ಕೀಡಾಗುವಂತೆ, ಮನಸ್ಸು ಸಹಜವಾಗಿ ವಿಷಯಾದಿಗಳೆಂಬ ಹಾದಿ ಬೀದಿಗಳಲ್ಲಿ ಅಲೆದಾಡಿ ಓಡಿ ಮುಗ್ಗರಿಸಿ ಅನರ್ಥ ಪರಂಪರೆಗೆ ವೈಯ್ಯೊಡ್ಡಿಸಿ, ದುಃಖಕ್ಕೀಡು ಮಾಡುವ ಸ್ವಭಾವವುಳ್ಳದ್ದಾಗಿದೆ. ಆದ್ದರಿಂದ ಗೀತೆಯಲ್ಲಿ ಶ್ರೀ ಸ್ವಾಮಿ ಮನಸ್ಸನ್ನು ಅದರಿಚ್ಛೆಯಂತೆ ಹೋಗಲ

ಬಿಡದೆ ಸ್ವಲ್ಪ ಸ್ವಲ್ಪವಾಗಿ ನಿರೋಧಿಸಿ ಕ್ರಮೇಣ ಸನ್ಮಾರ್ಗದಲ್ಲಿ ಮನಸ್ಸನ್ನು ಪಳಗಿಸಬೇಕು. ಕಾಮನಬಿಲ್ಲಿನಂತೆ ತೋರುವ ಮನೋ ಮಂಡಲವನ್ನು ಸದ್ವಿಷಯದಲ್ಲಿ ಆಕರ್ಶಿತಗೊಳಿಸಬೇಕು. ಧೀರ್ಘಕಾಲ ಹೀಗೆ ಮಾಡುವುದರಿಂದ ಮನಸ್ಸು ಸುಸಂಸ್ಕೃತಿಯನ್ನು ಹೊಂದಿ ಲಿಂಗರೂಪಿ ಪರಶಿವನ ಕೃಪೆಯಿಂದ ಪರಮಾತ್ಮನಲ್ಲಿ ಕ್ರಮೇಣ ಲಯ ಹೊಂದುವುದು. ಮಾನಸಿಕ ತಪಸ್ಸೆಂದರೆ ಮನಸ್ಸು ಹೋದಂತೆಲ್ಲಾ ಬಿಡದೆ, ಸುಶಿಕ್ಷಿತ ಮನಸ್ಸನ್ನಾಗಿ ಮಾಡಿ, ನಿರ್ಮಲ ನಿಷ್ಠೆಗಳಿಂದ ವಿರಾಜಿತವಾಗಿರುವುದು ಎಂದರುಹಿರುವನು.

ತಮಿಳು ನಾಡಿನ ಶ್ರೀ ಸರಸ್ವತಿ ಅಂಶಳೆಂದು ಕೀರ್ತಿಶೇಷಳಾದ ಅವ್ವೆ ಎಂಬ ಅಜ್ಜಿ (ಅವ್ವೆಯಾರ್ ಎಂದು ಪ್ರಸಿದ್ಧಳು) ಮನಸ್ಸನ್ನು ಹಿಡಿತದಲ್ಲಿರಿಸಬೇಕೆಂಬ ಬಗ್ಗೆ "ಮನಂ ಪೋನ ಪೋಕ್ಕೆಲ್ಲಾಂ ಪೋಗವೇಂಡಾಂ" ಎಂದರುಹಿರುವಳು. ಅವ್ವೆಯಾರ್, ತಿರುಕುರಳ್ ಎಂಬ ತಮಿಳ್ ಉಪನಿಷತ್ತಿನ ಕರ್ತರಾದ ಶ್ರೀ ತಿರುವಳ್ಳುವನಾಯನಾರ್‌ರವರ ಸಹೋದರಿ. ಒಂದುನೂರ ಆರವತ್ತು ವರ್ಷಗಳ ತನಕ ಜೀವಿಸಿದಾಕೆ. ಕಾರ್ತಿಕೇಯನಾದ ಶ್ರೀ ಸುಬ್ರಹ್ಮಣ್ಯಸ್ವಾಮಿ ಅವ್ವೆಯಾರಲ್ಲಿದ್ದ ಪರಿಪೂರ್ಣ ಪಾಂಡಿತ್ಯಕ್ಕೆ ತಲೆದೂಗಿದ್ದುದುಂಟು. ತನ್ನ ಅಂತ್ಯಕಾಲದಲ್ಲಿ ಒಂದು ದಿನ ಅವ್ವೆಪಿರಾಟ್ಟಿ (ಅಜ್ಜಿ) ಶ್ರೀ ವಿಘ್ನೇಶ್ವರನನ್ನು ನೋಡಿ "ಗಜಾನನನೆ! ನನ್ನ ಕಣ್ಮುಂದೆ ಹುಟ್ಟಿದ ಶ್ರೀ ಸುಂದರಮೂರ್ತಿ ನಾಯನಾರ್, (ನಾಲ್ಕು ಜನ ತಮಿಳುನಾಡಿನ ಶೈವ ಸಮಯಾಚಾರ್ಯರಾದ ನಾಲ್‌ವರ್ ಅಂದರೆ ಅಪ್ಪರ್, ಸುಂದರರ್, ತಿರುಜ್ಞಾನ ಸಂಬಂದರ್ ಮತ್ತು ಮಾಣಿಕ್ಯ ವಾಚಗರ್ ಇವರುಗಳಲ್ಲಿ ಎರಡನೆಯವರಾದ ಸುಂದರಮೂರ್ತಿ ನಾಯನಾರ್) ಈಗಾಗಲೆ ಕೈಲಾಸವನ್ನು ಸೇರಿ ಶಿವಗಣಂಗಳಲ್ಲಿ ಒಬ್ಬರಾಗಿರುವರಂತೆ ನಾನು ಇನ್ನೂ ಇಲ್ಲೇ ಉಳಿದಿರವೆನಲ್ಲಾ? ಎಂದು ಪ್ರಲಾಪಿಸಿ ಪ್ರಾರ್ಥಿಸಿದಳು. ಮಹಾಶಿವಶರಣೆ ಅವ್ವೆಯಾರ್ ಅಜ್ಜಿ ನುಡಿಯನ್ನು ಕೇಳಿದ, ಸ್ವಾಮಿ, ಶ್ರೀ ವಿಘ್ನೇಶ್ವರನು, ಕರುಣಾ ರಸಭರಿತನಾಗಿ, ತನ್ನ ದಿವ್ಯ ಸೊಂಡಲಿನಿಂದ ಮಃಹಾತಾಯಿ ಅವ್ವೆಯನ್ನು, ಪರಿಮಳಯುಕ್ತವಾದ ಕೋಮಲತರ ಪುಷ್ಪಮಾಲೆಯೊಂದನ್ನೆತ್ತಿದಂತೆ ಎತ್ತಿ ಕ್ಷಣಾರ್ಧದಲ್ಲಿ ಆ ಶಿವಶರಣೆಯನ್ನು ಶ್ರೀಮತ್

ಕೈಲಾಸದಲ್ಲಿರಿಸಿದುದಾಗಿ ತಮಿಳು ಗ್ರಂಥಗಳು ಈಕೆಯ ಮಹಿಮೆಯನ್ನು ಅಖಂಡವಾಗಿ ಸ್ತುತಿಸುತ್ತಿರುವುವು. ಶಿವನ ಒಡ್ಡೋಲಗದಲ್ಲಿ ಒಮ್ಮೆ ಉಮಾ ಮಹೇಶ್ವರರ ಎದುರಿಗೆ ಸರಿಯಾಗಿ ಅವ್ವೆ ತನ್ನೆರಡು ಕಾಲುಗಳನ್ನು ಚಾಚಿ ಕುಳಿತುಕೊಂಡಿರಲು, ಶ್ರೀ ನಂದೀಶ್ವರನು ಇದನ್ನು ಕಂಡು ಕುಪಿತನಾಗಿ, " ಹೇ ಅಜ್ಞಳಾದ ಮುದುಕಿ ! ನಿನಗೆ ಸ್ವಲ್ಪವಾದರೂ ತಿಳುವಳಿಕೆ ಬೇಡವೆ !! ದೇವಿಯಿಂದೊಡಗೂಡಿ ನವರತ್ನಖಚಿತ ಸ್ವರ್ಣಮಯ ವೀರ ಸಿಂಹಾಸನದಲ್ಲಿ ಮಂಡಿಸಿ ವಿರಾಜಿಸುವ ಮಹಾದೇವನಿಗಭಿಮುಖವಾಗಿ ಕಾಲು ನೀಡಿಕೊಂಡು ಕುಳಿತಿರುವೆಯಲ್ಲಾ ? ನೀನೆಂಥಾ ತಿಳಿಗೇಡಿ ? " ಎಂದು ಎಚ್ಚರಿಸಿ, ಕಾಲುಗಳನ್ನು ತಕ್ಷಣ ಮುದುರಿಕೊಳ್ಳುವಂತೆ ಆಜ್ಞೆ ಮಾಡಿದರು.

ಭಗವಾನ್ ನಂದೀಶ್ವರನ ಆಜ್ಞೆಗೆ ಅವ್ವೆ ಅಜ್ಜಿ ಅಬ್ಬಬ್ಬಾ! ಎಂದು ಅಂಜಿದವಳಾದರೂ, " ಅಪ್ಪಾ ! ನಂದೀಶ್ವರನೆ, ನಾನು ಹಣ್ಣಾದ ಮುದುಕಿ, ನನ್ನ ಕಾಲುಗಳನ್ನು ಮುದುರಿಸಿಕೊಳ್ಳುವಷ್ಟು ಶಕ್ತಿ ಇಲ್ಲದವಳಾಗಿ ಅಬಲಳಾಗಿರುವೆನು. ಈಶನಿಲ್ಲದ ಸ್ಥಳವನ್ನು ನೋಡಿ ಕೃಪೆಯಿಂದ ನನ್ನ ಕಾಲುಗಳನ್ನು ಅಲ್ಲಿರಿಸಿ ನನಗೆ ಸಹಾಯಕನಾಗೆಂದು ದೈನ್ಯದಿಂದ ಕೋರಿದಳು. " ವಯೋವೃದ್ಧೆಯ ಮಾತನ್ನು ಮನ್ನಿಸಿದ, ನಿರಂತರ ಶರಣ ಜನರ ಸೇವೆಗೆಂದೇ ವಿಶ್ವಾಸಲಾಗಿ ವ್ಯಕ್ತರೂಪನೆನಿಸಿದ ಮಹಾತ್ಮಾ ಶ್ರೀ ನಂದಿಕೇಶ್ವರನು ತನ್ನೆರಡು ಕರಗಳಿಂದ ಅವ್ವೆಪಿರಾಟ್ಟಿಯ (ಅಜ್ಜಿಯ) ಪಾದದ್ವಯಗಳನ್ನೆತ್ತಿ ದಕ್ಷಿಣಾಭಿಮುಖವಾಗಿರಿಸಿದನು.

ಇದೇ ನಾಶ್ಚರ್ಯ! ಅವ್ವೆ ನಂದಿಯನ್ನು ನೋಡಿ, ದೇವನಿಲ್ಲದೆಡೆಯೆಂದು ಭಾವಿಸಿ ತನ್ನ ಕಾಲನಿಟ್ಟು ಉಪಚರಿಸಿದುದಕ್ಕಾಗಿ ನಂದಿಗೆ ವಂದಿಸಿ ; ಅಲ್ಲಿ ನೋಡಲ್ಲಿ ಎನಲು, ದಕ್ಷಿಣ ದಿಕ್ಕಿನಲ್ಲೂ ಪೂರ್ವ ದಿಕ್ಕಿನಲ್ಲಿ ಮಂಡಿಸಿ ವಿರಾಜಿತರಾದ ಶ್ರೀ ಪಾರ್ವತಿ ಪರಮೇಶ್ವರರು, ಸುಮುಖಿಗಳಾಗಿ ಮಂಡಿಸಿರ್ಪುದನ್ನು ಸಾಕ್ಷಾತ್ತಾಗಿ ಕಂಡ ನಂದೀಶ್ವರನು ಭರದಿಂ ಅವ್ವೆಯಾರಿನ ಕಾಲುಗಳನ್ನು ಪಶ್ಚಿಮದ ಕಡೆ ಹಾಗೂ ಉತ್ತರಾಭಿಮುಖವಾಗಿಯೂ ತಿರುಗಿಸಿ

ಇಷ್ಟಂತೆಲ್ಲಾ ನಾಲ್ಕೂ ದಿಶೆಗಳಲ್ಲೂ ಮತ್ತೆಲ್ಲೆಲ್ಲೂ ಜಗನ್ಮಾತಾಪಿತರುಗಳಾದ ಉಮಾಮಹೇಶ್ವರರು, ಮಂಡಿಸಿ ವಿರಾಜಿಸುತ್ತಿರುವುದನ್ನು ಸಂದರ್ಶಿಸಿ ಚಕಿತನಾದ ಶ್ರೀ ನಂದಿಕೇಶ್ವರನು, ॥ ಈಶಾವಾಸ್ಯಮಿದಂ ಸರ್ವಂ ॥ ಎಂಬ ಈಶಾವಾಸ್ಯೋಪನಿಷತ್ತಿನ ಮಹಾಮಂತ್ರವನ್ನು ಸ್ಮರಿಸಿ, " ಅಜ್ಞಾನೇನಾ ವೃತಂ ಜ್ಞಾನಂ " ಎಂಬಂತೆ ಎಂತಃ ಜ್ಞಾನಿಯನ್ನಾದರೂ ಅಜ್ಞಾನವು ಕ್ಷಣ ಕಾಲ ಆವರಿಸದೆ ಬಿಡದು ಎಂದುಕೊಂಡು ಅವ್ವೆಯಾರ್ (ಅಜ್ಜಿ) ವಯೋ ವೃದ್ಧಳಾಗಿರುವುದರೊಂದಿಗೆ ಜ್ಞಾನವೃದ್ಧಳೂ ಆಗಿರುವುದನ್ನು ಕಂಡು, ನಂದಿ ದೇವನು ಅತ್ಯಂತ ಹರ್ಷಿಸಿದುದಾಗಿ ಅವ್ವೆಯಾರ್ ಚರಿತ್ರೆಯಿಂದ ಕಂಡು ಬರುವುದು. ತಮಿಳಿನ ಪೆರಿಯಪುರಾಣಂ, ತಿರುವಿಳೈಯಾಡಲ್ ಪುರಾಣಂ ಹಾಗೂ ರೇಣುಕಾಗಸ್ತ್ಯ (ಆದಿ ಅಗಸ್ತ್ಯ) ಸಂವಾದರೂಪವಾಗಿರುವ ರೇಣುಕ ಗೀತೆ ಎಂಬ ಸಿದ್ಧಾಂತ ಶಿಖಾಮಣಿ ಗ್ರಂಥವನ್ನು ತಮಿಳು ಭಾಷೆಯಲ್ಲಿ ಅತಿ ಗಂಭೀರವಾಗಿ ರಚಿಸಿ ಕೀರ್ತಿಶೇಷರೂ ಪೂಜ್ಯರೂ ಆದ ಶ್ರೀ ಸೇಕ್ಕಿಳಾರ್ ನಾಯನಾರ್ ಮತ್ತು ಶಿವಪ್ರಕಾಶ ಸ್ವಾಮಿಗಳು ಅವ್ವೆಯಾರ್‌ರವರ ಮಹತ್ವ ವನ್ನು ತುಂಬು ಹೃದಯದಿಂದ ಪ್ರಶಂಸಿಸಿರುವರು. ಕ್ರಿಸ್ತಶಕಕ್ಕೂ ಬಹು ಪೂರ್ವ ದಲ್ಲಿದ್ದ. ಮದುರೆಯ ಪ್ರಪ್ರಥಮ ತಮಿಳ್ ಹಿರಿಯ ವಿದ್ವತ್ ಕಲಾಪಂಡಿತ ಸಂಘವು ಆದಿ ಅಗಸ್ತ್ಯರಿಂದ ಸ್ಥಾಪಿತವಾಗಿದ್ದು ಅವ್ವೆಯಾರ್ ತಿರುವಳ್ಳುವರ್, ಒಟ್ಟೈಕೂತ್ತರ್, ಕಂಬರ್ ಮೊದಲಾದ ಆಗಿನ ಶ್ರೇಷ್ಠ ವಿದ್ವನ್ಮಣಿಗಳು ಆ ಸಂಘದ ಹಿರಿಯ ಕಾರ್ಯಕಾರಿ ಮಂಡಲಿಯ ನಿರ್ವಾಹಕರಿಂದ ಸ್ತುತ್ಯರಾಗಿದ್ದು ದಾಗಿ ಕಂಡುಬರುತ್ತೆ. ಇಂಥಾ ಮಹಿಮಾನ್ವಿತಳಾದ ಅವ್ವೆ ॥ ಮನಂ ಪೋನ ಪೋಕ್ಕೆಲ್ಲಾಂ ಪೋಗವೇಂಡಾಂ ॥ ಎಂದು ಉಪದೇಶಿಸಿರುವುದು ಅತ್ಯಂತ ಗಮನಾರ್ಹವೇ ಸರಿ. ಮನಸ್ಸಿನ ಪ್ರಭಾವ ವಾಕ್ ಹಾಗೂ ದೇಹದ ಮೇಲೆ ಪ್ರಬಲವಾಗಿರುವುದು ಸರಿಯಷ್ಟೆ. ದೇಹದಿಂದೇರ್ಪಡುವ ಪೀಡೆಗಳೆಂದರೆ ಜನನ ಮರಣಗಳೂ ಮತ್ತು ದೇಹದ ಮೇಲಿನ ಅಭಿಮಾನವೂ ಆಗಿರುವುವು. ಈ ದುಃಖಗಳಿಂದ ಮನಸ್ಸು ಪಾರಾಗಬೇಕು. ವಾಗ್ ರೂಪಶಕ್ತಿಗೆ ಪರಮ ಮೂಲ ಸ್ತಂಭವಾಗಿರುವ ಪ್ರಾಣವು, ಕ್ಷುತ್ಪಿಪಾಸ ಅಂದರೆ, ಹಸಿವು ಬಾಯಾರಿಕೆಗಳೆಂಬ ಬಳಲಿಕೆಗಳಿಗೆ ವೊಳಗಾಗುವ ಧರ್ಮವುಳ್ಳದ್ದಾದ್ದರಿಂದ, ಮನಸ್ಸು ಈ ದುಃಖ

ಗಳಿಗೊಳಪಡದಂತಿರುವುದು ಶ್ಲಾಘ್ಯವೇ ಸರಿ. ಶೋಕಮೋಹಗಳೆಂಬ ಜಾಲವು ಮನೋ ಮಂಡಲದ ವ್ಯಾಪ್ತಿಯಲ್ಲೇ ಆ ವಿರ್ಭಾವಗೊಂಡು ಮನದಶಾಂತಿಯನ್ನು ಕದಡಿ ರೊಚ್ಚಿಗೆಬ್ಬಿಸುವ ದುಷ್ಟಪರಿಣಾಮವುಳ್ಳವುಗಳಾದುದರಿಂದ, ಚಿತ್ತ ಸ್ಥೈರ್ಯದಿಂದ ಶೋಕ ಮೋಹಗಳೆಂಬ ಕಡಲುಗಳನ್ನು-ಶ್ರೀಮದಂಜನಾ ಸೂನುವಾದ ಆಂಜನೇಯನು ಶತ ಯೋಜನ ವಿಸ್ತೀರ್ಣವುಳ್ಳ ಮಹಾ ಸಾಗರ ವನ್ನು, ಮಾರ್ಗಮಧ್ಯೆ ಬಂದಡರಿದ ಕಂಟಕಗಳನ್ನೆಲ್ಲಾ ನಿರ್ವಹಿಸಿ ದಾಟಿದಂತೆ-ಮಾನವನು ಮನೋಧರ್ಮವಾದ ಶೋಕ ಮೋಹಾದಿಗಳಿಂದ ತಪ್ತನಾಗದೆ (ದುಃಖಿಸದೆ) ಅವುಗಳನ್ನು ದಾಂಟಿ ಅತೀತನಾಗಿ ದುಃಖತ್ರಯಗಳಿಂದ ಮುಕ್ತ ನಾಗಿ ತ್ರಿವಿಧ ತಪಸ್ಸುಗಳಿಂದ ಸಿದ್ಧಿಯುಳ್ಳವನಾಗಿ ಮುಕ್ಕಣ್ಣನ ಮನವೊಲು ಮೆಗೆ, ಇಷ್ಟಲಿಂಗಾರ್ಚನೆ, ಆರಾಧನೆ, ಅನುಸಂಧಾನ, ಜಪ ಧ್ಯಾನಾದಿ ಗಳಿಂದ ವಿರಾಜಿಸುವ ಶಿವಯೋಗದಲ್ಲಿ ಪೂರ್ಣ ಶರಣಾಗತಿ ಭಾವದಿಂದ ಆತ್ಮಾರ್ಪಣ ಗೈಯಬೇಕು. ಈ ಫಲವು ಮಾನವನಿಗೆ ಸಿದ್ಧಿಸಬೇಕಾದರೆ ಗುರು ಕರುಣೆ ಅತಿ ಮುಖ್ಯ. ಆದ್ದರಿಂದ ಶರಣನು ಗುರುಪುತ್ರ ನೆನಿಸಿ ಗುರುಕಾರುಣ್ಯಾ ಸ್ಥಲದಲ್ಲಿ ಸುಭದ್ರವಾಗಿ ಹೆಜ್ಜೆಯೂರಿನಿಂತು, ಅಹಿಂಸಾ,' ಸತ್ಯ, ದಯೆ, ಧರ್ಮ ಗಳಿಂದ ಬಾಳಿ ಬದುಕಿ ನಡೆನುಡಿಗಳಲ್ಲಿ ಒಂದಾಗಿ ವರ್ತಿಸಿದರೆ, ಆಗ ಗುರು ಬೋಧಾಪಥವು ನಮ್ಮನು ಶಿವಾನುಭವ ಪಥದಲ್ಲಿ ಕೊಂಡೊಯಿದು ಲಿಂಗಾಂಗ ಸಾಮರಸ್ಯ ನಿತ್ಯಸುಖದಲ್ಲಿ ಲಯಗೊಳಿಸುವುದು. ॥ ಶಿವ ಪಥವನರಿಯಲು । ಗುರುಪಥವೇ ಮೊದಲು ॥ ಎಂಬ ಮಹಾತ್ಮ ಬಸವಣ್ಣನವರ ಅಮರ ಸಂದೇಶ ವಿಶ್ವ ಸಂದೇಶವಾಗಿರುವುದು. ಅಸ್ತು.

ವಿಶ್ವಧರ್ಮವೆನಿಸಿರುವ ಪರಮ ವೀರಶೈವ ಧರ್ಮವು ವೈದಿಕವೂ ಸನಾತನವೂ ಆಗಿ ವಿರಾಜಿಸಿ, ಲಿಂಗಧಾರಣ ಹಾಗೂ ಇಷ್ಟಲಿಂಗಾರಾಧನೆಯು ಶಾಸ್ತ್ರ ವಿಹಿತ ಸನಾತನ ಸಂಪ್ರದಾಯವೂ ವೇದವಿಹಿತ ಪ್ರಾಚೀನ ಸಂಸ್ಕೃತಿಯನ್ನು ಬೋಧಿಸುವ ಶಿವಾದ್ವೈತ ಸಿದ್ಧಾಂತ ಪ್ರತಿಪಾದಕವೂ ಆಗಿರುವುದು. ಇಷ್ಟ ಲಿಂಗವನ್ನು ಕರಕಮಲ(ಕರಪೀಠ) ದಲ್ಲಿರಿಸಿ ಅಭಿಷೇಕಾದಿಗಳಿಂದ ವಿಧಿವತ್ತಾಗಿ ಅರ್ಚಿಸಿ ಭಸಿತ, ಗಂಧಾಕ್ಷತೆ ಪತ್ರ ಪುಷ್ಪಫಲ ತಾಂಬೂಲಾದಿಗಳಿಂದಲೂ,

ದೂಪದೀಪ ಕರ್ಪೂರದಾರತಿಗಳಿಂದ ಪೂಜಿಸಿ, ಶಿವಪಂಚಾಕ್ಷರಿ ಮಹಾಮಂತ್ರವನ್ನು ೧೦೮ ಸಾರಿ ಮಾನಸಿಕವಾಗಿ ಜಿಪಿಸಿ, ಧ್ಯಾನಾನು ಸಂಧಾನದಿಂದ ಮಗ್ನನಾಗಿ ಆತ್ಮೀಯಭಾವದಿಂದ ಆನಂದಿಸುವವಿಧಾನವು ವೇದಾಗಮಾದಿಗಳಲ್ಲಿ ವಿಹಿತವಾದುದಾಗಿರುವುದೆಂಬ ಬಗ್ಗೆ ಈ ಕೆಳಗೆಕೆಲವು ಪ್ರಮುಖ ಪ್ರಮಾಣಗಳನ್ನು ಓದುಗರ ನಂಬಿಕೆ, ಆಚರಣೆ, ವಿಶ್ವಾಸಗಳಿಗಾಗಿ ಪ್ರತಿಪಾದಿಸಿರಲಾಗಿರುತ್ತೆ.

## IXX

ವ್ಯಾಸ ಮಹರ್ಷಿಗಳು ತಮ್ಮ ಲಿಂಗಪುರಾಣ, ಉತ್ತರ ಭಾಗ, ಅಧ್ಯಾಯ ೨೧ರಲ್ಲಿ ೯೮ರಿಂದ ೧೦೨ ಶ್ಲೋಕಗಳವರೆಗೆ ಹೇಳಿದಿರುವುದೇನೆಂದರೆ :–

ವೇದಾಂತಸಾರೋಪನಿಷತ್ತಿನಲ್ಲಿ :

" ಪರೇಣಶುದ್ಧೇ ಹೃದಯಾಬ್ಜಮಧ್ಯೇ ।
ಲಿಂಗಂ ಧೃತ್ವಾ ಜ್ಯೋತಿಷಿ ಸಂವಿಶಂತಿ ॥ " ಎಂತಲೂ,

ಭಕ್ತಿಯೋಗೋಪನಿಷತ್ತಿನಲ್ಲಿ :

" ಯೋಗ ಸಿದ್ಧಾನಾಂ ಪರಮ ಶಿವಲಿಂಗಾಂಗ ಸಾಮರಸ್ಯ ।
ವಿವಿದಿಷೂಣಾಂ ಇಂದ್ರಿಯವ್ಯವಸ್ಥ ಸರ್ವವೇದಾಂತಸಿದ್ಧ ॥ " ಎಂತಲೂ,

ನಿರ್ಲೇಪೋಪನಿಷತ್ತಿನಲ್ಲಿ :

" ಲಿಂಗಂ ಸತ್ಯಂ ನಿಷ್ಕಲಂ ಬ್ರಹ್ಮರೂಪಂ ।
ಧಾರ್ಯಂ ಪೂಜ್ಯಂ ಹೃದಯೇ ಜ್ಯೋತಿರಾದ್ಯಂ ॥ " ಎಂತಲೂ,

ಚಿದಂಬರೋಪನಿಷತ್ತಿನಲ್ಲಿ :

" ಅಂತರ್ಲಿಂಗಂ ಜ್ಯೋತಿಷಾ ಸಂವಿಭಾತಂ ।
ಬಾಹ್ಯಂ ಲಿಂಗಂ ಹೃದಯೇ ಸನ್ನಿವಿಷ್ಟಂ ॥ " ಎಂತಲೂ,

ಸಿದ್ಧಾಂತಶಿಖೋಪನಿಷತ್ತಿನಲ್ಲಿ :

" ಶೀರ್ಷೇ ಕಂಠೇ ವಕ್ಷಸಿ ಕಕ್ಷದೇಶೇ ।
ಹಸ್ತೇ ಸರ್ವದಾ ಪ್ರಾಣಲಿಂಗಂ ಧಾರ್ಯಂ ॥ " ಎಂತಲೂ,

ಲಿಂಗಧಾರಣೋಪನಿಷತ್ತಿನಲ್ಲಿ :

" ಪಶುಪಕ್ಷಿ ಮೃಗಕೀಟಕಾನಾಂ ಲಿಂಗಧಾರಣಮುಚ್ಯತೇ ||" ಎಂತಲೂ,

ಪ್ರಸಾದಜಾಬಾಲೋಪನಿಷತ್ತಿನಲ್ಲಿ :

" ಯದ್ಯದ್ವಸ್ತು ಸಮರ್ಪಿತಂ ಲೈಂಗಂ |
ತತ್ತದೇವ ಭುಂಜೀತ || " ಎಂತಲೂ,

ಯಜುರ್ವೇದಾಂತಾರ್ಗತವಾದ ವೀರಲೈಂಗೋಪನಿಷತ್ತಿನಲ್ಲಿ :

" ಚತುರ್ವರ್ಣಾನಾಂ ಲಿಂಗಂ ಮನುತೇ |
ಸಪಾತಕೇಭ್ಯಃ ಪೂತೋ ಭವತಿ || " ಎಂತಲೂ

ಶಿವಲಿಂಗಧಾರಣೆಯ ವೈದಿಕತೆಯೂ, ಪವಿತ್ರತೆಯೂ ವಿಶಾಲವಾಗಿ ವರ್ಣಿಸಲ್ಪಟ್ಟಿದೆ. ಇವೆಲ್ಲವುಗಳಿಂದ ವೀರಶೈವ ಮತದ ಮೂಲಚಿಹ್ನವಾದ ಶಿವಲಿಂಗದಾರಣೆಯು ಮೊದಲು ದೇವಲೋಕದಲ್ಲಿಯೇ ಪ್ರಾರಂಭವಾಯಿತೆಂದು ತಿಳಿಯುವುದರಿಂದ ವೀರಶೈವ ಮತದ ಆದಿಕಾಲವನ್ನು ಕಂಡುಹಿಡಿಯುವುದು ಇತಿಹಾಸಕ್ಕೆ ನಿಲುಕದ ಮಾತಾಗಿದೆ.

ವೀರಶೈವ ಮತವು ಭೂಲೋಕದಲ್ಲಿ ಎಂದು ಪ್ರಾರಂಭವಾಯಿತೆಂಬ ಬಗ್ಗೆ ಇಲ್ಲಿಯವರೆಗೆ ಬಹುಜನ ಇತಿಹಾಸಕಾರರು ಶೋಧೆ ನಡೆಸಿದ್ದಾರೆ. ಅವರಲ್ಲಿ ಜೆ. ಎನ್. ಫಾರ್ಕುಹಾರ್, ಡಾ|| ಭಾಂಡಾರಕರ್, ಡಾ|| ರಾಮದಾಸ್ ಗೌಡ ಇವರುಗಳ ಶೋಧೆ ತಕ್ಕಮಟ್ಟಿಗೆ ಸಮರ್ಪಕವಾಗಿದೆಯೆಂದು ಒಪ್ಪಬಹುದು. ಆದರೆ ಅವೂ ಪರಿಪೂರ್ಣ ಶೋಧೆಗಳಲ್ಲ ಇವರೆಲ್ಲರೂ ಜಗದ್ಗುರು ಪಂಚಾಚಾರ್ಯರ ಲಿಂಗಾವತಾರದ ಕಾಲದಿಂದ ಹಿಂದೆ ಹೋಗಿಲ್ಲ. ಪ್ರಾಚೀನ ಕವಿ ಪಂಡಿತರೆಲ್ಲರೂ ಶಿವಾಜ್ಞೆಯಂತೆ ಜಗದ್ಗುರು ಪಂಚಾಚಾರ್ಯರು ವೀರಶೈವ ಮತವನ್ನು ಭೂಮಂಡಲದಲ್ಲಿ ಸ್ಥಾಪಿಸಿ, ಈ ಮತದ ಪಾಲನೆಗಾಗಿ ಗುರು

ಪರಂಪರೆಯನ್ನುಳಿಸಿದರೆಂಬುದನ್ನು ಗ್ರಂಥಗಳಲ್ಲಿ ಹೆಣೆದಿದ್ದಾರೆ. ಆ ಜಗದ್ಗುರು ಪಂಚಾಚಾರ್ಯರ ಗುರು ಪರಂಪರೆಯು ಕೃತ-ತ್ರೇತ-ದ್ವಾಪರಯುಗಗಳ ಗಂಡಾಂತರವನ್ನು ಗೆದ್ದು ಕಲಿಯುಗ ಪ್ರಾರಂಭದಿಂದ ಈ ೬,೦೦೦ ವರ್ಷವೂ ತನ್ನ ಗುರುತ್ವವನ್ನೂ, ಗುರುಪೀಠಗಳನ್ನೂ ಕಾಪಾಡಿಕೊಂಡು ಶಿಷ್ಯೋದ್ಧಾರ ಕಾರ್ಯವನ್ನು ಮಾಡುತ್ತಿರುವುದು ಪ್ರತ್ಯಕ್ಷವಾಗಿಯೇ ಇದೆ. ಆಗಮ, ಉಪ ನಿಷತ್ತು, ಪುರಾಣಗಳು ಹೇಳುವಂತೆ ವೀರಶೈವ ಮತಸ್ಥಾಪನಾಚಾರ್ಯರ ಧರ್ಮಪೀಠಗಳು ೧. **ಹಿಮವತ್ಕೇದಾರ**, ೨. **ಕಾಶಿ**, ೩. **ಶ್ರೀಶೈಲ**, ೪. **ಉಜ್ಜಯಿನಿ**. ೫. **ರಂಭಾಪುರೀ** ಎಂಬ ಪ್ರಸಿದ್ಧ ಕ್ಷೇತ್ರಗಳಲ್ಲಿ ಈಗಲೂ ಶೋಭಾಯಮಾನವಾಗಿವೆ. ನಾವು ವೀರಶೈವರು, ನಾವು ಮಾಹೇಶ್ವರರು, ನಾವು ಲಿಂಗಾಂಗಿಗಳು, ನಾವು ವಿರಕ್ತರು, ನಾವು ಗುರುಗಳು, ನಾವು ಭಕ್ತರು ಎಂದು ಹೇಳಿಕೊಳ್ಳುವ ಜಗತ್ತಿನ ಎಲ್ಲರಿಗೂ ಜಗದ್ಗುರು ಪಂಚಾಚಾರ್ಯರೇ ಮೂಲ ಜಗದ್ಗುರುಗಳಾಗಿದ್ದಾರೆ. ಇಂತಾಗಿ ಭೂಮಂಡಲದಲ್ಲಿ ವೀರಶೈವ ಮತವು ಯುಗಯುಗಾಂತರಗಳಿಂದ ವ್ಯಾಪಕವಾಗಿದ್ದಿತೆಂದೂ, ಈ ಪವಿತ್ರ ಮತವನ್ನು ಶ್ರೀಮಜ್ಜಗದ್ಗುರು ಸಾರ್ವಭೌಮ ಶ್ರೀ ರೇಣುಕಾದಿ ಮಹಾ ಪಂಚಾಚಾರ್ಯರೇ ಸ್ಥಾಪಿಸಿದರೆಂದೂ ಸ್ಪಷ್ಟವಾಗುತ್ತದೆ.

ದೇವೇಂದ್ರನ ಸಂಪತ್ತನ್ನು ತನ್ನ ಶಾಪದಿಂದ ಸಮುದ್ರದ ಪಾಲು ಮಾಡಿದ ದೂರ್ವಾಸ ಮಹರ್ಷಿಗಳು "**ವೀರಮಾಹೇಶ್ವರ**" ರಾಗಿದ್ದ ರೆಂಬುದು "**ನೀಲಕಂಠ ವಿಜಯ**" ಕಾವ್ಯದಿಂದ ಗೊತ್ತಾಗುತ್ತದೆ.

ವೀರಭದ್ರ ಇವಕ್ರುದ್ಧೇ ವೀರಮಾಹೇಶ್ವರೇ ಮುನೌ ।
ಇತಿ ಕರ್ತವ್ಯತಾ ಮೂಢಮಿಂದ್ರಮೈಕ್ಷಂತದೇವತಾಃ ॥

(ಅಶ್ವಾಸ ೧, ಪ. ೨೫)

ಎಂದಿರುವ ಈ ಪದ್ಯದಲ್ಲಿ ಟೀಕಾಕಾರರು "**ವೀರಮಾಹೇಶ್ವರೇ ಮುನೌ ನಾಮ = ವೀರಶೈವೇ ಮುನೌ**" ಎಂದು ಅರ್ಥಮಾಡಿದ್ದಾರೆ, ಕಾರಣ ದೂರ್ವಾಸರು ವೀರಶೈವರೆಂಬುದು ಸ್ಪಷ್ಟವಾಗಿದೆ

ಹೀಗೆ ಪ್ರಸಿದ್ಧರಾದ ಈ ದೂರ್ವಾಸ ಮಹರ್ಷಿಗಳು ಒಮ್ಮೆ ಕಾಶಿ, ಕ್ಷೇತ್ರಕ್ಕೆ ಬಂದು ಅಲ್ಲಿ ಶಿವಲಿಂಗಧಾರಿಗಳೂ, ದಂಡ ಕಮಂಡಲುಗಳನ್ನು ಧರಿಸಿದವರೂ ಆದ ಮಹಾ ಪಾಶುಪತರನ್ನು ಕಂಡು ಸಂತೋಷಪಟ್ಟಂತೆ ವ್ಯಾಸ ಮಹರ್ಷಿಗಳು ತಮ್ಮ " ಕಾಶೀಖಂಡ " ದಲ್ಲಿ ವರ್ಣಿಸಿದ್ದಾರೆ. ಇದರಿಂದಾಗಿ ದೂರ್ವಾಸ ಮಹರ್ಷಿಗಳು ಶಿವಲಿಂಗಧಾರಿಗಳಾದ ಮಹಾ ಪಾಶುಪತರಾಗಿದ್ದ ರೆಂದು ಸ್ಪಷ್ಟವಾಗುವುದು.

ದೂರ್ವಾಸಾಶ್ಚಾತಿಹೃಷ್ಟೋಽಭೂದ್ದೃಷ್ಟ್ವಾ ಪಾಶುಪತೋತ್ತಮಾನ್ ।
ಕರಂಡ-ದಂಡ-ಪಾನೀಯ ಪಾತ್ರಮಾತ್ರ ಪರಿಗ್ರಹಾನ್ ॥ ೯ ॥

(ಕಾಶೀಖಂಡ, ಭಾಗ ೨, ಅಧ್ಯಾಯ ೮೫)

ಇಲ್ಲಿ ಬಂದಿರುವ ಕರಂಡ ಶಬ್ದಕ್ಕೆ ಟೀಕಾಕಾರರಾದ ರಾಮಾನಂದರು ಕರಂಡೋ = ದೇವಾಧಾರಪಾತ್ರಂ ಎಂದು ಅರ್ಥ ಬರೆದಿದ್ದಾರೆ. ಕರಂಡ ಶಬ್ದದ ತದ್ಭವವೇ ಕನ್ನಡದಲ್ಲಿ ಕರಡಿಗೆ ಎಂದಾಗಿದೆ. ಈ ಕರಡಿಗೆಯಲ್ಲಿ ಶಿವ ಲಿಂಗವನ್ನು ಇರಿಸಿ ಶಿವದಾರ (ಶಿವಸೂತ್ರ) ದಿಂದ ಕಟ್ಟಿ ಧರಿಸುವ ಪದ್ಧತಿಯು ಪ್ರಾಚೀನ ಕಾಲದ್ದಾಗಿದೆ. ಈ ಶಿವಸೂತ್ರ (ಶಿವದಾರ) ವೇ ವೀರಶೈವರ ೩೬ ಎಳೆಗಳುಳ್ಳ ಯಜ್ಞೋಪವೀತವಾಗಿದೆ.

ಶಿವಲಿಂಗಧಾರಣ ಪರಂಪರೆಯನ್ನು ದೇವಲೋಕದಲ್ಲಿ ಹರಡಿದ ವೀರಶೈವ ಮಹಾ ಪಾಶುಪತಾಚಾರ್ಯರಲ್ಲಿ ವೀರಭದ್ರ-ನಂದೀಶ್ವರಾದಿಗಳೂ ಗಣಿಸಲ್ಪಟ್ಟಿರು ವುದರಿಂದಲೂ, ಈಶ್ವರನ ವಿಷಪಾನ ಲೀಲೆಗೆ ಮೊದಲೇ ದಕ್ಷಬ್ರಹ್ಮನ ಶಿರಚ್ಛೇದ ಲೀಲೆ ಮುಗಿದಿರುವುದರಿಂದಲೂ, ಈ ಲೀಲೆಗಳು ವೇದಗಳಲ್ಲಿ ವರ್ಣಿಸಲ್ಪಟ್ಟಿರು ವುದರಿಂದಲೂ ದೇವಲೋಕದ ವೀರಶೈವ ಮತಾಚಾರ್ಯರ ಕಾಲ ವೇದಕ್ಕೂ ಪೂರ್ವದ್ದೆಂದು ನಿರ್ಣಯವಾಗುವುದು.

ಕೃತ, ತ್ರೇತಾದಿ ಯುಗಗಳಲ್ಲಿ ಪ್ರಸಿದ್ಧವಾಗಿದ್ದ ಶಿವಲಿಂಗಧಾರಿ ಮಹಾ ಪಾಶುಪತಕ್ಕೂ, ವೀರಶೈವಕ್ಕೂ ವ್ಯತ್ಯಾಸವು ಕಂಡುಬರುವುದಿಲ್ಲ. ಈಶ್ವರನಿಗೆ ಶಿವನಾಮವು ಪ್ರಸಿದ್ಧವಾಗಿದ್ದಂತೆ ಪಶುಪತಿ ನಾಮವೂ ಪ್ರಸಿದ್ಧವಾಗಿದೆ. ಆದರೆ ತಪ್ತಲಿಂಗಮುದ್ರಾಧಾರಿ ಪಾಶುಪತವು ಸಾಮಾನ್ಯ ಶೈವದಂತೆ ಪ್ರತ್ಯೇಕವಾಗಿರ್ರು ವುದೆಂದು ಶಿವಾಗಮಗಳಿಂದ ತಿಳಿಯುತ್ತದೆ. ಒಟ್ಟಾರೆ ದೇವಲೋಕದ ನಂತರ ಭೂಲೋಕದಲ್ಲಿ ಶಿವಲಿಂಗಧಾರಿ ವೀರಶೈವ ಮತವು ಪ್ರಚಾರವಾಗಿದ್ದ ಕಾಲ ಈಶ್ವರನ ವಿಷಕಂಠಲೀಲೆಗೂ ಮುಂಚೆಯೇ ಎಂದು ಗೊತ್ತಾಗುವುದು.

ಉಮಾಸಹಾಯಂ ಪರಮೇಶ್ವರಂ ಪ್ರಭುಂ ।
ತ್ರೀಲೋಚನಂ ನೀಲಕಂಠಂ ಪ್ರಶಾಂತಂ ॥
ಧ್ಯಾತ್ವಾ ಮುನಿರ್ಗಚ್ಛತಿ ಬ್ರಹ್ಮಯೋನಿಂ ।
ಸಮಸ್ತಸಾಕ್ಷಿಂ ತಮಸಃ ಪರಸ್ತಾತ್ ॥

(ಕೈವಲ್ಯೋಪನಿಷತ್, ೧-೨)

ಎಂಬೀ ಮಂತ್ರದಲ್ಲಿ ನೀಲಕಂಠ ನಾಮವು ಬಂದಿದೆ. ಕಾರಣ ವೇದ ಕಾಲಕ್ಕೆ ಮೊದಲೇ ಈ ಲೀಲೆ ನೆಡೆದಿರಬೇಕೆಂತಲೂ, ಈ ಲೀಲೆಗೆ ಕಾರಣನಾದ ದೂರ್ವಾಸ ಮಹರ್ಷಿಯು ವೇದ ರಚನಾಕಾಲಕ್ಕೆ ಪೂರ್ವಜವನೆಂತಲೂ, ಆವನಿಂದ ಆಶ್ರಿತವಾಗಿದ್ದ ಮಹಾ ಪಾಶುಪತ ವೀರಶೈವ ಮತವು ಅಷ್ಟೇ ಪ್ರಾಚೀನವಾದುದೆಂತಲೂ ಸ್ಪಷ್ಟವಾಗುವುದು.

ಇನ್ನು ವೀರಶೈವರ ಧರ್ಮಾಚಾರಗಳೂ ಜ್ಞಾನ-ಕರ್ಮ ಸಮುಚ್ಚಯ ರೂಪವಾಗಿಯೇ ಇರುವುವು. ಪ್ರತಿ ವೀರಶೈವನಿಗೂ ಧರ್ಮಾಚರಣೆಗಾಗಿ ಎಂಟು ಹೊದಿಕೆಗಳುಂಟು. ಅವುಗಳಿಗೆ " ಅಷ್ಟಾವರಣ " ಗಳೆನ್ನುವರು. ಪ್ರತಿ ವೀರಶೈವನೂ ಜೀವಿತ ಪರ್ಯಂತ ಇವನ್ನು ಹೊಂದಿಕೊಂಡೇ ಇರಬೇಕು, ಇವುಗಳನ್ನು ಕ್ರಮವಾಗಿ " ಗುರು-ಲಿಂಗ-ಜಂಗಮ-ಪಾದೋದಕ ಪ್ರಸಾದ-ವಿಭೂತಿ-ರುದ್ರಾಕ್ಷ-ಮಂತ್ರ " ಎಂದು ಕರೆಯುವರು.

ನಿರಾಕಾರವಾದ ಪರಶಿವ ಬ್ರಹ್ಮವು ಲೋಕಕಲ್ಯಾಣಕ್ಕಾಗಿ " ಗುರು-ಲಿಂಗ-ಜಂಗಮ " ರೂಪದಿಂದ ಪ್ರಕಟವಾಯಿತೆಂದು ಶಿವಾಗಮಗಳು ಹೇಳುತ್ತವೆ. ಈ ಮೂರರಲ್ಲಿ ಲಿಂಗವು ಜ್ಞಾನರೂಪವಾಗಿಯೂ, ಗುರು-ಜಂಗಮರು ಕರ್ಮರೂಪವಾಗಿಯೂ ಇದ್ದಾರೆ. ಈ ಮೂವರಿಂದ ದೊರಕುವ " ತೀರ್ಥ-ಪ್ರಸಾದ"ಗಳು ಇಹಪರ ಸುಖಕ್ಕೆ ಮೂಲಕಾರಣವಾಗಿವೆ. " ವಿಭೂತಿ-ರುದ್ರಾಕ್ಷ " ಗಳು ಶಿವಲಾಂಛನಗಳು. ಅವು ಜೀವನಿಗೆ ಅಂಟಿರುವ ಆಣವ-ಮಾಯಾ-ಕಾರ್ಮಿಕ ಎಂಬ ಮಲತ್ರಯಗಳನ್ನು ನಾಶಮಾಡುವುವು. ಪಂಚಾಕ್ಷರೀ ಮಂತ್ರವು " ಶಿವಕಾರುಣ್ಯವನ್ನುಂಟುಮಾಡಲು ಮುಖ್ಯ ಸಾಧನೆಯಾಗಿದೆ. " ಶಿವಲಿಂಗ " ಧಾರಣೆ. ಶಿವಪೂಜೆಗಳು ಜೀವಾತ್ಮನಿಗೆ ಮೋಕ್ಷವನ್ನುಂಟುಮಾಡುವುದೆಂದು ವೀರಶೈವ ಸಿದ್ಧಾಂತವು ಸಾರುತ್ತಿದೆ.

ಇವಲ್ಲದೆ ವೀರಶೈವ ತತ್ವಾಚರಣೆಗಾಗಿ " ಭಕ್ತ-ಮಾಹೇಶ-ಪ್ರಸಾದಿ-ಪ್ರಾಣಲಿಂಗಿ-ಶರಣ-ಐಕ್ಯ " ಎಂಬ ಆರು ಸ್ಥಲಗಳು ಉತ್ತಮವಾಗಿವೆ. ಇವು ಶಿವಲಿಂಗಾಂಗ ಸಂಗಿಯಾದ ಜೀವಾತ್ಮನು ಪರಶಿವನಲ್ಲಿ ತಾದಾತ್ಮ್ಯ ಹೊಂದಲು ತಾತ್ವಿಕರೂಪವಾದ ಆರು ಮೆಟ್ಟಲುಗಳಾಗಿವೆ. ವೀರಶೈವ ಶಾಸ್ತ್ರದಲ್ಲಿ " ಶಿವತತ್ವ " ದಿಂದಾರಂಭಿಸಿ " ಪೃಥ್ವೀತತ್ವ " ದವರೆಗೆ ೩೬ ತತ್ತ್ವಗಳು ಉಕ್ತವಾಗಿವೆ. ಅಲ್ಲದೆ ವೀರಶೈವರೆಲ್ಲರೂ ಸದಾಚಾರಸಂಪನ್ನರಾಗಿ, ಶಿವಧ್ಯಾನ ತತ್ಪರರಾಗಿ, ಶಿವನಿಂದಕರನ್ನು ಪ್ರತಿಭಟಿಸತಕ್ಕವರಾಗಿ, ಶಿವಲಿಂಗ ಪೂಜಾ ಪರಾಯಣರಾಗಿ, ಶಿವಗಣದಲ್ಲಿ ಶಿವಾಚಾರ್ಯರಲ್ಲಿ ಭಕ್ತಿಯುಳ್ಳವರಾಗಿ, ಶಿವ ಸಂಬಂಧಿಗಳಲ್ಲಿ ಭೃತ್ಯರಂತೆ ನಡೆಯತಕ್ಕವರಾಗಿರಬೇಕೆಂಬ ಕಾರಣದಿಂದ " ಸದಾಚಾರ, ಶಿವಾಚಾರ, ಲಿಂಗಾಚಾರ, ಗಣಾಚಾರ ಭೃತ್ಯಾಚಾರ " ಎಂಬ ಪಂಚಾಚಾರಗಳನ್ನು ವೀರಶೈವ ಶಾಸ್ತ್ರವು ಶಾಸನಮಾಡಿದೆ.

ಗೌತಮಸ್ಮೃತಿಯು ವೀರಶೈವ ತಾತ್ವಿಕ ಬ್ರಾಹ್ಮಣ ಸ್ವರೂಪವನ್ನು ಈ ಕೆಳಗಿನಂತೆ ವಿವರಿಸಿದೆ :

" ಮುಖೇ ಮಂತ್ರೋ ಹೃದಿಧ್ಯಾನಂ ಮಸ್ತಕೇ ಲಿಂಗಧಾರಣಂ ।
ಶಿಖಾಸೂತ್ರಂ ತಥಾ ಭಸ್ಮ ಇತಿಬ್ರಾಹ್ಮಣ ಲಕ್ಷಣಂ " ॥

ಶಿವಲಿಂಗಧಾರಣ, ಶಿಖಾಧಾರಣ, ಶಿವಸೂತ್ರಧಾರಣ, ಭಸ್ಮಧಾರಣ, ಪಂಚಾಕ್ಷರೀ ಮಂತ್ರಪಠಣ, ಹೃದಯದಲ್ಲಿ ಶಿವಧ್ಯಾನ ಇವು ಬ್ರಾಹ್ಮಣ ಲಕ್ಷಣವೆಂದು ಹೇಳಲಾಗಿದೆ. ಈ ಲಕ್ಷಣವೂ ತಾತ್ವಿಕ ಬ್ರಾಹ್ಮಣ್ಯವನ್ನೇ ಸೂಚಿಸುತ್ತದೆ, ಕಾರಣ ಶಿವಲಿಂಗಧಾರಣೆ ಶಿವಪೂಜೆಯಿಲ್ಲದವರಿಗೆ ಬ್ರಾಹ್ಮಣ್ಯವು ಸಿದ್ಧಿಸುವುದಿಲ್ಲವೆಂಬುದು ಈ ಪ್ರಮಾಣದಿಂದ ತಿಳಿದುಬರುವುದು.

ಈ ಸ್ಮೃತಿಯಲ್ಲಿ ಕಂಡುಬರುವ ಮಸ್ತಕ ಲಿಂಗಧಾರಣವು ತ್ರೇತಾಯುಗದಷ್ಟು ಪ್ರಾಚೀನವಾಗಿದೆ. ಗೌತಮಸ್ಮೃತಿಯು ತ್ರೇತಾಯುಗದಲ್ಲಿ ರಚಿತವಾದುದೆಂಬುದಕ್ಕೆ ಶ್ರೀಕರಭಾಷ್ಯದಲ್ಲಿ " ತ್ರೇತಾಯಾಂ ಗೌತಮಸ್ಮೃತಿಃ " ಎಂದು ಆಧಾರವಿದೆ. ಶಿವಸೂತ್ರ (ಶಿವದಾರ)ವು ೩೬ ಎಳೆಗಳಿಂದ ಕೂಡಿದ್ದಾಗಿರಬೇಕು. ಕರಡಿಗೆಯು ಬಳಿಕೆಯಲ್ಲಿ ಬಂದ ಬಳಿಕ ಶಿವಸೂತ್ರ (ಶಿವದಾರ)ಕ್ಕೆ ಅದನ್ನು ಸಂಬಂಧಿಸಿ ಧರಿಸಿಕೊಳ್ಳುವುದು ಪ್ರಚಾರದಲ್ಲಿ ಬಂದಿತು. ವೀರಶೈವರಿಗೆ ಶಿಖೆಯು (ವಿಶೇಷವಾಗಿ ಸಂಸಾರಿಗಳಿಗೆ) ಇರಬೇಕೆಂಬುದನ್ನು ಶ್ರೀಜಗದ್ಗುರು ರೇಣುಕಾಚಾರ್ಯರೂ ಸ್ಪಷ್ಟಪಡಿಸದ್ದಾರೆ.

ಶಿಖಾಯಾಮೇಕಮೇಕಾಸ್ಯಂ ರುದ್ರಾಕ್ಷಂ ಧಾರಯೇದ್ಬುಧಃ " ॥ ೫೩ ॥

ಸಿದ್ಧಾಂತ ಶಿಖಾಮಣಿ, ಪರಿ. ೭)

ಇಂತಾಗಿ ವೀರಶೈವರಲ್ಲಿ ಯಾವ ಪಂಗಡದವರೇ ಇರಲಿ ಅವರೆಲ್ಲರೂ ಅವಿರೋಧವಾಗಿ ವರ್ತಿಸಲು ಸಾಧ್ಯವಾದ ತಮ್ಮ ತಮ್ಮ ವರ್ಣಗಳನ್ನು ರಕ್ಷಿಸಿಕೊಳ್ಳುವುದು ಅವರವರ ಕರ್ತವ್ಯವಾಗಿದೆ. ಎಂಬುದನ್ನು ಪೂರ್ವಾಚಾರ್ಯರು ಪ್ರಚಾರಪಡಿಸುತ್ತ ಬಂದಿದ್ದಾರೆ. ಶ್ರೀ ಜಗದ್ಗುರು ಪಂಚಾಚಾರ್ಯರು ಶಿವಾ

ವತಾರಿಗಳಾದ್ದರಿಂದ ಅಖಿಲ ಮಾನವ ಕೋಟಿಯನ್ನೇ ವೀರಶೈವ ತತ್ವದತ್ತ ತಿರುಗಿಸಿ ಅವರನ್ನುದ್ಧಾರ ಮಾಡಿರುವುದು ಅವರ ಚರಿತ್ರೆಯಿಂದ ಗೊತ್ತಾಗುತ್ತದೆ.

ನ ವೀರಶೈವ ಸದೃಶಂ ಮತಮಸ್ತಿ ಜಗತ್ರಯೇ ।
ಸರ್ವಭೋಗಪ್ರದಂ ಪುಣ್ಯಂ ಶಿವಸಾಯುಜ್ಯದಾಯಕಂ ॥ ೬೨ ॥

(ಪಾರಮೇಶ್ವರಾಗಮ, ಪಟಲ ೧)

ಎಂಬ ಶಿವಾಗಮ ಸಿದ್ಧಾಂತ ಪ್ರಚಾರದಿಂದ ಮಹಾಚಾರ್ಯವರ್ಯರಾದ ಶ್ರೀ ಮಜ್ಜಗದ್ಗುರು ಪಂಚಾಚಾರ್ಯರು ಜಗನ್ಮಾನ್ಯರಾಗಿದ್ದಾರೆ.

" ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇ ।
ಅಸ್ತಂ ಗಚ್ಛಂತಿ ನಾಮರೂಪೇ ವಿಹಾಯ ॥
ತಥಾ ವಿದ್ವಾನ್ ನಾಮರೂಪಾದ್ವಿಮುಕ್ತಃ ।
ಪರಾತ್ಪರಂ ದೈವಮುಪೈತಿ ಸಾಕ್ಷಾತ್ " ॥

(ಮುಂಡಕೋಪನಿಷತ್ತು, ೩-೨-೮)

ಎಂಬೀ ಪ್ರಮಾಣದಂತೆ ತತ್ತ್ವಶಃ ಎಲ್ಲರಿಗೂ ಆಗುವುದೊಂದೇ ಮೋಕ್ಷವೆಂದು ಅವರು ತಮ್ಮ ಭಾಷ್ಯದಲ್ಲಿ ಸಾರಿದ್ದಾರೆ. ಎಲ್ಲ ನದಿಗಳೂ ತಮ್ಮ ನಾಮ-ರೂಪಗಳನ್ನು ತ್ಯಜಿಸಿ ಸಮುದ್ರವನ್ನು ಸೇರಿ ಸಮುದ್ರವೇ ತಾವಾಗುವಂತೆ ಜಾತಿ ಪಂಥಗಳಿಂದ ಅತೀತನೂ ಜ್ಞಾನಿಯೂ ಆದ ಜೀವಾತ್ಮನು ಪರಮಾತ್ಮನನ್ನೇ ಸೇರುವನೆಂದು ಅವರು ಸಾರಿರುವ ಸಂದೇಶವು ತ್ರಿಕಾಲಾಬಾಧಿತವಾಗಿ ಎಲ್ಲ ಮಾನವರಿಗೂ ಮಾನ್ಯವಾಗಿದೆ. ಮೋಕ್ಷಸಾಧನೆಗೆ ವೀರಶೈವಾಚರಣೆಯು ಸುಲಭೋಪಾಯವೆಂಬುದನ್ನು ಸಾರುವ ಮೂಲಕ " ಸರ್ವವರ್ಣಾನಾಂ ಲಿಂಗಧಾರಣಂ " ಎಂದು ಎಲ್ಲ ಜನಾಂಗದವರಿಗೂ ವೀರಶೈವ ಮುಕ್ತಿಮಂದಿರದ ಮಹಾದ್ವಾರವನ್ನು ಎಂದೋ ತೆರೆದಿಟ್ಟಿದ್ದಾರೆ. ಇತ್ಯಾದಿ ಪರಮನಿಗಮಾಗಮಗಳ ಆಧಾರಗಳಿಂದ ವೀರಶೈವವು, ನಿಜಕ್ಕೂ ವಿಶ್ವಧರ್ಮ ಎನಿಸಿರುವುದು.

ವೇದಾಗಮೋಪನಿಷತ್ಪು ರಾಣೇತಿಹಾಸ ಸುಪ್ರಸಿದ್ಧ ಪರಮ ವೀರಶೈವ ಮತದ ನಿಜ ತತ್ವವನ್ನು ಬೆಳಗುವ ಶಿವಾದ್ವೈತ ಸಿದ್ಧಾಂತ ಗೋಪ್ಯ ಚಿಂತಾ ಮಣಿಯ ಸನಾತನತ್ವ ಹಾಗೂ ವೈದಿಕತ್ವಗಳ ಸಾರಾಮೃತಗಳನ್ನು ಜನ ಮನದ ಭೂಮಿಕೆಯಲ್ಲಿ ಬಿತ್ತುವ ಉದ್ದಿಶ್ಯ, ಶ್ರೀಗಿರಿರಾಜಸೂರ್ಯ ಸಿಂಹಾಸನಾ ಧೀಶ್ವರ ಶ್ರೀ ಶ್ರೀ ೧೧೦೮ ಶ್ರೀ ಶೈಲ ಜಗದ್ಗುರು ಸಾರ್ವಭೌಮ ಭಗವತ್ಪಾದ ಶ್ರೀ ವಾಗೀಶ ಪಂಡಿತಾರಾಧ್ಯ ದೇಶಿಕೇಂದ್ರ ಶಿವಾಚಾರ್ಯ ಮಹಾಪಾದಂಗಳ ರವರು, ಅಖಿಲಾಂಧ್ರ ವೀರಶೈವ ಮಹಾಸಭೆ (ಹೈದರಾಬಾದ್) ನಲ್ಲಿ 1957ರ ಸುಮಾರಿನಲ್ಲಿ ಜರುಗಿದ ಪ್ರಥಮಾಧಿವೇಶನದ ಸಮಾರಂಭದ ಅಧ್ಯಕ್ಷಸ್ಥಾನದಿಂದ ಅನುಗ್ರಹಿಸಿದ ಕೃಪಾಪೂರಿತ ದಿವ್ಯವಾಣಿಯ ಕೆಲ ಅಂಶಗಳೇ ಮೇಲು ದಹರಿಸಿ ರುವ ದೈವವಾಣಿ.

## XX

ಶಿವಲಿಂಗೋದ್ಭವ ದಿವ್ಯ ಮೂರ್ತಿಗಳಾದ ಶ್ರೀ ಮಜ್ಜಗದ್ಗುರು ಸಾರ್ವ ಭೌಮ ಶ್ರೀ ರೇಣುಕಾದಿ ಪಂಚಾಚಾರ್ಯರು, ಯುಗಪ್ರತಿ ಯುಗಂಗಳ ಆರಂಭದಲ್ಲೆ ಶ್ರೀ ಅಗಸ್ತ್ಯ, ದಧೀಚಿ, ವ್ಯಾಸ, ಸಾನಂದ ಮತ್ತೂ ದೂರ್ವಾಸಾದಿ ಮಹರ್ಷಿಕುಲ ಶ್ರೇಷ್ಠರಿಗೆ ಲಿಂಗ ಧರ್ಮವನ್ನು ಹೃದಯಂಗಮವಾಗಿ ಬೋಧಿಸಿ ಮುನಿಕುಲ ತಿಲಕರನ್ನು ಕೃತಾರ್ಥರನ್ನಾಗಿಸಿರುವರು. ಶಿವಾದ್ವೈತ ತತ್ವಾ ಮೃತವು ದ್ವೈತಾ ದ್ವೈತಸಾರ ಸಂಗ್ರಹವನ್ನು ಗರ್ಭೀಕರಿಸಿಕೊಂಡು ವಿರಾಜಿ ಸುವ, ಮಹೋನ್ನತವೂ ಗಂಭೀರವೂ ಸನಾತನವೂ ಆದ ತತ್ವಾರ್ಥಗೋಪ್ಯ ಚಿಂತಾಮಣಿಯಾಗಿ ರಾರಾಜಿಸುತ್ತಲಿರುವುದು. ಶಿವಾದ್ವೈತವು ॥ ಭಜ ತಾಂ ಕಲ್ಪ ವೃಕ್ಷಾಯ । ನಮತಾಂ ಕಾಮಧೇನುವೇ ॥ ಅಂದಂತೆ ಭಜಿಸಿ ಲಿಂಗಾರ್ಚನಾತ್ಮಕ ಮಹೋನ್ನತ ಧರ್ಮವೆನಿಸಿರುವ, ಜ್ಞಾನಯಜ್ಞದಲ್ಲಿ ಅನವರತ ಅನನ್ಯಭಾವದಿಂದ ತಲ್ಲೀನರಾಗಿ ಶರಣಾಗತರಾದ ಶಿವಶರಣ ಶರಣೆ ಯರಿಗೆ ಕಲ್ಪವೃಕ್ಷದಂತೆಯೂ, ಹೃತ್ಪೂರ್ವಕ ನವವಿಧ ಅನನ್ಯ ಭಕ್ತಿಭಾವೇನ ಪೂಜಿಸಿ, ವಂದಿಸಿ, ದೀರ್ಘದಂಡ ಪ್ರಣಾಮಂಗಳಿಂದ ಇಷ್ಟ, ಪ್ರಾಣ, ಭಾವ ಲಿಂಗಗಳ ಪ್ರತೀಕವೆನಿಸಿದ ಮಹಾಲಿಂಗದಲ್ಲಿ ಆತ್ಮಾರ್ಪಣ ಪಂಗೈದ ಶಿವ

ಶರಣ ಶರಣೆಯರಿಗೆ ಕಾಮಧೇನುವಿನ ತೆರದಲಿ ಬೆಳಗಿ ಅಧ್ಯಾತ್ಮಿಕ ಧರ್ಮ ಕ್ಷೇತ್ರದಲ್ಲಿ ನವನವೋಲ್ಲಾಸವನ್ನುಂಟುಮಾಡುವ ಹಾಗೂ ಆದಿ ಮಧ್ಯಾಂತ ರಹಿತವಾದ, ಶಿವಜ್ಞಾನ ಚಿನ್ಮಹೋದಧಿ ಅಂದರೆ, ಸಚ್ಚಿದಾನಂದ ಮಹಾ ಸಾಗರ ಸುಧಾಂಬುಧಿಯೇ ಶಿವಾದ್ವೈತದ ॥ ರಸೋವೈಬ್ರಹ್ಮ ॥ ಎಂಬ ಮಹೋನ್ನತವಾದ, ತಿರುಳು. ಸಾಧಕನು ಸದಾ ಶಿವಜ್ಞಾನ ಬೋಧಾಮಯ ರಸಭರಿತವಾದೀ ತಿರುಳನ್ನು ಸೇವಿಸಿ, ಜೀರ್ಣಿಸಿ ತನ್ಮೂಲಕ ಏರ್ಪಡುವ ಆನಂದವನ್ನು ಮನಗಾಣಲು. ಗುರೂಪ ದಿಷ್ಟವಾದ ಪ್ರಣವ ಪಂಚಾಕ್ಷರೀ ಮಹಾಮಂತ್ರವನ್ನು ಅನುದಿನ ಸಕ್ರಮವಾಗಿ ಜಪಿಸಬೇಕು. ಮೂಲ ಪಂಚಾ ಕ್ಷರೀ ಜಪವು ಸಪ್ತಕೋಟಿ ಮಂತ್ರಗಳಿಗೆ ಮಸ್ತಕಮಣಿಯೆನಿಸಿ, ಜನ್ಮಕೋಟಿ ಗಳಲ್ಲಿ ಮಾಡಿದ ಅನಂತ ಪಾಪ ಕೋಟಿಗಳನ್ನು ॥ ಜಪತೋನಾಸ್ತಿ ಪಾತಕಂ ॥ ಅಂದಂತೆ ಇಂಗಿಸಿ,ಪರ್ವತಾಕಾರವಾದ, ಪಾಪರಾಶಿಗಳನ್ನು ಭಸ್ಮಮಾಡುವುದರಲ್ಲಿ ಅದ್ವಿತೀಯ ಸತ್ವಸಾಮರ್ಥ್ಯದಿಂದ ವಿರಾಜಿತವಾಗಿರುವುದು. ಜಪವು-ಮೂರು ವಿಧ-ವಾಗಿರುವುದು, ವಾಚಕ, ಉಪಾಂಶು ಮತ್ತೂ ಮಾನಸಿಕ. ಭಗ ವಂತನ ನಾಮವನ್ನು ಘಟ್ಟಿಯಾಗಿ ಕೀರ್ತನರೂಪವಾಗಿ ಹಾಡಿಪಾಡಿ ಭಜಿಸು ವುದು ವಾಚಕವೆನಿಸುವುದು. ಎರಡು ತುಟಿಗಳ ಮಧ್ಯ ಪ್ರದೇಶದಲ್ಲೇ ಬೇರೆ ಯವರಿಗೆ ಕೇಳಿಸದಂತೆ ಜಪಿಸುವುದು ಉಪಾಂಶು ಎನಿಸುವುದು. ಮಾನಸಿಕ ವಾಗಿ ಅಂತರಂಗದಲ್ಲಿ ಸ್ಮರಿಸುವುದು ಅತ್ಯಂತ ಶ್ರೇಷ್ಠವೆನಿಸಿರುವ ವಿಧಾನವು ಮಾನಸಿಕವೆನಿಸಿರುವುದು. ಮಂತ್ರಗಳಲ್ಲಿ ಶಿವಪಂಚಾಕ್ಷರೀ ಮಹಾಮಂತ್ರ ಜಪವು ಅತ್ಯಂತ ಶ್ರೇಷ್ಠವಾದುದು, ಮತ್ತೂ ಮಂತ್ರಗಳಲ್ಲಿ ಮಕುಟಪ್ರಾಯ ವೆನಿಸಿರುವುದು. ಪ್ರಣವ ಸಹಿತ ಶಿವಪಂಚಾಕ್ಷರೀ ಮಹಾಮಂತ್ರ ಜಪವು ಅತ್ಯಂತ ಉತ್ಕೃಷ್ಟವಾದುದು, ಮೋಕ್ಷಪ್ರದವೂ ಹೌದು

॥ ಸಪ್ತಕೋಟಿಷು ಮಂತ್ರೇಷು ।
ಮಂತ್ರಃ ಪಂಚಾಕ್ಷರೋ ಮಹಾನ್ ।
ಬ್ರಹ್ಮವಿಷ್ಣ್ವಾದಿ ದೇವೇಷು ।
ಯಥಾಶಂಭುರ್ಮಹತ್ತರಃ ॥ ೧ ॥

## ಪ್ರಸ್ತಾವನೆ

॥ ಓಂಕಾರ ಪೂರ್ವೋ ಮಂತ್ರೋಯಂ ।
ಪಂಚಾಕ್ಷರ ಮಯಃ ಪರಃ ।
ಶೈವಾಗಮೇಷು ವೇದೇಷು ।
ಷಡಕ್ಷರ ಇತಿಸ್ಮೃತಃ ॥ ೧ ॥

॥ ಪುರಾಸಾನಂದ ಯೋಗೀಂದ್ರಃ ।
ಶಿವಜ್ಞಾನ ಪರಾಯಣಃ ।
ಪಂಚಾಕ್ಷರಂ ಸಮುಚ್ಚಾರ್ಯ
ನಾರಕಾನುದ ತಾರಯತ್ ॥ ೨ ॥

ಶ್ರೇಷ್ಠವಾದ ಗಾಯಿತ್ರಿ ಮೊದಲಾದ ಮಂತ್ರಗಳು ಶಿವಪಂಚಾಕ್ಷರೀ ಮಹಾ ಮಂತ್ರದಲ್ಲಿ ಗರ್ಭೀಕೃತವಾಗಿರುವುವು. ಇದರಿಂದಾಗಿ ಹರಿ ಬ್ರಹ್ಮಾದಿ ಅನಂತ ದೇವಾದಿ ದೇವತೆಗಳು ಪರಮಪಾವನವಾದ ಹಾಗೂ ಸಪ್ತಕೋಟಿ ಮಹಾ ಮಂತ್ರಗಳಿಗೆ ಮಕುಟ ಪ್ರಾಯವಾದ ಶಿವಪಂಚಾಕ್ಷರೀ ಮಹಾ ಮಂತ್ರ ಜಪಾನು ಸಂಧಾನ ನಿರತರಾಗಿರುವರು. ॥ತಥಾ ಪಂಚಾಕ್ಷರೀಮಂತ್ರಾನ್ನಾಸ್ತಿ। ಮಂತ್ರಾಂತರಂ ಮಹತ್ ॥ ಶಿವಪಂಚಾಕ್ಷರೀ ಮಹಾಮಂತ್ರಕ್ಕಿಂತಲೂ ಅಧಿಕತರವಾದ ಮತ್ತೊಂದು ಮಂತ್ರವಿಲ್ಲ. ॥ ಜ್ಞಾತೇ ಪಂಚಾಕ್ಷರೀ ಮಂತ್ರೇ । ಕಿಂವಾ ಮಂತ್ರಾಂ ತರೈಃ ಫಲಂ ॥ ಅಂದರೆ ಸಕಲ ಮಂತ್ರ ಗಳಿಗೆಲ್ಲಾ ತಾಯಿ ಯೆಂತೆಸೆವ ಶಿವ ಪಂಚಾಕ್ಷರಿ ಮಹಾ ಮಂತ್ರಾನು ಸಂಧಾನಿ ಗಳಿಗೆ, ಅನ್ಯ ಮಂತ್ರಗಳಿಂದೇನು ಪ್ರಯೋಜನ ?

" ನಮಃ ಶಿವಾಯ " ಎಂದು ಶ್ರದ್ಧಾಭಕ್ತಿಯಿಂದ ಮಹಾ ಶಿವ ಮಂತ್ರವನ್ನು ೧೦೮ ಸಾರಿ ಉಚ್ಚರಿಸುವಾಗ ಮೊದಲು, ॥ ನಮಃ ಶಬ್ದಂ ವದೇತ್ಪೂರ್ವಂ । ಶಿವಾಯೇತಿ ತತಃ ಪರಃ ॥ ಮಂತ್ರಃ ಪಂಚಾಕ್ಷರೋಹ್ಯೇಷ । ಸರ್ವಶೃತಿ ಶಿರೋಗತಃ. ॥ " ನಮಃ " ಎಂಬ

ಶಬ್ಧವನ್ನು ಮೊದಲು ಉಚ್ಚರಿಸಬೇಕು. ನಂತರ " **ಶಿವಾಯ** " ಎಂದು ಪಠಿಸಬೇಕು.

" **ನಮಃ ಶಿವಾಯ** " ಮಂತ್ರ, ಶಿವನಿಗೆ ನಮಸ್ಕರಿಸುವೆನು ಅಥವಾ ಶರಣುಹೊಗುವೆನೆಂದರ್ಥ. " **ನಮಃ** " ಎಂಬೆರಡಕ್ಷರಗಳು " **ಪೃಥ್ವಿ ಮತ್ತೂ ಅಪ್** " ತತ್ವಗಳನ್ನುವೊಳಗೊಂಡಿರಲು " **ಶಿವಾಯ** " ಎಂಬಕ್ಷರ ತ್ರಯಗಳು ಕ್ರಮವಾಗಿ " **ಅಗ್ನಿ, ವಾಯು** " ಮತ್ತೂ ಆಕಾಶ ಮಹಾ ಭೂತಗಳ ಅಸ್ತಿತ್ವಕ್ಕೆ ಆಧಾರಗಳೆನಿಸಿರುವುವು. " **ನಮಃ** " ಶಬ್ಧದ ಮೊದಲಿನ ಪೃಥ್ವಿ ಅಪ್ ಸ್ಥೂಲ ಭೂತಗಳೆರಡೂ ಮಿಕ್ಕುಳಿದ ಸೂಕ್ಷ್ಮ ಭೂತತ್ರಯಗಳಲ್ಲಿ ಅನುಕ್ರಮವಾಗಿ ಸಮಾವೇಶಗೊಂಡಿರುವುವು. ಮತ್ತೂ " **ನಮಃ** " ಶಬ್ಧದಿಂದ ನಿರ್ದೇಶಿತನಾದ ಜೀವಾತ್ಮನು ಅರ್ಥಾತ್ ಅಂಗನು " **ಶಿವಾಯ** " ಪರಮಾತ್ಮ ಸ್ವರೂಪಾಂಶನಾಗಿರುವನೇಂಬರ್ಥ ನಮಃಶಿವಾಯ ಮಹಾ ಮಂತ್ರಾನುಸಂಧಾದದಿಂದ ಹೊರಸೂಸುತ್ತಿರುವುದು. ಅಂಗನು (ಜೀವಾತ್ಮನು) ಶಿವನೇ ಆಗಿರುವನು.

ಸಾಮವೇದಾಂತರ್ಗತ " ತತ್ವಮಸಿ ", ಮಹಾವಾಕ್ಯ ಮೇಲುದಹರಿಸಿದರ್ಥವನ್ನೇ ಪ್ರತಿಪಾದಿಸುತ್ತ ತತ್ + ತ್ವಂ + ಅಸಿ = ತತ್ವಮಸಿ ಯೆಂದೆನಿಸಿರುವುದು. ಇಂಗ್ಲೀಷಿನಲ್ಲಿ " Thou art That " ಎಂದಾಗುವುದು. ಈ ಮಹಾ ವಾಕ್ಯದ " **ತ್ವಂ** " ಪದವು ಜೀವಾತ್ಮ (ಅಂಗನನ್ನು) ‖ **ಅಂಗಂತ್ವಂ ಪದಂ** ‖ ಎಂಬಂತೆ ಬೋಧಿಸುತ್ತಿರಲು. " **ತತ್** " ಪದವು ನೇರವಾಗಿ ‖ **ಲಿಂಗಂ ಶಿವಂ ತತ್ಪದಂ** ‖ ಶಿವನನ್ನು ಸಾಕ್ಷಾತ್ಕರಿಸಿ ಸೂಚಿಸುತ್ತಿರುವುದು. ಜೀವಾತ್ಮ ಪರಮಾತ್ಮರುಗಳ ಅಂದರೆ ಲಿಂಗಾಂಗಗಳ ಐಕ್ಯಾನಂದ ಸಮರಸವನ್ನು "ಅಸಿ " ಪದವು ‖ **ಸಂಗಂ ಸತ್ಯಮಸಿ ಪ್ರಸಿದ್ಧ ಪದಮೆಂಬೀ ತತ್ವಮಸ್ಯರ್ಥದಿಂ** ‖ ಅದೇ (ಶಿವನೇ) ನೀನಾಗಿರುವೆ, ಎಂಬ ನಿಜಾಂಶವನ್ನು ಸಿದ್ಧಗೊಳಿಸಿ ಇಧರಿಂದ "**ಶಿವೋಹಂ** " ಭಾವವು ಅಂತರಂಗದಲ್ಲಿ ಸ್ಫೂರ್ತಿಗೊಂಡು ವಿಕಸಿತವಾಗುವುದು. ನಮಃ ಶಿವಾಯ ಪಂಚಾಕ್ಷರೀ ಮಹಾಮಂತ್ರ

ಜಪಾನು ಸಂಧಾನದಿಂದ ಜೀವಾತ್ಮನು (ಅಂಗನು) ಶಿವನಾಗಿರುವನು ಎಂಬುದು ವೇದ್ಯವೆ ಇರುತ್ತೆ. ಮಹಾಗಾಯಿತ್ರಿ ಮಂತ್ರವು ಶಿವಪಂಚಾಕ್ಷರೀ ಮಹಾ ಮಂತ್ರದ ತಿರುಳನ್ನು ಮನಗಾಣಲು ಅನುಕರಣೀಯವಾಗಿರುವುದು.

ಶಿವ ಪಂಚಾಕ್ಷರೀ ಮಹಾಮಂತ್ರವನ್ನು ಓಂಕಾರ ಪ್ರಣವೋಚ್ಚಾರ ದೊಂದಿಗೆ ಜಪಿಸುವುದು ಅತ್ಯಧಿಕವಿನಿಸಿರುವುದು.

॥ ಓಂಕಾರ ಪೂರ್ವೋ ಮಂತ್ರೋಯಂ । ಪಂಚಾಕ್ಷರಮಯಃ ಪರಃ ॥ ಶೈವಾಗಮೇಷು ವೇದೇಷು ।ಷಡಕ್ಷರ ಇತಿಸ್ಮೃತಃ॥ "ಪ್ರಣವಃ ಸರ್ವವೇದೇಷು" ವೇದಾಗಮೋಪನಿಷತ್ತುಗಳಲ್ಲಿ ಪ್ರಣವವು ಹೇಗೆ ಪ್ರಪ್ರಥಮವೋ, ಅದರಂತೆ ಶಿವ ಪಂಚಾಕ್ಷರಿ ಮಂತ್ರಕ್ಕೂ ಏಕಾಕ್ಷರ ಮಹಾಮಂತ್ರವೆನಿಸಿದ, ಓಂಕಾರ ಪ್ರಣವವೇ ಆದಿ. ಓಂಕಾರದಿಂದ ಅಂಕುರಿಸಿ ಪಲ್ಲವಿಸಿದ ಮೂಲ ಮಂತ್ರ ಶಿವಸಂಚಾಕ್ಷರಿ ಮಹಾಮಂತ್ರ. ವೇದಾಗಮಾದಿಗಳಲ್ಲಿ ಪ್ರಣವ ಸಹಿತ ಶಿವ ಪಂಚಾಕ್ಷರೀ ಮಹಾಮಂತ್ರವು ಷಡಕ್ಷರ ಮಂತ್ರವೆಂದು ಪ್ರಸಿದ್ಧವಿರುವುದು. ॥ ಪಂಚಾಕ್ಷರೀ ಮಿಮಾಂ ವಿದ್ಯಾಂ । ಪ್ರಣವೇನಷಡಕ್ಷರೀಂ ॥ ಜಪೇತ್ ಸಮಾಹಿತೋಭೂತ್ವಾ । ಶಿವಪೂಜಾಪರಾಯಣಃ ॥ ನಿತ್ಯಾರಾಧನೆ ಎನಿಸಿದ ಶಿವಪೂಜಾ (ಇಷ್ಟಲಿಂಗ ಪೂಜಾ) ವೇಳೆಯಲ್ಲಿ ಜಪವು ಪ್ರಣವಸಹಿತ ಶಿವ ಪಂಚಾಕ್ಷರೀ, " ಓಂ ನಮಃ ಶಿವಾಯ " ಎಂಬ ಜಪಾನು ಸಂಧಾನದಿಂದ ಕೂಡಿರಬೇಕು. ಪರಶಿವನು ನಿಷ್ಕಲನೂ ಸಕಲನೂ ತಾನೇ ಆಗಿರುವನು. God is impersonal and as well as personal. ಶಿವಲಿಂಗದ ನಿಜ ರೂಪವು ರೂಪಾರೂಪಗಳಿಂದ ವಿರಾಜಿತವಾಗಿರುವುದು. ಇದರಿಂದ ॥ ಉಭಯಾತ್ಮಾ ಶಿವೋ ಮಂತ್ರೇ । ಷಡಕ್ಷರ ಮಯೇ ಸ್ಥಿತಃ ॥ ಉಭ ಯಾತ್ಮಕನಾಗಿ ರಂಜಿಸುವ ಪರತರ ಪರಂಜ್ಯೋತಿ ಪರಿಪೂರ್ಣಾತ್ಮಕನಾದ ಪರ ಶಿವನು ಪಾವನವಾದ ಷಡಾಕ್ಷರ ಮಯನೂ ಆಗಿರುವನು. ಶಿವನು ಪಂಚಾನನ ನೆನಿಸಿ ವಿರಾಜಿಸುತ್ತಿರುವನು. ಶಿವಾಕ್ಷಿ ಸಂಭವನಾದ ಶಿವಸುಬ್ರಹ್ಮಣ್ಯನು ಷಡಾನನ ನೆನಿಸಿರುವನು. ಪಂಚಾನನ ಷಡಾನನರುಗಳಲ್ಲಿ ಐಕ್ಯತೆ, ಏಕೀಭಾವ

ಅವಿನಾಭಾವ ಅದ್ವಿತೀಯತ್ವವು ಸಹಜ ಸಮರಸದಿಂದ ಕಂಗೊಳಿಸುವಂತೆ, ಶಿವಪಂಚಾಕ್ಷರ ಹಾಗೂ ಷಡಾಕ್ಷರ ಮಹಾಮಂತ್ರಗಳು ಅಭಿನ್ನವೆನಿಸಿರುವುವು. ಅಭಿನ್ನವೆನಿಸಿದ ಎರಡು ಮಹಾ ಮಂತ್ರಗಳಿಗೂ ಫಲವು ಒಂದೇ. ಅವರವರಿಗೆ ಗುರೂಪದಿಷ್ಟವಾದ ಮಹಾಮಂತ್ರವನ್ನು ಅವರವರು ಎಡಬಿಡದೆ ಭಕ್ತಿಯಿಂದ ಜಪಿಸಿ ಅನುಸಂಧಾನ ಮಾಡುವುದು ಶ್ರೇಷ್ಠತಮವಾದುದು. ಆ ಮಂತ್ರ ಈ ಮಂತ್ರವೆಂಬ ಚಂಚಲಕ್ಕೆ ಗುರಿಯಾಗದೆ, ಗುರು ಉಪದೇಶಿಸಿದ ಒಂದು ಮಹಾ ಮಂತ್ರವನ್ನು ನಂಬಿ, ಗಂಗಾಸಾಗರ ಸಂಗಮಂದಂಥಾ ಭಕ್ತಿಯಿಂದ ಕೂಡಿ ದೃಢಭಾವವ ಬಿಡದೆ, ಧ್ಯಾನಾನುಸಂಧಾನವನ್ನು, ತೈಲಧಾರೆಯಂತೆ ಮುಂದು ವರಿಸುವುದು ಸಾಧುವಾದ ಮಾರ್ಗವೆಂಬುದು ಅತ್ಯಂತ ಗಮನಾರ್ಹ.

॥ ಜಪೇತ್ಪಂಚಾಕ್ಷರೀ ಮೇತಾಂ । ವಿದ್ಯಾಂ ಪಾಶ ವಿಮುಕ್ತಯೇ ॥ ಶಿವಪಂಚಾಕ್ಷರೀ ಮಹಾಮಂತ್ರವನ್ನು ನಿರಂತ ಶ್ರದ್ಧಾಭಕ್ತಿಗಳಿಂದ ಮಾನಸಿಕ ವಾಗಿ ಜಪಿಸುವುದರಿಂದ ಆಣವಾದಿ ತ್ರಿಮಲಗಳಿಂದ ಮಾನವನು ಮುಕ್ತನಾಗು ವನು. ॥ ಅನೇನ ಮೂಲಮಂತ್ರೇಣ । ಶಿವಲಿಂಗಂ ಪ್ರಪೂಜಯೇತ್ ॥ ನಿತ್ಯಂ ನಿಯಮಸಂಪನ್ನಃ ಪ್ರಯತಾತ್ಮಾ ಶಿವಾತ್ಮಕಃ ॥ ಶಿವಾರಾಧಕನು ಮೂಲ ಪಂಚಾಕ್ಷರೀ ಮಹಾಮಂತ್ರ ಜಪಾನು ಸಂಧಾನದೊಂದಿಗೆ ಇಷ್ಟಲಿಂಗಾ ರಾಧನೆಯಲ್ಲಿ ನಿಷ್ಠೆಯಿಂದ ಆಸಕ್ತಿಯುಳ್ಳವನಾಗಿರಬೇಕು. ॥ ಪಂಚಾಕ್ಷರೀಂಸ ಮುಚ್ಚಾರ್ಯ, ಪುಷ್ಪಂ ಲಿಂಗೇ ವಿನಿಕ್ಷಿಪೇತ್ ॥ ಪತ್ರ, ಪುಷ್ಪ ಬಿಲ್ವಾದಿಗಳನ್ನು ಮೂಲ ಮಂತ್ರೋಚ್ಚಾರಣೆಯೊಂದಿಗೆ ಇಷ್ಟಲಿಂಗಕ್ಕೆ ಅರ್ಪಿಸಬೇಕು. ಈ ವಿಧಾನವು ಮೋಕ್ಷಾನಂದಕರವಾದ ಶಿವಸಾಯುಜ್ಯಕ್ಕೆ ಹೇತುವೆನಿಸಿರುವುದು.

ಮಾನವನಿಗೆ ಶ್ರೇಷ್ಠ ಧರ್ಮವೇದರೆ ॥ ಧರ್ಮೋ ಲಿಂಗಾರ್ಚನಾತ್ಮಕಃ ॥ ಎಂಬಂತೆ ಇಷ್ಟಲಿಂಗಾರ್ಚನೋಪಾಸನೆಯೇ ಆಗಿರುವುದು. ಶಿವಲಿಂಗಧಾರಣ ಮತ್ತೂ ಇಷ್ಟಲಿಂಗವನ್ನು ಕರಪೀಠದಲ್ಲಿ ಅಲಂಕೃತಗೊಳಿಸಿ ಸಂಧ್ಯಾಕಾಲಗಳಲ್ಲಿ ನಿತ್ಯ ವಿಧಿವತ್ತಾಗಿ ಆರಾಧಿಸುವ ವಿಧಾನವು ಸನ್ಮಾರ್ಗವೆನಿಸಿ ವೇದವಿಹಿತ ಉತ್ಕೃಷ್ಟ ಧರ್ಮವೆನಿಸಿರುವುದು

ಮಾನವನು ಸುಖಾಪೇಕ್ಷೆಯಿಂದ ಸುಖಾನ್ವೇಶಣೆಗಾಗಿ ಹಗಲಿರುಳು ಬವಣೆಗೊಳ್ಳುತ್ತಿರುವನು. ಸುಖವೆಲ್ಲಿದೆ ? ಎಂಬುದನ್ನರಿಯನು. ಭಾರ್ಯಾ ಪುತ್ರಾದಿಗಳಿಂದಾಗಲಿ ಧನ ಕನಕ ವಸ್ತುವಾಹನಾದಿಗಳಿಂದಾಗಲಿ, ಯವ್ವನ, ಮತ್ತೂ ಪ್ರಭುತ್ವದಿಂದಾಗಲಿ ಸುಖವು ಸಿಗುವುದಿಲ್ಲ. ಇವುಗಳಿಂದ ಕಾಣುವ ಸುಖವು ನಿಜ ಸುಖವಲ್ಲ. ಮೊದಲು ಮೊದಲು ಸುಖದಂತೆ ತೋರಿ ಇವು ಕೊನೆಯಲ್ಲಿ ದುಃಖದ ಕಡಲಿನಲ್ಲಿ ಕೈಬಿಟ್ಟು ಪರಿಯವಸಾನ ಹೊಂದುವುವು. ಇದನ್ನು ಸುಖವೆಂದು ಹೇಳುವುದು ತಾನೆ ಹೇಗೆ ? ಯಾವುದು ದುಃಖದ ಗಂಧವೆಂದರೇನೆಂಬುದರ ಸೋಕಿಲ್ಲದೆ, ಕೇವಲ ಸುಖಮಯವಾಗಿ, ಆದಿ ಮಧ್ಯಾಂತಗಳೆಲ್ಲವೂ ಸುಖ, ನಿತ್ಯ ಸುಖ, ನಿರತಿಶಯಾನಂದ ಸುಖವೆನ್ನಿಸಿ ಸುಖಮುಖ ಸಿಂಧುವೆನಿಸಿರುವುದೋ ಅದೇ ನಿಜವಾದ ಸುಖ. ಅಂಥಾ ಸುಖ ಪ್ರಾಪ್ತಿಗಾಗಿಯೇ ಮಾನವನು ಹಗಲಿರುಳು ಅವಿಶ್ರಾಂತವಾಗಿ ಶ್ರಮಿಸ ಬೇಕು. ಆ ಸುಖವಾವುದು ಎಲ್ಲಿದೆ ? ಎಂಬ ವಿಚಾರಪೂರಿತ ಪ್ರಶ್ನೆ ನಮ್ಮ ಅಂತರಂಗದಲ್ಲಿ ಉದ್ಭವಿಸಬೇಕು. ಇದನ್ನರಿಯಲು ಧೀರ ಧೀಮಂತ ಪುರುಷನು ಶಾಸ್ತ್ರಕ್ಕೆ ಶರಣಾಗತನಾಗಬೇಕು. ॥ ತಸ್ಮಾತ್ ಶಾಸ್ತ್ರಂ ಪ್ರಮಾಣಂತೆ ॥ ಎಂಬ ಭಗವದ್ವಾಕ್ಯ ಆಪ್ತವಚನವಷ್ಟೆ. ಶಾಶ್ವತಾನಂದವೀಯುವ ನಿಜ ಸುಖದ ಇರುವಿಕೆಯನ್ನು ನಿಗಮಾಗಮಗಳು ನಿರ್ಣಯಿಸುತ್ತಾ, ॥ ಸುಖಮಿಚ್ಛಂತಿ ಸರ್ವೇಹಿ ! ತಚ್ಚ್ಛದ್ಧರ್ಮ ಸಮುದ್ಭವಂ ॥ ಪ್ರಾಜ್ಞರೆಲ್ಲರೂ ಯಾವ ನಿಜ ಸುಖ ವನ್ನು ಹೊಂದಲು ಆಕಾಂಕ್ಷೆಯುಳ್ಳವರಾಗಿರುವರೋ ಅಂಥಾ ನಿರತಿಶಯಾ ನಂದವನ್ನೀಯುವ ನಿತ್ಯ ಸುಖವು," ತಚ್ಚ ದ್ಧರ್ಮ ಸಮುದ್ಭವಂ "—ಧರ್ಮದ ಹೃದಯದಿಂದ ಉದ್ಭವಿಸುವುದು. ಧರ್ಮವೆಂಬುದು ಸರ್ವಧರ್ಮ ಸಮನ್ವಯದಿಂದ ವಿರಾಜಿಸುವ, ॥ ಧರ್ಮೋ ಲಿಂಗಾರ್ಚನಾತ್ಮಕಃ ॥ ಎಂಬಂತೆ ಸದಾ ಇಷ್ಟ ಲಿಂಗಾರ್ಚನೆಯೇ ಆಗಿರುವುದು. ಇಷ್ಟಲಿಂಗಾರ್ಚನೆಯಿಂದ ಪ್ರಾಣಲಿಂಗ, ಭಾವಲಿಂಗಂಗಳ ಪ್ರಸಾದಪ್ರಾಪ್ತಿಯಿಂದ ಆತ್ಮಲಿಂಗದಲ್ಲಿ ತಲ್ಲೀನನಾಗುನು. ವಿಶ್ವದ ಸರ್ವ ಧರ್ಮಗಳ ಆವಾಸಸ್ಥಾನಕ್ಕೆ ಶಿವಲಿಂಗಾರಾಧನೆಯು ಮೂಲ ಭೂತವಾಗಿರುವುದು. ॥ ಬೀಜಂ ಧರ್ಮ ಧ್ರುಮಸ್ಯ ॥ ಬ್ರಹ್ಮಾಂಡ ಕೋಟಿ

ಗಳನ್ನು ತನ್ನಲ್ಲಡಗಿಸಿಕೊಂಡು ॥ ತ್ರೈಲೋಕ್ಯ ಸಂಪದಾಲ್ಲೇಖ್ಯ ಸಮಲ್ಲೇಖನ ಭಿತ್ತಯೇ । ಸಚ್ಚಿದಾನಂದ ರೂಪಾಯ । ಶಿವಾಯ ಬ್ರಹ್ಮಣೇನಮಃ ॥ ಅಂದರೆ ಯಾವುದು ತ್ರೀಲೋಕಾದಿ ಅಖಿಲಾಂಡ ಕೋಟಿ ಬ್ರಹ್ಮಾಂಡಗಳ ವಿಶಿಷ್ಟ ಸಂಪದ್ರೂಪಚಿತ್ರ ಲೇಖನಕ್ಕೆ ಭಿತ್ತಿ ಸ್ವರೂಪವೂ ಸಚ್ಚಿದಾನಂದ ಸ್ವರೂಪವೂ ಆಗಿ ವಿರಾಜಿತವಾಗಿರುವುದೋ ॥ ಲಿಂಗಂ ಚಿದಾತ್ಮಕಂ ಬ್ರಹ್ಮ ॥ ಆಪರಶಿವನೆನಿಸಿದ ಶ್ರೀ ಚಂದ್ರಮೌಳೀಶ್ವರ ಮಹಾಜ್ಯೋತಿರ್ಲಿಂಗವೇ ಧರ್ಮಧೃಮುವೆನಿಸಿರುವುದು. ಈ ಧರ್ಮಧೃಮುದ ಹೃದಯದಿಂದ ಹೊರಹೊಮ್ಮಿದ ಸುಖವು ಅಂತರಂಗದಲ್ಲಿ ಪರಮಾತ್ಮನ ಸಾಕ್ಷಾತ್ಕಾರದ ದಿವ್ಯ ಸುಖಾನು ಸಂಧಾನವೆನಿಸಿ, ನಿಜವಾದ ಶಾಶ್ವತಾನಂದವನ್ನೀಯುವ ॥ ಆನಂದಂ ಬ್ರಹ್ಮೇತಿ ವ್ಯಜಾನಾತ್ ॥ ಎಂಬ ಉಪನಿಷದ್ವಾಣಿಯಂತೆ ನಿತ್ಯ ನಿರತಿಶಯಾನಂದಮಯ ಅಖಂಡಪರಂಜ್ಯೋತಿಯ ದ್ಯೋತಕವೆನಿಸಿರುವುದು. ಅನಂತ ಬ್ರಹ್ಮಾಂಡ ಕೋಟಿಗಳನ್ನು ಧರಿಸಿ ಉದ್ಧರಿಸುವ ಸರ್ವಧರ್ಮ ಸಮನ್ವಯಾತ್ಮಕ ಸಂಪನ್ಮೂಲ ಪರಶಿವನೆನಿಸಿದ ಧರ್ಮಧೃಮುದ ಸ್ವಾನುಭೂತಿಯಿಂದ ಪ್ರಾಪ್ತವಾಗುವ ಸುಖವೇ ನಿಜ ಸುಖ ನಿತ್ಯ ಸುಖವೆನಿಸಿಸುವುದು. ಇದು ಬಾಹ್ಯ ಪ್ರಪಂಚದ ಪದಾರ್ಥಗಳಿಂದ ಪ್ರಾಪ್ತವಾಗತಕ್ಕದ್ದಲ್ಲ. ಈ ಸುಖವು ಗುಪ್ತ ಧನದಂತೆ ನಮ್ಮಲ್ಲೇನೆಲಸಿರುವುದು. Education is the manifestation of Perfection already in man and Religion is the manifestation of Divinity already hidden in man, ಎಂದು ಲೋಕವಿಖ್ಯಾತರಾದ ಶ್ರೀ ಸ್ವಾಮಿ ವಿವೇಕಾನಂದರು ನುಡಿದಿರುವುದು ಸ್ಪಷ್ಟವೇಯಿರುತ್ತೆ. ನಮ್ಮಲ್ಲಿರುವ ಚೈತನ್ಯ ನೆನಿಸಿರುವ ಪರಮಾತ್ಮನನ್ನು ಕಾಣದೆ ಹೋದರೆ, ಪುರಂದರದಾಸರು ಹೇಳಿದಹಾಗೆ ॥ ಅಂತರಂಗದಲಿ ಹರಿಯ ಕಾಣದವ ಹುಟ್ಟುಕುರುಡ ॥ ಎಂಬಂತೆ, ಅವಿದ್ಯೆ ಅಂಧಕಾರದಿಂದ ಸಂಸಾರದ ಕಗ್ಗತ್ತಲಿನಲ್ಲಿ ಕುರುಡರಂತೆ ಅನೇಕ ಕೋಟಿ ಜನ್ಮಗಳನ್ನೆತ್ತುತ್ತ ತಡವರಿಸಬೇಕಾಗುವುದು. Brilliantly ever shining Divine Light has got to be discovered from within us and

attained. ಜಗಜ್ಯೋತಿ ಎನಿಸಿದ ಜೀವಜ್ಯೋತಿ ಪರಂಜ್ಯೋತಿಯ ಘನ ಅರಿವು ನಮ್ಮಲ್ಲಿ ಪ್ರಕಾಶಿತವಾಗಿ ಹೃದಯಕಮಲದಲ್ಲಿ ತೋರಿ ಬೆಳಗಬೇಕಾದರೆ ಗುರುಕಾರುಣ್ಯವು ಅತ್ಯಾವಶ್ಯಕವೆನಿಸಿರುವುದು. ॥ ಗುರುವಚನೋಪದೇಶವ ನಾಲಿಸಿದರಳಾಗಹುದು ನರರಿಗೆ ಮುಕುತಿ ॥ ಎಂಬ ಶ್ರೀ ನಿಜಗುಣ ಶಿವ ಯೋಗಿಗಳು ಅಪ್ಪಣೆ ಕೊಡಿಸಿರುವುದು ಆತ್ಮೀಯ ಬೋಧೆಯಾಗಿರುವುದು. ಈ ಮಹದಂಶವನ್ನು ಕೂಲಂಕುಶವಾಗಿ ಮನನ ಮಾಡಿದ ಮಹಾನುಭಾವ ಜಗಜ್ಯೋತಿ ಬಸವಣ್ಣ, ॥ ಶಿವಪಥವನರಿವೊಡೆ ಗುರುಪಥವೇ ಮೊದಲು ॥ ಎಂದು ಜಗತ್ತಿಗೆ ಮಾರ್ಗದರ್ಶಕರಾಗಿ ಅನುಷ್ಠಿಸಿ ಬೋಧಿಸಿರುವುದು ಅತ್ಯಂತ ಗಮನಾರ್ಹವೂ ಮತ್ತೂ ಗಹನಾರ್ಥ, ಗಾಂಭೀರ್ಯ, ಔದಾರ್ಯಗಳಿಂದ ಶೋಭಿಸಿ ಗುರುವಿನ ಅಪಾರ ಹಿರಿಮೆಯನ್ನು ಮಹೋನ್ನತಭಾವದಿಂದ ಉದ ಹರಿಸಿ ತೋರಿಸುವಂತಿದೆ. ಮಾನವನು ಗುರುಪುತ್ರನಾಗದ ಹೊರತು ಪರ ಗುರುಗಳಲ್ಲಿನ ನಿಕಟ ಸಂಬಂಧದ ನಿಜ ಸ್ವರೂಪಾನುಭವ ಜ್ಞಾನ ಗೋಚರ ವಾಗದು.

ಶಿವಸಂಚಾಕ್ಷರೀ ಮಹಾಮಂತ್ರ ನಿತ್ಯಾನು ಸಂಧಾನದಿಂದ ಸಾಧಕನು (ಜಿಜ್ಞಾಸುವು) ಕ್ರಮೇಣ ಪುನಿತನಾಗಿ, ಪೂಣ್ಯಮೂರ್ತಿಯೇ ತಾನಾಗಿ ವಿರಾಜಿಸುವನು. ಸನ್ಮಂಗಳಮಯವಾದ ಶಿವನಾಮಜಪ, ಶಿವಸ್ಮರಣೆಗಳಿಂದ ಕೂಡಿ ಅನನ್ಯ ಭಾವೇನ ಶಿವನಲ್ಲಿ ಶರಣಾಗತನಾದವನು. ಶಿವ ಸ್ವರೂಪವನ್ನು ತನ್ನಂತರಂಗದಲ್ಲಿ ಸಾಕ್ಷಾತ್ಕಾರಗೊಳಿಸಿಕೊಳ್ಳುವನು. ಶಿವಸಂಚಾಕ್ಷರೀ ಮಹಾ ಮಂತ್ರ ಮಥನದಿಂದ, ಬಿದಿರಿನ ಮರಗಳ ರೆಂಬೆಗಳು ಗಾಳಿಯರಭಸಕ್ಕೆ ಒಂದ ಕ್ಕೊಂದು ತೀಪಿ. ತೀಡಲ್ಪಟ್ಟು ಮಥಿಸಲು, ಇದರಿಂದ ಅಗ್ನಿ ಜ್ವಾಲೆಯುಂಟಾಗಿ ಘೋರಾರಣ್ಯವನ್ನೇ ಹತ್ತಿಕ್ಕಿ ಉಜ್ವಲವಾಗಿ ಬೇಗೆಗೊಳಪಡಿಸುವಂತೆ, ಗುರೂಪ ದಿಷ್ಟ ಮಹಾಮಂತ್ರವನ್ನು ಮನದಲ್ಲಿ ಜಪಿಸಿ ಭಕ್ತಿಯಿಂದ ಅನುಸಂಧಾನ ಮಾಡುತ್ತಬಂದಲ್ಲಿ, ಮೊಸರನ್ನು ಕಡದಂತೆಲ್ಲಾ ನವನೀತ (ಬೆಣ್ಣೆ) ಅದರಿಂದ ಹೊರಬಿದ್ದು ಶುಭ್ರವಾಗಿ ತೇಲುವಂತೆ, ಗುರೂಪದಿಷ್ಟ ಮಹಾಮಂತ್ರ ಧ್ಯಾನಾನು ಸಂಧಾನದಿಂದ ಮಾನವನ, ಪೂರ್ವಕೃತ ಬಹು ಘೋರಪಾತಕ

ರಾಶಿಗಳೆಲ್ಲಾ, ॥ ಜ್ಞಾನಾಗ್ನಿ ದಗ್ಧ ಕರ್ಮಾಣಿ । ಭಸ್ಮ ಸಾತ್ಕುರುತೇರ್ಜುನಾ ॥ ಎಂದಂತೆ ಭಸ್ಮೀ ಭೂತವಾಗುವುವು. "ಮಡಿಯೋ ನಿರ್ಮಲ ಚಿತ್ತವೈ" ಎಂಬಂತೆ, ಬೆಣ್ಣೆಯಂಥಾ ನಿರ್ಮಲಾಂತಃಕರಣ ಭಾವದಿಂದ ಜಪಿಸಿದ ಶಿವ ಪಂಚಾಕ್ಷರೀ ಮಹಾಮಂತ್ರವು ಪ್ರಭಾವಾನ್ವಿತವಾದುದಾಗಿ ಧ್ಯಾನಾನು ಸಂದಾನ ಯೋಗದಿಂದ, ಮೆಲ್ಲಮೆಲ್ಲಗೆ ಮಲ್ಲಿಗೆಯ ಹೆಜ್ಜೆಯಂಥಾ ಮೃಧು ಮಧುರಭಾವ ದಿಂದ, ಶಿವಯೋಗದಲ್ಲಿ ತಲ್ಲೀನನಾಗಿ ಸ್ವಯಂಪ್ರಕಾಶವೆನಿಸಿದ ಅಖಂಡಾದ್ವೈತ ಪರಿಪೂರಣಾನಂದ ರೂಪಶಿವತ್ವವು ಸ್ವಾನುಭೂತಿಗೆ ಗೋಚರಿಸಿ ಆನಂದಿಸುವನು.

ಓಂ ನಮಃ ಶಿವಾಯ ಎಂಬ ಮಹಾಮಂತ್ರವನ್ನು ಓರ್ವನು ಸುಮ್ಮನೆ ಕೋಟಿಗಟ್ಲೆ ಬರೆದರೆ ತಾನೇನು ಅಥವಾ ಪಠಿಸಿದರೆ ತಾನೇನು. ಇವು ಬರಿ ಅಕ್ಷರ ಹಾಗೂ ಶಬ್ದಗಳೆನಿಸುವವೇ ವಿನಃ, ಸಾಕ್ಷಾತ್ ಮಂತ್ರವೆನಿಸಲಿಕ್ಕಿಲ್ಲ. ಸದ್ಗುರುವಿನಿಂದ ನೇರವಾಗಿ ಉಪದೇಶವನ್ನು (ದೀಕ್ಷೆಯನ್ನು) ಪಡೆದು, ಗುರು ಪುತ್ರನೆನಿಸಿ, ಗುರುಕಾರುಣ್ಯ ಸ್ಥಲದಲ್ಲಿ ನಿಂತು, ಶ್ರೀ ಗುರುಕೃಪಾಬಲವನ್ನು ಮುಂದಿಟ್ಟುಕೊಂಡು ಬರೆದರೆ–ಆಗ ಆ ಶಿವಪಂಚಾಕ್ಷರೀ ಮಹಾಮಂತ್ರವು ವೀರ್ಯವತ್ತರವಾದುದಾಗಿ ತಾರಕವೆನಿಸುವುದು. ಆಗ ನರನು ನಾರಾಯಣ ನಾಗುವನು. ನಿಜಕ್ಕೂ ಜೀವನು ಶಿವನೆನಿಸುವನು.

ಶ್ರೀ ಗುರುವಿನಿಂದನುಗ್ರಹೀತವಾದ ಮಹಾಮಂತ್ರವನ್ನು ಅನವರತ ಮನದಲ್ಲಿ ಮಥಿಸಿ ಅನನ್ಯಭಾವೇನ ಅನುಸಂಧಾನ ಮಾಡುವುದರಿಂದ ॥ ಮನನಾತ್ ತ್ರಾಯತೀತಿ ಮಂತ್ರಃ ॥ ಎನಿಸುವುದು ಜಪಾನು ಸಂಧಾನದಿಂದ ಧ್ಯಾನಯೋಗವು ಪ್ರಫುಲ್ಲಿತವಾಗಿ ವಿಕಾಸಗೊಳ್ಳುವುದು. ಆದರಿಂದ ಉಜ್ವಲಾಕರ ಕೋಟಿದ್ಯುಮಣಿ ಅಂತರಗದಲ್ಲಿ, ಉದಯಿಸಿ ಪ್ರಜ್ವಲಿಸಿ, ॥ ಸ್ವ ಹೃದಯ ಪ್ರಕಾಶಃ ॥ ಎಂಬ ಶೃತಿವಾಣಿಯಂತೆ ಹೃನ್ಮಂದಿರವನ್ನು ಬೆಳಗಿಸುವುದು. ಸದ್ಗುರುವಿನಿಂದ ಉಪದೇಶಿಸಲ್ಪಟ್ಟ ಮಂತ್ರದ ಪ್ರಭಾವ ವರ್ಣನಾತೀತ ವಾಗಿರುವುದು. ಗುರುವಿನ ಹಸ್ತಮಸ್ತಕ ಸಂಯೋಗದೀಕ್ಷೆ ದೇಹತ್ರಯ ಂಗಳನ್ನೂ, ಅವನ ಕರುಣಾಮೃತ ದಿವ್ಯಕಟಾಕ್ಷದೀಕ್ಷೆ ದುಃಖತ್ರಯ ಹಾಗೂ

ಮಲತ್ರಯಗಳನ್ನೂ ಮತ್ತೂ ಶಿವಪಂಚಾಕ್ಷರೀ ಮಂತ್ರೋಪದೇಶಾಮೃತ ದೀಕ್ಷೆ. ನಿರ್ಮಲಾತ್ಮಕನನ್ನಾಗಿ ಮಾಡಿ ಭಗವದ್ಭಕ್ತಿ ಭಾವದಿಂದ ನಮ್ಮನ್ನು ಮುಕ್ತರೆನಿಸಿ, ನಿರತಿಶಯಾನಂದಮಯ ಸಾಯುಜ್ಯ ಕೈವಲ್ಯದಲ್ಲಿ ನಿರಂತರ ರಮಿಸುವಂತೆ ಮಾಡುವುದು.

ಶಿವನಾಮವೇ ಆಗಲಿ ಗುರುನಾಮಸ್ಮರಣೆಗಳೇ ಆಗಲಿ ಮಂತ್ರವೆನಿಸುವುದು ಯಾವಾಗ ಎಂಬಂಶವನ್ನು ತಿಳಿಯುವುದು ಮುಖ್ಯ. ಅಂಗಡಿಯೊಂದರಲ್ಲಿ ಕೊಳ್ಳುವ ಹೂವು ಹಣ್ಣು ಫಲತಾಂಬೂಲಾದಿಗಳು ಬರಿ ಪದಾರ್ಥಗಳೆನಿಸಿರುವದು ಸರಿಯಷ್ಟೆ. ಅವನ್ನೇ ಸದ್ಗುರುವಿನ ಚರಣಕಮಲಾಲಯಗಳಲ್ಲಿ ಭಕ್ತಿಯಿಂದ ಅರ್ಪಿಸಿದಾಗ, ಗುರುದೇವನು, ವಾತ್ಸಲ್ಯಭಾವದಿಂದ ತನ್ನ ಅಮೃತ ಹಸ್ತದಿಂದ ಸ್ಪರ್ಶಿಸಿ ಮಂತ್ರಾಕ್ಷತೆಗಳಿಂದ ಆಶೀರ್ವದಿಸಿದ ಬಳಿಕ ನಮ್ಮ ಹಸ್ತಕ್ಕೆ ಇಡಲಾಗಿ, ಆ ಮಂಗಳ ವಸ್ತುಗಳನ್ನು ಪ್ರಸಾದ (ಗುರುಪ್ರಸಾದ) ರೂಪವಾಗಿ ನಮ್ರಭಾವದಿಂದ ಸ್ವೀಕರಿಸಿ, ಕಣ್ ಮನಸ್ಸುಗಳಿಗೆ ವೊತ್ತಿಕ್ಕೊಂಡು, ಶಿರಸ್ಸಿನಲ್ಲಿ ಧಾರಣೆ ಮಾಡಿ ಧನ್ಯರೆನಿಸುವೆವು. ಪೂಜನೀಯವಾದ ವಂದುವಸ್ತು ಸಾಮಾನ್ಯ ಸ್ಥಿತಿಯಲ್ಲಿ ಬರಿಪದಾರ್ಥವೆಂದು ಪರಿಗಣಿಸಿದರೂ, ಅದೇ ಶಿವನ ಅಥವಾ ಗುರುವಿನ ಪಾದ ಕಮಲಗಳಲ್ಲಿ ಅರ್ಪಿಸಿ, ಮತ್ತದೇ ಆಶೀರ್ವಾದ ರೂಪದಲ್ಲಿ ನಮಗೆ ಹಸ್ತಗತವಾದಾಗ, ಮೊದಲಿನ ಭಾವನೆನೀಗಿ, ಪೂಜ್ಯ ಪ್ರಸಾದ ಭಾವನೆಯಿಂದ ಸ್ವೀಕರಿಸುತ್ತೇವೆಯಷ್ಟೆ. ಪರಮವೀರಶೈವರು ಪ್ರಸಾದಕಾಯರೇ ಇರುವರಷ್ಟೆ, ಲಿಂಗಪ್ರಸಾದವೇ ಅವರಿಗೆ, ಸತತ ॥ ಜೀವನಂ ಸಜ್ಜನಾನಾಂ ॥ ಜೀವನವಾಗಿರುವುದು. ನೆಲದ ಮೇಲೆ ಬಿದ್ದಿರುವ ತುಂಡುದಾರವನ್ನು ಯಾರೂ ಲಕ್ಷಿಸುವುದಿಲ್ಲವಷ್ಟೆ. ಅದೇ (ಆ ತುಂಡುದಾರವೇ) ॥ ಪುಷ್ಪಮಾಲಾನ್ವಸಂಗೇಣ । ಸೂತ್ರಂ ಶಿರಸಿಧಾರಯೇತ್ ॥ ಹೂವುಗಳಿಂದ ಪೋಣಿಸಲ್ಪಟ್ಟು. ಶಿವನ ಮಸ್ತಕವನ್ನು ಪೂಜಾವೇಳೆಯಲ್ಲಿ ಸೇರಿ ಅಥವಾ ಗುರುವಿನ ಪಾದಗಳಿಗೆ ಅರ್ಪಿಸಿ ಆಶೀರ್ವಾದ ರೂಪದಲ್ಲಿ ನಮ್ಮ ಹಸ್ತಕ್ಕೆ ಆ ತುಂಡುದಾರ ಪುಷ್ಪದೊಂದಿಗೆ ಬಿದ್ದಾಗ, ಪೂಜನೀಯವೆನಿಸಿ ಕಣ್ಣುಗಳಿಗೆ ವೊತ್ತಿಕ್ಕೊಂಡು ॥ ಶಿರಸಿಧಾರಯೇತ್ ॥ ಶಿರಸ್ಸಿನಲ್ಲಿರಿಸುವೆವು.

ತದ್ವತ್, ಶಿವಮಂತ್ರವಾಗಲಿ ಅಥವಾ ಗುರುಮಂತ್ರವಾಗಲಿ ದೀಕ್ಷೆಗೆ ಪೂರ್ವ ಅವು ಬರಿನಾಮಗಳಾಗಿರುವವೇ ಹೊರತು, ವೀರ್ಯವತ್ತರವಾದ ಪ್ರಭಾವಾನ್ವಿತ ಮಂತ್ರಗಳೆನಿಸಲಾರವು. ದೀಕ್ಷಾಗುರುವಿನಿಂದ ಮಹಾ ಮಂತ್ರ ಉಪದೇಶ ರೂಪವಾಗಿ ಅನುಗ್ರಹೀತವಾದ ಕೂಡಲೇ, ಸರ್ವಶಕ್ತಿಯುತವಾದುದಾಗಿ, ಸಜೀವ ಮಂತ್ರವೆನಿಸಿ, ಜಯಪ್ರದವಾಗಿ ಸರ್ವದಾ ರಾರಾಜಿಸುವುದು. ಶ್ರೀನಾರದರಿಂದ ಅಷ್ಟಾಕ್ಷರೀ ಮಹಾಮಂತ್ರೋಪ ದೇಶವ ಪಡೆದ ಪ್ರಹ್ಲಾದ, ಧೃವಾದಿ ಭಾಗವತೋತ್ತಮರು ಭೀಕಾರ ಗಂಡಾಂತರಗಳನ್ನೆಲ್ಲಾ ಮಹಾಮಂತ್ರ ಬಲದಿಂದ ನಿರ್ವಹಿಸಿ ನಿತ್ಯಸುಖಿ ಗಳಾದರು. ಶ್ರೀ ಮದಾಂಜನೇಯನು ಸಮರ್ಥ ರಘುವೀರನ ನಾಮಸ್ಮರಣೆ ಯನ್ನು ನೆರೆನಂಬಿ ಶ್ರೀರಾಮನಾಮ ಮಂತ್ರ ಬಲದಿಂದ ಶತಯೋಜನ ವಿಸ್ತೀರ್ಣವುಳ್ಳ ಮಹಾಸಾಗರವನ್ನು ಅನಾಯಾಸವಾಗಿ ದಾಟಿದ್ದಲ್ಲದೆ, ಕಲ್ಲು ಬಂಡೆಗಳ ಮೇಲೆ ರಾಮನಾಮಾಂಕಿತ ಮುದ್ರೆಯನ್ನು ವೊತ್ತಿ ಸಮುದ್ರದಲ್ಲಿ ಎಸೆಯಲು-ಶ್ರೀರಾಮ ನಾಮದ ಪ್ರಭಾವವು ಅದೆಂತಹುದೋ ! ಪ್ರತಿಯೊಂ ದೊಂದು ಬಂಡೆ ಸಮುದ್ರದಲ್ಲಿ ಮುಳುಗದೆ, ಚೆಂಡಾಗಿ ತೇಲುತ್ತಾ ಲಂಕೆಯ ವರೆವಿಗೂ ಸುಭದ್ರವಾದ ಸೇತುವೆಯಾಗಿ ಕಟ್ಟಿ, ಆಂಜನೇಯನು ಕಪಿಸೈನ್ಯ ವನ್ನೂ ಹಾಗೂ ಶ್ರೀರಾಮ ಲಕ್ಷ್ಮಣಾದಿಗಳನ್ನೂ ದಾಟಿಸಿದನೆಂದ ಬಳಿಕ ಶ್ರೀರಾಮನಾಮದ ಪ್ರಭಾವವು ಎಂತಹದಾಗಿರಬೇಕು. ಈ ಅಂಶವನ್ನು ಶ್ರೀ ಕನಕದಾಸರು ॥ ನೀನ್ಯಾಕೋ ನಿನ್ನ ಹಂಗ್ಯಾಕೋ । ನಿನ್ನ ನಾಮದ ಬಲ ವೊಂದಿದ್ದರೆ ಸಾಕೋ ॥ ಎಂದು ಉಚ್ಚ ಧ್ವನಿಯಿಂದ ಸ್ವಾಮಿಯನ್ನು ಕುರಿತು ಹಾಡಿರುವುದು ಸಂಸ್ಮರಣೀಯವೇ ಇರುವುದು ಯತಿಸಾರ್ವಭೌಮ ಸಾನಂದ ಮುನೀಂದ್ರರು ಶಿವ ಪಂಚಾಕ್ಷರೀ ಮಹಾಮಂತ್ರೋಚ್ಚಾರ ಪ್ರಭಾವದಿಂದ ನರಕದಲ್ಲಿ ನರಳುತ್ತಿದ್ದ ಅನೇಕರನ್ನು ಕರುಣಾಭಾವದಿಂದ ಅನುಗ್ರಹಿಸಿ ಕೃತಾರ್ಥರನ್ನಾಗಿ ಮಾಡಿರುವರು. ಗುರುವಿನಿಂದ ಉಪದೇಶಿಸಲ್ಪಟ್ಟ ಮಹಾ ಮಂತ್ರದ ಶಕ್ತಿ ಗಹನವೂ, ಗುರುತರವೂ ಆಗಿ ಅಖಂಡಾನಂದ ಪರಬ್ರಹ್ಮ ಮಯವೆನಿಸಿರುವುದು. ಅಸ್ತು ಗುರುವು ಹರನನ್ನು ತೋರಿಸುವ ಪರಂಜ್ಯೋತಿ

ಕೈದೀವಿಗೆ ಯಾಗಿರುವನು. ಹರನು ತಾನೇ ಗುರು ರೂಪದಲ್ಲಿ ಸಲ್ಲೀಲೆಯಿಂದ ಪ್ರಕಟಗೊಂಡು ಅಂಗನ (ಜೀವಾತ್ಮನ) ಉದ್ಧಾರಾರ್ಥ ಲಿಂಗರೂಪಿ ಪರಶಿವನಾಗಿ ವಿರಾಜಿತನಾಗಿರುವನು. ॥ ಆಚಾರ್ಯದೇವೋ ಭವ ॥ ಎಂಬ ವೇದವಾಣಿ ಗಮನಾರ್ಹ. ಲಿಂಗಾಂಗರೆನಿಸಿದ ಪರಮಾತ್ಮರುಗಳ ಮಧ್ಯೆ ಎಣೆಯಲ್ಪಟ್ಟಿರುವ ಸಾಮ್ಯ ಸಮರಸಭಾವವು ಸ್ವಾಭಾವಿಕವೂ ಅದ್ವಿತೀಯವೂ, ಅನಿರ್ವಚನೀಯವೂ ಆಗಿ ಕಂಗೊಳಿಸುತ್ತಲಿರುವ ಮಹಾ ಅಂಶವನ್ನು, ಶಿಷ್ಯನ ಚಿತ್ತಾಪಹಾರಕನಾದ ಸದ್ಗುರು ದೇವನು ಕರುಣೆಯಿಂದ, ॥ ಅಜ್ಞಾನ ತಿಮಿರಾಂಧಸ್ಯ । ಜ್ಞಾನಾಂಜನ ಶಲಾಕಯಾ ॥ ದುಃಖಕ್ಕೆ ಮೂಲ ಕಾರಣವೆನಿಸಿದ ಅವಿದ್ಯೆ ಅಜ್ಞಾನಾಂಧಕಾರಗಳನ್ನು ಜ್ಞಾನಾಂಜನ ವೆಂಬ ಹರಿತವಾದ ಶಲಾಖೆಯಿಂದ ಧ್ವಂಸಮಾಡಿ, ಶಿಷ್ಯನ ॥ಚಕ್ಷುರುನ್ಮೀಲಿತಂ ಏನ॥ ಜ್ಞಾನ ಕಣ್ಣನ್ನು ಸ್ವಲ್ಪ ಸ್ವಲ್ಪವಾಗಿ ತೆರೆಯುವಂತೆ ಅನುಗ್ರಹಿಸಿ ಲಿಂಗರೂಪಿ ಪರಶಿವನನ್ನು ಅರಿಯಲು ಪ್ರತ್ಯಕ್ಷ ಪರಮೇಶ್ವರನೇ ತಾನಾಗಿ ಎದುರಲ್ಲಿ ನಿಂತು ಕಟಾಕ್ಷಿಸುವಾತನೇ ಗುರುದೇವನೆನಿಸಿರುವನು. ಇಂತಪ್ಪಮಹೋನ್ನತವಾದ ಹರಗುರುಗಳಲ್ಲಿನ ಅದ್ವಿತೀಯ ಸ್ವರೂಪ ಸಾಮ್ಯಜ್ಞಾನವೇ ನಿತ್ಯಾನಂದವೆನಿಸಿ ಮೋಕ್ಷವೆನಿಸುವುದು.

ಪವಿತ್ರವಾದೀ ಬ್ರಾಹ್ಮೀ ಸ್ಥಿತಿ ನಮ್ಮಲ್ಲಿ ಉಂಟಾಗದ ಹೊರತು ಗತಿಮೋಕ್ಷಗಳಿಲ್ಲ. ಹರಗುರುಗಳಲ್ಲಿ ಕಿಂಕರಭಾವ, ಹಿರಿಯರಲ್ಲಿ ನಮ್ರತೆ, ಶ್ರದ್ಧಾಭಕ್ತಿಗಳಿಂದ ಅವಿರತವೂ ಅನನ್ಯವೂ ಆದ ಶರಣಾಗತಿ ಮಾರ್ಗವಂದೇ ನಮ್ಮ ಮುಂದೆ ಕಾಣುವ ಹೆದ್ದಾರಿ, ಚೆಂದದ ರಾಜಮಾರ್ಗ.

॥ ಪೂಜಾಕೋಟಿ ಸಮಂ ಸ್ತೋತ್ರಂ ।
ಸ್ತೋತ್ರಕೋಟಿ ಸಮೋ ಜಪಃ ॥
ಜಪಕೋಟಿ ಸಮಂ ಧ್ಯಾನಂ ।
ಧ್ಯಾನಕೋಟಿ ಸಮೋಲಯಃ ॥

ಮೋಕ್ಷ ಮಂದಿರವನ್ನು ಮುಟ್ಟಲು ಅನನ್ಯ ಭಕ್ತಿಮಾರ್ಗವೇ ಕ್ಷೇಮಕರ ಮಾರ್ಗವೆನಿಸಿರುವುದು. ಪೂಜಾ, ಸ್ತೋತ್ರ, ಜಪ, ಧ್ಯಾನ ಮತ್ತು ಮನೋಲಯಾದಿ

ಗಳೆಂಬ ಪಂಚ ನಿರ್ಲ್ದಾಣಗಳಿಂದ ವಿರಾಜಿತವಾದ ಈ ಮಾರ್ಗ ಸಾಧುವೂ ಸುಲಲಿತವೂ ಶೀಘ್ರಗಾಮಿಯೂ ಆಗಿರುವುದು. ॥ಮೋಕ್ಷಸಾಧನ ಸಾಮಗ್ರ್ಯಾಂ। ಭಕ್ತಿರೇವ ಗರೀಯಸಿ ॥ ಮೋಕ್ಷ ಸಾಧನ ಸಾಮಗ್ರಿಗಳಲ್ಲಿ ಭಕ್ತಿಯೇ ಅತ್ಯಂತ ಶ್ರೇಷ್ಠ ಸಾಧನೆಯಾಗಿರುವುದೆಂದು ಜಗದ್ಗುರು ಆದಿ ಶ್ರೀ ಶಂಕರಾಚಾರ್ಯರು ಬೋಧಿಸಿರುವರು. ಹೃದಯದ ಶುದ್ಧೀಕರಣ ಹಾಗೂ ಏಕೀಕರಣಕ್ಕೆ, ಗೋಪಾಲರಾದಿಯಾಗಿ ಆ ಬಾಲವೃದ್ಧರವರವಿಗೂ ಸುಲುಭದ ಮಾರ್ಗವೆನಿಸಿದ ಭಕ್ತ ಸ್ಥಲದ ಭಕ್ತಿಮಾರ್ಗವು ಎಲ್ಲದಕ್ಕಿಂತಲೂ ಹಿರಿಯ ರಾಜಮಾರ್ಗ ವೆನಿಸಿರುವುದು. ಧರ್ಮ, ಅರ್ಥ, ಕಾಮ ಮತ್ತೂ ಮೋಕ್ಷಗಳೆನಿಸಿದ ಚತುರ್ವಿಧ ಫಲ ಪುರುಷಾರ್ಥಗಳ ಸಿದ್ಧಿಗೆ ಭಕ್ತಿಯು ಅತ್ಯಾವಶ್ಯಕ ವೆನಿಸಿ ಪಂಚಮ ಪುರುಷಾರ್ಥವೆಂದು ಪ್ರಸಿದ್ಧಿ ಪಡೆದಿರುವುದು. ॥ಪಂಚಮಃ ಪುರುಷಾರ್ಥೋಹಿ। ಭಕ್ತಿಃಶೈವೀ ಸನಾತನೀ ॥ ಎಂದೂ, ಮತ್ತು ॥ ಭಕ್ತಿರೇವ ಪರಮಾರ್ಥ ದಾಯಿನೀ । ಭಕ್ತಿರೇವ ಪರತತ್ವವೇದಿನಿ । ಭಕ್ತಿರೇವ ಭವದೋಷಹಾರಿಣೀ । ಭಕ್ತಿರೇವ ಪರಮುಕ್ತಿ ವಿಧಾಯಿನೀ ॥ ಎಂಬುದಾಗಿ ಶಿವಾಗಮಾದಿಗಳಲ್ಲಿ ಪ್ರತೀತಿಯುಂಟು. ಪೂಜಾ ವಿಧಾನವೆನಿಸಿದ ಬಾಹ್ಯಕರ್ಮಗಳು ಭಕ್ತಿರೂಪ ಬೆಳೆಗೆ ಬೇಲಿಯಂತಿರುವುವು. ಭಕ್ತಿಯಿಂದ ಪರಮಾತ್ಮನನ್ನು ಒಮ್ಮೆ ಸ್ತುತಿಸಿದರೆ ಆಸ್ತುತಿಯಿಂದ ವಾಣಿಯು ಶುದ್ಧಿಯಾಗಿ ಕೋಟಿ ಪೂಜಾಫಲಗಳಿಗೆ ಸಮವೆನಿ ಸುವುದು. ಇಂತಪ್ಪ ಪೂಜಾಸ್ತುತಿಗಳಿಂದ ತನುವಾಣಿಗಳನ್ನು ಶುದ್ಧಿಗೊಳಿಸಿ, ಶಿವ ಪಂಚಾಕ್ಷರೀ ಮಹಾಮಂತ್ರ ಜಪಾನು ಸಂಧಾನದಲ್ಲಿ ಆರಾಧಕನು ಮಗ್ನ ನಾಗಿರಲು, ಕೋಟಿ ಸ್ತೋತ್ರಗಳಿಗಿಂತ ಅಧಿಕವೆನಿಸಿರುವ ಜಪವು ॥ ಜಪ ತೋನಾಸ್ತಿ ಪಾತಕಂ ॥ ಸಮಸ್ತ ಪಾಪಗಳನ್ನು ಧ್ವಂಸಮಾಡುವ ಪ್ರಭಾವಾನ್ವಿತ ದಿಂದ ಕೂಡಿರುವುದು. ಕೋಟಿ ಕೋಟಿಗಟ್ಟಿ ಮಾಡುವ ಮಂತ್ರ ಜಪಯಜ್ಞವು ಶಿವಧ್ಯಾನಕ್ಕೆ ಪೀಠಿಕೆಯಾಗಿರುವುದು. ॥ ಧ್ಯಾನಕೋಟಿ ಸಮೋಲಯಃ ॥ ಮನಸ್ಸು ಪರಿಶುದ್ಧವಾದ ನಿಶ್ಚಲತೆಯಿಂದ ಶಿವನಲ್ಲಿ ವಿಲೀನವಾಗಬೇಕಾದರೆ, ಧ್ಯಾನಕೋಟಿಗಳಿಂದ ಮನೋಲಯವೇರ್ಪಟ್ಟು ಶಿವ ಸಾಕ್ಷಾತ್ಕಾರಕ್ಕೆ ಅಣಿ ಯಾಗುವುದು. ಮೇಲ್ಕಂಡೀ ಶ್ರೇಷ್ಠ ವಿಧಾನಗಳು ಒಂದಕ್ಕೊಂದು ಅಧಿಕ

ತರವೆನಿಸಿರುವುವು. ಇವಿಷ್ಟೂ ವಿಧಾನಗಳು ಪೂಜನೀಯವೆನಿಸಿ ಇಷ್ಟಲಿಂಗಾರಾಧನೆಯಲ್ಲಿ ಸ್ವಚ್ಛಂದದಿಂದ ಅಂತರ್ಗತವಾಗಿ ಬೆಳಗುತ್ತಲಿರುವುವು. ಕರಕಮಲ ಪೀಠದಲ್ಲಿ ಅಲಂಕೃತನಾಗಿ ಬೆಳಗುವ ಇಷ್ಟಲಿಂಗದ ಪೂಜಾ ವೇಳೆಯಲ್ಲಿ ಪರಮಾತ್ಮನನ್ನು ಭಕ್ತಿಭಾವದಿಂದ ಸ್ತುತಿಸಿ, ಜಪಿಸಿ, ಧ್ಯಾನಿಸಿ, ಅವನಲ್ಲಿ ನೆಟ್ಟ ಮನೋದೃಷ್ಟಿಯಿಂದ ಈಕ್ಷಿಸುತ್ತಲಿದ್ದರೆ, ಮನೋ ಬುದ್ಧಿವಾಕ್ಕಾಯಾದಿಗಳು ಲಿಂಗರೂಪಿ ಪರಶಿವನಲ್ಲಿ ಸುಲಭವಾಗಿ ಶೀಘ್ರದಲ್ಲಿ ಲಯಗೊಳ್ಳುವುವು. Mind and intellect become wholly absorbed within Supreme Paramatma, through the solemn process of self introspection, concentration and continued meditation. ಈ ಉತ್ಕೃಷ್ಟವಾದ ಶಿವನಿಷ್ಠೆ, ಶಿವ ಜ್ಞಾನ ಮಹಾಯಜ್ಞದಲ್ಲಿ ಯಾರು ಸ್ವಪ್ರೇರಿತ ಆಸಕ್ತಿಯುಳ್ಳವರಾಗಿ, ಕೃತಜ್ಞರೂ, ಭಾವಜ್ಞರೂ, ಧರ್ಮಜ್ಞರೂ ಆಗಿ ಸತ್ಕ್ರಿಯೆಯಿಂದ ಕೂಡಿರುವರೋ, ಅಂಥ ಪುಣ್ಯಪುರುಷರ, ಶಿವಶರಣರ ಸದ್ಭಾವದಲ್ಲಿ ॥ ಭಾವೇ ಭಾವೇ ಹೃದಯ ಭವನೆ । ಭಾವಯೇ ಯಂ ಭವಂತಃ ॥ ಎಂಬಂತೆ ಪರಮಾತ್ಮನು ವಿಜೃಂಭಿತನಾಗಿ ನಲಿಯುವನು. ॥ ನ ಕಾಷ್ಠೇ ವಿದ್ಯತೇ ದೇವೋ । ನ ಪಾಷಾಣೇ ನ ಮೃನ್ಮಯೇ । ಭಾವೇತು ವಿದ್ಯತೇ ದೇವೋ । ತಸ್ಮಾತ್ ಭಾವೋಹಿಕಾರಣಂ॥ ಎಂಬಂತೆ, ದೃಢವಾದ ಸದ್ಭಕ್ತಿ ಭಾವದಲ್ಲಿ ಅನವರತ ಶಿವನು ನೆಲಸಿ ಸನ್ಮಂಗಳಕರನಾಗಿ ನಮಗೆ ಸುಪ್ರಸನ್ನನಾಗುವನು. ಸರ್ವಾಂತರ್ಯಾಮಿಯಾದ ಭಗವಂತನು ಎಲ್ಲೆಲ್ಲೂ ಪರಿಪೂರ್ಣನಾಗಿದ್ದರೂ, ಭಗವದ್ಭಕ್ತರ ಭಕ್ತಿಭಾವದಲ್ಲಿ ನಲಿದೊಲಿದು ವೇದ್ಯನಾಗುವನು. ಭಾವೈಕ್ಯತೆಯಿಂದ ನಿರಂತರ ಭಗವಧ್ಯಾನ ಮಾಡುವುದರಿಂದ ಧ್ಯಾನಗವ್ಯನಾದ ಪರಮಾತ್ಮನ ದಿವ್ಯಸ್ವರೂಪವು ಗೋಚರವಾಗಿ, ಆ ಮಹಾ ತೇಜಸ್ಸಿನಲ್ಲಿ ಬುದ್ಧಿ ಮನೋವಾಕ್ಕಾಯಾದಿಗಳು ತಲ್ಲೀನಗೊಂಡು, ಅಂಗನು (ಜೀವನು) ದೈವಾನುಗ್ರಹ ಬಲದಿಂದ ಲಿಂಗಮಯನಾಗಿ ಪರಶಿವನಲ್ಲಿ ತಾದಾತ್ಮ್ಯ ಸ್ವರೂಪದಲ್ಲಿ ಸಮರಸವನ್ನು ಹೊಂದುವನು.

ದ್ವೈತಾದ್ವೈತ ಅಥವಾ ವಿಶೇಷಾದ್ವೈತ ವೆನಿಸಿದ ಸನಾತನವಾದೀ ವೀರಶೈವ ಮತ ಸಿದ್ಧಾಂತವು, ಪೂಜ್ಯ ಪೂಜಕ ದ್ವೈತಭಾವ ಲೀಲಾತ್ಮಕ ದಿವ್ಯಾರಾಧನೆ ಯಿಂದ ಪ್ರಾರಂಭಗೊಂಡು ತತ್ಫಲವಾಗಿ ಭಕ್ತಿ, ಜ್ಞಾನ, ವೈರಾಗ್ಯಗಳು ಮೆಲ್ಲ ಮೆಲ್ಲನೆ ಅಂಕುರಿಸಿ ಕ್ರಮೇಣ ಶುಕ್ಲಪಕ್ಷದ ಚಂದ್ರನಂತೆ ವೃದ್ಧಿಗೊಂಡು, ತತ್ಪರಿಣಾಮವಾಗಿ ಶಿವಯೋಗಾನು ಸಂಧಾನ ಪರಿಪೂರ್ಣ ಸ್ಥಿತಿಯಲ್ಲಿ ತಾನೇ ತಾನಾಗಿ ಮಗ್ನನಾದ ಶಿವಶರಣನು, ಶಿವಯೋಗ ಸಿದ್ಧಿಪಡೆದು ಅದ್ವೈತ ಹಾಗೂ ಶಿವಾದ್ವೈತಮಯ ದಿವ್ಯಬ್ರಾಹ್ಮೀ ಸ್ಥಿತಿಯನ್ನು ಸಾಕ್ಷಾತ್ಕರಿಸಿಕೊಂಡು, ಜ್ಯೋತಿಯಲ್ಲಿ ಕರ್ಪೂರ ಐಕ್ಯವಾಗುವಂತೆ, " ಶಿಖಿ ಕರ್ಪೂರವತ್ " ಅಂಗನು ಸ್ವಯಂ ಜ್ಯೋತಿರ್ಲಿಂಗದಲ್ಲಿ ಐಕ್ಯನಾಗುವನು.

ದ್ವೈತ ಅದ್ವೈತ ಸಿದ್ಧಾಂತಗಳಿಗೆ ನೆರವಾಗಿ ಸಮೀಚೀನವೂ, ಬಂಧುರವೂ ಸಮನ್ವಯವೂ ಹಾಗೂ ಸುಮಧುರವೂ, ವೇದವಿಹಿತವೂ, ಆದ ಪರಮ ವೀರಶೈವ ಧರ್ಮವು ಐಹಿಕಾಮುಷ್ಮಿಕ ಫಲ ಪ್ರದವಾದ–ಶಾಶ್ವತ ಸೇತುವೆಯಂತೆ ರಂಜಿತವಾಗಿರುವುದರಿಂದ, ಈ ಧರ್ಮವು ವಿಶ್ವಧರ್ಮವೆನಿಸಿ ಭೇದಾಭೇದಮತ ವೆಂದು ವೇದಾಗಮಾದಿಗಳಲ್ಲಿ ಪ್ರತೀತಿ ಪಡೆದಿರುವುದು. ವಿಶಿಷ್ಟಾದ್ವೈತ, ಶೈವಸಿದ್ಧಾಂತ, ಹಾಗೂ ಅದ್ವೈತಮತಾಚಾರ್ಯರುಗಳ ಕಾಲಮಾನಗಳಿ ಗಿಂತಲೂ ಬಹುಪೂರ್ವವೇ ಸುಪ್ರಸಿದ್ಧರೆನಿಸಿದ, ಭಗವಾನ್ ಶ್ರೀ ಅಗಸ್ತ್ಯ ಮಹರ್ಷಿಗಳೇನು (ಇಲ್ಲಿ ಪ್ರಯೋಗಿಸಿರುವ " ಭಗವಾನ್ " ಶಬ್ದಕ್ಕೆ ಅತ್ಯಂತ ಪೂಜ್ಯರಾದವರು ಎಂದರ್ಥ) ಋಷಿಕುಲ ತಿಲಕರಾದ ಶ್ರೀ ವ್ಯಾಸ, ದಧೀಚಿ, ಸಾನಂದ ಮತ್ತೂ ಶ್ರೀ ದೂರ್ವಾಸಾದಿ ಅಖಿಲ ಬ್ರಹ್ಮಜನ, ಮುನಿಜನ, ಸಿದ್ಧಜನ, ದೇವಜನ, ವಿರಕ್ತವೃಂದಕ್ಕೆ ॥ ಗುರೂಣಾಂಗುರುಃ ॥ ಎಂದೆನಿಸಿ, ಮಹಾಜಗದಾಚಾರ್ಯ ವರೇಣ್ಯರೂ, ಅಯೋನಿಜರೂ, ಚತುರ್ಯುಗಾರಂಭ ಗಳಲ್ಲೂ ಶಿವಲಿಂಗ ಮುಖೋದ್ಭೂತರೂ, ನಿಸ್ತ್ರೈಗುಣ್ಯರೂ, ದಿವ್ಯ ದೇಹ ಧಾರೀಗಳೂ, ಪಂಚಮಹಾಭೂತಗಳಿಗಧಿಪತಿಗಳೂ, ಭುವನಾಂಡಕೋಟಿಗಳಿಗೆ ಜಗದ್ಗುರು ಸಾರ್ವಭೌಮ ರೆಂದೆನಿಸಿ ಸ್ತುತ್ಯರೂ, ವಂದನೀಯರೂ, ॥ ಸ್ವೇಚ್ಛಾ

ವಿಗ್ರಹ ಯುಕ್ತಾಯ। ಸ್ವೇಚ್ಛಾಭವರ್ತನ ವರ್ತಿನೇ॥ ಎಂಬಂತೆ, ಭಕ್ತಾನುಗ್ರಹಕ್ಕಾಗಿ ಸ್ವೇಚ್ಛೆಯಂತೆ ಸರ್ವತಂತ್ರಸ್ವತಂತ್ರರೆನಿಸಿ, ಅಸಂಗರೂ ಅಪ್ರಮೇಯರೂ ಶೈವಾಗಮಾಂಬುಜ ಭಾಸ್ಕರರೂ ಮತ್ತೂ "ಸುರೌಘವಂದಿತ ಪದಯುಗರೂ," ಪ್ರಸ್ಥಾನತ್ರಯಂಗಳ ಪ್ರ ಪ್ರಥಮ ಭಾಷ್ಯಕರ್ತೃಗಳೂ, ಪ್ರಥಮಾಚಾರ್ಯ ವರೇಣ್ಯರೂ ಪ್ರಥಮಾಶ್ರಮ ಸಂಭ್ರಮರೂ ಆಗಿ ವಿರಾಜಿಸಿದ ಶ್ರೀಮಜ್ಜಗದ್ಗುರು ರೇಣುಕಾದಿ, ಪಂಚಾಚಾರ್ಯರು ಪ್ರತಿಯುಗಾರಂಭ ಪರ್ವಕಾಲಗಳಲ್ಲೇ ಆಗಮಾಮ್ನಾಯಾದಿಗಳಲ್ಲಿ ಗರ್ಭೀಕರಿಸಿ,ಗಂಭೀರವಾಗಿ ಪರಿಶೋಭಿಸುವ ಜ್ಞಾನ ಕರ್ಮ ಸಮುಚ್ಚಯ ಧರ್ಮವನ್ನು ಅಖಂಡವಾಗಿ ಪ್ರತಿಪಾದಿಸುವ ಭೇದಾಭೇಧ ಮತವೆಂದು ವಿಖ್ಯಾತವಾದ ಪರಮ ವೀರಶೈವಮತ ತತ್ವವನ್ನು ಪ್ರಚಾರಗೊಳಿಸಿ, ತಾವೂ ಸ್ವತಃ ಆಚರಿಸಿ ಜಗತ್ತಿಗೆ ಆದರ್ಶಕ ಮಾರ್ಗದರ್ಶಕರಾಗಿ ಮುಮುಕ್ಷುಗಳಿಗೆ ಆದರದಿಂದ ಬೋಧಿಸಿ, ಸರ್ವಸಮ್ಮತವಾದ ಶಿಖಾರತ್ನದಂತೆ ಪರಿಶೋಭಿಸುವ ಶಿವಾದ್ವೈತ ಮತವನ್ನು ವಿಶ್ವದ ಆಸ್ತಿಕ ಕೋಟಿಗಳ ಉದ್ಧಾರಾರ್ಥ ಸಂಸ್ಥಾಪಿಸಿರುವರು.

## XXI

ಪ್ರಸ್ಥಾನತ್ರಯಂಗಳಿಗೆ ವೀರಶೈವ ದರ್ಶನ ಪರವಾದ ಅಮೋಘಕರ ಭಾಷ್ಯಗಳನ್ನು ಶ್ರೀಮಜ್ಜಗದ್ಗುರು ರೇಣುಕಾದಿ ಪಂಚಾಚಾರ್ಯರುಗಳು ಗಂಭೀರವಾಗಿ ರಚಿಸಿದ್ದರೆಂಬ ಸತ್ಯಾಂಶವನ್ನು, ಎಂಟನೇ ಶತಮಾನದಲ್ಲಿ ಪ್ರಸಿದ್ಧಿ ಪಡೆದ "ನೀಲಕಂಠ ಭಾಷ್ಯದಿಂದಲೂ," ಹನ್ನೊಂದನೆ ಶತಮಾನದ ಉತ್ತರಾರ್ಧದಲ್ಲಿ ರಚಿತವಾದ "ಶ್ರೀಕರಭಾಷ್ಯ" ದಿಂದಲೂ ಕಂಡುಬರುತ್ತೆ. ಈಚಿನ ಭಾಷ್ಯಕರ್ತರುಗಳಾದ ಶ್ರೀ ವೃಷಭ ಪಂಡಿತಾರಾಧ್ಯ ಶಿವಾಚಾರ್ಯರೇ ಮೊದಲಾದ ಅನೇಕ ಭಾಷ್ಯಕಾರರು, ಪ್ರಸ್ಥಾನ ತ್ರಯಂಗಳಿಗೆ ಶ್ರೀ ಮದ್ರೇಣುಕಾದಿ ಪಂಚಾಚಾರ್ಯರುಗಳು ಭಾಷ್ಯಗಳನ್ನು ರಚಿಸಿದ್ದುದಾಗಿ, ಪ್ರಾಚೀನ ಭಾಷ್ಯಗಳಿಂದ ದೃಢವಾಗಿ ಮನಗಂಡಂತೆ ಸ್ಫುಟಪಡಿಸಿರುವರು. ಆದರೆ ತಾನೇನು, ನಮ್ಮ ದುರ್ದೈವ ವಶಾತ್ ಮೇಲ್ಕಂಡ ಭಾಷ್ಯಾದಿಗಳು ಸದ್ಯ ನಮಗೆ ಉಪಲಬ್ಧವಾಗಿಲ್ಲ. ಸುಪ್ರಸಿದ್ಧ ಭಾಷ್ಯಕರ್ತರಾದ ಜ॥ ಆದಿ ಶ್ರೀ ಶಂಕರಾಚಾರ್ಯರೂ, ತ್ರೇತಾಯುಗದಿಂದಲೂ ಚಿರಂಜೀವಿಗಳೆನಿಸಿದ ಆದಿ ಶ್ರೀ ಅಗಸ್ತ್ಯರೂ

ಹಾಗೂ ಅವರ ಸಹಧರ್ಮಚಾರಿಣಿಯೂ ಲೋಕಪ್ರಸಿದ್ಧಳೂ ಆದ ಲೋಪಾ ಮುದ್ರಾದೇವಿಯೂ ಋಗಾದಿ ಮಂತ್ರಗಳಿಗೆ ಅನ್ವೋಘಕರ ಭಾಷ್ಯಗಳನ್ನು ಬರೆದು ಕೀರ್ತಿಶೇಷರಾಗಿರುವುದು ಸರಿಯಷ್ಟೆ. ಇಂತಪ್ಪ ಮಹೋದಯರುಗಳು ಭಗವದಂಶ ಸಂಭೂತರೆನಿಸಿದ ಶ್ರೀಮಜ್ಜಗದ್ಗುರು ರೇಣುಕಾದಿ ಪಂಚಾ ಚಾರ್ಯರುಗಳ ದಿವ್ಯಪಾದ ಪದ್ಮಗಳಲ್ಲಿ ಶಿರಬಾಗಿಸಿ ಕೃತಕೃತ್ಯರಾಗಿರುವಲ್ಲಿ, ಶ್ರೀಮದ್ರೇಣುಕಾದಿ ಮಹಾ ಚಾರ್ಯರುಗಳಿಂದಲೂ, ಶಿವಾಗಮೋಪನಿಷದಾದಿ ಗಳಿಗೆ ಭಾಷ್ಯಾದಿಗಳು ರಚಿತವಾಗಿರಲೇ ಬೇಕೆಂಬುದು ಖಚಿತವೇ ಅಷ್ಟೆ. ಆದಿ ಶ್ರೀ ಶಂಕರಾಚಾರ್ಯರಿಗಿಂತಲೂ ಪೂರ್ವಜರೆನಿಸಿದ, ಶ್ರೀ ಸಿದ್ಧಾಂತ ಶಿಖಾಮಣಿ ನಾಮ ರೇಣುಕ ಗೀತೆಯನ್ನು ರಚಿಸಿದ, ನಿಜಕ್ಕೂ ಪಂಡಿತರತ್ನರೂ ಶಿವಜ್ಞಾನ ಮಹಾ ಸಿಂಧುಗಳೆನಿಸಿ ಅನ್ವರ್ಥಕ ನಾಮಾಂಕಿತರಾದ ಶಿವಯೋಗಿ ಶಿವಾಚಾರ್ಯರೂ, ಶ್ರೀಮದ್ರೇಣುಕಾದಿಗಳು ಶಿವಾಗಮಾಮ್ನಾಯಾದಿಗಳ ಭಾಷ್ಯಾರ್ಥಗಳನ್ನು ಬೋಧಿಸಿರುವರೆಂಬ ದೃಢ ಭಾವವುಳ್ಳವರಾಗಿದ್ದುದಾಗಿ ಭಾಸವಾಗುತ್ತಲಿರುವುದು. ಸಿದ್ಧಾಂತ ಶಿಖಾಮಣಿಯಲ್ಲಿ ಋಗ್, ಯಜು ರ್ವೇದ ಮಂತ್ರಾರ್ಥಗಳನ್ನು ಉದಹರಿಸಿರುವುದೇ ಇದಕ್ಕೆ ಬಲವಾದ ಸಾಕ್ಷಿ ಯಾಗಿರುತ್ತೆ.

ಕ್ರಿಸ್ತಪೂರ್ವ 500 B,C., ಅಂದರೆ ಏಸುಕ್ರಿಸ್ತನು ಹುಟ್ಟುವುದ ಕ್ಕಿಂತಲೂ ಅಯಿದುನೂರು ವರ್ಷಗಳ ಮುಂಚೆಯೇ, ಸನಾತನವಾದ ಆಧ್ಯಾ ತ್ಮಿಕ ತತ್ವಗಳನ್ನು ಪ್ರತಿಪಾದಿಸುವ ಶಿವಾಗಮೋಪನಿಷದಾದಿಗಳ ಕೆಲವು ಪ್ರಾಚೀನ ಮೂಲಗ್ರಂಥಗಳ, ಬ್ರಾಹ್ಮಣ, ಆರಣ್ಯಕ, ಹಾಗೂ ಶಿವಾಗಮಗಳ ಭಾಗಗಳನ್ನು ಭರತಖಂಡದಿಂದ ವಿದ್ವಾಂಸರುಗಳು ಏಥೆನ್ಸ್ (Athens) ಮತ್ತೂ ಗ್ರೀಸ್ (Greece) ದೇಶಗಳಿಗೆ ಮಮತೆಯಿಂದ ಕೊಂಡೊಯಿದು, ಅವುಗಳನ್ನು ನಿಷ್ಠೆಯಿಂದ ಅಧ್ಯಯನ ಮಾಡಿದುದಾಗಿ ಮ್ಯಾಕ್ಸಮುಲ್ಲರ್ (Max Muller) ಮೊದಲಾದವರು ಅಭಿಪ್ರಾಯ ಪಟ್ಟಿರುವರು. ಪೌರ್ವಾತ್ಯ (Oriental) ಆಧ್ಯಾತ್ಮಿಕ ತತ್ವಗಳನ್ನೊಳಗೊಂಡ ಬ್ರಾಹ್ಮಣ, ಆರಣ್ಯಕ ಭಾಗಗಳನ್ನೂ, ಶಿವಾಗಮಾದಿಗಳ ಕೆಲವು ಭಾಗಗಳನ್ನೂ, (ಜಗತ್

ಸತ್ಯವೆಂಬ ಅಂಶವನ್ನೂ) ಮತ್ತೂ ಸಾಂಖ್ಯಯೋಗ ಶಾಸ್ತ್ರ ಭಾಗಗಳನ್ನೂ ಗಹನವಾಗಿ ಅಧ್ಯಯನ ಮಾಡಿದ ಪಾಶ್ಚಿಮಾತ್ಯಮೇಧಾವಿಗಳಲ್ಲಿ, ಪ್ಲಾಟೋ (Plato), ಅರಿಸ್‍ಟೋಟಲ್ (Aıistotle) ಮತ್ತೂ ಸೊಕ್ರಟೆಸ್ (Socrates), ಮೊದಲಾದವರು ಪ್ರವೀಣರೆಂದೆನಿಸಿ ಖ್ಯಾತಿಗೊಂಡ ಗಣ್ಯ ತತ್ವ ಜ್ಞಾನಿಗಳಾಗಿರುವರು. ವೇದೋಪನಿಷದಾದಿಗಳ ಪ್ರಸ್ಥಾನತ್ರಯ ಬಾಷ್ಯಾದಿಗಳ ಹಾಗೂ ಹಲಕೆಲವು ಪ್ರಾಚೀನ ಶಿವಾಗಮಗಳ ಭಾಗಗಳು ಜರ್ಮನಿ ದೇಶವನ್ನು ಸೇರಿರುವುದಾಗಿಯೂ ಕಂಡುಬರುತ್ತಲಿದೆ. ಪಾಶ್ಚಿಮಾತ್ಯ (Occidental) ತತ್ವಜ್ಞಾನಿಗಳು ನಮ್ಮ ವಿಶ್ವಧರ್ಮವನ್ನು ಮೆಚ್ಚಿ ಮನ ಸೋತು ಮಣಿದಿರುವರು. ಓಲೆಗರಿಯ ದೇವನಾಗರಿ ಲಿಪಿಯಲ್ಲಿ ಕಂಗೊಳಿಸುವ ನಮ್ಮ ಪ್ರಾಚೀನ ಧರ್ಮ. ಗ್ರಂಥಗಳು ಮೇಲ್ಕಂಡ ಪಾಶ್ಚಿಮಾತ್ಯ ದೇಶಗಳಲ್ಲಿ ಸುಭದ್ರವಾಗಿ ರಕ್ಷಿತವಾಗಿರುವುವೆಂಬ ಅಂಶ ಜಗತ್ತಿಗೆ ತಿಳಿದ ವಿಷಯವೇ ಆಗಿರು ವುದು. ಪ್ರಾಯಶಃ ಶ್ರೀಮದ್ರೇಣುಕಾದಿ ಪಂಚಾಚಾರ್ಯರುಗಳಿಂದ ಕಲಿಯುಗಾರಂಭದಲ್ಲೇ ವಿರಚಿತವಾದ ವೀರಶೈವ ಶಿವಾದ್ವೈತ ದರ್ಶನ ಪರವಾದ ಪ್ರಸ್ಥಾನತ್ರಯಂಗಳ ಭಾಷ್ಯಗಳೂ ಸಹ ಪಾಶ್ಚಿಮಾತ್ಯ ದೇಶಗಳಲ್ಲೂ ಮತ್ತೂ ಜರ್ಮನಿ ಮೊದಲಾದ, ವಿಜ್ಞಾನ ಶಾಸ್ತ್ರದಲ್ಲಿ ಮುಂದುವರೆದ ಪ್ರಸಿದ್ಧ ಪಟ್ಟಣಗಳ ಪ್ರಾಚೀನ ಆಧ್ಯಾತ್ಮಿಕ ಪುಸ್ತಕ ಭಾಂಡಾಗಾರಗಳಲ್ಲಿ ಅಡಗಿದ್ದು ದೊರತರೂ ದೊರಕಬಹುದು. ನಮ್ಮನಾಡಿನಲ್ಲೇ ಶ್ರೀ ಪುರಂಧರದಾಸರ, ಶ್ರೀ ತ್ಯಾಗರಾಜರ ಅನಂತಕೀರ್ತನೆಗಳು ಎಷ್ಟೋ ಹೊರಬೀಳದೆಯಿರುವುವೆಂದು ಭಾವಿಸಲಾಗಿರುತ್ತೆ. ಅದರಂತೆಯೇ ಶ್ರೀಬಸವಣ್ಣ, ಚೆನ್ನಬಸವಣ್ಣ ಹಾಗೂ ಶ್ರೀ ಅಲ್ಲಮಪ್ರಭುದೇವಾದಿಗಳ ಎಷ್ಟೋ ವಚನಗಳು ಇನ್ನೂ ಹಸ್ತಗತವಾಗದೆ ಪ್ರಕಾಶಕ್ಕೆ ಬಂದಿಲ್ಲ ವಷ್ಟೆ. ಅಂತಃದಬಳಿಕ ಪೌರ್ವಾತ್ಯರ ಹಲವು ಪ್ರಾಚೀನ ಸನಾತನ ಹಿಂದೂ ಧರ್ಮ ಗ್ರಂಥಗಳೂ, ಶಿವಾಗಮೋಪನಿಷದಾದಿಗಳ ಹಲವು ಭಾಗಗಳು-ಬೌದ್ಧ, ಜೈನ ಧರ್ಮಗಳು ಅಸ್ತಿತ್ವಕ್ಕೆ ಬರುವುದಕ್ಕೆ ತತ್ಪೂರ್ವವೇ,-ಪಾಶ್ಚಿಮಾತ್ಯರ ಕೈಸೇರಿದ್ದು, ಆಧುನಿಕ ಆಸ್ತಿಕ ಪ್ರಪಂಚದ ಬೆಳಕಿಗೆ ಬಾರದಿರುವುದರಲ್ಲಿ ಆಶ್ಚರ್ಯವೆನಿಸದೆಯಿರದು. ಪಾಶ್ಚಿಮಾತ್ಯ ದೇಶಗಳ ಪರ್ಯಟನೆಗೆಯ್ಯುವ ನಮ್ಮ ಆಸ್ತಿಕವೃಂದದ

ವಿದ್ವನ್ಮಣಿಗಳು ಆಸಕ್ತಿಯಿಂದ ಶ್ರೀಮಜ್ಜಗದ್ಗುರು ರೇಣುಕಾದಿ ಪಂಚಾಚಾರ್ಯರುಗಳು ರಚಿಸಿರುವ, ಪ್ರಸ್ಥಾನ ತ್ರಯಂಗಳ ಮೇಲಿನ, ವಿಶ್ವಧರ್ಮವನ್ನಳವಡಿಸಿಕೊಂಡು ಪರಿಶೋಭಿಸುವ ಶಿವಾದ್ವೈತ ದರ್ಶನವನ್ನು ಪ್ರತಿಬಿಂಭಿಸುವ ಭಾಷ್ಯಾದಿಗಳನ್ನು ಪಾಶ್ಚಿಮಾತ್ಯ ದೇಶಗಳಲ್ಲಿನ ಪ್ರಾಚೀನ ಗ್ರಂಥ ಸಂಶೋಧನಾ ಸರ್ಕಾರಿ ಪುಸ್ತಕ ವಾಚನಾಲಯ ಭಂಡಾರಗಳಲ್ಲಿ ಶ್ರಮವಹಿಸಿ ಸದರಿ ಭಾಷ್ಯಗಳ ಅಸ್ತಿತ್ವವನ್ನು ಅನ್ವೇಶಣ ಮಾಡುವ ಪುಣ್ಯಕಾರ್ಯದಲ್ಲಿ ತಮ್ಮವಿಚಾರ ಧಾರೆಯನ್ನು ಹರಿಸಿ, ಪ್ರಯತ್ನಶೀಲರಾಗಿ ವಿಜೇತರಾಗುವ ಪುಣ್ಯಕ್ಕೆ ಭಾಗಿಗಳಾಗಬೇಕೆಂದು ಸವಿನಯ ಪೂರ್ವಕ ಪ್ರಾರ್ಥಿಸುತ್ತೇನೆ. ಈ ಭಾಷ್ಯಾದಿಗಳು ಬಹುಶಃ ಪ್ರಿಂಟನಲ್ಲಿಲ್ಲದೆ ಕೇವಲ ಓಲೆಗರಿಗಳಲ್ಲಿ ದೇವನಾಗರಿ ಲಿಪಿಗಳಲ್ಲಿದ್ದು, ಇವುಗಳ Catalogues (ಕ್ಯಾಟಲಾಗುಗಳು) ಬಹುಶಃ ಪ್ರಿಂಟೆಡ್ ಅಥವಾ ಹಸ್ತಾಕ್ಷರ ಕ್ಯಾಟಲಾಗುಗಳಲ್ಲಿ ನಮೂದಿಸಿರಬಹುದು.

Oriental Philosophy Section ವಿಭಾಗಗಳಲ್ಲಿನ–ಕ್ಯಾಟಲಾಗುಗಳಲ್ಲಿ ಈ ಭಾಷ್ಯಾದಿಗಳ ಹೆಸರು– "ರೇಣುಕಭಾಷ್ಯ, ದಾರುಕಭಾಷ್ಯ, ಧೇನುಕರ್ಣ ಅಥವಾ ಪಂಡಿತಾರಾಧ್ಯ ಭಾಷ್ಯ, ಮತ್ತೂ ವಿಶ್ವಕರ್ಣ ಅಥವಾ ವಿಶ್ವಾರಾಧ್ಯಭಾಷ್ಯ" ಗಳೆಂಬ ಅಭಿಧಾನಗಳಿಂದ ಪ್ರಕಾಶಿತವಾಗಿರುವುವು. ಪ್ರಾಯಶಃ ಮೇಲ್ಕಂಡ ವೀರಶೈವ ಧರ್ಮ ಪರವಾದ ಭಾಷ್ಯಾದಿಗಳು ಸುಮಾರು ೨,೫೦೦ ವರ್ಷಗಳಿಗಿಂತಲೂ ಪ್ರಾಚೀನ ಕಾಲದ ಭಾಷ್ಯಗಳಷ್ಟು ಪ್ರಾಚೀನ ಭಾಷ್ಯಗಳಾಗಿರಬಹುದೆಂದು ಊಹಿಸಲು ಸ್ಥಳವಿರುತ್ತೆ. ಸದರಿ ಭಾಷ್ಯಗಳು ವಿಶ್ವಧರ್ಮವನ್ನು ಅಳವಡಿಸಿಕ್ಕೊಂಡು ಅತ್ಯಂತ ಪಾವನವೂ ಪೂಜ್ಯವೂ, ಜಗತ್ಕಲ್ಯಾಣದಾಯಕವೂ ಆಗಿರುವುದರೊಂದಿಗೆ ಆತ್ಮಕಲ್ಯಾಣಕರವೆನಿಸಿರುವುವು. ಎಂಟನೆ ಶತಮಾನದಲ್ಲಿ ಶ್ರೀ ನೀಲಂಕಂಠ ಶಿವಾಚಾರ್ಯರಿಂದ ರಚಿತವಾಗಿರುವ "ನೀಲಕಂಠಭಾಷ್ಯದಿಂದಲೂ, ಹನ್ನೊಂದನೆ ಶತಮಾನದಲ್ಲಿ ರಚಿತವಾಗಿರುವ ಶ್ರೀಪತಿ ಪಂಡಿತನ "ಶ್ರೀ ಕರಭಾಷ್ಯ" ದಿಂದಲೂ, ಮೇಲ್ಕಂಡ ಅಂಶಗಳು ದೃಢಪಡುವುವು. ಶ್ರೀ ಸಿದ್ಧಾಂತ ಶಿಖಾಮಣಿ ಕಾವ್ಯ ರತ್ನದ ಕಾಲಮಾನವನ್ನು ಕಲಿಯುಗಕ್ಕನ್ವಯಿಸಿದ ಹಾಗೆ ನೋಡುವಲ್ಲಿ,

ಎರಡೂವರೆ ಸಾವಿರ ವರ್ಷಗಳಷ್ಟು ಪ್ರಾಚೀನಕಾಲದ್ದೆನಿಸಬಹುದು. ಈ ಮಹ ಧ್ಗ್ರಂಥಕ್ಕೆ ತತ್ಪೂರ್ವವೇ, ಪ್ರಸ್ಥಾನತ್ರಯಂಗಳ ಮೇಲಿನ ವೀರಶೈವ ದರ್ಶನ ಪರವಾದ ರೇಣುಕಭಾಷ್ಯ, ದಾರುಕಭಾಷ್ಯಾದಿಗಳು, ರಚಿತವಾಗಿದ್ದಿರಬಹು ದೆಂದು ಭಾವಿಸಲಾಗಿರುತ್ತೆ. ಚಾರಿತ್ರಿಕ ದೃಷ್ಟಿಯಿಂದ ಸುಪ್ರಸಿದ್ಧ ಪ್ರಾಚೀನ ಪಾಶ್ಚಿಮಾತ್ಯ ನಗರಗಳೆನಿಸಿರುವ ಗ್ರೀಸ್ (Greece) ಏಥನ್ಸ (Athens) ಜರ್ಮನಿ, ಸದ್ಯದಲ್ಲಿ (West Germany ಯ Bonn ನಲ್ಲೂ ಹಾಗೂ East Germany ಯ Berlin) ಬಾನ್ ಮತ್ತೂ ಬರ್ಲಿನ್ ನಗರ ಗಳಲ್ಲಿನ, ಪ್ರಾಚೀನ ಹಿಂದು ಸಂಸ್ಕೃತಿ ಸರ್ಕಾರಿ ಪುಸ್ತಕ ಸಂಶೋಧನಾಲಯ ಗಳಲ್ಲಿ ಸಂಸ್ಕೃತ ಲಿಪಿಗಳಲ್ಲಿ ರೇಣುಕಾದಿ ಭಾಷ್ಯಗಳು ಅಡಗಿರಬಹುದು. ಅಸ್ತು. ಆಧ್ಯಾತ್ಮಿಕ ಜ್ಞಾನ ಭಂಡಾರವೆನಿಸಿರುವ ಶಿವಾದ್ವೈತ ತತ್ವವು, ಮೂರ್ತಿವತ್ತಾಗಿ ರೂಪಗೊಂಡು, ಅಷ್ಟಾವರಣವೆಂಬ ದಿವ್ಯದೇಹಕಾಂತಿಯಿಂದ ಬೆಳಗಿ, ಪಂಚಾಚಾರಗಳೆಂಬ ಪಂಚಪ್ರಾಣಕಲೆಗಳಿಂದ (Divine Breath) ನಿತ್ಯಚೈತನ್ಯಮಯವೆನಿಸಿ, ಷಟ್ಸ್ಥಲವೆಂಬ ಆತ್ಮಜ್ಯೋತಿ ಸ್ವಯಂ ಪ್ರಕಾಶ ದಿಂದ ಪುರುಷಾಕಾರಗೊಂಡಂತೆ ಪರಿಶೋಭಿಸುತ್ತಲಿರುವುದು. ಇದರಿಂದಾಗಿ ಶಿವಾದ್ವೈತ ತತ್ವವು ವಿಶ್ವದ ಅಖಿಲ ಆಧ್ಯಾತ್ಮಿಕ ತತ್ವಗಳಲ್ಲೆಲ್ಲಾ ॥ತತ್ವಾನಾಂ ಮಹದಾದೀನಾಂ॥ ಅಂದಹಾಗೆ ಆದಿಗಾದಿ ಎನಿಸಿ ಮಾತೃವತ್‌ಸ್ತುತ್ಯಾರ್ಹ ವೆನಿಸಿರುವುದು. ಶೃತಿ ಸ್ಮೃತಿಗಳೇ ಉಸಿರು. ಶಿವಾಗಮಗಳೇ ಶಿವಾದ್ವೈತ ತತ್ವದ ಉಸಿರಿನೊಳಗಣ ನಲಿದಾಡುವ ಪರಮಚೈತನ್ಯ. ಈ ಚೈತನ್ಯದ ಸಾಕ್ಷಾತ್ಕಾರಾನುಭವವೇ ಷಟ್‌ಸ್ಥಲ ಮಾರ್ಗವೆನಿಸಿರುವುದು.

ಮೇಲ್ಕಂಡೀ ಉದಾತ್ತವಾದ ಪರಮಪಾವನ ತತ್ವವನ್ನರಿಯದ ಕೆಲವರು, ಸಂಕುಚಿತ ಭಿನ್ನಾಭಿಪ್ರಾಯಗಳಿಗೊಳಗಾಗಿ, ವೀರಶೈವ ಮತವು ದ್ವೈತ ಮತ್ತೂ ಅದ್ವೈತ ಮತಗಳ ಹಲವು ಅಂಶಗಳನ್ನು ಕ್ರೋಢೀಕರಿಸಿಕೊಂಡು ಬೆಳಗುವ ಇತ್ತೀಚಿನ ಅಸ್ವತಂತ್ರ ಅವೈದಿಕ ಮತವೆಂದು ಅಪಲಪಿಸುತ್ತಿರುವರು. ವಿಶಾಲದೃಷ್ಟಿಕೋನದಿಂದ ಸತ್ಯಾನ್ವೇಶಣ ಮಾರ್ಗದಲ್ಲಿ ತೊಡಗಿ ಶಾಂತ ಮನಸ್ಕರಾಗಿ, ಪ್ರಶಾಂತಗಂಭೀರಭಾವದಿಂದ ವಿಚಾರ ಭರಿತರಾಗದೆ, ಭ್ರಾಂತಿ

ಮಮತೆಗಳಿಂದ ಭ್ರಮಣೆಗೊಂಡು ಸಂಕುಚಿತ ಭಾವಕ್ಕೆ ತುತ್ತಾಗಿರುವುದೇ ಅಪಲಪಿಸುವುದಕ್ಕೆ ಕಾರಣವೆನಿಸಿರುತ್ತೆ. ಮಾನವನಲ್ಲಿ ಎದ್ದು ಕಾಣುವ ಹಿರಿಯ ಅಂಶಗಳೆಂದರೆ ಸಹನೆ, ಸಹಿಷ್ಣುತೆ, ಸಮತಾಭಾವ ಹಾಗೂ ಸರ್ವಧರ್ಮ ಸಮನ್ವಯ ದೃಷ್ಟಿ, ಮಾನವೀಯತ್ವ ಮತ್ತೂ ಸಹೋಧರಬಾವವೇ ಆಗಿರು ವುವು. ಪ್ರಾಚೀನ ಋಷಿಮಹರ್ಷಿಗಳಲ್ಲಿ ಮೇಲ್ಕಂಡಂಶಗಳು ಮನೆಮಾಡಿ ಕೊಂಡಿದ್ದವು. ದ್ವಾಪರ ಯುಗದ ವಿಷ್ಣುದ್ವೈಪಾಯನ ಮಹರ್ಷಿಗಳೆಂದು ವಿಖ್ಯಾತರಾದ ಶ್ರೀ ವ್ಯಾಸಾಚಾರ್ಯರು ಉದ್ಧಾಮ ಮಹರ್ಷಿಪುಂಗವರೆನಿಸಿರು ವರು.

॥ ನಮೋಸ್ತುತೇ ವ್ಯಾಸ ವಿಶಾಲ ಬುದ್ಧೇ ।
ಫುಲ್ಲಾರ ವಿಂದಾಯ ತಪತ್ರನೇತ್ರಃ ॥
ಏನತ್ವಯಾ ಭಾರತ ತೈಲ ಪೂರ್ಣಃ ।
ಪ್ರಜ್ವಾಲಿತೋ ಜ್ಞಾನಮಯಃ ಪ್ರದೀಪಃ ॥

ಶ್ರೀವ್ಯಾಸರು ಚತುರ್ವೇದಗಳನ್ನೂ ಕೂಲಂಕಶವಾಗಿ ಪರಿಶೀಲಿಸಿ, ಆ ಭಾಗ ಗಳನ್ನು ಕ್ರಮಬದ್ಧವಾಗಿ ವಿಂಗಡಿಸಿ, ಕರ್ಮ, ಉಪಾಸನಾ, ಜ್ಞಾನಕಾಂಡ ತ್ರಯಂಗಳಾಗಿ ವಿಭಜಿಸಿ, ಸರ್ವತ್ರ ವಿಶ್ವತೋಭಾವದಿಂದ ಅಖಂಡವಾಗಿ ಬೋಧಿಸಿ, ಪ್ರಚುರಗೊಳಿಸಿದುದರಿಂದ, ವೇದವ್ಯಾಸರೆಂಬ ಅನ್ವರ್ಥನಾಮ ವನ್ನು ಪಡೆದು ॥ ಪ್ರಜ್ವಾಲಿತೋ ಜ್ಞಾನಮಯ ಪ್ರದೀಪಃ ॥ ಪ್ರಜ್ಞಾನದ ದಿವ್ಯಪ್ರಭೆಯನ್ನು ಮತ್ತಷ್ಟು ಪ್ರಚೋದಿಸಿ ಪ್ರಚಾರಗೊಳಿಸಿ ಪಾವನಮೂರ್ತಿ ಎಂದೆನಿಸಿಕ್ಕೊಂಡಿರುವರು.

ಶ್ರೀಮಜ್ಜಗದ್ಗುರು ಆದಿ ಶ್ರೀ ಶಂಕರಾಚಾರ್ಯರೂ, ಶ್ರೀರಾಮಾನುಜಾ ಚಾರ್ಯರೂ, ಶ್ರೀಮನ್ಮಧ್ವಾಚಾರ್ಯರೂ ಹಾಗೂ ಅನೇಕಾನೇಕ ಭಾಷ್ಯ ಕರ್ತರುಗಳೂ, ಶ್ರೀ ವೇದವ್ಯಾಸಾಚಾರ್ಯರ ಅನುಯಾಯಿಗಳೆಂದೆನಿಸಿ, ಅವರು ಅನುಸರಿಸಿದ ಮಾರ್ಗವನ್ನು ಹಿಡಿದು, ತಮಗೆ ಹಿತವೆಂದೆನಿಸಿದ

ವೊಂದೊಂದು ಮಹದಂಶವನ್ನೇ ಪ್ರಧಾನವಾಗಿ ಅಂಗೀಕರಿಸಿ, ಆಚರಿಸಿ, ಆದರಣೆಯಿಂದ ಜಗತ್ತಿಗೆ ಬೋಧಿಸಿ ಪೂಜ್ಯರೆನಿಸಿರುವರು. ಶ್ರೀ ಮದ್ವೇದ ವ್ಯಾಸರಿಂದ ರಚಿತವಾದ ಬ್ರಹ್ಮಸೂತ್ರಗಳಿಗೆ, ಶ್ರೀ ಮದಾಚಾರ್ಯರುಗಳು, ತಂತಮ್ಮ ಸ್ವಾನು ಭೂತಿಯ ಆಧಾರದ ಮೇಲೆ ಅವರವರು ಪ್ರಮಾಣ ಬದ್ಧವಾದ ಸ್ವತಂತ್ರ ಸಿದ್ಧಾಂತಗಳನ್ನು ಅಮೋಘತರ ಅರ್ಥ ಗರ್ಭಿತ ಶೈಲಿಗಳಲ್ಲಿ ಉಲ್ಲೇಖಿಸಿ ಕೀರ್ತಿ ಶೇಷರೆನಿಸಿರುವರು.

ಭಗವತ್ಪಾದ ಶ್ರೀ ರಾಮಾನುಜಾಚಾರ್ಯರು "ಶ್ರೀ ಭಾಷ್ಯ"ವನ್ನು ರಚಿಸಿ, ಶ್ರೀ ವಿಷ್ಣು ಸರ್ವೋತ್ತಮತ್ವವನ್ನು ಜಗತ್ತಿನಲ್ಲಿ ದಿಟ್ಟತನದಿಂದ ಸಾರಿ, "ಓಂ ನಮೋ ನಾರಾಯಣಾಯ" ಎಂಬ ಅಷ್ಟಾಕ್ಷರೀ ಮೂಲ ಮಹಾ ಮಂತ್ರವನ್ನು ಕರುಣಾದ್ರ್ರಹೃದಯ ಭಾವದಿಂದ ಮನಬಿಚ್ಚಿ, ಕಟ್ಟಾಜ್ಞೆಯನ್ನು ದಾಟಿ ಸಮಸ್ತರ ಆತ್ಮಕಲ್ಯಾಣಕ್ಕಾಗಿ, ಮಾನವಕೋಟಿಗೆ ಬಹಿರಂಗವಾಗಿ ಧೀರೋದ್ಧಾರದಿಂದ, ಶ್ರೀರಂಗದ ಶ್ರೀ ರಂಗನಾಥಸ್ವಾಮಿ ದೇವಾಲಯದ ಗೋಪುರದ ಮೇಲ್ಭಾಗದಲ್ಲಿ ನಿಂತು ಆಸ್ತಿಕವೃಂದಕ್ಕೆ ಉಪದೇಶಿಸಿದ ರಾಜಗುರು ಶ್ರೀ ರಾಮಾನುಜ, "ವ್ಯಾಪಕತ್ವಾತ್‌ವಿಷ್ಣುಃ" ಅಂದರೆ ಶ್ರೀಹರಿಯು ಸರ್ವ ಭೂತ ಕೋಟಿಗಳಲ್ಲೂ ವ್ಯಾಪಕನಾಗಿ ಸರ್ವಾಂತರ್ಯಾಮಿ ಯಾಗಿರುವುದರಿಂದ, ವಿಷ್ಣುವೆಂದೆನಿಸಿರುವನೆಂದು ಪ್ರತಿಪಾದಿಸಿ, ಶ್ರೀಮನ್ನಾರಾಯಣನೇ ಜಗತ್ಕರ್ತನೆಂದು ಅಖಂಡವಾಗಿ ಬೋಧಿಸಿರುವರು.

ಶ್ರೀಮದಾಚಾರ್ಯ ರಾಮಾನುಜರಿಗೂ ಪೂರ್ವದಲ್ಲಿ ಶ್ರೀಮದ್ವೈಷ್ಣವ ಪಂಥದ ಅನುಯಾಯಿಗಳಾದ ಶ್ರೀ ಪೆರಿಯಾಳ್ವಾರ್, ನಮ್ಮಾಳ್ವಾರ್, ಕುಲ ಶೇಖರಾಳ್ವಾರ್ ಮೊದಲಾದ ಹನ್ನೆರಡು ಆಳ್ವರಾದಿಗಳೂ ಹಾಗೂ ಶ್ರೀ ಆಂಡಾಳ್ ಅಮ್ಮನವರೂ, ಶ್ರೀ ಮನ್ನಾರಾಯಣ ಸರ್ವೋತ್ತಮತ್ವವನ್ನು ಜಗತ್ತಿನಲ್ಲಿ ಭಿತ್ತಿ ಬೀರಿ ಭಕ್ತಕೋಟಿಗಳ ಹೃದಯ ಕ್ಷೇತ್ರದಲ್ಲಿ ಭಕ್ತಿರೂಪ ಬೆಳೆಯನ್ನು ಬೆಳಗಿಸಿ ಬಹಳ ಭಾಗ್ಯವಂತರೆನಿಸಿಕೊಂಡಿರುವರು. ವೈಷ್ಣವ ದರ್ಮವನ್ನು ವಿಪುಲವಾಗಿ ಪ್ರತಿಪಾದಿಸುವ ಪಾಂಚರಾತ್ರಾಗ ಮಗಳಿಗೆ ಶರಣಾದಿವರು,

ಶ್ರೀಮದ್ರಾಮಾಯಣ, ಭಾರತ, ಭಾಗವತ, ಭಗವದ್ಗೀತೆ, ನಾಲಾಯಿರ ದಿವ್ಯ ಪ್ರಬಂಧಂ ಎಂಬೀ ವೈಷ್ಣವ ಸಂಪ್ರದಾಯ ಮಹದ್ಗ್ರಂಥಗಳಲ್ಲಿ ಪ್ರೋಕ್ತವಾದ ಮಹದಂಶಗಳನ್ನು ನೆರೆನಂಬಿ, ಭಕ್ತಿಮಾರ್ಗವನ್ನನುಸರಿಸಿ ಕೃತಾರ್ಥರಾಗುವುದ ರೊಂದಿಗೆ, ಜಗತ್ತಿನವರಿಗೆ ಪರಮ ಆದರ್ಶ ಶಿರೋರತ್ನಪ್ರಾಯರಾಗಿ ಬೆಳಗಿರು ವರು. ದ್ವಾದಶ ಆಳ್ವಾರಾದಿಗಳ ಮಾರ್ಗವನ್ನು ಹಿಡಿದು ಶ್ರೀರಾಮಾನುಜಾ ಚಾರ್ಯರು ಸನಾತನವಾದ ಶ್ರೀ ವೈಷ್ಣವ ಸಂಪ್ರದಾಯವನ್ನು ಮತ್ತಷ್ಟು ಪ್ರಕಾಶಗೊಳಿಸಿದರು

ಶ್ರೀ ಮದಾನಂದ ತೀರ್ಥ ಶ್ರೀ ಮನ್ಮಧ್ವಾಚಾರ್ಯರು ಭಗವತ್ಪಾದ ಶ್ರೀರಾಮಾನುಜಾಚಾರ್ಯರಂತೆ ಶ್ರೀ ವಿಷ್ಣುಸರ್ವೋತ್ತಮತ್ವವನ್ನೇ ಎಲ್ಲೆಲ್ಲೂ ಸಾರಿ, ಶ್ರೀಮನ್ನಾರಾಯಣನ ಅವತಾರಗಳೆನಿಸಿದ ಶ್ರೀರಾಮ, ಶ್ರೀಕೃಷ್ಣಾ ದ್ಯವತಾರಗಳಿಗೆ ಮಹತ್ತರವಾದ ಸ್ಥಾನವನ್ನು ಕೊಟ್ಟು ವೈಷ್ಣವ ಧರ್ಮವನ್ನು ವಿಪುಲವಾಗಿ ಪ್ರತಿಪಾದಿಸಿರುವರು. ಶ್ರೀರಾಮಾನುಜರ ವಿಶಿಷ್ಟಾದ್ವೈತಕ್ಕೆ ಭಿನ್ನ ಪಟ್ಟು ತಮ್ಮದೇ ಆದ ಪರಮದ್ವೈತ ಸಿದ್ಧಾಂತವನ್ನು ೩೭ ಗ್ರಂಥಗಳಲ್ಲಿ ಪ್ರತಿ ಪಾದಿಸಿ, ಸರ್ವಜ್ಞಾಚಾರ್ಯರೆಂಬ ಕೀರ್ತಿಕವಚದಿಂದ ವಿಶ್ವದಲ್ಲಿ ವಿರಾಜಿತರಾಗಿ, ಉಡಿಪಿ ಪುಣ್ಯಕ್ಷೇತ್ರದಲ್ಲಿ ಅಷ್ಟಮಠಗಳನ್ನು ಸ್ಥಾಪಿಸಿ, ತಮ್ಮಿಷ್ಟದೈವ ವೆಂದೆನಿಸಿದ ಶ್ರೀ ಕೃಷ್ಣನನ್ನು ಮೂರ್ತಗೊಳಿಸಿ ಸುಪ್ರಸಿದ್ಧ ಆಚಾರ್ಯ ದೇವರೆನಿಸಿರುವರು. " ಶ್ರೀ ಮದ್ವಿಷ್ಣು-ತತ್ವ ನಿರ್ಣಯ " ಮಹದ್ಗ್ರಂಥವು ಅತ್ಯಂತ ಶ್ರೇಷ್ಠಶಿರೋರತ್ನದಂತೆ ಬೆಳಗಿ ದ್ವೈತಸಿದ್ಧಾಂತ ಸಂಪ್ರದಾಯ ಗಳನ್ನು ಪ್ರತಿಬಿಂಬಿಸುವ ದರ್ಪಣವೆನಿಸಿರುವುದು.

ಶ್ರೀ ಮಜ್ಜಗದ್ಗುರು ಆದಿ ಶ್ರೀ ಶಂಕರಾಚಾರ್ಯ ಮಹೋದಯರು ಶ್ರೀ ಮನ್ನಾರಾಯಣನನ್ನೂ, ಮತ್ತೂ ಮಹಾವಿಷ್ಣುವಿನ ಸಾಕ್ಷಾತ್ ಅವತಾರ ವೆನಿಸಿದ ಶ್ರೀರಾಮ ಶ್ರೀ ಕೃಷ್ಣಾದಿ ದೇವತಾಮೂರ್ತಿಗಳನ್ನೂ ಪೂಜಿಸಿ ಸ್ತುತಿಸಿ,

ವಿಗ್ರಹಾರಾಧನೆಯನ್ನು ಜಗತ್ತಿನಲ್ಲಿ ಉಳಿಸಿ ಬೆಳಸಿದರೂ, ಆತ್ಮೀಯವಾಗಿ ಶಿವೋಪಾಸನೆಯೇ ತಮ್ಮ ನಿತ್ಯ ನೈಮಿತ್ತಿಕ ಕರ್ಮವನ್ನಾಗಿ ಅಂಗೀಕರಿಸಿ, ಶ್ರೀ ಚಂದ್ರಮೌಳೀಶ್ವರ ಲಿಂಗೋಪಾಸನೆ, ಪೂಜಾರಾಧನೆಗಳಿಂದ ಸಂಪ್ರೀತರಾಗುತ್ತಿರುವರು. ಶಿವಸರ್ವೋತ್ತಮತ್ವವನ್ನು ಅಖಂಡವಾಗಿ ಬೋಧಿಸಿ ಶಿವಲಿಂಗಾರಾಧನೆಯಿಂದ ಮೂರ್ತಾಮೂರ್ತ ದೇವತಾರಾಧನೆಗಳಿಂದುಂಟಾಗುವ ಉಭಯವಿಧ ಪುಣ್ಯ ಫಲವು ಪ್ರಾಪ್ತವಾಗುವುದೆಂಬ ಅಂಶವನ್ನು ಎತ್ತಿ ಹಿಡಿದಿರುವರು. ತಮ್ಮ ಪೀಠದಲ್ಲಿ ಶ್ರೀ ಶಾರದಾಂಬೆಯನ್ನು ಸ್ಥಾಪಿಸಿ, ಶ್ರೀ ಶಾರದಾಪೀಠವೆಂದು ಹೆಸರಿಟ್ಟು ಭುಕ್ತಿ ಭಕ್ತಿ ಮುಕ್ತಿಗಳಿಗೆ ಅಧಿಷ್ಠಾನ ದೇವತೆ ಎನಿಸಿದ ಪರಾಶಕ್ತಿಯನ್ನೂ ಅಖಂಡವಾಗಿ ಸ್ತುತಿಸಿ, ವಂದಿಸಿ ಶಿವಶಕ್ತಿ ತತ್ವಕ್ಕೆ ಶರಣಾಗತರಾಗಿರುವರು. ಶ್ರೀಶಂಕರಾಚಾರ್ಯರಿಂದ ರಚಿತವಾಗಿರುವ ಶಿವಾನಂದಲಹರಿ, ಸೌಂದರ್ಯಲಹರಿ, ಅನ್ನಪೂರ್ಣೇಶ್ವರಿ ಸ್ತೋತ್ರಗಳೇ ಸಾಕಷ್ಟು ಪ್ರಮಾಣಗಳೆನಿಸಿರುವುವು. ಆಧ್ಯಾತ್ಮಿಕ ತತ್ವ ವಿಚಾರ ವಿನಿಮಯ ಜ್ಞಾನದ ಜಿಜ್ಞಾಸುವಾದವನು,

Open hearted and broad mindedness should be one's aim with pragmatism and catholicity of out-look, coupled with Divine Vision, in expounding the infinite Glory and the most Resplendent Splendour of the Supreme Lord *viz.*, the ever Living God Almighty. The liberal, elastic and eulogizing great interpretations as embodied and enunciated in Sivagamas and Upanishads are held to be highly saturated and are wholly penetrating and piercing in approach. As such, the Quest after TRUTH nothing but whole TRUTH is relatively cohesive and conducive to one and

all, when viewed with a lofty spirit of self renunciation and self dedication disinterestedly.

Greater the spiritual field of exploration and discovery from within, nobler, more nobler and most enlivening will be the matured Fruit Divine that he attains in fullness of time. In order to achieve this supermental Goal, one has to dive deep many a time indefatigablly with tremendous patience and preseverance into the solemn realm of the Upanishadic Universal serene philosophy, keenly search, penetrate into the subtle lustrous vision, smartly behold and assimilate the Reality enshrined therein. By this kind of perspective awakening process of constant remembrance, concentration and meditation upon Soul Supreme *viz.*, Paramatman, the inner Divine Vision gets tremendously focussed from within us and gradually tends to inexpressible intuition through self introspection. 'Arise Arise Awake Awake' and stop not till the Goal is reeched is the divine song that constently played arround the sweet lips of Swamy Vivekananda. This is worthy of remembrance.

"ಉತ್ತಿಷ್ಠತ ಉತ್ತಿಷ್ಠತ ಜಾಗ್ರತ ಜಾಗ್ರತ ಪ್ರಾಪ್ಯ ವರಾನ್ನಿಬೋಧತ" ಎಂಬ ಕಠೋಪನಿಷತ್ತಿನ ಮಹಾವಾಕ್ಯದಂತೆ, ಆತ್ಮದರ್ಶನವಾಗುವವರವಿಗೂ ಬ್ರಹ್ಮಜಿಜ್ಞಾಸಿಯು ಸಾವಧಾನ ಚಿತ್ತದಿಂದ ಸತ್ಯಾನ್ವೇಶಣ ಕಾರ್ಯದಲ್ಲಿ ಆಚಾರ ವಿಚಾರಗಳಿಂದ, ಪ್ರಗತಿಪರ ಹೆದ್ದಾರಿಯಲ್ಲಿ ಮುಂದುವರಿಯುತ್ತಿರ ಬೇಕು. ಜ್ಞಾನವೊಂದಿದ್ದರೆ ಸಾಲದು. ನಿಷ್ಠೆ ನಿಯಮಗಳೂ ಅನುಭಾವೈಕ್ಯತೆ ಗಳೂ ಅತ್ಯಗತ್ಯ.

"ದ್ವೈತಾದ್ವೈತ" ಅಥವಾ "ವಿಶೇಷಾದ್ವೈತ" ವೆನಿಸಿ ಬೆಳಗುವ ಭಾಗಗಳು ನಿಗಮಾಗಮಾದಿಗಳಲ್ಲಿ ವಿಪುಲವಾಗಿ ಕಂಡುಬಂದು ಸರ್ವಧರ್ಮ ಸಮನ್ವಯಾತ್ಮಕವೆನಿಸಿರುವುವು. ಜಗದ್ಗುರು ಪರಮಪೂಜ್ಯ ಆದಿ ಶ್ರೀ ಶಂಕರಾ ಚಾರ್ಯರು, ಅಂದಿನ ಬೌದ್ಧಧರ್ಮದ ಉಪಟಳವನ್ನು ಹಿಮ್ಮೆಟ್ಟಿಸುವ ಕಾರ್ಯ ದಲ್ಲಿ ತೊಡಗಿ, ಪ್ರಭಾವಾನ್ವಿತರಾಗಿ ಕೇವಲಾದ್ವೈತವನ್ನೇ ಅಖಂಡವಾಗಿ ವಿಶ್ವಸಿಸಿ ಮಹೋನ್ನತವಾಗಿ ಪ್ರತಿಪಾದಿಸಿರುವರು. ಶ್ರೀಮನ್ಮಧ್ವಾಚಾರ್ಯರು ದ್ವೈತ ಧರ್ಮವನ್ನು ಅಂಗೀಕರಿಸಿ, ಜೀವನು ಅಸ್ವತಂತ್ರನು ಹಾಗೂ ದುಃಖಿ. ಸರ್ವಸ್ವತಂತ್ರನೂ ನಿತ್ಯಾನಂದಮಯನು ಶ್ರೀಹರಿ, ಎಂದು ಸಮರ್ಪಕವಾಗಿ ಪ್ರತಿಪಾದಿಸಿ, ವೇದೋಪನಿಷತ್ತುಗಳ ಸಾರ, ದ್ವೈತಧರ್ಮ ಪ್ರತಿಪಾದನೆಯೇ ಆಗಿರುವುದೆಂದು ಸ್ಪಷ್ಟಪಡಿಸಿರುವರು.

ಮೇಲ್ಕಂಡ ಪೂಜ್ಯ ಉಭಯಾಚಾರ್ಯರು ಶೃತಿಧರ್ಮಕ್ಕೆ ಶರಣಾಗತರಾಗಿ, ವೇದವ್ಯಾಸಾಚಾರ್ಯರು ಬೋಧಿಸಿರುವ ಮಹದಂಶಗಳಲ್ಲಿ ಏಕಪಕ್ಷೀಯವಾಗಿ ಶೃತಿಗನ್ವಯಿಸಿದಂತೆ ಒಂದೊಂದು ಮಾರ್ಗವನ್ನು ಮಾತ್ರ ಅವಲಂಭಿಸಿರುವರು. ॥ ಲೋಕೋ ಭಿನ್ನರುಚಿಃ ॥ ಎಂಬುದು ತಿಳಿದ ವಿಷಯವೇ ಅಷ್ಟೆ. ಭಿನ್ನಭಿನ್ನ ರುಚಿ ಭೇಧವುಳ್ಳ ಅನಂತಕೋಟಿ ಆಸ್ತಿಕ ಶಿಷ್ಯವೃಂದಕ್ಕೆ ಜ್ಞಾನಜ್ಯೋತಿಗಳಂತೆ ಬೆಳಗಿ ಈ ಆಚಾರ್ಯರುಗಳು ಅಭಯ ಪ್ರದರಾಗಿರುವರು. ವಿಶಿಷ್ಟಾದ್ವೈತ ಮತ ಸ್ಥಾಪನಾಚಾರ್ಯರೆನಿಸಿ ಪ್ರಸಿದ್ಧರಾದ ಪೂಜ್ಯ ಶ್ರೀ ರಾಮಾನುಜಾ ಚಾರ್ಯರು ಸಹ ವೇದೋಪನಿಷತ್ ಹಾಗೂ ಪಾಂಚರಾತ್ರಾಗಮಾದಿಗಳ

## ಪ್ರಸ್ತಾವನೆ

ಪರಮ ಆಧಾರಗಳನ್ನೊಳಗೊಂಡಂತೆ, ದ್ವಾದಶ ಆಳ್ವಾರಾದಿಗಳು ಅನುಸರಿಸಿದ ಸನ್ಮಾರ್ಗವನ್ನು ಅನುಸರಿಸಿ ತಮ್ಮ ಘನ ಸಿದ್ಧಾಂತವನ್ನು ಜಗತ್ತಿನಲ್ಲಿ ಮನ ಮೋಹಕವಾಗಿ ಚಿತ್ತರಿಸಿರುವರು. ಭಗವತ್ಪಾದ ಶ್ರೀರಾಮಾನುಜಾಚಾರ್ಯರು ಆದಿ ಶ್ರೀ ಶಂಕರಾಚಾರ್ಯರ ಐಕ್ಯ ಸಿದ್ಧಾಂತವನ್ನೂ ಮತ್ತೂ ಅವರ ಜಗನ್ಮಿಥ್ಯಾವಾದಗಳನ್ನು ಅಂಗೀಕರಿಸದೆ ಹೋದರೂ, ಶ್ರೀಮನ್ಮಧ್ವಾಚಾರ್ಯರಿ ಗಿಂತಲೂ ಮೋಕ್ಷಾನುಭವದಲ್ಲಿ ಒಂದು ಹೆಜ್ಜೆ ಮುಂದುವರಿದು, ಪರಮಾತ್ಮನ ಪೂರ್ಣ ಕೃಪೆಗೆ ಪಾತ್ರರಾಗಿ ಅನನ್ಯ ಭಾವೇನ ಶರಣಾಗತರಾದವರನ್ನು, ಶರಣಾಗತ ಜನ ರಕ್ಷಕನಾದ ಜಗನ್ನಿಯಾಮಕ ಸ್ವಾಮಿ ರಕ್ಷಿಸುವನೆಂದು ಭೋಧಿಸಿರುವರು. ತಾಯಿತಂದೆಗಳನ್ನು ಆದರದಿಂದ ಮಕ್ಕಳು ಅಪ್ಪಿಕೊಂಡಿರು ವಂತೆ, ಪ್ರಿಯತಮಳಾದ ಪತ್ನಿಯನ್ನು ಪತಿಯು ಮೋಹದಿಂದ ಅಪ್ಪಿ ಆಲಂಗಿಸಿ ಕೊಂಡಿರುವಂತೆ–ಶರಣಾಗತ ಭಕ್ತಜನ ವತ್ಸಲನಾದ ಪರಮಾತ್ಮನನ್ನು ಮುಕ್ತ ಜೀವರುಗಳು ಅಂದರೆ ಜೀವನ್ಮುಕ್ತರು, ಅನನ್ಯ ಭಕ್ತಿಭಾವದಿಂದ ಅಪ್ಪಿಕೊಂಡು ನಿರಂತರ, ನಿರತಿಶಯಾನಂದ ತುಂದಿಲ ಹೃದಯ ಸ್ವಾಂತಭರಿತರಾಗಿ ||ಆನಂದಂ ಬ್ರಹ್ಮೇತಿ ವ್ಯಜಾನಾತ್ || ಅಂದಹಾಗೆ ಪರಮಾನಂದದಲ್ಲಿ ಮಗ್ನರಾಗಿರ್ಪ ರೆಂದು ವಿಶಿಷ್ಟಾದ್ವೈತದ ಮೋಕ್ಷ ಸ್ವರೂಪವನ್ನು ಶ್ರೀರಾಮಾನುಜರು ಹೃದಯಂಗಮವಾಗಿ ವಿವರಿಸಿರುವರು. ಪರಮಾತ್ಮನನ್ನು ಹೊಂದಲು ಭಕ್ತಿಯೇ ಅತ್ಯಂತ ಮುಖ್ಯ ಸಾಧನವೆಂದು ಸಾರಿದ ಶ್ರೀ ರಾಮಾನುಜರು, ಪ್ರಪತ್ತಿ ಮಾರ್ಗ, ಮಾರ್ಜಾಲ ಕಿಶೋರನ್ಯಾಯವೆಂತಲೂ ಮತ್ತೂ ಮರ್ಕಟ ಕಿಶೋರ ನ್ಯಾಯವೆಂತಲೂ ಎರಡು ಪ್ರಕಾರವಾಗಿರುವುದೆಂದು ಅಪ್ಪಣೆಕೊಡಿಸಿರುವರು. ತನ್ನ ಮರಿಗಳನ್ನು ಬೆಕ್ಕು ಬಾಯಿಂದ ಕಚ್ಚಿಹಿಡಿದು ಸುಭದ್ರವಾದ ಸ್ಥಳದಲ್ಲಿರಿಸಿ ರಕ್ಷಿಸುವುದು, ಮರಿಗಳ ರಕ್ಷಣೆ ತಾಯಿ ಬೆಕ್ಕಿನ ಹೊಣೆಯಾಗಿದ್ದು, ಬೆಕ್ಕಿನ ಮರಿಗಳು ನಿಶ್ಚಿಂತೆಯಿಂದ ಬೆಳೆಯುವುವು. || ಅನನ್ಯಾಶ್ಚಿಂತಯಂತೋಮಾಂ | ಏಜನಾಃ ಪರ್ಯುಪಾಸತೇ| ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ

ವಹಾವ್ಯಹಂ ॥ ಎಂಬ ಗೀತಾಶ್ವಾಸನದಂತೆ ಪರಮಾತ್ಮನನ್ನು ಅನನ್ಯ ಭಕ್ತಿ ಭಾವದಿಂದ ನಂಬಿ ಮೊರೆ ಬಿದ್ದವರನ್ನು ಸ್ವಾಮಿ ರಕ್ಷಿಸುವನು. ॥ ತಲ್ಲಣವ ಗೊಳ್ಳದಿರು ಎಲೆ ಮಾನವ! ಕೊಳ್ಳು ಶಾಂತಿಯ ಸ್ವಾಮಿ ರಕ್ಷಿಪ ನಿದಕೆಸಂದೇಹ ಬೇಡ ॥ ಎಂಬ ನುಡಿ ಸದಾ ಸಂಸ್ಮರಣೀಯು. ದೇವರು ಅಭಯವಿತ್ತು ರಕ್ಷಿಸಿ ಪರಮೋದಾರತೆಯಿಂದ ॥ ಅಗಣಿತ ಶ್ರೇಯಃ ಪದಃ ಪ್ರಾಪಣಾತ್ ॥ ಎಂಬಂತೆ ಶ್ರೇಯಸ್ಕರವಾದ ಪರಮಪದವನ್ನನುಗ್ರಹಿಸುವನು. ಮರ್ಕಟ ಕಿಶೋರಭಕ್ತಿ, ನ್ಯಾಯವಾದರೋ, ಮಂಗನ ಮರಿಗಳು ತಾವೇ ತಮ್ಮನ್ನು ರಕ್ಷಿಸಿಕೊಳ್ಳುವ ನಿಮಿತ್ತ ತಾಯಿ ಮಂಗನ ದೇಹವನ್ನು ತಮ್ಮ ಪುಟ್ಟ ಮುಷ್ಟಿಗಳಿಂದ ಬಿಗಿಯಾಗಿ ಕಚ್ಚಿಕೊಂಡಿರುವುವು. ತಮ್ಮ ರಕ್ಷಣೆಯ ಹೊಣೆಯನ್ನು ಕೋತಿ ಮರಿಗಳು ತಾವೇ ಹೊತ್ತಿರುವುದರಿಂದ, ತಾಯಿ ಮರ್ಕಟವು ನಿಶ್ಚಿಂತೆಯಿಂದ, ಮರದಿಂದ ಮರಕ್ಕೆ ಧಾವಿಸುವಾಗಲೂ, ತನ್ನ ಮರಿಗಳ ಧ್ಯಾಸವನ್ನು ಮಾಡದೆ ಧುಮು ಕುವುದು. ಅದರಂತೆ ಸಂಕಟಬಂದಾಗ ವೆಂಕಟರಮಣನೆನ್ನುತ್ತ, ಉಳಿದ ವೇಳೆ ಗಳಲ್ಲಿ ತಮ್ಮನ್ನು ತಾವೇ ರಕ್ಷಿಸಿಕೊಳ್ಳುವ ಭರವಸವುಳ್ಳವರಾದ ಜನರನ್ನು ಮರ್ಕಟ ಕಿಶೋರ ನ್ಯಾಯಾನುವರ್ತಿಗಳೆಂದು ಸ್ಪಷ್ಟಪಡಿಸಿ ಭಕ್ತಿಪಂಥದ ನಿಜ ಸ್ವರೂಪವನ್ನು ಶೃತಪಡಿಸಿರುವರು. ಮೋಕ್ಷಾನಂದ ಸ್ವರೂಪವನ್ನು ದಯಾಳು ಗಳಾದ ಶ್ರೀ ರಾಮಾನುಜರು ಹಂತ ಹಂತವಾಗಿ ವಿವರಿಸುತ್ತಾ " ಸಾಲೋಕ್ಯ, ಸಾಮೀಪ್ಯಾದಿ " ಮುಕ್ತ ಸ್ಥಿತಿಗಳಿಗಿಂತಲೂ " ಸಾರೂಪ್ಯ " ಮೋಕ್ಷಾ ನಂದವು ವರ್ಣನಾತೀತವಾದ ನಿತ್ಯ ಪರಮಾನಂದಮಯವಾಗಿ ವಿರಾಜಿತವಾದು ದೆಂದು ಬೋಧಿಸಿರುವುದು, ಆಸ್ವಾದನೀಯವೂ ಆತ್ಮಕಲ್ಯಾಣಕರವೂ ಆಗಿರು ವುದು. ಶ್ರೀಮತೇ ರಾಮಾನುಜಾಯ ನಮಃ.

ಅದ್ವೈತಮತ ಸ್ಥಾಪನಾಚಾರ್ಯ ಜಗದ್ಗುರು ಆದಿ ಶ್ರೀ ಶಂಕರಾ ಚಾರ್ಯರ., ಮೋಕ್ಷಾನಂದಾನುಭವಾಮೃತ ದಿವ್ಯ ಸ್ಥಿತಿಯನ್ನು ವಿವರಿ ಸುತ್ತಾ, ಸಾಲೋಕ್ಯ, ಸಾಮಿಪ್ಯ, ಸಾರೂಪ್ಯ ಮೋಕ್ಷ ಸುಖಕ್ಕಿಂತಲೂ "ಸಾಯುಜ್ಯ" ಮುಕ್ತಿಯು ಪೂರ್ಣವೆನಿಸಿ ಶಾಶ್ವತ ಶಿವಾನಂದಕರವೆಸಿನಿರ್ಪು ದೆಂದು ಉದಹರಿಸಿ ಸ್ಪಷ್ಟಪಡಿಸಿರುವರು.

ಎಲ್ಲೆಯರಿಯದ ಗಂಭೀರವಾದ ಮಹಾಸಾಗರದೊಳಗಡೆ ಉಪ್ಪಿನ ಮೂಟೆ ಯೊಂದನ್ನು ಇಳಿಸಿ, "ಹೇ ಉಪ್ಪೇ! ಈ ಸಾಗರದ ಆಳವನ್ನು ಕಂಡು, ಬಂದು ನಿನ್ನನುಭವವನ್ನು ಸ್ವಲ್ಪ ನನಗೆ ಹೇಳುವೆಯಾ ?" ಎಂದು ಲವಣ ಸಮುದ್ರದಲ್ಲಿ ಲವಣದ ಮೂಟೆಯೊಂದನ್ನು ಮುಳುಗಿಸಿದರೆ, ಕೆಲವು ನಿಮಿಷಗಳಲ್ಲಿ ಇಡಿ ಉಪ್ಪು ನೀರಾಗಿ ಕರಗಿ ಸಮುದ್ರಾಕಾರವನ್ನು ಹೊಂದಿರು ವಲ್ಲಿ, ಸಮುದ್ರದ ಆಳವನ್ನು ತಿಳಿಸಲು ಆ ಉಪ್ಪಿನ ಮೂಟೆ ಯೆಲ್ಲಿಯಾದರು ಮೇಲ್ಬರುವುದುಂಟೆ ? ಅದರಂತೆ ಸಾಯುಜ್ಯ ಮುಕ್ತಿಯನ್ನು ಹೊಂದಿದ ಜೀವನ್ಮುಕ್ತರು ಶುದ್ಧ ಬ್ರಹ್ಮ ಪರಾತ್ಪರ ವಸ್ತುವಿನಲ್ಲಿ ವಿಲೀನರಾದ ಬಳಿಕ, ಶಿವಾನಂದಮಯ ಮಹಾ ತೇಜಸ್ಸಿನಲ್ಲಿ ತೇಜಸ್ಸಾಗಿ ಶಿವ ಸಮುದ್ರದೊಂದಿಗೆ ತಾದಾತ್ಮ್ಯವನ್ನು ಹೊಂದಿ ವಿರಾಜಿಸುವರೆಂದ ಬಳಿಕ, ಸಾಯುಜ್ಯ ಮುಕ್ತಾ ವಸ್ಥೆಯಲ್ಲಿ ಪೃಥಕ್‌ಭಾವದ ವ್ಯಕ್ತಿತ್ವವಾಗಲಿ ಅಥವಾ ದಣಿ–ದಾಸ ಎಂಬ ಪ್ರತ್ಯೇಕತಾ ಭಾವನೆಯಿಂದಾಗಲಿ ನಿಲ್ಲುವುದು ತಾನೆ ಹೇಗೆ ಸಾಧ್ಯವಾದೀತು.

ವೇದಾಗಮಾದಿಗಳಲ್ಲಿ ॥ ಸಿಂಹಾಸನ ಪತಿಶ್ಚಯಃ ॥, ॥ ಪಂಚಪೀಠಾಧಿ ದೇವಾನಾಂ ॥ ಎಂಬಿವೇ ಗಂಭೀರವಾದ ಸ್ತೋತ್ರಗಳಿಂದ ಸ್ತುತ್ಯರಾದ ಶ್ರೀಮದ್ರೇಣುಕಾದಿ ಪಂಚಾಚಾರ್ಯರುಗಳಲ್ಲಿ ತೃತೀಯಾಚಾರ್ಯರಾದ, ಅಖಿಲ ವಿರಕ್ತ ವೃಂದಕ್ಕೆ ಮಸ್ತಕಮಣಿಯಂತೆಸೆವ, ಶ್ರೀಮತ್ಕೇದಾರ ಪೀಠಾಧೀಶ್ವರರೂ, ಪರಮವೈರಾಗ್ಯ ಚಕ್ರವರ್ತಿ ಪೀಠದ ಸಾರ್ವಭೌಮಾಚಾರ್ಯರೂ, ದ್ರಾಕ್ಷಾ ರಾಮ ಸುಕ್ಷೇತ್ರ ಪ್ರವಿರಾಜಮಾನ ಶ್ರೀರಾಮನಾಥ ಜ್ಯೋತಿರ್ಲಿಂಗಾ ವಿರ್ಭೂತರೂ, ಸನ್ಮಂಗಳಮಯ ದಿವ್ಯ ದೇಹಧಾರಿಗಳೂ ಆದ ಶ್ರೀ ಶ್ರೀ ಘಂಟಾ ಕರ್ಣ ಶಿವಾಚಾರ್ಯರ (ಏಕೋರಾಮಾರಾಧ್ಯರ) ಪರಮ ಶಿಷ್ಯ ಆದಿ ಶ್ರೀ ವೇದವ್ಯಾಸಾಚಾರ್ಯರು ಎಂಬ ಮಹದಂಶ ಅತ್ಯಂತ ಗಮನಾರ್ಹವು.

॥ ವೇದಗಳ ವಿಂಗಡಿಸಿ ಧರ್ಮವ ।
ಸಾದರದಿ ಭುವಿಯೊಳಗೆ ಸಾರಿದ ।
ವೇದ ಧರ್ಮಿಗೆ ವ್ಯಾಸಮುನಿವರಗಿರದೆ, ಶಿವಮತದ ॥
ಹಾದಿಯನು ಬಿಡದ್ಯೆದೆ ಬೋಧಿಸಿ ।

ಮೋದವಿುಗೆ ಶಿವಭಕ್ತಿ ದೋರಿದ ।
ಆದಿ ದೇಶಿಕವರ್ಯ ಏಕೋರಾಮಗುರು ನಮಿಪೆಂ ॥

ಚತುರ್ವೇದಗಳನ್ನು ಕ್ರಮಗೊಳಿಸಿ ಕರ್ಮ ಭಕ್ತಿ ಜ್ಞಾನಗಳೆಂಬ ಕಾಂಡತ್ರಯಂಗಳಾಗಿ ವಿಂಗಡಿಸಿ ಕೀರ್ತಿಶೇಷರಾದ ಆದಿ ಶ್ರೀವ್ಯಾಸರು, ವಿಷ್ಣುಪುರಾಣ ಶಿವಪುರಾಣಗಳಾದಿಯಾಗಿ ಹದಿನೆಂಟು ಪುರಾಣಗಳನ್ನು ಲೋಕೋದ್ಧಾರ ನಿಮಿತ್ತ ರಚಿಸಿ ಪುರಾಣಮುನಿ ಎಂದೆನಿಸಿಕ್ಕೊಂಡಿರುವರು. ಬಾದರಾಯಣರು, (ವ್ಯಾಸರ ) ಶಿವನ ಮಹತ್ವವನ್ನು ಮನಗಂಡು ॥ವಿಶ್ವಾಧಿಕಂ ಶಂಕರಂ। ಎಂದು ಮುಕ್ತಕಂಠದಿಂದ ಘಂಟಾಘೋಷವಾಗಿ ಸಾರಿರುವರು. ವ್ಯಾಸಾಚಾರ್ಯರಿಂದ ರಚಿತವಾಗಿರುವ ಅಷ್ಟಾದಶ ಪುರಾಣಗಳಲ್ಲಿ ಹತ್ತು ಶಿವಪುರಾಣಗಳಿರುವುವು ಇವುಗಳಲ್ಲಿ ಮಹಾಸ್ಕಾಂದವು ಮಹತ್ವಪೂರಿತವಾದುದಾಗಿರುವುದು. ಶ್ರೀ ವ್ಯಾಸ ಕೃತ ಕಾವ್ಯ, ಪುರಾಣ, ವೇದಾಗಮಾದಿಗಳಲ್ಲಿ ಶಿವನಿಗೆ ಆಧಿಕ್ಯವಿರುವುದು ಕಂಡು ಬರುವುದರಿಂದ ತಿಳಿಯುವುದೇನೆಂದರೆ.

ಶ್ರೀ ವೇದವ್ಯಾಸಾಚಾರ್ಯರು, ಶ್ರೀಮಜ್ಜಗದ್ಗುರು ವೈರಾಗ್ಯ ಚಕ್ರವರ್ತಿ ಸಿಂಹಾಸನಾಧಿಪತಿಗಳೂ, ವಿರಕ್ತಪೀಠದ, ಜಗದ್ಗುರುಸಾರ್ವಭೌಮರೂ ಆದ ಶ್ರೀ ಘಂಟಾಕರ್ಣ ಶಿವಾಚಾರ್ಯ ಅರ್ಥಾತ್, ಶ್ರೀಮಜ್ಜಗದ್ಗುರು ಭಗವತ್ಪಾದ ಶ್ರೀ ಏಕೋರಾಮಾರಾಧ್ಯರ ಪರಮಶಿಷ್ಯರೆನಿಸಿ, ಶ್ರೀಮಜ್ಜಗದ್ಗುರು ದೇವನ ಕೃಪಾಲಬ್ಧ ದಿವ್ಯಜ್ಞಾನ ಬಲದಿಂದ, ಶೈವ, ವೈಷ್ಣವ, ವೀರಶೈವ, ವೇದಾಂತ ಜನ್ಯ ದಿವ್ಯಜ್ಞಾನಾ ಮೃತಸಾಗರದ ಸೊಬಗನ್ನು ವಿಶಾಲಾರ್ಥ ಗರ್ಭಿತವಾದ ಸಂಜ್ಞೆಯಿಂದ ಪ್ರತಿಪಾದಿಸಿ, ಶಿವಸರ್ವೋತ್ತಮತ್ವವನ್ನು ಮನಮುಟ್ಟುವಂತೆ ಪ್ರಕಾಶಗೊಳಿಸಿ, ಧರ್ಮೋದ್ಧಾರ, ಲೋಕೋದ್ಧಾರ ಕಾರ್ಯವನ್ನೆಸಗಿ ಚಿರ ಸ್ಮರಣೀಯರೂ ವಂದನೀಯರೂ ಆಗಿರುವರು.

॥ ಅಗಸ್ತ್ಯಮುನಿ ಶಾರ್ದೂಲ । ಸಮಸ್ತಾಗಮ ಪಾರಗಃ ॥ ಎಂದು ಸ್ತುತ್ಯರಾದ ಹಾಗೂ ಸಪ್ತರ್ಷಿ ಮಂಡಲಕ್ಕೆ ಮಸ್ತಕಮಣಿಯಂತೆಸೆದು ಮಹಾ

ಮಹಿಮಾನ್ವಿತರೂ, ಅಗ್ರಜರೂ, ಅಯೋನಿಜರೂ, ಮುನಿಕುಲ ತಿಲಕರೆಂದೆನಿಸಿದ ಕಲಸೋದ್ಭವರಾದ ಆದಿ ಶ್ರೀ ಅಗಸ್ತ್ಯ ಮಹರ್ಷಿಗಳು.—

॥ ಸಚ್ಚಿದಾನಂದರೂಪಸ್ಯ । ಶಿವಸ್ಯಾಸ್ಯ ಸಮುದ್ಭವಂ ॥
ಭೂಲೋಕೇ ಸೋಮನಾಥಸ್ಯ । ಗರ್ಭಾವಿರ್ಭೂತಮೀಶ್ವರಂ ॥

ಎಂಬಂತೆ, ಶಿವಲಿಂಗ ಸಂಭವರೂ, ಸಚ್ಚಿದಾನಂದ ಸ್ವರೂಪಿಗಳೂ, ಪರಶಿವನ "ನ" ಕಾರಮಯ ಶಿವಪಂಚಾಕ್ಷರೀ ಮಹಾಮಂತ್ರಸ್ವರೂಪ ಸದ್ಯೋಜಾತ್ ಮುಖಾವಿರ್ಭೂತರೂ, ಪೃಥ್ವಿತತ್ವಕ್ಕೊಡೆಯರು ಪ್ರಥಮಾಶ್ರಮ ಸಂಭ್ರಮರೂ, ಆದ ಶ್ರೀ ಮಜ್ಜಗದ್ಗುರು ಸಾರ್ವಭೌಮರೆನಿಸಿದ ಭಗವತ್ಪಾದ ಶ್ರೀ ರೇಣುಕಾಚಾರ್ಯರ ಅಡಿದಾವರೆಗಳಲ್ಲಿ ಶರಣಾಗತರಾದ ಶ್ರೀ ಆಗಸ್ತ್ಯಮುನಿ ಶಾರ್ಧೂಲರು, ತಮ್ಮರ್ಧಾಂಗಿಯಾದ ಲೋಪಾ ಮುದ್ರಾದೇವಿಯೊಂದಿಗೆ ಶ್ರೀಮಜ್ಜಗದ್ಗುರು ಸಾರ್ವಭೌಮದೇವನ ಅಡಿದಾವರೆಗಳನ್ನು ಪುನಃ ಪುನಃ ಸ್ತುತಿಸುತ್ತಾ ॥ ಇಂದು, ಸಮಸ್ತಸುತೌಘ ವಂದಿತ । ಪದಯುಗನ ರೇಣುಕ ಗಣೇಶನ । ಸವಮಲ ದಿವ್ಯಚರಣಕಮಲಗಳ। ಸ್ತುತಿಸಿ ವಂದಿಪ ಭಾಗ್ಯವೆಮಗಾಯ್ತು ॥ ಎಂದು ಹರ್ಷಗೊಂಡು, ಶಿರಸಾಂಜಲಿ ಪುಟರಾಗಿ ಆನಂದಭಾಷ್ಪಗಳಿಂದ ಪುಳುಕಾಂಕಿತರಾದ ಮುನಿದಂಪತಿಗಳನ್ನು ಕಟಾಕ್ಷಿಸಿ, ಭಗವಾನ್ ರೇಣುಕ ಗಣೇಶನು ಶ್ರೀ ಸಿದ್ಧಾಂತ ಶಿಖಾಮಣಿ ನಾಮ ಶಿವಾದ್ವೈತ ಸುಧಾಮೃತ ಬೋಧೆಯಿಂದ ಅವರುಗಳನ್ನು ಕೃತಾರ್ಥರನ್ನಾಗಿ ಮಾಡಿ, ಜಗತ್ತಿನ ಬ್ರಹ್ಮ ಜಿಜ್ಞಾಸುಗಳಿಗೆ ಸುಜ್ಞಾನ ಭಂಡಾರದ ಆಗರವನ್ನು ತೆರೆದಿಟ್ಟು, ಆಧ್ಯಾತ್ಮಿಕ ಪ್ರಪಂಚವನ್ನು ಬೆಳಗಿಸಿ ಅನುಗ್ರಹಿಸಿರುವರು.

ಯೋಗೀಂದ್ರ ಮಹೋಜ್ವಲರೆನಿಸಿದ ಅದ್ವೈತಮತ ಸ್ಥಾಪನಾಚಾರ್ಯ, ಶ್ರೀ ಶೃಂಗೇರಿ ಶಾರದಾ ಪೀಠಾಧಿಪರಾದ ಭಗವತ್ಪಾದ ಆದಿ ಶ್ರೀ ಶಂಕರಾಚಾರ್ಯರು, ॥ ಶಂಕರಂ ಶಂಕರಾಚಾರ್ಯಂ । ಕೇಶವಂ ಬಾದರಾಯಣಂ ॥ ಸೂತ್ರಭಾಷ್ಯ ಕೃತೌವಂದೇ । ಭಗವಂತೌ ಪುನಃ ಪುನಃ ॥ ಎಂಬುವ ಜಗದ್ಗುರು ಆದಿಶಂಕರರು, ತಾವು, ಶ್ರೀಮತ್ ಕೈಲಾಸಾಧಿಪನಾದ ಸಾಕ್ಷತ್

ಶಂಕರನ ಅಂಶಾವತಾರಿಗಳಾದುದರಿಂದ, ತಮ್ಮ ದಿವ್ಯ ಜ್ಞಾನದೃಷ್ಟಿಯಿಂದ, —ಶುದ್ಧ ಬ್ರಹ್ಮಪರಾತ್ಪರ ಪರಶಿವ ಸದೃಶರೂ ಶ್ರೀ ಸೋಮೇಶ್ವರ ಮಹಾ ಶಿವಲಿಂಗ ಸಂಭವರಾದ ಶ್ರೀಮಜ್ಜಗದ್ಗುರು ಸಾರ್ವಭೌಮ ಶ್ರೀ ರೇಣುಕ ಪರಂಜ್ಯೋತಿಯನ್ನು ಸಂದರ್ಶಿಸಿ, ಅತುಲಾನಂದಭರಿತರಾಗಿ, ಸಿದ್ಧಕುಲ ಯೋಗೀಂದ್ರ ಮಹೋಜ್ವಲ ಶ್ರೀಮಜ್ಜಗದ್ಗುರು ಸಾರ್ವಭೌಮ ಶ್ರೀರೇವಣಸಿದ್ಧ ಮಹಾಯೋಗಿಂದ್ರರಿಂದ ಅನುಗ್ರಹಿಸಲ್ಪಟ್ಟ, ಶ್ರೀ ರತ್ನಗರ್ಭಗಣಪತಿಯನ್ನೂ ಮತ್ತೂ ಚಂದ್ರಮೌಳೀಶ್ವರ ಲಿಂಗವನ್ನೂ ಆದಿ ಶ್ರೀ ಶಂಕರಾಚಾರ್ಯರು ಪಡೆದು ಕೃತಕೃತ್ಯ ಭಾವದಿಂದ ಸ್ತುತಿಸಿ ॥ ಕಲ್ಯಾಣಕಲ್ಪತರುವೇ ಗುರವೇ । ಮೋಕ್ಷಗುರವೇ. ರೇಣುಕಾಯ । ಗಣಪಾಯನ ಮೋಸ್ತುತುಂಭ್ಯಂ ॥ ಎಂದು ಭಕ್ತ್ಯಾಕೊಂಡಾಡಿ ಧನ್ಯರೆನಿಸಿರುವರು.

ಸಾಲೋಕ್ಯ, ಸಾಮೀಪ್ಯ ಸಾರೂಪ್ಯ ಮತ್ತು ಸಾಯುಜ್ಯಗಳೆಂಬ ಪರಮೋತ್ಕೃಷ್ಟವಾದ ಚತುರ್ವಿಧ ಮೋಕ್ಷ ಸ್ಥಿತಿಗಳ ಪರಮ ಸಿದ್ಧಾಂತಗಳನ್ನು ಆದಿ ಶ್ರೀ ಶಂಕರಾಚಾರ್ಯರೂ, ಶ್ರೀರಾಮಾನುಜಾಚಾರ್ಯರೂ ಮತ್ತು ಶ್ರೀಮನ್ಮಧ್ವಾಚಾರ್ಯರುಗಳೂ ಸಹ ವಿಫುಲವಾಗಿ ಅವರವರಭಿಮತಗಳನ್ನು ತಂತಮ್ಮಿಂದ ರಚಿತವಾಗಿರುವ ಪ್ರಸ್ಥಾನ ತ್ರಯಂಗಳ ಮೇಲಿನ ಭಾಷ್ಯಾದಿಗಳಲ್ಲಿ ಅನುಕ್ರಮವಾಗಿ ಬೋಧಿಸಿ ಸ್ಥಾಪಿಸಿರುವವರಾದರೂ, ಇವರಲ್ಲೊಬ್ಬೊಬ್ಬರಿಗೂ ಮತಭೇದಗಳು ಇರುವುದಾಗಿ ಕಂಡುಬರುವುದು ಸರಿಯಷ್ಟೆ. ಮೇಲುದಹರಿಸಿದ ಪೂಜ್ಯ ಶ್ರೀ ವೇದವ್ಯಾಸಾಚಾರ್ಯರಿಂದ ಪ್ರಸ್ಥಾನತ್ರಯಂಗಳಿಗೆ ರಚಿತವಾಗಿರುವ ಮೂಲ ಅಂಶಗಳನ್ನೇ ಪರಮಾಧಾರವಾಗಿಟ್ಟುಕೊಂಡು ತಂತಮ್ಮ ಘನ ಭಾಷ್ಯಾದಿಗಳನ್ನು ಪೃಥಕ್, ಪೃಥಕ್ಕಾಗಿ ರಚಿಸಿ ಭಿನ್ನ ಭಿನ್ನ ಸಿದ್ಧಾಂತಗಳನ್ನು ಪ್ರತಿಪಾದಿಸಿರುವರು.

"ಲೋಕೋ ಭಿನ್ನರುಚಿಃ" ಎಂಬಂತೆ, ತ್ರಿಮತಸ್ಥ ಆಚಾರ್ಯ ಮಹಾಪುರುಷರುಗಳಿಗಿಂತಲೂ ಅತ್ಯಂತ ಪೂರ್ವಜರೆನಿಸಿದ ಅನೇಕಾನೇಕ ಋಷಿ ಮಹರ್ಷಿಗಳಲ್ಲೂ, ಪರಮಾತ್ಮ ತತ್ವ ನಿರ್ಣಯ ಮತ್ತೂ ಬ್ರಹ್ಮ

ಸಾಕ್ಷಾತ್ಕಾರಾದಿ ಆತ್ಮದರ್ಶನಾನುಭವಗಳಲ್ಲಿ ಭಿನ್ನ ಭಿನ್ನ ಅಭಿಪ್ರಾಯಗಳು ತಲೆದೋರಿ ಪೃಥಕ್ ಸಿದ್ಧಾಂತಗಳಿಂದ ಕೂಡಿದ್ದರೆಂಬ ಮಹದಂಶವನ್ನು, ಶ್ರೀ ವ್ಯಾಸಾಚಾರ್ಯರೂ ಸಹ ಶೃತಪಡಿಸಿರುವರು. "ಏಕಂ ಸತ್ ವಿಪ್ರಾಬಹುಧಾ ವದಂತಿ" ಎಂಬ ಉಪನಿಕ್ಷತ್ಪ್ರಮಾಣವೇ ಇದಕ್ಕೆ ಬಲವಾದ ಸಾಕ್ಷಿಯಾಗಿರುತ್ತೆ. ಪುಷ್ಪದಂತನು ತನ್ನಿಂದ ರಚಿತವಾದ ಶಿವಮಹಿಮ್ನಾ ಸ್ತುತಿಯಲ್ಲಿ ಇದೇ ಅಂಶವನ್ನು.-

॥ ತ್ರಯೀಃಸಾಂಖ್ಯಂ ಯೋಗಃ । ಪಶುಪತಿಮತಂ ವೈಷ್ಣವಮಿತಿ ।
ಪ್ರಭಿನ್ನೇ ಪ್ರಸ್ಥಾನೆ ಪರಮಿದಮದಃ ಪಥ್ಯಮಿತಿಚ ॥
ರುಚೀನಾಂ ವೈಚಿತ್ರ್ಯಾದೃಜು । ಕುಟಿಲ ನಾನಾ ಪಥಜುಷಾಂ ।
ನೃಣಾಮೇಕೋ ಗಮ್ಯಸ್ತ್ವಮಸಿ ಪಯಸಾಮರ್ಣವ ಇವ ॥

ಎಂದು ಪ್ರತಿಪಾದಿಸಿರುವನು. ಋಕ್, ಯಜುರ್, ಸಾಮವೇದ ತ್ರಯಂಗಳಲ್ಲೂ, ಶೈವ ವೈಷ್ಣವ ಶಾಸ್ತ್ರಗಳಲ್ಲೂ ಮತ್ತೂ ಹಲವಾರು ಆಸ್ತಿಕಮತ ಪ್ರವಾಹಗಳು ನಾನಾ ರೂಪ ನಾಮಾದಿಗಳಿಂದ ನಾನಾ ಮುಖವಾಗಿ ವಿಸ್ತರಿಸಿ ಪ್ರವಹಿಸಿದರೂ, ಇವುಗಳು ಭಿನ್ನ ಭನ್ನ ಅಭಿಮತಗಳುಳ್ಳವುಗಳಾಗಿದ್ದರೂ, ರುಚಿಭೇದಗಳಿಂದ ಕಂಡುಬಂದರೂ, "ಹೇ ಪ್ರಭೋ! ಭೋಜಗದೀಶ್ವರಾ!! ಭೋ ಭೋ! ಶ್ರೀ ವಿಶ್ವೇಶ್ವರಾ ॥ ನೃಣಾಮೇಕೋಗಮ್ಯಸ್ತ್ವಮಸಿ ಪಯಸಾಮರ್ಣವ ಇವ", ಎಲ್ಲಾ ನದ ನದಿಗಳೂ ಕೊನೆಯಲ್ಲಿ ಮಹಾ ಸಮುದ್ರದಲ್ಲಿ ಒಂದುಗೂಡಿ ರಂಜಿಸುವಂತೆ, ಸರ್ವ ಆಸ್ತಿಕ ವೃಂದದವರೂ ಕೊನೆಯಲ್ಲಿ ಸರ್ವಲೋಕ ಶರಣ್ಯನಾದ ಪರಾಕಾಶ ಸ್ವರೂಪಿಯಾದ ನಿನ್ನ ದಿವ್ಯ ಪರಂಜ್ಯೋತಿಯಲ್ಲಿ ವಿಲೀನರಾಗಿ ಶಿವಾನಂದ ಸಾಗರದಲ್ಲಿ ಸಮರಸವನ್ನು ಹೊಂದುವರೆಂದು ಅಮೋಘವಾಗಿ ಪುಷ್ಪದಂತನು ಸ್ತುತಿಸಿರುವನು. ಯಾವ ಮತ ಸ್ಥಾಪನಾಚಾರ್ಯರೇ ಆಗಲಿ, ಮತ ತತ್ವಭೋಧಕರೇ ಆಗಲಿ, ಮತೋಧ್ಧಾರಕರೇ ಆಗಲಿ ಅವರವರ ಸಿದ್ಧಾಂತಗಳನ್ನು ಪೃಥಕ ಪೃಥಕ್ಕಾಗಿ

ಬೋಧಿಸಿದರೂ || ಯತ್ಸಾರಭೂತಂ ತದುಪಾಸಿತವ್ಯಂ || ಅಂದಹಾಗೆ, ಅಖಿಲ ಆಸ್ತಿಕ ಮತಗಳ ಸಾರಾಂಶ ಸಾಧುವೇ ಆಗಿದ್ದು ಉಪಾಸನೀಯವೆನಿಸಿರುವುದು.

|| ಆಕಾಶಾತ್ಪತಿತಂ ತೋಯಂ | ಯಥಾಗಚ್ಛತಿ ಸಾಗರಂ |
ಸರ್ವದೇವ ನಮಸ್ಕಾರಃ | ಈಶ್ವರೋ ಪ್ರತಿಗಚ್ಛತಿ ||

ಎಂಬ ಸ್ತುತಿಯಂತೆ, ಆಕಾಶದಿಂದ ಧರಣಿಗೆ ಬಿದ್ದ ಮಳೆಯ ನೀರು ನಾನಾ ರೂಪವಾಗಿ ನಾನಾ ದಿಕ್ಕುಗಳಲ್ಲಿ ಸಹಸ್ರಾರು ವೈಲಿಗಳು ಹರಿದು, ಧಾವಿಸಿ ಧುಮಿಕ್ಕಿ ಓಡಿ, ಗಂಗಾ, ಯಮುನಾ, ಸರಸ್ವತಿ, ಗೋದಾವರಿ, ಕೃಷ್ಣಾ, ತುಂಗ, ಭದ್ರಾ ಬ್ರಹ್ಮಪುತ್ರಾ, ಸಿಂಧೂ, ಸಾವಿತ್ರಿ, ಗಾಯತ್ರಿ, ಕಾವೇರಿ, ಮಹಾನದಿಗಳೆಂಬ ನಾನಾ ಅಭಿಧಾನಗಳ ಪ್ರವಾಹದಿಂದ ಉಕ್ಕಿ ನದ ನದಿ ರೂಪದಲ್ಲಿ ಪ್ರವಹಿಸಿ, ಕಡಲೊಡಲಿನಲ್ಲಿ, " ಸಿಂಧೋಸ್ಸರಿದ್ವಲ್ಲಭಂ " ಅಂದ ಹಾಗೆ ನದಿಗಳಿಗೆಲ್ಲಾ ಪತಿ ಎನಿಸಿದ ಸಾಗರದಲ್ಲಿ ಸಂಗಮವಾಗುವಂತೆ–ಅಧ್ಯಾತ್ಮಿಕ ಕ್ಷೇತ್ರದಲ್ಲಿ ಭಕ್ತ ಜನಸ್ತೋಮದ ಹೃದಯ ಭೂಮಿಕೆಯಲ್ಲಿ, ಅವಿಚ್ಛಿನ್ನವಾಗಿ ಪ್ರವಹಿಸುವ ದಿವ್ಯ ಪ್ರವಾಹಗಳೆಂದರೆ—ದ್ವೈತ, ವಿಶಿಷ್ಟಾದ್ವೈತ, ಶೈವ ಸಿದ್ಧಾಂತ, ಅದ್ವೈತ, ಶಿವಾದ್ವೈತ (ಶಕ್ತಿವಿಶಿಷ್ಟಾದ್ವೈತ) ಗಳೆಂಬ ಪುಣ್ಯ ಪ್ರವಾಹಗಳ ತೋರ್ವಿಕೆ ಭಿನ್ನ ಭಿನ್ನ ಜ್ಞಾನಮಯವಾಗಿ ಬೆಳಗಿ, ಕರ್ಮ, ಭಕ್ತಿ ಜ್ಞಾನ ಸುಧಾಮೃತ ಕವಲುಗಳಿಂದ ಪ್ರಭಾವಾನ್ವಿತವಾದವುಗಳಾಗಿ ಮೇಲಿಂದ ಮೇಲೆ ಪ್ರವಹಿಸಿ, ಧರ್ಮ ಮೋಕ್ಷಗಳೆಂಬೆರಡು ದಡಗಳಿಂದ ಸಂರಕ್ಷಿಸಲ್ಪಟ್ಟು ಶಿವಾನಂದ ಸಾಗರದಲ್ಲಿ ಸಂಗಮವಾಗುವುವು.

ಯಥಾನದ್ಯಃ ಸ್ಯಂದಮಾನಾ ಸುಮುದ್ರೇ |
ಅಸ್ತಂಗಚ್ಛಂತಿ ನಾಮರೂಪೇ ವಿಹಾಯ ||
ತಥಾ ವಿದ್ವಾನ್ ನಾಮರೂಪಾದ್ವಿಮುಕ್ತಃ |
ಪರಾತ್ಪರಂ ಪುರುಷ ಮುಪೈತಿ ದಿವ್ಯಂ ||

ಯಾವ ರೀತಿ ಅನಂತ ನದಿಗಳು ಸಮುದ್ರವನ್ನು ಮುಟ್ಟುತ್ತಲೇ ತಂತಮ್ಮ ನಾಮರೂಪಗಳನ್ನು ಅಳಿದು, ರುಚಿಭೇದಗಳಿಂದಲೂ ದೂರವಾಗಿ, ಸಮುದ್ರದಲ್ಲಿ ವಿಲೀನವಾಗುವುವೋ, ಅದರಂತೆ ಎಲ್ಲಾ ಮತ ತತ್ವಗಳ ಸಾರವು (ಧರ್ಮವು) ಕರ್ಮ ಭಕ್ತಿ, ಜ್ಞಾನ ಪುಣ್ಯತಮ ಪ್ರವಾಹವಾಗಿದ್ದು, ಅಖಿಲಾಗಮಾಮ್ನಾಯಾದಿಗಳನ್ನು ಆಶ್ರಯಿಸಿ ಆತ್ಮೋದ್ಧಾರ ಪಥದಲ್ಲಿ ಪ್ರಗತಿಪರವಾಗಿ ಪ್ರವಹಿಸಿ, ಶಿವ ಸಮುದ್ರದಲ್ಲಿ ಸಂಗಮವಾಗುವುವು. ಜ್ಞಾನಮಯವಾಗಿ ಪ್ರಜ್ವಲಿಸುವ ಈ ಸಧ್ಧರ್ಮರೂಪ ಪುಣ್ಯಪ್ರವಾಹದಲ್ಲಿ ಯಾವ ಸಂಯಮಿ, ಸ್ಥಿತಪ್ರಜ್ಞನು, ಜೀವನ್ಮುಕ್ತನು, ಅಥವಾ ಶಿವಶರಣನು, ನಿಂದು ಮಿಂದು ಸ್ವಾನುಭವೈಕ್ಯವೇದ್ಯವೆನಿಸಿದ ಆತ್ಮಾನುಸಂಧಾನದಿಂದ, ನಾಮ ರೂಪ, ರುಚಿ ವಾಸನಾ ಸಂಸ್ಕಾರಗಳಿಂದ ಅತೀತನಾಗಿ, ಅಂತರಂಗದಲ್ಲಿ ಶಿವನನ್ನು ಸಾಕ್ಷಾತ್ಕರಿಸಿಕೊಳ್ಳುವನೋ, ಆ ಪುಣ್ಯಪುರುಷನು ॥ ವಿದ್ವಾನ್ ನಾಮರೂಪಾದ್ವಿಮುಕ್ತಃ । ಪರಾತ್ಪರಂ ಪುರುಷಮುಪೈತಿ ದಿವ್ಯಂ ॥ ಅಂದರೆ, ಶಿಖಿಯನ್ನು (ಜ್ಯೋತಿಯನ್ನು) ಮುಟ್ಟಿದ ಕರ್ಪೂರ ಜ್ಯೋತಿಯಾಗುವ ತೆರದಲ್ಲಿ, ಸಾಗರವನ್ನು ಮುಟ್ಟಿದ ನದಿ ಸಾಗರವಾಗುವಂತೆ, ಲಿಂಗವನ್ನು ಅಪ್ಪಿದ (ಮುಟ್ಟಿದ) ಶಿವಶರಣನು ಶಿವಮಯನೆನಿಸುವನು. ಈ ಮಹದಂಶವನ್ನು ಉಚ್ಛಧ್ವನಿಯಿಂದ ಪ್ರತಿಪಾದಿಸುತ್ತ ಶೃತಿಮಾತೆಯು—

॥ ಉಮಾಸಹಾಯಂ ಪರಮೇಶ್ವರಂ ।  
ಪ್ರಭುಂ ನೀಲಕಂಠಂ ಪ್ರಶಾಂತಂ ॥  
ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ ।  
ಸಮಸ್ತಸಾಕ್ಷಿಂ ತಮಸಃ ಪರಸ್ತಾತ್ ॥

ಎಂಬ ಶೃತ್ಯಾಧಾರ ಪರಮಪ್ರಮಾಣಾನುಸಾರವಾಗಿ ॥ ಬ್ರಹ್ಮವಿತ್ ಬ್ರಹ್ಮೈವಭವತಿ "—॥ಬ್ರಹ್ಮವನ್ನರಿತವನು ಬ್ರಹ್ಮವೇ ಆಗುವನು ಎಂಬಂತೆ ಮತ್ತೂ " ಮುಕ್ತಃ ಶಿವ ಸಮೋಭವೇತ್ " ಮುಕ್ತನಾದ ಮಹಾಪುರುಷನು ಶಿವಸದೃಶನೆನಿಸುವನು. ಅಂದರೆ ಲಿಂಗಾಂಗ ಸಮರಸದಲ್ಲಿ ವಿಲೀನಗೊಂಡು ಪ್ರಕಾಶಿಸುವನು.

ಮುಕ್ತನೆನಿಸಿದ ಶಿವಶರಣನು ಪರಿಪೂರ್ಣನೆನಿಸಿರುವನು. ಇವನು ಪ್ರಪಂಚದ ಜನಜೀವನದ ಮಧ್ಯೆ ಸಂಚರಿಸಿದರೂ ಕಾಮಾದಿಗಳು ಇವನನ್ನು ವಿಕಾರಗೊಳಿಸಲಾರವು. ಶ್ರೀಮದ್ಭಗವದ್ಗೀತೆಯ ಸಾಂಖ್ಯಯೋಗೋ ನಾಮ ದ್ವಿತೀಯಾ ಧ್ಯಾಯದ ಅಂತ್ಯದಲ್ಲಿ ಸ್ಥಿತಪ್ರಜ್ಞನ, ಅರ್ಥಾತ್ ಶಿವಶರಣನ ಮಹೋನ್ನತವಾದ ಅಂತರಂಗದ ನಿರ್ಮಲ ನಿಲುವನ್ನು ನಿರ್ದೇಶಿಸುತ್ತ—

## XXII

॥ ಆಪೂರ್ಯಮಾಣ ಮಚಲ ಪ್ರತಿಷ್ಠಂ ।
ಸಮುದ್ರಮಾಪಃ ಪ್ರವಿಶಂತಿ ಯದ್ವತ್ ॥
ತದ್ವತ್ಕಾಮಾಯಂ ಪ್ರವಿಶಂತಿ ಸರ್ವೇ ।
ಸಶಾಂತಿಮಾಪ್ನೋತಿ ನ ಕಾಮಕಾಮಿ ॥

ಯಾವ ರೀತಿ ಮಹಾಸಾಗರವು ಎಲ್ಲ ಕಡೆಗಳಿಂದಲೂ ಅಗಾಧವಾದ ಜಲ ಸಮುದಾಯದಿಂದ ಪೂರ್ಣವಾಗಿ ತುಂಬಿ ತುಳುಕುತ್ತಲಿದ್ದರೂ, ನಾಲ್ಕು ದಿಕ್ಕುಗಳಿಂದಲೂ ಮೇಲಿಂದ ಮೇಲೆ ಪ್ರವಹಿಸಿ ಬರುವ ಅನಂತಾನಂತ ನದ ನದಿಗಳ ನೀರಿನ ಸಮುದಾಯದಿಂದ ಕಂಪಿತವಾಗದೆ (ಏರಿಳಿತಗಳಿಲ್ಲದೆ) ಶಾಂತ ವಾಗಿಯೂ ಗಂಭೀರವಾಗಿಯೂ ಇರುವುದೋ ಅದರಂತೆ, ಜಿತೇಂದ್ರಿಯ ನೆನಿಸಿದ ಶಿವಶರಣನು ಐಕ್ಯಸ್ಥಲದ ಎಲ್ಲೆಯಲ್ಲಿ ಹೆಜ್ಜೆಯೂರಿದವನಾಗಿ, ಸರ್ವಾಂಗ ಲಿಂಗಮಯನಾಗಿ ಶಿವಲಿಂಗ ಭೋಗೋಪಭೋಗಿಯಾಗಿ, ಶಿವ ಸಮುದ್ರದಂತೆ ಪರಿಪೂರ್ಣಸ್ಥಿತಿಯಲ್ಲಿ ವಿರಾಜಿತನಾಗಿರುವುದರಿಂದ, ಕ್ಷುದ್ರ ಕಾಮಾದಿಗಳು ಇವನನ್ನು ಹೊಕ್ಕರೂ, ನಿಶ್ಚೇಷ್ಟಿತಗಳಾಗುವುದರಿಂದ, ಜೀವನ್ಮುಕ್ತ ಮಹಾಪುರುಷನನ್ನು (ಶಿವಶರಣನನ್ನು) ಕಾಮ, ರಾಗ, ಮೋಹಾ ದಿಗಳು ವಿಕಾರಗೊಳಿಸದೆ ಸಮುದ್ರವನ್ನು-ಹೊಕ್ಕ ನದಿಗಳು ಅಲ್ಲೇ ಅಸ್ತಂಗತ ವಾಗುವಂತೆ, ಸಮಸ್ತ ಆಶಾಪಾಶಾದಿ ಕಾಮುಗಳು ಹಾಗೂ ವಿಷ ಯಾದಿಗಳು ಶಿವಶರಣನ ಚಿದ್ಘನತೇಜೋಕಾಂತಿಯಲ್ಲ ನಿರ್ಲಿಪ್ತತೆಯಿಂದ ಹೇಳಲು ಹೆಸರಿಲ್ಲದೆ ಲಯಗೊಳ್ಳುವುವು.

ಕಾಮಾದಿಗಳನ್ನು ಅನುಭವಿಸಿಯೇ ಅವುಗಳನ್ನು ಪೂರ್ಣ ತೃಪ್ತತೆಯಿಂದ ಅಡಗಿಸಿ, ಜಯಿಸುವೆನೆಂಬುದು ಗಗನಕುಸುಮವನ್ನು ಪಡೆಯುವೆನೆಂಬಂತೆಯೇ ಸರಿ.

ಕಾಮಾದಿಗಳು ಬಲಿಷ್ಠವಾದವುಗಳಾದುದರಿಂದ ಇಂದ್ರಿಯಗಳು ಅವುಗಳಿಗೆ ಒಮ್ಮೆ ತುತ್ತಾದರೆ, ಚೇತರಿಸಿಕೊಳ್ಳುವುದು ಕಷ್ಟವಾಗಿ, ದುರ್ಗತಿಗೀಡಾಗಿ ನರಕವನ್ನನುಭವಿಸಬೇಕಾಗುವುದು. ಗೀತಾಚಾರ್ಯನು ಈ ಅಂಶವನ್ನು ಪ್ರತಿಪಾದಿಸುತ್ತ—

॥ ಕಾಮಏಷ ಕ್ರೋಧ ಏಷ । ರಜೋಗುಣ ಸಮುದ್ಭವಃ ।
ಮಹಾಶನೋಮಹಾಪಾಪ್ಮಾ । ವಿದ್ಧ್ಯೇನ ಮಿಹವೈರಿಣಂ ॥

ಸತ್ವ ರಜಸ್ತ ಮೋಗುಣಗಳಲ್ಲಿ ನಡುವೆನಿಸಿದ, ರಜೋಗುಣವೆಂಬ ತಾಯಿಯ ಗರ್ಭದಲ್ಲಿ ಉದಯಿಸಿದ ಅವಳ ಮಕ್ಕಳಂತೆ ಕಾಮ, ಕ್ರೋಧ ಎಂಬೆರಡು ಗುಣಗಳು ಎದ್ದುಕಾಣುವುವು. ಕಾಮಕ್ಕೆ ಆಶಾಭಂಗದಿಂದ ಘಾತಕವೇರ್ಪಟ್ಟಾಗ, ಕ್ರೋಧವು, ಕಾಮದ ಪ್ರತಿಬಂಧಕಕ್ಕೆ ಅಡಚಣೆಮಾಡಿದವರ ಮೇಲೆ ಕಾಳಸರ್ಪದಂತೆ ಸಿಟ್ಟುಗೆದ್ದು ಹಾಯುವುದು. ಒಟ್ಟಿನಲ್ಲಿ ಮನುಷ್ಯನನ್ನು ತುಳಿದು ನಾಶಗೊಳಿಸಲು ಕಾಮಕ್ರೋಧಗಳಿಗಿಂತಲೂ ಕ್ರೂರ ಶತೃಗಳು ಇನ್ನಿಲ್ಲ. ಇವು ಒಳಗಿನ ಶತೃಗಳಾದ್ದರಿಂದ, ಇವರನ್ನು ಸುಲಭದಲ್ಲಿ ಗೆಲ್ಲಲು ಕಷ್ಟಕರವೆನಿಸಿದೆ. ನರಕದ ಮಹಾಗಾಢಾಂಧವಾದ ಮನೆಗೆ ಇವೆರಡೂ ಮಹಾದ್ವಾರಗಳೆನಿಸಿರುವುವು. ಇವುಗಳನ್ನು ಬ್ರಹ್ಮಜಿಜ್ಞಾಸುವಾದವನು ಮೊದಲು ಗೆಲ್ಲಬೇಕು. ಜಯಿಸಿ ಜಿತೇಂದ್ರಿಯನಾಗಬೇಕು. ಸರ್ವಪ್ರಯತ್ನದಿಂದ ದಿನಂಪ್ರತಿ ಜೀವನದ ಹೋರಾಟದ ಮಧ್ಯೆ ಇವುಗಳನ್ನು ದಿಟ್ಟತನದಿಂದಲೂ ವಿರಕ್ತಿಯಿಂದಲೂ ನಿರೋಧಿಸಿ ಜಯಶೀಲನಾಗಬೇಕು. ಹಾಗಿಲ್ಲದೆ ಕಾಮನೆಗಳನ್ನು ಮನಬಂದಂತೆ ಯಥೇಷ್ಟವಾಗಿ ಅನುಭವಿಸಿ, ಅದರ ಸೊಕ್ಕು ಮುರಿಯುವೆನೆಂದು ಯತ್ನಿಸಿದರೆ, ಉರಿಯುವ ಕೊಳ್ಳಿಯನ್ನು ಮತ್ತಷ್ಟು ಪ್ರಜ್ವಲಗೊಳಿಸಿದಂತಾಗುವುದೇ ಹೊರತು ನಿರ್ನಾಮ ಮಾಡಲು ಸಾಧ್ಯವಿಲ್ಲ.

॥ ನ ಜಾತುಕಾಮಃ ಕಾಮಾನಾ ।
ಮುಪಭೋಗೇನ ಶಾಮ್ಯತಿ ॥
ಹವಿಷಾ ಕೃಷ್ಣವರ್ತ್ಮೇವ ।
ಭೂಯ ಏವಾಭಿವರ್ಧತೇ ॥

ಯಜ್ಞಕುಂಡದಲ್ಲಿ ಝಳ ಝಳಾತ್ಕಾರದಿಂದ ಝಳಿಸುವ ಹೋಮಾಗ್ನಿ ಜ್ವಾಲೆಗಳನ್ನು ಆರಿಸುವುದಕ್ಕಾಗಿ, ಟನ್ನು ಟನ್ನುಗಟ್ಟಲೆ ಅಥವಾ ಕೊಡ ಗಟ್ಟಲೆ ತುಪ್ಪವನ್ನು ಸುರಿದು, ಅಗ್ನಿಯನ್ನು ಆರಿಸುವವನ ಪ್ರಯತ್ನದಂತೆ ಆಗುವುದು. ಹೋಮಕುಂಡದಲ್ಲಿ ತುಪ್ಪವನ್ನು ಸುರಿದಷ್ಟು ಅಗ್ನಿಜ್ವಾಲೆಗಳು ಜ್ವಲ ಜ್ವಲಾಯಮಾನವಾಗಿ ಕೋಟಿಗಟ್ಟಲೆ ವೃದ್ಧಿಹೊಂದುವುವೇ ವಿನಃ ತಣ್ಣಗಾಗುವುದೆಲ್ಲಿಯದು. ಅದರಂತೆ ಕಾಮನೆಗಳನ್ನು ನೂರು ವರುಷ ಅಥವಾ ಯಾವಜ್ಜೀವವೂ ಅನುಭವಿಸಿಯೇ ಅವುಗಳನ್ನು ಮರ್ಧನ ಮಾಡುವೆನೆಂಬುವನ ಮಾತು, ಹೋಮಾಗ್ನಿಯಲ್ಲಿ ಆಹುತಿಗೈದ ಆಜ್ಯ (ತುಪ್ಪ)ದಂತೆ, ಮಾನವನು ಕಾಮಾದಿಗಳಿಗೆ ಪೂರ್ತಿ ಆಹುತಿಯಾಗಿ (ಬಲಿಯಾಗಿ) ನಾಶವಾಗುವನು. ಇದರಿಂದ ॥ ಚಿತ್ತವೃತ್ತಿ ನಿರೋಧಃ ಯೋಗಃ ॥ ಎಂಬ ಪತಂಜಲಿ ಯೋಗಶಾಸ್ತ್ರದಂತೆ, ಕಾಮನೆಗಳನ್ನು ಪ್ರಯತ್ನ ಪೂರ್ವಕ ನಿರೋಧಿಸಿ, ಜಿತೇಂದ್ರಿಯನಾಗಿ, ಗುರು ಕರುಣೆಯಿಂದ ಆತ್ಮಕಲ್ಯಾಣವನ್ನು ಮಾನವನು ಹೊಂದಬೇಕು. ಇದೊಂದೇ ದಾರಿ. ಬೇರೆ ಯಾವ ಮಾರ್ಗಗಳಿಂದಲೂ ಸಾಧ್ಯವಿಲ್ಲ.

ಶಿವಲಿಂಗರೂಪಿ ಪರಶಿವನೇ ಗುರುರೂಪದಲ್ಲಿ ಅವತರಿಸಿ ಕರುಣಾರಸ ಪೂರಿತನಾಗಿ, ಶಿಷ್ಯ ಕೋಟಿಗಳ ಉದ್ಧಾರಕ್ಕೆಂದು ಜಗತ್ತಿನಲ್ಲಿ ಎಲ್ಲೆಡೆಗಳಲ್ಲೂ ಸಂಚರಿಸುತ್ತಿರುವನು. ಮಾನವರು ಭಕ್ತಿಭಾವದಿಂದ ಕೊಡುವ ಕಾಣಿಕೆಗಳನ್ನು ಭಕ್ತೋದ್ಧಾರಕ್ಕಾಗಿ ವಿನಿಯೋಗಿಸಿ ಗುರುವು ವಿರಕ್ತಿಯಿಂದ ವಿರಾಜಿಸುವನು.

ಹರ ಗುರು ಜಂಗಮರು ಅಭಿನ್ನರು, ॥ಏಕಮೂರ್ತಿ ಸ್ತ್ರಯೋಭಾಗಃ॥ ಎಂಬ ಶಾಸ್ತ್ರಪ್ರಮಾಣಾನುಸಾರ, ಹರನೇ ತನ್ನಿಚ್ಛೆಯಿಂದ ಗುರುವಾಗಿಯೂ ಜಂಗಮನಾಗಿಯೂ ಅವತರಿಸಿರುವನು. ಇದು ಪರಮಾತ್ಮನ ಭಕ್ತೋದ್ಧಾರ ಲೀಲೆ.

ಹರನೊಳಗೆ ಗುರು ಗುರುವಿನೊಳಗೆ ಹರ ಹಾಲು ಬೆಣ್ಣೆಯಂತೆ, ಹಾಲುಕೆನೆಯಂತೆ, ತುಪ್ಪ ತುಪ್ಪದ ಕಣಗಳಂತೆ, (ತುಪ್ಪದಲ್ಲಿ ಮಿಣುಗುವ ಹಳಿಗಳಂತೆ) ಮಕರಂದದ ಕುಸುಮಗಳಂತೆ. ಹರ ಗುರುಗಳು ಅಭಿನ್ನರು, ಪರಮ ಪೂಜ್ಯರು. ಶಿವನು ಲಿಂಗರೂಪಿ ಸದಾಶಿವನೆನಿಸಿರುವನು. ಗುರುವು ಶಿವಲಿಂಗಮುಖದಿಂದ ಹೊರಹೊಮ್ಮಿ ಧರ್ಮಜ್ಞಾನಗಳ ದಿವ್ಯದ್ಯೋತಕನೆನಿಸಿರುವನು. ಜಂಗಮನು ಲಿಂಗಕ್ಕೆ ಮುಖವೆನಿಸಿರುವನು. ॥ ಗುರು ಸಾಕ್ಷಾತ್ ಪರಬ್ರಹ್ಮ ॥ ಎಂಬ ಶಾಸ್ತ್ರದ ಅಧಿಕೃತವಾಣಿಯಂತೆ ಹರನೇ ಗುರುವೆನಿಸಿರಲು, ಗುರು ಹರನನ್ನು ತೋರಿಸುವ ಪರಂಜ್ಯೋತಿ ಎನಿಸಿರುವನು. ಈ ಕಾರಣದಿಂದಾಗಿ, ಜಗಜ್ಯೋತಿ ಬಸವಣ್ಣ ॥ ಶಿವ ಪಥವನರಿವೊಡೆ ಗುರುಪಥವೇ ಮೊದಲು ॥ ಎಂದು ತಮ್ಮ ಅಮೃತವಾಣಿಯಿಂದ ಜಗತ್ತಿಗೆ ಬೋಧಿಸಿರುವರು. ಗುರುತತ್ವ ಸ್ವರೂಪವನ್ನು ಕಂಡನುಭವಿಸಿದ ಹಿರಿಯ ಮಹಾವ್ಯಕ್ತಿ ಶ್ರೀ ಬಸವಣ್ಣ. ಲೋಕದವರಿಗೆ ಪರಮ ಆದರ್ಶಪುರುಷ. ಸದ್ಗ್ರುಹಸ್ತನಾಗಿ ಬಾಳಿ, ರಾಜಾಸ್ಥಾನದಲ್ಲಿ ಮಂತ್ರಿಮರ್ಯಸ್ಥಾನದ ಪ್ರಭುತ್ವವನ್ನು ದಕ್ಷತೆಯಿಂದ, ಹಾಗೂ ವಿಚಕ್ಷಣ ಸಂಪನ್ನನಾಗಿ ನಿರ್ವಹಿಸಿ, "ಸರ್ವೇಜನಾಃ ಸುಖಿನೋ ಭವಂತು, ಅಹಿಂಸೋ ಪರಮೋ ಧರ್ಮಃ, ಧರ್ಮೋರಕ್ಷತಿ ರಕ್ಷಿತಃ," ಎಂಬಿವೇ ಜನಾನುರಾಗದ ಸನಾತನ ತತ್ವದ ತಳಹದಿಯ ಮೇಲೆ ನಿಂತು, ಸಾಮಾಜಿಕ, ರಾಜಕೀಯ, ಧಾರ್ಮಿಕ ಕ್ಷೇತ್ರಗಳಲ್ಲಿ ಮೇಲುಕೀಳೆಂಬ ಭೇಧ ಭಾವವಳಿದು ಕೃಷಿಗೈದು, ಶಿವಾದ್ವೈತ ಮಯ ಬೆಳೆಯನ್ನು ಸೊಂಪಾಗಿ ಬೆಳೆದು, ಗುರುಕಟಾಕ್ಷಲವಲೇಶ ಬಲದಿಂದ ಹರನ ಕಂಡು ಕೂಡಲ ಸಂಗಮೇಶ್ವರನಲ್ಲಿ, ಎಂಥ ಯೋಗಿಗೂ ಅಪ್ರಾಪ್ಯವಾದ ಶಿವಯೋಗದಿಂದ ಪ್ರಾಪ್ತವಾದ, ಲಿಂಗಾಂಗ ಸಾಮರಸ್ಯಾತ್ಮಕ ನಿತ್ಯ ಸುಖ, ನಿಜಾನಂದ ಭರಿತರಾಗಿ ನಿಜೈಕ್ಯರಾಗಿರುವರು.

ಸದ್ಗ್ರುಹಸ್ಥನು ಜೀವಿತಕಾಲದಲ್ಲಿ ಸಾಮಾಜಿಕ ರಾಜಕೀಯ ಮತ್ತೂ ಧಾರ್ಮಿಕ ಕ್ಷೇತ್ರಗಳಲ್ಲಿ ಶ್ರೀಬಸವಣ್ಣನವರು ತೋರಿಸಿಕೊಟ್ಟಿರುವ ರಾಜಮಾರ್ಗದಲ್ಲಿ ನಡೆದು ಕೀರ್ತಿಶೇಷನಾಗಿ, ಶಿವಶರಣ " ತಾ ಎಲ್ಲರಿಗೂ ಕಿರಿಯ " ಎಂಬ ನಮ್ರಭಾವದಿಂದಲೂ ನಿಷ್ಪ್ರುಹದಿಂದ ದುಡಿದು, ಕ್ರಮೇಣ ಆ ದುಡುಮೆಯ ಫಲ

ವಾಗಿ ಜನಾನುರಾಗದಿಂದ, ಶಂಕರತ್ವದ ಮಟ್ಟಕ್ಕೇರಿ ಆತ್ಮಜ್ಯೋತಿಯ ಬೆಳಕನ್ನು ಕಂಡು ಗುರು ಪಥದಿಂದ ಶಿವಪಥವನ್ನು ಮುಟ್ಟಿ ಮುಕ್ತನಾಗಬೇಕು.

ಹರಗುರುಗಳು ಅಭಿನ್ನರು, ಗುರುವೇಹರ ಹರನೇಗುರು ಎಂಬ ನಿಗಮಾಗಮಗಳ ಸಿದ್ಧಾಂತವನ್ನು ಮನಮುಟ್ಟುವಂತೆ ಜಗತ್ತಿನ ಜನಕೋಟಿಗೆ ಪ್ರತ್ಯಕ್ಷ ಪ್ರಮಾಣದಂತೆ ತೋರ್ಪಡಿಸಲು :-

॥ ಶ್ರೀ ಶೈಲಸ್ಯೋತ್ತರೇ ಭಾಗೇ । ತ್ರಿಲಿಂಗ ವಿಷಯೇ ಶುಭೇ ।
ಕುಲ್ಯಪಾಕಾಭಿಧಂ ಪುಣ್ಯಕ್ಷೇತ್ರ ಮೇಕಂ ವಿರಾಜತೇ ॥
॥ ಸೋಮೇಶ್ವರಾಭಿಧಾನಸ್ಯ । ತತ್ರ ವಾಸವತೋಮಮ ।
ಅಸ್ಪೃಶನ್ಮಾನುಷಂಭಾವಂ । ಲಿಂಗಾತ್ ಪ್ರಾದುರ್ಭವಿಷ್ಯಸಿ ॥
॥ ಮದೀಯ ಲಿಂಗಸಂಭೂತಂ । ಮದ್ಭಕ್ತ ಪರಿಪಾಲಕಂ ।
ವಿಸ್ಮಿತಾ ಮಾನುಷಾಃ ಸರ್ವೇ । ತ್ವಾಂ ಭಜಂತು ಮದಾಜ್ಞಯಾ ॥

ಶಿವಯೋಗಿ ಶಿವಾಚಾರ್ಯರಿಂದ ರಚಿತವಾಗಿರುವ ಸಿದ್ಧಾಂತ ಶಿಖಾಮಣಿಯಲ್ಲಿ ಪ್ರೋಕ್ತವಾದೀ ಶ್ಲೋಕ ಭಾಗಗಳಿಂದ ವ್ಯಕ್ತವಾಗುವುದೇನೆಂದರೆ, ಶ್ರೀಮತ್ಕೈಲಾಸದ ಒಡ್ಡೋಲಗದಲ್ಲಿ ಪರಮೇಶ್ವರನು ರೇಣುಕಗಣಾಧೀಶ್ವರನನ್ನು ವೀಕ್ಷಿಸಿ-

" ರೇಣುಕಾ ! —

॥ ಸೋಮೇಶ್ವರಾಭಿಧಾನಸ್ಯ । ತತ್ರ ವಾಸವತೋ ಮಮ ।
ಅಸ್ಪೃಷನ್ಮಾನುಷಂ ಭಾವಂ । ಲಿಂಗಾತ್ಪ್ರಾದುರ್ಭವಿಷ್ಯಸಿ ॥

ಮುಕ್ತಿ ಸ್ಥಳಗಳಲ್ಲಿ ಮೊಂದಾದ ಶ್ರೀಶೈಲ ಕ್ಷೇತ್ರಕ್ಕೆ ಉತ್ತರ ದಿಕ್ಕಿನಲ್ಲಿ, ತ್ರಿಲಿಂಗ ರಾಜ್ಯವೆಂದು ವಿಖ್ಯಾತವಾದ ಆಂದ್ರದೇಶದ ಮಡಲಿನಲ್ಲಿ, ಉತ್ತಮವಾದ ಕುಲ್ಯ ಪಾಕ (ಕೊನಲುಪಾಕಿ) ಕ್ಷೇತ್ರ ಪ್ರವಿರಾಜಮಾನ ಶ್ರೀ ಸೋಮೇಶ್ವರ ಲಿಂಗದಲ್ಲಿ ॥ತತ್ರ ವಾಸವತೋ ಮಮ॥ ನಾನು (ಅಂದರೆ ಶಿವನು ತನ್ನ ಸಾನ್ನಿಧ್ಯವಿಶೇಷ ದಿಂದ) ಸುಪ್ರಸನ್ನನಾಗಿ ನೆಲಸಿರುವುದರಿಂದ, ನನ್ನ ಶಿವಲಿಂಗ ಮುಖದಿಂದ, ತೇಜೋ ವಿಶೇಷ ಶರೀರಧಾರಿಯಾಗಿ ಅವತರಿಸಿ ಜಗತ್ತಿನ ಮಾನವಕೋಟಿ

ಗಳಲ್ಲಿ ಸಂಚರಿಸಿ ಶಿವಾದ್ವೈತ ಸಿದ್ಧಾಂತವನ್ನು ಭುವಿಯಲ್ಲಿ ಸ್ಥಾಪಿಸಿ, ಸನಾತನವಾದ ಧರ್ಮೋದ್ಧಾರದಿಂದ ಲೋಕ ಕಲ್ಯಾಣವನ್ನೆಸಗುವಂತೆ ಆಣತಿಯಿತ್ತುದುದಾಗಿ ಶಿವಾಗಮುಗಳು ಮುಕ್ತಕಂಠದಿಂದ ಸಾರುತ್ತಿರುವುವು. ವಚನವಾಙ್ಮಯ ಕ್ಷೇತ್ರದಲ್ಲಿ ಕಂಗೊಳಿಸುವ, ವಚನೋಪನಿಷತ್ತುಗಳಿಗೆ ಶಿವಾಗಮುಗಳೇ ಮೂಲಾಧಾರವೆಂಬ ಅಂಶ ಗಮನಾರ್ಹ. ಶಿವಾಗಮುಗಳು ಶಿವನ ಸಾನ್ನಿಧ್ಯದ ವಿಷಯದಲ್ಲಿ.—

‖ ಲಿಂಗಮಧ್ಯೆ ಮಹಾದೇವಃ ।
ಸಾಕ್ಷಾನ್ನಿತ್ಯಂ ವ್ಯವಸ್ಥಿತಃ ‖
ಅನುಗ್ರಹಾಯ ಲೋಕಾನಾಂ ।
ತಸ್ಮಾಲ್ಲಿಂಗಂ ಪ್ರಪೂಜಯೇತು ‖

ಸದಾಶಿವನು ಲೋಕಾನುಗ್ರಹಾರ್ಥ ಶಿವಲಿಂಗದ ಮಧ್ಯೆ ಸದಾ ಸುಪ್ರಸನ್ನತೆಯಿಂದ ಸುಮುಖಿಯಾಗಿ ಪ್ರಸನ್ನನಿರುವನೆಂಬ ದೃಢ ಅಂಶವನ್ನು ಘಂಟಾಘೋಷವಾಗಿ ಶೃತಪಡಿಸುತ್ತಿರುವುವು. ಇದಕ್ಕನುಗುಣವಾಗಿ ರೇಣುಕಗೀತೆಯಲ್ಲಿ ಪ್ರೋಕ್ತವಾದಂತೆ ಶಿವನು, ತಾನು ಸೋಮೇಶ್ವರನೆಂಬ ಹೆಸರಿನಲ್ಲಿ ಸೋಮನಾಥ ಲಿಂಗದಲ್ಲಿ ಸತತ ಪ್ರಸನ್ನನಾಗಿರುವುದಾಗಿ ಅಪ್ಪಣೆಕೊಡಿಸಿರುವನು. ಶಿವನ ವಾಣಿಯೇ ಶಿವಾಗಮುಗಳೆಂಬ ಅಂಶ ಇದರಿಂದ ಸ್ಪಷ್ಟಪಡುವುದು. "ಗುರು ಸಾಕ್ಷಾತ್ಪರಬ್ರಹ್ಮ," ಎಂಬ ಆಗಮಾಮ್ನಾಯಗಳ ಅಭಯವಾಣಿ, ಹರನೇ ಗುರುವು ಗುರುವೇ ಹರನು, ಹರಗುರುಗಳು ಅಭಿನ್ನರು ಹಾಗೂ ಆಕಾಶವತ್ ಪರಮ ಪೂಜ್ಯರೂ ಮತ್ತೂ ಓಂಕಾರ ಸದೃಶರೆಂಬ ವಚನೋಪನಿಷತ್ತುಗಳ ತಿರುಳನ್ನುವೊಳಗೊಂಡಿರುವುದು ಸರಿಯಷ್ಟೆ. ಶಿವನೇ ಶಿವಲಿಂಗ ಮುಖದಿಂದ ಲೋಕಾನುಗ್ರಹಾರ್ಥ ಗುರು ರೂಪದಲ್ಲಿ ಆವಿರ್ಭವಿಸಿ, ಲಿಲಾ ವಿಭೂತಿಯೋಗದಿಂದ ಸನ್ಮಾರ್ಗ ಸುಜ್ಞಾನಗಳನ್ನು ಜನರಿಗೆ ಬೋಧಿಸಿ, ವಿಶ್ವ ಕಲ್ಯಾಣವನ್ನೆಸಗಿ, ಶಿವಲಿಂಗದಲ್ಲೇ ಅಂತರ್ಧಾನವನ್ನು ಹೊಂದಿ ಸದಾ ಶಿವ

ಲಿಂಗದಲ್ಲಿ ಅಂತರ್ಯಾಮಿಯಾಗಿ ಸುಪ್ರಸನ್ನನಾಗಿರುವನೆಂಬ ಮಹದಂಶ ಜನ ಪ್ರಿಯವಾದುದಾಗಿ, ಆಧ್ಯಾತ್ಮ ಕ್ಷೇತ್ರದಲ್ಲಿ ವಿಶ್ವಸನೀಯವಾದ ಪರಮಪೂಜ್ಯ ಅಂಶವೇ ಆಗಿರುತ್ತೆ.

" ದೇವನೊಬ್ಬ ನಾಮಹಲವು " ಎಂಬಂತೆ, ಅನಂತಾನಂತ ಪ್ರಿಯಕರ ವಾದ ರೂಪನಾಮಗಳಿಂದ ದೇವರನ್ನು ಖಂಡಾಂತರ ನಿವಾಸಿಗಳು ವಿಧ ವಿಧ ವಾಗಿ ಭಾವಿಸಿ ಭಜಿಸಿ ಪೂಜಿಸಿ ಸ್ತುತಿಸುತ್ತಿದ್ದರೂ, ಅವಿಷ್ಟೂ ಒಬ್ಬನೇ ಆದ ಜಗನ್ನಿಯಾಮಕನೆಂದೆನಿಸಿದ ಸರ್ವೇಶ್ವರನಿಗೆ ಹೇಗೆ ಸಲ್ಲುವುವೋ, ಅದರಂತೆ ಅನಂತಾನಂತ ರೂಪನಾಮಾದಿಗಳಿಂದ, ದೇಶ ವಿದೇಶಗಳಲ್ಲಿ ವಿರಾಜಿಸುವ ಆ ಆ ಮತ ಸಂಪ್ರದಾಯಗಳ ಪೂಜ್ಯ ಗುರುಗಳು ಅಸಂಖ್ಯರಾಗಿದ್ದರೂ, ದೇವ ನೊಬ್ಬ ಎಂಬಂತೆ " ಗುರುವೊಬ್ಬ " ಎಂದು ಸ್ಥಿರಪಡುವುದು. ಇದು " ಗುರು ಸಾಕ್ಷಾತ್ಪರಬ್ರಹ್ಮ " ಎಂಬ ಶಾಸ್ತ್ರಸಮ್ಮತಕ್ಕೂ ಹರನೇ ಗುರು ವೆಂಬ ಲೋಕಾನು ಸಮ್ಮತವಾದ ಸಿದ್ಧಾಂತ, ಸಂಪ್ರದಾಯಗಳಿಗೂ ಅಚ್ಚುಮೆಚ್ಚಾಗಿ ಸರ್ವಾನುಮತ ಹಿತದೃಷ್ಟಿ, ವೊಮ್ಮತದಿಂದ ವೊಪ್ಪುವ ಸಮಂಜಸ ಅಂಶವೆನಿಸಿ ರುವುದು. ಗುರುದೇವನು ಮಹಾದೇವನಲ್ಲಿ ಅಂತರ್ಗತನಾಗಿ, ಪುಷ್ಪವೂ ಮತ್ತ ದರ ಗಂಧವೂ, ವೊಂದರಲ್ಲೊಂದು ಅಭಿನ್ನತೆಯಿಂದ ಹೊರಬೀಳುವಂತೆ, ಶಿವ ಲಿಂಗದಲ್ಲಿ ಅವ್ಯಕ್ತನಾದ ಪರಶಿವನು, ಗುರು ರೂಪದಿಂದ ಲೋಕಾನುಗ್ರಹಾರ್ಥ ಆವಿರ್ಭವಿಸುವನೆಂಬ ಮಹದಂಶವನ್ನು, ಶಿವಾಗಮೋಪನಿಷದಾದಿಗಳು ಮುಕ್ತ ಕಂಠದಿಂದ ಸಾರುತ್ತಿರುವುವು, ಇದೇ ಅಂಶವು ॥ ಸೋಮೇಶ್ವರಾಭಿಧಾನಸ್ಯ । ತತ್ರವಾಸವತೋಮಮ ॥ ಎಂದೂ ಮತ್ತೂ ॥ ಲಿಂಗಾತ್ಪ್ರಾದುರ್ಭವಿಷ್ಯಸಿ ॥ ಎಂಬಿವೇ ಈಶ್ವರ ಪ್ರೋಕ್ತ ದೇವವಾಣಿ, ಸಿದ್ಧಾಂತಶಿಖಾಮಣಿಯಲ್ಲಿ ಪ್ರೋಕ್ತ ವಾಗಿರುವುದು, ವೇದ ವೇದಾಂತ ಸಿದ್ಧಾಂತಾ ಗಮೋಪನಿಷದಾದಿಗಳಿಗೆ ಅನ್ವಯಿಸಿದ ಶಾಸ್ತ್ರಸಮ್ಮತವಾದ ಸತ್ಯಾಂಶ ವೆನಿಸಿರುವುದು.

ಜಗತ್ತಿನಲ್ಲಿ ಪ್ರಜ್ವಲಿಸುವ ಶಿವಲಿಂಗಗಳು ಅನಂತಕೋಟಿ ಎನಿಸಿ ಪೂಜ್ಯವೂ ಸ್ತುತ್ಯಾರ್ಹವುಗಳಾಗಿ ಅಲ್ಲಲ್ಲಿ ಪರಿಶೋಭಿಸುತ್ತಲಿದ್ದರೂ, ಅವು ಗಳೆಲ್ಲವೂ ಒಬ್ಬನೇ ಆದ ಪರಶಿವನ ಪ್ರತೀಕವೆನಿಸಿರುವುವು. ಪರಶಿವನು ತಾನೇ

ಗುರು ರೂಪದಿಂದ ಹೊರಹೊಮ್ಮಿ ಜಗದ್ಗುರು ಎನಿಸಿ ಜೀವಕೋಟಿಗಳನ್ನು ಅಜ್ಞಾನಾನಂಧಕಾರ ತಿಮಿರದಿಂದ ಉದ್ಧರಿಸಿ ಅವರನ್ನು ಪ್ರಜ್ಞಾನಾನಂದ ಘನ ಮಯರನ್ನಾಗಿಸಿ, ತನ್ನ ಕರುಣಾಕಟಾಕ್ಷದಿಂದ ಭಕ್ತೋದ್ಧರಣ ಕಾರ್ಯದಲ್ಲಿ ಅಭಯಃ ಪ್ರದನೆನಿಸಿರುವನು. ಅಂದಬಳಿಕ ಕುಲ್ಯಪಾಕ ವಿರಾಜಮಾನ ಶ್ರೀ ಸೋಮೇಶ್ವರ ಮಹಾಲಿಂಗ ಮುಖದಿಂದ—

॥ ಅಥ ತ್ರಿಲಿಂಗ ವಿಷಯೇ ಕುಲ್ಯಪಾಕಾಭಿಧೇ ಸ್ಥಲೇ ।
ಸೋಮೇಶ್ವರ ಮಹಾಲಿಂಗಾ ತ್ಪ್ರಾದುರಾಸೀತ್ ಸ ರೇಣುಕಃ ।
ಭಸ್ಮೋದ್ಧೂಲಿತ ಸರ್ವಾಂಗಂ ಸಾರ ರುದ್ರಾಕ್ಷ ಭೂಷಣಂ ।
ಜಟಾ ಮುಕುಟ ಸಂಯುಕ್ತಂ ತ್ರಿಪುಂಡ್ರಾಂಕಿತ ಮಸ್ತಕಂ ॥
ಶಿವಾದೇಶಾನು ಸಾರೇಣ ಶಿವಲಿಂಗಾದಿಹಾ ಭವಂ ।
ನಾಮ್ನಾ ರೇಣುಕ ಸಿದ್ಧೋಽಹಂ ಸಿದ್ಧ ಸಂತಾನ ನಾಯಕಃ ॥ ಸಿ. ಶಿ.

ಎಂದು ಸಿದ್ಧಾಂತ ಶಿಖಾಮಣಿಯಲ್ಲಿ ಸ್ತುತ್ಯವಾದಂತೆ ಭಸಿತ ಖುದ್ರಾಕ್ಷ, ಲಿಂಗ ಧಾರಣೆ ಯಿತ್ಯಾದಿಗಳಿಂದ ವಿರಾಜಿತರಾದ ಶ್ರೀಮಜ್ಜಗದ್ಗುರು ರೇಣುಕಾ ಚಾರ್ಯರು, ಶಿವಲಿಂಗ ಮುಖದಿಂದ—

॥ ವಿಸ್ಮಿತಾಃ ಪ್ರಾಣಿನಃ ಸರ್ವೇ ।ಬಭೂವು ರತಿತೇಜಸಂ॥ ಭುವನಾಂಡ ಕೋಟಿಗಳನ್ನು ಬೆಳಗುವಂಥಾ ದೇದೀಪ್ಯಕಾಂತಿಯಿಂದ ಆವಿರ್ಭಾವ ವಾದು ದನ್ನು ಕಂಡ ಸರ್ವರೂ ಆಶ್ಚರ್ಯ ಚಕಿತಮಾನಸರಾಗಿ, ಅನನ್ಯ ಭಕ್ತಿಭಾವ ದಿಂದ ಶಿರಬಾಗಿ ಶರಣಾಗತರಾದರು.

ಶ್ರೀ ಸೋಮೇಶ್ವರ ಲಿಂಗಮುಖದಿಂದ ಆವಿರ್ಭವಿಸಿದ ಸರ್ವಶಕ್ತನಾದ ಜಗದ್ಗುರು ರೇಣುಕನು, ಅನಂತಕೋಟಿ ಲಿಂಗಗಳಲ್ಲಿಯೂ ತಾನೇ ತಾನಾಗಿ ರಂಜಿಸಿ ಸುಪ್ರಸನ್ನತೆಯಿಂದ ವಿರಾಜಿತನಾಗಿರುವನೆಂದ ಬಳಿಕ, ಸುಪ್ರಸಿದ್ಧ ವಾದ ಕೂಡಲ ಶ್ರೀ ಸಂಗಮೇಶ್ವರ ಮಹಾಲಿಂಗದ ಮಧ್ಯೆ ಭಗವಾನ್ ಚಿನ್ಮ ಯನಾದ ಶ್ರೀಮಜ್ಜಗದ್ಗುರು ರೇಣುಕನು " ಗುರುಃ ಸಾಕ್ಷಾತ್ಪರಬ್ರಹ್ಮ" ನೆನಿಸಿ,

ಸುಪ್ರಸನ್ನಭಾವದಿಂದ ವಿರಾಜಿತನಾಗಿರುವುದು ಸತ್ಯವೆ ಅಷ್ಟೆ. ದೃಢಭಕ್ತಿಭಾವದಿಂದ ನೋಡುವ ಶಿವಶರಣನಿಗೆ ಈ ಗೂಢವಾದ ದೈವೀರಹಸ್ಯ ವೇದ್ಯವೆನಿಸುವುದು.

ಗುಹ್ಯತಮವಾದೀ ದೈವ ರಹಸ್ಯವನ್ನು ತಮ್ಮ ಸ್ವಾನುಭೂತಿಯಿಂದ ಮನಗಂಡ, ಮಹಾನುಭಾವ ಬಸವಣ್ಣ – ಶಿವಪಥವನರಿಯಲು ಗುರುಪಥವೇ ಮೊದಲು – ಎಂದು ಮನಮುಟ್ಟುವಂಥಾ ಮುದ್ದು ನುಡಿಯನ್ನು ನುಡಿದು ಗುರು ಕರುಣೆಗೆ ಪಾತ್ರನಾಗಿ, ಶ್ರೀ ಕೂಡಲ ಸಂಗಮೇಶ್ವರನಲ್ಲಿ ಐಕ್ಯನಾಗಿ ಅಮರನೆನಿಸಿರುವನು.

ಜಗದ್ಗುರು ರೇಣುಕನು ಸಾಕ್ಷಾತ್ ಶಿವನ ಮಹಿಮೆಯಷ್ಟೇ ಮಹಿಮಾ ಸಂಪನ್ನನು. ಲಂಕಾಧಿಪನಾದ ದಶಕಂಠ ರಾವಣನು ಮಹಾ ಶಿವಭಕ್ತ. ಲಂಕೆಯಲ್ಲಿ ನವಕೋಟಿ ಶಿವಾಲಯಗಳನ್ನು ಸ್ಥಾಪಿಸಬೇಕೆಂದು ಸಂಕಲ್ಪಿಸಿ ಆರುಕೋಟಿ ಸ್ವರ್ಣ ಖಚಿತವಾದ ಶಿವಾಲಯಗಳನ್ನು ನಿರ್ಮಾಣಮಾಡಿದ್ದನು. ರಾವಣನು ಶಿವಪೂಜಾದುರಂಧರನು. ಲಂಕೆಯಸುತ್ತಲೂ ಎತ್ತನೋಡಿದರೂ ದೇವಾಲಯ ಶಿವಾಲಯಗಳೇ. ಅಷ್ಟರಲ್ಲಿ ಸೀತಾಪಹರಣ ದೋಷದಿಂದ ಗ್ರಸ್ತನಾದ ರಾವಣಾಸುರನು, ಇನಕುಲ ತಿಲಕನಾದ ಶ್ರೀ ರಾಮಚಂದ್ರಮೂರ್ತಿಯಿಂದ ಪ್ರಯೋಗಿಸಲ್ಪಟ್ಟ ಶ್ರೀರಾಮ ಬಾಣಕ್ಕೆ ಆಹುತಿಯಾಗಿ, ಈರೈದು ಶಿರಗಳುಳ್ಳ ರಾವಣನು ನೆಲಕ್ಕುರುಳಿ—

॥ ಸತುರಾಮ ಶರಾವಿದ್ಧಃ । ಕಂಠಸ್ಖಲಿತ ಜೀವಿತಃ ॥ ಕೇವಲ ಕಂಠಗತಃ ಪ್ರಾಣನಾಗಿದ್ದ ವೇಳೆಯಲ್ಲಿ, ತನ್ನೆದುರಿಗೆ ಕೋದಂಡಪಾಣಿಯಾದ ಶ್ರೀ ರಾಮನ ಪಕ್ಕದಲ್ಲಿ ನಿಂತಿದ್ದ ಅನುಜ ವಿಭೀಷಣನನ್ನು ನೋಡಿ, "ಮುಂದೆ ನೀನೇ ಲಂಕೇಶನಾಗುವೆಯಾದ್ದರಿಂದ, ಹೇ ತಮ್ಮ! ವಿಭೀಷಣಾ !

॥ ನವಕಂ ಲಿಂಗಕೋಟೀನಾಂ । ಪ್ರತಿಷ್ಠಾಪ್ಯ ಮಹಸ್ಥಲೇ ।
ಇತಿ ಸಂಕಲ್ಪಿತಂ ಪೂರ್ವಂ । ಮಯಾತದವ ಶಿಷ್ಯತೇ ॥
ಕೋಟಿಷಟ್ಕಂತು ಲಿಂಗಾನಾಂ । ಮಯಾ ಸಾಧು ಪ್ರತಿಷ್ಠಿತಂ ॥
ಕೋಟಿತ್ರಯಂ ತು ಲಿಂಗಾನಾಂ । ಸ್ಥಾಪನೀಯ ಮತಸ್ತ್ವಯಾ ॥

ನವಕೋಟಿ ಶಿವಲಿಂಗಗಳನ್ನು ಲಂಕೆಯಲ್ಲಿ ಸ್ಥಾಪಿಸಬೇಕೆಂಬ, ಬೃಹತ್ ಸಂಕಲ್ಪ ಮಾಡಿ ಇಲ್ಲಿವರವಿಗೆ ಆರುಕೋಟಿ ಶಿವಲಿಂಗಗಳನ್ನು ಸ್ಥಾಪಿಸಿರುವೆನು. ಉಳಿದಿರುವ ಮೂರುಕೋಟಿ ಶಿವಲಿಂಗಗಳನ್ನು ನನ್ನ ಸಹೋದರನಾದ ನೀನು ಲಂಕೆಯಲ್ಲಿ ಸ್ಥಾಪಿಸಿ ನನ್ನಭೀಷ್ಟವನ್ನು ಈಡೇರಿಸೆಂದು ಉಸುರಿ ಅಸು ನೀಗಿದನು.

ಭಾವಜ್ಞನೂ, ಧರ್ಮ ಜ್ಞನೂ, ವೈಷ್ಣವಭಕ್ತ ಶಿಖಾಮಣಿಯೂ ಆದ ದಾನ ವೇಂದ್ರ, ವಿಭೀಷಣ ಚಕ್ರವರ್ತಿ, " ಜೇಷ್ಠ ಭ್ರಾತಾ ಪಿತೃಸಮಾನಃ " ಎಂಬಂತೆ, ಅಣ್ಣನನ್ನು ಪೂಜ್ಯ ತಂದೆಯಂತೆ ಭಾವಿಸಿ, ರಾವಣೇಶ್ವರನ ಸತ್ಸಂಕಲ್ಪವನ್ನು ಈಡೇರಿಸುವ ಚಿಂತೆಯಲ್ಲಿ ಸದಾ ತಪ್ತನಾಗಿದ್ದನು.

ಒಮ್ಮೆ ಪಂಚ ಪಂಚ ಉಷಃ ಕಾಲದಲ್ಲಿ ಧ್ಯಾನಾಸಕ್ತನಾಗಿದ್ದ ವಿಭೀಷಣನ ಕಣ್ಣಿಗೆ, ಸ್ವೇಚ್ಛಾನಿರ್ಮಿತ ದಿವ್ಯ ತೇಜೋಮಯ ಶರೀರ ಧಾರಿಗಳಾದ ಭಗವತ್ಪಾದ ಜಗದ್ಗುರು ಶ್ರೀ ರೇಣುಕಾಚಾರ್ಯರು

॥ ಸ್ವಚ್ಛಂದಾಚಾರ ರಸಿಕಃ । ಸ್ವೇಚ್ಛಾನಿರ್ಮಿತ ವಿಗ್ರಹಃ ।
ಆಸಸಾದ ಪುರೀಂಲಂಕಾಂ । ರೇಣುಕೋ ಗಣನಾಯಕಃ ॥
॥ ತಮಾಗತಂ ಮಹಾಭಾಗಂ । ಸರ್ವಾಗಮ ವಿಶಾರದಂ ।
ವಿಭೀಷಣಃ ಸಮಾಲೋಕ್ಯ । ಸೌಧಂ ಪ್ರಾವೇಶಯನ್ನಿಜಂ ॥

ಆಕಾಶ ಮಾರ್ಗವಾಗಿ ಹೋಗುತ್ತಿರುವುದನ್ನು ವೀಕ್ಷಿಸಿದ ಲಂಕಾಧಿಪನು ಫಾಲಾಕ್ಷನಾದ ಶ್ರೀ ರೇಣುಕರನ್ನು ಭಕ್ತ್ಯಾ ಪ್ರಾರ್ಥಿಸಿದಂತೆ, ಶ್ರೀ ಮಜ್ಜಗದ್ಗುರು ದೇವನು ಲಂಕಾಪಟ್ಟಣವನ್ನು ಹರ್ಷದಿಂದ ಪ್ರವೇಶಿಸಲು, ವಿಭೀಷಣನು ಅತ್ಯಂತ ಭಕ್ತ್ಯಾದರಗಳಿಂದ ಆಚಾರ್ಯ ದೇವೋತ್ತಮನನ್ನು ಮಂಗಳ ವಾದ್ಯಂಗಳೊಂದಿಗೆ ವಿಜೃಂಭಣೆಯಿಂದ ತನ್ನ ರಾಜಧಾನಿಗೆ ಆಹ್ವಾನಿಸಿಕೊಂಡು, ಅರಮನೆಯೊಳಗೆ—

ಭದ್ರಾಸನೇ ಮಹಾರಮ್ಯೇ । ನಿವೇಶ್ಯ ಗಣನಾಯಕಂ ।
ಅರ್ಘ್ಯಪಾದ್ಯಾದಿಭಿಃ ಸರ್ವೇ । ರುಪಚಾರೈರ ಪೂಜಯತ್ ॥

ಶ್ರೀಮದ್ರೇಣುಕ ಜಗದ್ಗುರು ಸಾರ್ವಭೌಮನ ಆಗತಾನೆ ಅರಳುತ್ತಿರುವ ಕೋಮಲತರ ಕಮಲಗಳ ಸೌಂದರ್ಯವನ್ನೂ ಹಾಗೂ ಅರುಣೋದಯದಕಾಂತಿಯನ್ನೂ ತಿರಸ್ಕರಿಸುವಂಥ—ಹಿರಣ್ಮಯ ಪಾದಕಮಲಗಳನ್ನು, ಕನಕ ಕುಂಭಗಳಲ್ಲಿ ತುಂಬಿದ ಗಂಗೋದಕದಿಂದ ಅಭಿಷೇಕಿಸಿ, ಪೂಜಿಸಿ ನಮಸ್ಕರಿಸಿ, ಸ್ತುತಿಸಿ, "ಭೋ ಭೋ ಜಗದ್ಗುರುವರೇಣ್ಯಾ! ಶರಣ ಜನರ ಸದು ಹೃದಯ! ಕಮಲದೊಳು ಪರಿಶೋಭಿಸುತ್ತಿಹುದು। ನಿನ್ನಯ ದಿವ್ಯಪಾದ" ಎಂದು ವಿಧ ವಿಧವಾಗಿ ಕೊಂಡಾಡಿ, ತಾನು ಧನ್ಯನಾದೆನೆಂತಲೂ ಲಂಕಾಪಟ್ಟಣವು ಪವಿತ್ರವೆನಿಸಿತೆಂದು ಆನಂದಭಾಷ್ಪಗಳಿಂದ ಪುಳುಕಾಂಕಿತಗೊಂಡು ಬದ್ಧಾಂಜಲಿಪುಟನಾಗಿ, ತನ್ನಣ್ಣನ ಅಭೀಷ್ಟವನ್ನು ಸ್ವಾಮಿಯಲ್ಲಿ ನಮ್ರಭಾವದಿಂದ ಅರಿಕೆ ಮಾಡಿಕ್ಕೊಂಡನು. ಭಗವತ್ಪಾದ ಶ್ರೀಮಜ್ಜಗದ್ಗುರು ಸಾರ್ವಭೌಮ ರೇಣುಕಾಚಾರ್ಯರ ದಿವ್ಯ ಅಡಿದಾವರೆಗಳನ್ನು ವಿಧ ವಿಧ ಬಿಲ್ವ, ತುಳಸಿ, ಜಾಜಿ, ಮಲ್ಲಿಗೆ, ರೋಜಾ ಇತ್ಯಾದಿ ಪುಷ್ಪಗಳಿಂದಲೂ, ಬಾಡದ ಅನುಭಾವ ಪುಷ್ಪಗಳಿಂದಲೂ ಅನನ್ಯ ಭಕ್ತಿ ಭಾವದಿಂದ ಪೂಜಿಸಿದ ವಿಭೀಷಣನು—

॥ ತಥಾಪಿ ಪ್ರಾರ್ಥನೀಯಂ ಮೇ। ಕಿಂಚಿದಸ್ತಿ ಗಣೇಶ್ವರ।
ಸುಕೃತೇ ಪರಿಪಕ್ವೇಹಿ ಸ್ವ। ಯಂ ಸಿದ್ಧ್ಯತಿ ವಾಂಛಿತಂ ॥

ರಾವಣೋ ಹಿ ಮಮ ಭ್ರಾತಾ। ಶಿವಭಕ್ತ ಶಿಖಾಮಣಿಃ।
ಅದೃಷ್ಟ ಶತೃಸಂಬಾಧಂ। ಶಸಾಸ ಹಿ ಜಗತ್ರಯಂ ॥

ಸ ತು ಕಾಲವಶೇನೈವ ಸ್ವ। ಚಾರಿತ್ರ ವಿಪರ್ಯಯಾತ್।
ರಣೇ ವಿಷ್ಣ್ವವ ತಾರೇಣ। ರಾಮೇಣ ನಿಹತೋಭವತ್ ॥

ಭೋ ಭಗವನ್! ಕಾಲಕ್ರಮೇಣದಲ್ಲಿ ಮಾಗಿದ ಹಣ್ಣು ಮರದಿಂದ ತಾನಾಗಿ ಕಳಚಿಬೀಳುವಂತೆ, ಪುಣ್ಯವು ಪರಿ ಪಕ್ವವಾಗಲು ಮನೋರಥಗಳೆಲ್ಲಾ ತಾವಾಗಿಯೇ ಸಿದ್ಧಿಸುವುವು. ನಮ್ಮಣ್ಣನ ಮಹೋನ್ನತವಾದ

ಕೋರಿಕೆಯನ್ನು ನೆರವೇರಿಸಲು ಸರ್ವ ಸಮರ್ಥನಾದ ಮಹದಾಚಾರ್ಯ ಶ್ರೇಷ್ಠನು ನೀನಾಗಿರುವೆ. ಗುರೋ !

॥ ಶಿವ ಶಾಸ್ತ್ರ ವಿಶೇಷಜ್ಞ । ಶಿವಜ್ಞಾನ ನಿಧಿರ್ಭವಾನ್ ।
ಆಚಾರ್ಯಭಾವ ಮಾಸಾದ್ಯ । ಮಮ ಪೂರಯ ವಾಂಛಿತಂ ॥

ನೀನು ಕೃಪೆಮಾಡಿ ಮೂರು ಕೋಟಿ ಶಿವಲಿಂಗಗಳನ್ನು ಏಕ ಕಾಲದಲ್ಲಿ ನನ್ನೀ ಲಂಕೆಯಲ್ಲಿ ಸ್ಥಾಪಿಸಿ ಮೂರುಕೋಟಿ ಗುರು ರೂಪದಲ್ಲಿ ನನಗೆ ದರ್ಶನಭಾಗ್ಯ ವನ್ನಿತ್ತು ಕಟಾಕ್ಷಿಸೆಂದು.ಅನನ್ಯಭಾವದಿಂದ ಕೈಜೋಡಿಸಿ ಪ್ರಾರ್ಥಿಸಿಕೊಂಡನು.

॥ ತಸ್ಯೇತಿ ವಚನಂ ಶ್ರುತ್ವಾ । ರಾಕ್ಷಸೇಂದ್ರಸ್ಯ ಧೀಮತಃ ।
ತಥೇತಿ ಪ್ರತಿ ಶುಶ್ರಾವ ಸ । ರ್ವಜ್ಞೋ ಗಣನಾಯಕಃ ॥

ಧರ್ಮಜ್ಞನೂ ಭಾವಜ್ಞನೂ ಕೃತಜ್ಞನೂ ಆದ ವಿಭೀಷಣನ ಪ್ರಾರ್ಥನಾನುಸಾರ, ಜಗದ್ಗುರು ರೇಣುಕನು–

॥ ತತ್ರ ಸಂತುಷ್ಟ ಚಿತ್ತಸ್ಯ ಪೌಲಸ್ತ್ಯಸ್ಯೇಷ್ಟ ಸಿದ್ಧಯೇ ।
ಕೋಟಿತ್ರಯಂತು ಲಿಂಗಾನಾಂ । ಯಥಾಶಾಸ್ತ್ರಂ ಯಥಾವಿಧಿ ॥
॥ ತ್ರಿಕೋಟ್ಯಾಚಾರ್ಯರೂಪೇಣ । ಸ್ಥಾಪಿತಂ ತೇನ ತತ್‌ಕ್ಷಣೇ ॥

ಸಂತುಷ್ಟ ಚಿತ್ತನಾದ ವಿಭೀಷಣನ ಮನೋರಥ ಸಿದ್ಧಿಗಾಗಿ – ಭಗವಾನ್ ಜಗದ್ಗುರು ರೇಣುಕಾಚಾರ್ಯರು, ತಮ್ಮ ಪವಿತ್ರವಾದ ಘನ ಸಂಕಲ್ಪ ಮಾತ್ರೇಣ ಸಿಂಹಾಸನಾರೂಢರಾಗಿದ್ದ, ಆ ಸ್ಥಲದಲ್ಲೇ, ಏಕ ಕಾಲದಲ್ಲಿ ಮೂರುಕೋಟಿ ಶಿವಲಿಂಗಗಳನ್ನು ಸ್ಥಾಪಿಸಿ ಮೂರುಕೋಟಿ ಗುರುರೂಪ ಗಳನ್ನು ತೋರಿ, ಶಿವಾಗಮೋಕ್ತಿ ವಿಧಿಗನುಸಾರ ಆಗಲೇ ವಿಧಿವತ್ತಾಗಿ ಮಂಗಳ ಕಾರ್ಯವನ್ನು ನೆರವೇರಿಸಿ, ಜಗನ್ಮಂಗಳಗುರು ಮೂರಿ ಯಾಗಿ, ॥ಗುರೂಣಾಂ ಗುರುಃ ॥ ಎಂಬ ಗುರುತರವಾದ ಅಘಟನಾಘಟನ ಶಕ್ತಿ ಸಂಪನ್ನ ನೆನಿಸಿದ ಗುರುದಕ್ಷಿಣಾಮೂರ್ತಿಯೆಂದರೆ, ಜಗದ್ಗುರು ಸಾರ್ವಭೌಮ ಶ್ರೀ ರೇಣುಕನೇ ಆಗಿರುವನು.

## ಪ್ರಸ್ತಾವನೆ

ದೈವೀ ಶಕ್ತಿಯ ಅದ್ಭುತ ಪವಾಡವನ್ನು ಪ್ರತ್ಯಕ್ಷವಾಗಿ ಕಣ್ಣಿನಂಗಳು ಸಂತುಷ್ಟಿಗೊಳ್ಳುವಂತೆ ಸಾಕ್ಷಾತ್ತಾಗಿ ಬಹು ಎಚ್ಚರಿಕೆಯಿಂದ ವೀಕ್ಷಿಸಿದ ರಾವಣಾನುಜನು (ವಿಭೀಷಣನು) ರೇಣುಕಾಚಾರ್ಯ ಗುರುದೇವನ ಅಡಿ ದಾವರೆಗಳಲ್ಲಿ ಕಾಯಾ ವಾಚಾ ಮನಸಾ ತ್ರಿಕರಣ ಪೂರ್ವಕ ಶರಣಾ ಗತನಾಗಿ–

ಪ್ರಣತಂ ವಿನಯೋಪೇತಂ । ಪ್ರಹೃಷ್ಟಂ ರಾಕ್ಷಸೇಶ್ವರಂ ॥
ಅನುಗೃಹ್ಯ ಸ್ವ ಮಾಹಾತ್ಮ್ಯಾ । ದ್ರೇಣುಕೋಂತರ್ಹಿತೋ ಭವತ್ ॥
॥ ವಿಭೀಷಣೋಪಿ ಹೃಷ್ಟಾತ್ಮಾ । ರೇಣುಕಸ್ಯ ಪ್ರಸಾದತಃ ।
ಶಿವಭಕ್ತಿ ರಸಾಸಕ್ತಃ । ಸ್ಥಿರಂ ರಾಜ್ಯ ಮಪಾಲಯತ್ ॥

ನಯ ವಿನಿಯಾದಿಗಳಿಂದ ಪುನಃ ಪುನಃ ಭಕ್ತಿ ಪೂರ್ವಕ ಸಾಕ್ಷಾತ್ಪರ ಶಿವನೇ, “ ಆಚಾರ್ಯ ದೇವೋಭವ ॥ ಎಂಬಂತೆ ಗುರು ರೇಣುಕನಿವನೆಂದು, ತಲೆಬಾಗಿ ನಮಸ್ಕರಿಸಿ ಸ್ತುತಿಸುತ್ತಿರುವ ವಿಭೀಷಣನನ್ನು ಅನುಗ್ರಹಿಸಿ, ಅಂತರಿಕ್ಷದಲ್ಲಿ ಲಂಕಾಧೀಶ್ವರನು ನೋಡುತ್ತಿದ್ದ ಹಾಗೆ ಶ್ರೀ ರೇಣುಕೇಶ್ವರನು ಅಂತರ್ಧಾನ ನಾದನು.

## XXIII

ಭಕ್ತರ ಭಗವದ್ಭಕ್ತಿಗೆ ಬೆಣ್ಣೆಯಂತೆ ಕರಗುವ ಭಗವಂತನು, ಭಾವುಕರ ಸದ್ಭಾವದೊಳು ನಲಿದೊಲಿದು ಆವಿರ್ಭವಿಸುವ ಸಮಗ್ರಶಕ್ತಿಯುತನು ತಾನಾಗಿ ರಲು, ಕ್ಷಣಾರ್ಧದಲಿ, ಶಿವಯೋಗದಿಂದ ಮೂರು ಕೋಟಿ ಗುರುರೂಪವ ತಾಳಿ ಮೂರು ಕೋಟಿ ಶಿವಲಿಂಗಗಳನ್ನು ಲಂಕೆಯಲ್ಲಿ ಸ್ಥಾಪಿಸಿದ ಭಗವಾನ್ ಜಗದ್ಗುರು ರೇಣುಕನು, ಕಪ್ಪಡಿ ಕ್ಷೇತ್ರ ಪ್ರವಿರಾಜಮಾನ ಶ್ರೀ ಕೂಡಲಸಂಗ ಮೇಶ್ವರನಲ್ಲೂ ಪ್ರಸನ್ನನಾಗಿರುವನು. ಶ್ರೀ ಶೃಂಗೇರಿ ಶಾರದಾಪೀಠಾಧೀಶ್ವರ ಶ್ರೀಮಜ್ಜಗದ್ಗುರು ಆದಿ ಶಂಕರಾಚಾಯರಿಂದ ಮೊದಲು ಮಾಡಿ ಸತತ,—

॥ ತತಃ ಸ ರೇವಣಾಸಿದ್ಧ ಸಂ । ಪ್ರದಾಯ ಪ್ರವರ್ತಿನಾಂ ॥
ಶಂಕರಾಚಾರ್ಯ ವರ್ಯಾಣಾಂ । ಪಾರಂಪರ್ಯ ಕ್ರಮಾಗತಂ ॥

ಎಂದೂ ಮತ್ತೂ

॥ ರೇವಣಾಸಿದ್ಧ ಸಂಪ್ರಾಪ್ತಂ । ಚಂದ್ರಮೌಲೀಶ ಮಪ್ಯದಾತ್ ॥
ಅಖ್ಯಚ್ಛಾನೇನ ಲಿಂಗೇನ । ತವಾಭೀಷ್ಟಾಪ್ತಿ ರಿತ್ಯಪಿ ॥

ಎಂಬಿವೇ ಅನೇಕಾನೇಕ ಪ್ರಾಚೀನ ಮಹಾಕಾವ್ಯಗಳ ಆಧಾರಗಳನ್ನೊಳಗೊಂಡಂತೆ ಅದ್ವೈತ ಮತದ ಮೂಲಪೀಠಾಚಾರ್ಯರು, ಪರಂಪರಾನುಗತವಾಗಿ, ಶ್ರೀಮಜ್ಜಗದ್ಗುರು ಸಾರ್ವಭೌಮ ಶ್ರೀಮದ್ರೇಣುಕಾಚಾರ್ಯ ಅರ್ಥಾತ್ ಆದಿ ಶ್ರೀರೇವಣಸಿದ್ಧ ಶಿವಯೋಗೀಶ್ವರರಿಂದ ತಮ್ಮ ಪೀಠಕ್ಕೆ ಅನುಗ್ರಹೀತವಾಗಿರುವ ಯಾವ ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಭಕ್ತಿಪೂರ್ವಕ ತ್ರಿಕಾಲಗಳಲ್ಲೂ ಸತತ ಅನನ್ಯ ಭಾವೇನ ಪೂಜಿಸಿ ಕೃತಕೃತ್ಯರಾಗುತ್ತಿರುವರೋ, ಅಂಥಾ ಶ್ರೀ ಚಂದ್ರಮೌಳೀಶ್ವರ ಲಿಂಗದ ಮಧ್ಯೆ, ಶ್ರೀಮಜ್ಜಗದ್ಗುರು ರೇಣುಕನು ಚಿಜ್ಯೋತಿ ಚಿನ್ಮಯನಾಗಿ॥ ಗುರು ಸಾಕ್ಷಾತ್ಪರಬ್ರಹ್ಮ॥ ನೆನಿಸಿ, ರೇಣುಕ ಪಗಂಜೋತಿಯಾಗಿ ಸ್ವಯಂ ಜ್ಯೋತಿಯಿಂದ ವಿರಾಜಿತನಾಗಿರುವನು. ಈ ಮಹದಂಶವನ್ನು ಆಗಮಾಮ್ನಾಯಾದಿಗಳು ಮುಕ್ತಕಂಠದಿಂದ ಸಾರುತ್ತಿರುವುವು.

ಇಂತಪ್ಪ ಸತ್ಯಾಂಶವನ್ನು ಮನಗಂಡ ಸಪ್ತರ್ಷಿಮಂಡಲದಧಿಪತಿ ಆದಿ ಶ್ರೀ ಅಗಸ್ತ್ಯಮಹರ್ಷಿಗಳೇನು, ಅದ್ವೈತಮತ ಸ್ಥಾಪನಾಚಾರ್ಯವರ್ಯ ಶ್ರೀ ಶೃಂಗೇರಿ ಶಾರದಾಪೀಠಾಧೀಶ ಆದಿ ಶ್ರೀ ಶಂಕರಾಚಾರ್ಯರೇನು, ಮತ್ತೂ ಅನೇಕಾನೇಕ ಪ್ರಾಚೀನ ಋಷಿಮಹರ್ಷಿಗಳೂ ಭಾಷ್ಯಕಾರರೂ, ರಾಜಮಹಾರಾಜರುಗಳೂ ಚಕ್ರವರ್ತಿಸಾರ್ವಭೌಮರೂ, ಅನಾದಿ ವಿರಕ್ತಕುಲವೃಂದಚಂದ್ರ ಯತೀಂದ್ರ, ಯೋಗೀಂದ್ರ ಮಹೇಂದ್ರಾದಿಗಳೂ, ಶ್ರೀ ಕಪ್ಪಡಿಕ್ಷೇತ್ರ ಪ್ರವಿರಾಜಮಾನ ಹಿರೇಮಠಾಧೀಶ ಶ್ರೀ ಸಂಗಮೇಶ್ವರರೆಂಬ ಅನ್ವರ್ಥ ನಾಮದಿಂ ಪ್ರಸಿದ್ಧರಾದ ಉಪಾಚಾರ್ಯ ಪೂಜ್ಯ ಶ್ರೀಜಾತವೇದ ಮುನಿಗಳೇನು ಹಾಗೂ ಇನ್ನುಳಿದ ಅಸಂಖ್ಯಾಕಭಕ್ತಸ್ತೋಮ ನಿಕರ ಅನವರತ ಅಚಲವಾದ ಅನನ್ಯಭಕ್ತಿಭಾವದಿಂದ ಶ್ರೀ ಸೋಮೇಶ್ವರಲಿಂಗ ಸಂಭವನಾದ ಜಗದ್ಗುರು ಆದಿ ಶ್ರೀ ರೇಣುಕನನ್ನು ಬದ್ಧಾಂಜಲಿ ಪುಟರಾಗಿ ಸ್ತುತಿಸುತ್ತಾ—

## ಪ್ರಸ್ತಾವನೆ

|| ಭೋ ! ಸೋಮೇಶ್ವರಲಿಂಗ ಸಂಭವ ||
ಸುಧಾರ್ಮ ಧನ್ಯ ಧನ್ಯ ಪ್ರಭೋ !
ದಿವ್ಯಜ್ಞಾನ ನಿರಸ್ತಮೋಹ ಮಹಿರ್ಮ ||
ನಿತ್ಯೋದಿ ತಾತ್ಮನ್ ಮಹನ್ ||
ಯೋಗಿನ್ ಜಂಗಮ ಸಾರ್ವಭೌಮ ಸದಯಂ ||
ಮಾಮುದ್ಧರೇ ತ್ಯಚ್ಛರ್ರ ! !
ತಂ ವಂದೇ ಸತತಂ ಜಗದ್ಗುರು ಮಹಂ ||
ಶ್ರೀ ರೇಣುಕಂ ಸಿದ್ಧಯೇ ||

ಮುಕ್ತ ಕಂಠದಿಂದ ಹಾಡಿಪಾಡಿ ಪೂಜಿಸಿ ಸ್ತುತಿಗೈದು ಮುಗ್ಧರಾಗಿರುವರೆಂದ ಬಳಿಕ, ಶ್ರೀ ಮದ್ರೇಣುಕಾಚಾರ್ಯರ ಘನಮಹಿಮೆ, ಭೂಲೋಕ, ಊರ್ಧ್ವ ಲೋಕಾದಿಬ್ರಹ್ಮಾಂಡಾದಿಗಳಲ್ಲೆಲ್ಲಾ ವ್ಯಾಪಿಸಿ, ಹರಿಬ್ರಹ್ಮೇಂದಾದಿಗಳಿಂದ ಅನ ವರತ ಪೂಜನೀಯವೂ ಸ್ತುತ್ಯಾರ್ಹವೆನಿಸಿರುವ ಮಹದಂಶ ನಿಗಮಾಗಮಗಳಲ್ಲು ಕ್ತವಾದಂತೆ, ನಸ್ನೀ ಪುಟ್ಟ ಪ್ರಸ್ತಾವನೆಯಿಂದ ಮನಗಂಡಂತೆ ಆಗಿರುವುದು ಸರಿಯಷ್ಟೆ, ಅಸ್ತು.

ಮಾನವನ ನಿಜ ಆತ್ಮಕಲ್ಯಾಣ ಸ್ವಧರ್ಮ ಸುಧಾರಸದ ಹೃದಯದಲ್ಲಿ ಅಡಗಿದ್ದು, ಅನವರತ ಪ್ರಕಾಶಿತಗೊಂಡಿರುವುದು. ಧರ್ಮ ಜಗತ್ತಿನ ಜೀವಕೋಟಿ ಗಳಿಗೆಲ್ಲಾ ವಂದೇ ಎನಿಸಿರುವುದಾದರೂ, ಅವರವರ ಸಾಮುದಾಯಿಕ ಆತ್ಮೀಯ ಆಚರಣೆ, ಸಂಪ್ರದಾಯ ಸಿದ್ಧಾಂತಗಳಿಗನುಸಾರವಾಗಿ, ಧರ್ಮವು ಹಿಗ್ಗಿ ವಿಶಾಲ ಗೊಂಡು ಸರ್ವರಿಂದಲೂ ವಿಶ್ವಸನೀಯವೆನಿಸಿರುವುದು. ಕುಂಭ ಸಂಭವರಾದ ಆದಿ ಶ್ರೀ ಅಗಸ್ತ್ಯ ಮಹರ್ಷಿಗಳಿಗೆ ಶಿವಲಿಂಗ ಸಂಭೂತರಾದ ಶ್ರೀಮಜ್ಜಗದ್ಗುರು ಭಗವತ್ಪಾದ ಆದಿ ಶ್ರೀ ರೇಣುಕಾಚಾರ್ಯರು ಧರ್ಮದ ಅಖಂಡ ಸ್ವರೂಪವನ್ನು ಸಿದ್ಧಾಂತ ಶಿಖಾಮಣಿಯಲ್ಲಿ ವಿವರಿಸುತ್ತಾ—ಪರಬ್ರಹ್ಮ ಸ್ವರೂಪ ಸದೃಶನಾದ ಪರಮಾಚಾರ್ಯ ದೇವನು, ಯಾವ ಧರ್ಮವನ್ನು ಸ್ವಯಮಾಚರಿಸಿ, ಲೋಕದ ಮಾನವಕೋಟಿಗಳ ಉದ್ಧಾರಾರ್ಥ ನಿಸ್ಪೃಹಭಾವದಿಂದ ಉಪದೇಶಿಸಿರುವನೋ, ಆ ಧರ್ಮವೇ—

|| ಸ ದರ್ಮಃ ಸರ್ವಲೋಕಾನಾ । ಮುಪಕಾರಾಯ ಕಲ್ಪತೇ ||

ಅಖಿಲ ಜನರ ಕಲ್ಯಾಣ ಕ್ಕೋಸ್ಕರ ಸಮರ್ಥವೆನಿಸಿರುವುದು. ಧರ್ಮವು ಮಹತ್ತಿಗೆ ಮಹತ್ತರವಾದುದಾಗಿಯೂ, ಸೂಕ್ಷ್ಮಕ್ಕೆ ಆಕಾಶವತ್ ಅತಿ ಸೂಕ್ಷ್ಮತರ ವೆನಿಸಿ ಪರಿಶೋಭಿಸುತ್ತಲಿರುವುದು. ಧರ್ಮ ದಶಮುಖದಿಂದ ಕೂಡಿ

|| ಅಹಿಂಸಾ ಸತ್ಯಮಸ್ತೇಯಂ । ಬ್ರಹ್ಮಚರ್ಯಂ ದಯಾ ಕ್ಷಮಾ ।
ದಾನಂ ಪೂಜಾ ಜಪೋಧ್ಯಾನ । ಮಿತಿ ಧರ್ಮಸ್ಯ ಸಂಗ್ರಹಃ ।
|| ಶಿವೇನ ವಿಹಿತೋಯಸ್ಮಾ । ದಾಗನ್ಯೈ ರ್ಧರ್ಮ ಸಂಗ್ರಹಃ ।
ತಸ್ಮಾತ್ತ ಮಾಚರ್ರ ವಿದ್ವಾ । ತತ್ಪ್ರಸಾದಾಯ ಕಲ್ಪತೇ || ಸಿ.ಶಿ.

ಅಂದರೆ, ಅಹಿಂಸೆ, ಸತ್ಯಸಂಧತೆ, ಕದಿಯದಿರುವ ಮನೋಭಾವ, ಬ್ರಹ್ಮಚರ್ಯ (ಜಿತೇಂದ್ರಿಯತ್ವ). ದಯಾರಸ (ಪಶ್ಚಾತ್ತಾಪ) ಮನ್ನಿಸುವ ಕ್ಷಮಾಗುಣ ದಾನ, ಪೂಜೆ, ಜಪ ಮತ್ತೂ ಧ್ಯಾನ ಯಿವು ಹತ್ತೂ ಧರ್ಮಸ್ವರೂಪದ ದಿವ್ಯಾಂಗ ಗಳೆನಿಸಿರುವುವು. ಈ ಪವಿತ್ರವಾದ ಧರ್ಮದ ದಶಾಂಗಗಳನ್ನು ಆತ್ಮವೇತ್ತನಾದ ವಿದ್ವಾಂಸನು ಸದಾ ಅನುಷ್ಠಿಸಿ ಹರಗುರುಗಳ ದಿವ್ಯಾನುಗ್ರಹಕ್ಕೆ ಪಾತ್ರನೆನಿಸಿ, ಮುಕ್ತನಾಗುವನು. ಎಂದು ಧರ್ಮದ ಸ್ವರೂಪವನ್ನು ಸ್ಪಷ್ಟಪಡಿಸಿರುವರು.

ಸತ್ಯಾನ್ವೇಷಣೆಯ ಹೆದ್ದಾರಿಯಲ್ಲಿ ಪ್ರೇಮಾಮೃತ ನಿಸ್ಪೃಹಭಾವವು, ವಿಶ್ವ ಧರ್ಮವನ್ನು ಅಳವಡಿಸಿಕೊಂಡು ಪ್ರಶಾಂತತೆಯಿಂದ ಮನೋಹರವೆನಿಸಿ, ಆತ್ಮ ಕಲ್ಯಾಣಕ್ಕೆ ಸೂಕ್ತ ಅಡಿಗಲ್ಲೆನಿಸಿರುವುದು. ಇಂತಪ್ಪ ಧರ್ಮವನ್ನು ಮಾನವನು ಕೂಡಲೆ ಅವಲಂಭಿಸಿ, ಆಚರಿಸಿ, ಅನುಭವೈಕ್ಯತೆಗಳಿಂದ ವಿರಾಜಿತನಾಗಿ ಕೃತ ಕೃತ್ಯನಾಗಬೇಕು. ಯುವ್ವನವು ಗತಿಸಿ, ಸಡಿಲಾಂಗಾಂಗಗಳಿಂದ ತಡಬಡಿಸುವ ಕೇವಲ ವೃದ್ಧಾಪ್ಯದಲ್ಲಿ, ಧರ್ಮ ಜಾಗರೂಕನಾದರೆ ಫಲವಿಲ್ಲ. || ಹಾ ಕಷ್ಟಂ ! ಪುರುಷಸ್ಯ ಜೀರ್ಣವಯಸಃ ।ಪುತ್ರೋಪ್ಯ ಮಿತ್ರಾಯತೇ|| ಎಂದಂತೆ, ಹೆಂಡಿರು ಮಕ್ಕಳೇ ದ್ವೇಷಿಸುತ್ತಿರುವ ದುಸ್ತರವಾದ ವೃದ್ಧಾಪ್ಯದಲ್ಲಿ ಏನನ್ನು ತಾನೇ ಸಾಧಿಸಲು ಸಾಧ್ಯವಾದೀತು. ನೀರ್ಗುಳ್ಳೆಯಂತೆ || ಜೀವಿತಂ ಕ್ಷಣಭಂಗುರಃ ||

ಜೀವಮಾನ ಅಸ್ಥಿರವೆನಿಸಿರುವುದು. ಮತ್ತೂ ॥ ಯಮಸ್ಯ ಕರುಣಂ ನಾಸ್ತಿ ।ತಸ್ಮಾಜ್ಜಾಗ್ರತ ಜಾಗ್ರತಃ ॥ ಎಂಬ ಮುನ್ನೆಚರಿಕೆಯಿಂದ ॥ ಧರ್ಮಸ್ಯ ತ್ವರಿತಾಗತಿಃ ॥ ಆಗ ಬಾ ಈಗ ಬಾ ಹೋಗಿ ಬಾ ಎನ್ನದೇ ಆಗಲೇ ಕರೆದು ಕೊಡುವವನ ಧರ್ಮ ಹೊನ್ನಾಗದೆಬಿಡದು ಸರ್ವಜ್ಞ ॥ ಸರ್ವಜ್ಞರ ವಚನವಿರುವುದು ಸರಿಯಷ್ಟೆ. ಮತ್ತು ಶರೀರವಿರುವಾಗಲೇ ॥ ಶರೀರ ಮಾದ್ಯಂಖಲು ಧರ್ಮ ಸಾಧನಂ ॥ ಎಂಬಂತೆನಮ್ಮವೊಂದೊಂದು ಅಂಗ ಅವಯವಗಳಿಂದಲೂ ದಿನವಹಿ ಯಥಾಶಕ್ತಿ ಸ್ವಧರ್ಮಾಚರಣೆಯನ್ನು ಬಿಡದೆ ಅತ್ಯಂತ ಆದರಿಂದ ಆನುಷ್ಠಿಸಿ ನಿತ್ಯಾನಂದ ಭರಿತರಾಗಬೇಕು. ಸ್ವಧರ್ಮಾನುಷ್ಠಾನ ಪರರು ಸುಲಭದಲ್ಲಿ ಗುರುಪಥ ಶಿವಪಥಗಳನ್ನು ಕೈಗೂಡಿಸಿಕೊಂಡು ಆತ್ಮ ಕಲ್ಯಾಣ ಲೋಕ ಕಲ್ಯಾಣಗಳನ್ನೆಸಗಿ ಕೃತಕೃತ್ಯರಾಗುವರು. ಗುರು ಕಾರುಣ್ಯ ಭಾವೇನ ಗುರುಪುತ್ರರ ಜ್ಞಾನ ವಿಜ್ಞಾನ ವಿನಿಮಯಶಕ್ತಿಯೂ ಅತ್ಯದ್ಭುತವಾಗಿ ॥ ಪ್ರಜ್ವಾಲಿತೋಜ್ಞಾನ ಮಯ ಪ್ರದೀಪಃ ॥ ಎಂಬಂತೆ ಪ್ರಕಾಶಗೊಂಡು ಹಿತಕರವೆನಿಸಿ ॥ ಪ್ರಜ್ಞಾನಂ ಬ್ರಹ್ಮ ॥ ಎಂಬ ಶೃತಿವಾಣಿಯಂತೆ ರೇಣುಕ ಪರಂಜ್ಯೋತಿಯಲ್ಲಿ ಲಿಂಗಾಂಗ ಸಾಮರಸ್ಯಾನುಭವೈಕ್ಯವೇದ್ಯರಾಗಿ ವಿರಾಜಿಸುವರು.

॥ ಧರ್ಮೋಲಿಂಗಾರ್ಚನಾತ್ಮಕಃ ॥ ಎಂಞ ಶಿವಾಗಮೋಕ್ತಿ, ಸರ್ವದಾ ಸಂಸ್ಮರಣೀಯವೇ ಇರುತ್ತೆ. ಇದರಿಂದಾಗಿ ॥ ಮನುಷ್ಯಾಣಾಂ ಹಿತಂ ಧರ್ಮಂ ವರ್ತಮಾನೇ ಕಲೌಯುಗೆ ॥ ಎಂಬ ಶಾಸ್ತ್ರ ಸಮ್ಮತವಾದ ಅಭಯವಾಣಿ ಸರ್ವಲೋಕ ಹಿತದೃಷ್ಟಿಯಿಂದ, ಸಮಸ್ತರಿಗೂ ಹಿತಕರವೂ, ಸರ್ವದುಃಖ ನಿವೃತ್ತಿ ಪರಮಾನಂದ ಪ್ರಾಪ್ತಿಕರವೆನಿಸಿ ಕಂಗೊಳಿಸುತ್ತಿರುವುದು.

ಪ್ರ ಸ್ತಾ ವ ನೆ ಸ ಮಾ ಪ್ತಿ

ಟಿ. ಬಿ. ಬಸವರಾಜಯ್ಯ,
ನಂ. 38, ನೇತಾಜಿ ರೋಡು ಕೋಲ್ಸರೋಡು ಜಂಕ್ಷನ್
ಬೆಂಗಳೂರು - 5.

॥ ಭದ್ರಂ ಶುಭಂ ಮಂಗಳಂ ॥

॥ ಶ್ರೀಮಜ್ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

## ವಿಜ್ಞಾಪನೆ.

ಹರಃ ಓಂ ! ಶ್ರೀ ಗುರುಭ್ಯೋ ನಮಃ ಓಂ !

॥ ಯಸ್ಯ ದೇವೇ ಪರಾಭಕ್ತಿ
ರ್ಯಥಾ ದೇವೇ ತಥಾಗುರೌ !
ತಸ್ಯೈತೇ ಕಥಿತಾ ಹ್ಯರ್ಥಾಃ
ಪ್ರಕಾಶಂತೇ ಮಹಾತ್ಮನಃ ॥ (ಶ್ವೇತಾಶ್ವತರ ಶ್ರುತಿ)

ಸತ್ಸದ್ಗುರುವೇ ಪರಶಿವ ಪರಬ್ರಹ್ಮನೆಂತಲೂ, ಪರಬ್ರಹ್ಮವೇ ಶ್ರೀಮತ್ಸದ್ಗುರುವೆಂಬ ಮಹದಂಶವನ್ನು, ಶಾಸ್ತ್ರವು ಸುಸ್ಪಷ್ಟವಾಗಿ ಪ್ರತಿಪಾದಿಸುತ್ತಾ—

ಗುರುಬ್ರಹ್ಮ ಗುರುರ್ವಿಷ್ಣು
ಗುರುರ್ದೇವೋ ಮಹೇಶ್ವರಃ !
ಗುರು ಸಾಕ್ಷಾತ್ಪರಬ್ರಹ್ಮ
ತಸ್ಮೈ ಶ್ರೀ ಗುರವೇನಮಃ ॥ (ಇತಿ ಶಾಸ್ತ್ರಃ)

ಗುರುವು ತ್ರಿಮೂರ್ತ್ಯಾತ್ಮಕನೂ ಹಾಗೂ ಸಾಕ್ಷಾತ್ಪರ ಶಿವ ಸದೃಶನೆಂದು ಸ್ತುತಿಸಿ, " ನ ಗುರೋರಧಿಕಂ ನ ಗುರೋರಧಿಕಂ " ಎಂದು ಒಂಭತ್ತು ಸಾರಿ ಪ್ರತಿ ಧ್ವನಿಸಿ, ಗುರುಮಹಿಮೆಯನ್ನು ಮುಕ್ತಕಂಠದಿಂದ, ಘಂಟಾಘೋಷವಾಗಿ ಸಾರುತ್ತಲಿರುವುದು. ಇದರಿಂದ ಶಿವನು ಸಾಕಾರವೂ ಹೌದು ನಿರಾಕಾರನೂ ಹೌದು. ಸಕಲನೂ ಹೌದು ನಿಷ್ಕಲನೂ ಹೌದು. ಸವಿಶೇಷನೂ ಹೌದು ನಿರ್ವಿಶೇಷನೂ ಹೌದು. ಪರಮಾತ್ಮನು ॥ ಅಣೋರಣೀಯಾನ್ । ಮಹತೋ ಮಹೀಯಾನ್ ॥ ಎಂಬ ಉಪನಿಷದುಕ್ತಿಯಂತೆ ಅಣುವಿನಲ್ಲಿ ಪರಮಾಣುವಾಗಿಯೂ, ಮಹತ್ತಿನಲ್ಲಿ ಮಹೋನ್ನತ ಅಖಂಡ ಬ್ರಹ್ಮಾಂಡಾದ್ವೈತ ದೋರ್ದಂಡನಾಗಿ ವಿರಾಜಿತನೆನಿಸಿರುವನು.

ಗುರು ಶಬ್ಧವು ಸಹ ಪರಮಾತ್ಮನಂತೆ ಅಖಂಡ ಪರಿಪೂರ್ಣ ತತ್ವವನ್ನು ಪ್ರತಿಪಾದಿಸುವುದರಲ್ಲಿ ಸೀಮಾತೀತವೆನಿಸಿರುವುದು. ಗುರು ಎಂದರೆ ದೊಡ್ಡದು ಎಂದರ್ಥ. ಎಷ್ಟುದೊಡ್ಡದು ಎಂದು ಪ್ರಶ್ನಿಸಲು ಎಡೆಯಿಲ್ಲದ, ದೊಡ್ಡದಕ್ಕೆಲ್ಲಾ ದೊಡ್ಡದು, ಅತ್ಯಂತ ದೊಡ್ಡದು ಎಂದು ಗಹನಾರ್ಥ ಗಾಂಭೀರ್ಯೌದಾರ್ಯಾದಿ ಮಂಗಳಮಯವೆನಿಸಿರುವುದು. ಗುಕಾರವು ಸತ್ವ, ರಜಸ್ತಮೋಗುಣಗಳಿಗೆ ತವರುಮನೆ ಎನಿಸಿರಲು, ಅಂಧಕಾರ, ಅವಿದ್ಯೆ, ಅಜ್ಞಾನಗಳೆಂಬ ಆಸುರೀ ಸೈನ್ಯ ಸಂಪತ್ತುಗಳು ಗುಕಾರಕ್ಕೆ ನೆಲೆವೀಡಾಗಿರುವುವು. ರಜಸ್ತಮೋಗುಣಗಳು ಸಹಜವಾಗಿ ನರಕದ ಮಹಾದ್ವಾರಗಳಂತೆ ಅತಿ ಭೀಷಣ ಸ್ವರೂಪ ಪರಿಣಾಮ ಗಳುಳ್ಳವುಗಳಾಗಿರುವುವು. ಇದು ಗುಕಾರದ ಸಂಕ್ಷಿಪ್ತ ಪರಿಚಯವೆನಿಸಿರು ವುದು.

ರು ಕಾರವು ಜೀವಾಕ್ಷರವೆನಿಸಿ, ಸತ್ವಮಯವೂ, ಸಂಯಮ, ಸಹನೆ, ಸಮನ್ವಯ, ಶಾಂತಿ, ದಾಂತಿ, ದಯೆ, ಧರ್ಮಮಯವೆನಿಸಿ, ದೈವೀ ಸಂಪತ್ತಿನ ಪ್ರಾದುರ್ಭಾವಕ್ಕೆ ಆಶ್ರಯವಾಗಿದ್ದು, ದೇದೀಪ್ಯ ಮಾನನಾದ ಪ್ರಕಾಶ ಮಯವೆನಿಸಿರುವುದು.

॥ ಗು ಕಾರಶ್ಚಂಧ ಕಾರಸ್ತು
ರು ಕಾರಸ್ತನ್ನಿರೋಧಕೃತ್ ।
ಅಂಧಕಾರ ನಿರೋಧತ್ವಾತ್
ಗುರು ರಿತ್ಯಭಿಧೀಯತೆ ॥

"ಗುಣ ಪ್ರವೃದ್ಧಾ । ವಿಷಯ ಪ್ರವಾಲಾಃ" ಎಂಬಂತೆ ಬಂಧನರೂಪ ವಿಷಯಾದಿ ವ್ಯಾಮೋಹಗಳಿಗೆ ಪುಷ್ಟಿಯನ್ನೀಯುವಂಥಾ ಗುಣತ್ರಯಾತ್ಮಕ, ಮಲತ್ರಯಗಳಿಗೆ ಆಗರವೆನಿಸಿದ ಗುಕಾರಾಂಧಕಾರವನ್ನು, ನಿರೋಧಿಸಿ ಧ್ವಂಸ ಗೊಳಿಸುವುದರಲ್ಲಿ, ॥ವಿಘ್ನಧ್ವಾಂತ ನಿವಾರಣೈಕ ತರಣಿಃ ॥ ಅಖಂಡ ವಿಶ್ವವನ್ನು ಆವರಿಸಿರುವ ಕಗ್ಗತ್ತಲು, ಉದಯಗಿರಿಯಲ್ಲಿ ಜಗಚ್ಚಕ್ಷು ವೆನಿಸಿದ ಮುಮ್ಮೂ ರ್ತ್ಯೈಕ್ಯಾತ್ಮಕ ಮಹೋನ್ನತ ಮಾರ್ತಾಂಡ ಸುವರ್ಣದ್ಯುಮಣಿ ಉದಯಿಸುವನೆಂಬ

ಸಂಜ್ಞೆಯನ್ನು, ಮುಂಬೆಳಗಿನಿಂ ಬೆಳಗುವ ಮುದ್ದಾದ ಅರುಣೋದಯದ ಪ್ರಾದುರ್ಭಾವದ ಸುಳಿಯನ್ನು ಕಾಣುವುದಕ್ಕೆ ಮೊದಲೇ, ನಿಶಾದೇವತೆಯು (ಕತ್ತಲು) ಎದೆಯ ಮೇಲಿನ ಸೀರೆ ಸೆರಗು ಜಾರಿದುದನ್ನೂ ಲಕ್ಷಿಸದೆ ಪರಾರಿಯಾಗಿ ಕಣ್ಮರೆಯಾಗುವಂತೆ, ಝ ವರ್ಣ ಜ್ಞಾನಮಯ ಪರಂಜ್ಯೋತಿ ಪ್ರಭೆ ಯೆದುರಿಸಲ್ಲಿ, ಅಜ್ಞಾನಂಧಕಾರದ ಪ್ರತಾಪವು ತಾನಾಗಿ ಹೇಳಲು ಹೆಸರಿಲ್ಲದೆ ನಿರ್ನಾಮವಾಗುವಂತೆ—ಗುರುನಾಮೋಚ್ಛಾರಣೆ, ಸ್ಮರಣೆ, ಧ್ಯಾನ ಹಾಗೂ ಅನುಸಂಧಾನಗಳಿಂದ ||ಸಂಸಾರ ಮಲಮೋಚನಂ|| ಘೋರ ಸಂಸಾರ ದುಃಖ ದಿಂದ, ವಿಮೋಚನೆಯನ್ನು ಪಡೆದು, ಅವಿದ್ಯಾ ವಿಶಿಷ್ಟವಾದ ತಾಪತ್ರಯ ಗಳಿಂದ ದೂರನಾಗಿ, ಸರ್ವದುಃಖ ನಿವೃತ್ತಿ ಪರಮಾನಂದ ಪ್ರಾಪ್ತಿಯನ್ನು ಗಳಿಸುವನು. ಇದರಿಂದಾಗಿ—

|| ಪೂಜಾ ಮೂಲಂ ಗುರೋರ್ಪಾದಂ |
ಭಕ್ತಿ ಮೂಲಂ ಗುರೋರ್ಮಂತ್ರಃ ||
ಧ್ಯಾನ ಮೂಲಂ ಗುರೋರ್ ಮೂರ್ತಿಃ !
ಮೋಕ್ಷ ಮೂಲಂ ಗುರೋ ಕೃಪಾ ||

ಎಂಬುದಾಗಿ ವಿಶ್ವದ ಸರ್ವಧರ್ಮ ಸಮನ್ವಯ ದರ್ಶಿಗಳ ಸಮತಾಭಾವವು, ಈ ವಿಷಯದಲ್ಲಿ ಸಮಂಜಸವೆನಿಸಿರುವುದು ಸಂತೋಶದಾಯಕವೆ ಅಷ್ಟೆ.

ಜಗತ್ತಿನಲ್ಲಿ ಭಕ್ತ ಕೋಟಿಗಳು ಭಕ್ತಿಭಾವದಿಂದ ಭಗವಂತನನ್ನು ನಾನಾ ರೂಪ ನಾಮಗಳಿಂದ, ತಮಗೆ ಪ್ರಿಯವಾದಂತೆಲ್ಲಾ ರೂಪಿಸಿ, ಸ್ತುತಿಸಿ, ಆರಾಧಿಸಿದರೂ, || ಅಜಾಯಮಾನೋ ಬಹುಧಾ ವಿಜಾಯತೇ || ಎಂಬ ವೇದೋಕ್ತಿಯಂತೆ ಪ್ರಕಾಶಿತನಾಗಿದ್ದರೂ, " ದೇವ ಒಬ್ಬ ನಾಮ ಹಲವು " ಎಂಬ ಮಹಾತ್ಮಾ ಬಸವಣ್ಣನವರ ಅಮೃತವಾಣಿಯಂತೆ, ಪರಮಾತ್ಮನು ಜಗತ್ತಿಗೆ ಒಬ್ಬನೇ ಹೊರತು ಇಬ್ಬರಿಲ್ಲ.

॥ ಏಕ ಏವಹಿ ಭೂತಾತ್ಮಾ ।

ಭೂತೇ ಭೂತೇ ವ್ಯವಸ್ಥಿತಃ ॥

ಏಕಧಾ ಬಹುಧಾ ಚೈವ ।

ದೃಶ್ಯತೇ ಜಲಚಂದ್ರವತ್ ॥

ಅಂತರಿಕ್ಷದಲ್ಲಿನ ಉಡುರಾಜನು (ಚಂದ್ರನು) ವೊಬ್ಬನೆ ಆಗಿದ್ದರೂ, ಭೂಮಿಯೊಳಗಿನ ಅನೇಕಾನೇಕ ಕೆರೆ, ಕೊಳ, ಕಲ್ಯಾಣಿ, ಕಂದಕಗಳಲ್ಲೂ, ಹಾಗೂ ನೀರು ತುಂಬಿದ ಸಹಸ್ರಾರು ಕೊಡಗಳಲ್ಲೂ ಸಹಸ್ರಗಟ್ಲೆ ಚಂದ್ರರುಗಳು ಇರುವಂತೆ, ನಮ್ಮ ಕಣ್ಮನಗಳಿಗೆ ಭಾ ವಾದರೂ, ನಿಜಕ್ಕೂ ಇರುವ ಚಂದ್ರನು ಜಗತ್ತಿಗೆ ಹೇಗೆ ವೊಬ್ಬನೋ, ಅದರಂತೆ ಭಗವಂತನು ಜಗತ್ತಿಗೆ ಒಬ್ಬನೇ ಹೊರತು ಇಬ್ಬರಿಲ್ಲ.

ಇದು ಹೇಗೆ ಸತ್ಯವೋ ತದ್ವತ್. ಇಡಿ ವಿಶ್ವದಲ್ಲಿ ಇವರು ನಮ್ಮ ಗುರು. ಅವರು ನಿಮ್ಮ ಗುರು, ಮತ್ತಿವರು ಜಗದ್ಗುರುಗಳೆಂದು ಅಸಂಖ್ಯಾತರಾದ ಗುರುಮೂರ್ತಿಗಳನ್ನು ನಾವು ಪೂಜ್ಯಭಾವದಿಂದ ಸುತ್ತಲೂ ಕಂಡು ಆರಾಧಿಸಿ. ಸ್ತುತಿಸಿ, ಶರಣಾಗತರಾದರೂ. ಜಗತ್ತಿಗೆ ಸದ್ಗುರುದೇವನೊಬ್ಬನೇ ಹೊರತು ಅನ್ಯಥಾ ಇರಲಿಕ್ಕಿಲ್ಲವಷ್ಟೆ. ಹರನೇ ಗುರುವೆನಿಸಿದ ಬಳಿಕ. ಜಗತ್ತಿಗೆಲ್ಲಾ ಹರನೊಬ್ಬ ಎಂದಂತೆ ಗುರುವೊಬ್ಬ ಎಂದು ನಿರ್ಧರಿಸುವುದರಲ್ಲಿ ತಪ್ಪೇನಿಲ್ಲವಷ್ಟೆ. ಈ ಮಹದಂಶವನ್ನು ಶಿವಾಗಮಾಮ್ನಾಯಾದಿ ಧರ್ಮ ಶಾಸ್ತ್ರಗಳು ಶಾಸನ ಬದ್ಧವಾಗಿ ನಿರೂಪಿಸುವಂತೆ ಶ್ರೀ ಗುರುದಕ್ಷಿಣಾಮೂರ್ತಿಯನ್ನು ॥ ಗುರೂಣಾಂ ಗುರುಃ ॥ ಎಂದು ಮುಕ್ತಕಂಠದಿಂದ ಸಾರುತ್ತಿರುವುದು ಸರ್ವ ಶೃತನೇ ಇರುತ್ತೆ. ಅಸ್ತು.

ಪರಶಿವನ ಮುಖ ಕಮಲದಿಂದ ಹೊರಹೊಮ್ಮಿದ ಶಿವಾಗಮಗಳಲ್ಲಿ ಶ್ರೀ ದಕ್ಷಿಣಾಮೂರ್ತಿ ಎನಿಸಿದ ಪರಶಿವನು ಅಥವಾ ಸದಾಶಿವನು ಇಚ್ಛೆಸಲು

॥ ಸಸರ್ಜಾತ್ಮ ಸಮುಪ್ರಖ್ಯಾ ।
ಸರ್ವಜ್ಞಾನ್ ಸರ್ವಶಕ್ತಿಮಾ ॥ ಸಿ. ಶಿ. ಅ. ೨ ಶ್ಲೋ ೨೩)

ತನ್ಮಾತ್ಮ ಸದೃಶರಾದ ಚಿನ್ಮಯ ಚಿದ್ಘನ. ಸಚ್ಚಿದಾನಂದ, ಸರ್ವಜ್ಞತ್ವಾದಿ ಷಡ್ಗುಣೈಶ್ವರ್ಯ ಸಂಪನ್ನ ದಿವ್ಯ ತೇಜೋರಾಶಿಯಿಂದ ಬೆಳಗುವ ಚಿದಾದಿತ್ಯರೂ, ಚಿದಾಕಾಶ ಸ್ವರೂಪಿಗಳೂ, ಚಿನ್ಮಹೋ ದಧಿಗಳೆನಿಸಿದ, ಚಿತ್ಕಲಾ ಸ್ವರೂಪಿಗಳಾದ ಪಂಚಾಚಾರ್ಯರುಗಳನ್ನು, ಸಂಕಲ್ಪ ಮಾತ್ರೇಣ ಸೃಜಿಸಿದನೆಂದು ನಿಗಮಾಗಮಗಳು ಘಂಟಾಘೋಷವಾಗಿ ಸಾರಿ ಸ್ತುತಿಸುತ್ತಿರುವುವು. ಇದೇ ಅರ್ಥವು—

॥ ಸ ವಾ ಏಷ ಪುರುಷಃ ಪಂಚಧಾ ॥ ಎಂಬ ತೈತ್ತರೀಯೋಪನಿಷತ್ತಿನಿಂದಲೂ ಮತ್ತೂ ॥ ಅರ್ಧನಾರೀಶ್ವರತ್ವಾದಿ । ಲೀಲಾ ವಿಭವ ಸಂಜ್ಞಕಾಃ । ಸದ್ಯೋ ಜಾತಾದಯಃ
। ಪಂಚವ್ಯೂಹಾಃ ಪ್ರೋಕ್ತಾಃ ಸನಾತನಾಃ ॥

ಎಂಬೀ ಶಿವಾಗಮ ಪ್ರಮಾಣಗಳಿಂದಲೂ, ಪಂಚಾನನನ ಪಂಚಮುಖ ಕಮಲಗಳಿಂದ ಉದ್ಭವಿಸಿದ ಶ್ರೀ ಮಜ್ಜಗದ್ಗುರು ಸಾರ್ವಭೌಮ ಶ್ರೀ ರೇಣುಕಾದಿ ಪಂಚಾಚಾರ್ಯರು, ಸಾಕ್ಷಾತ್ಪರ ಶಿವನ ಸದ್ಯೋಜಾತಾದಿ ಪಂಚಬ್ರಹ್ಮ ಸ್ವರೂಪರೆಂದೂ, ನಿರಂಜನ ಪರಶಿವನ ವ್ಯೂಹ ಮೂರ್ತಿಗಳೆಂದೂ, ಅಯೋನಿಜರೂ, ಪ್ರಥಮಾಶ್ರಮ ಸಂಭ್ರಮರೂ ಹಾಗೂ ಪ್ರ ಪ್ರಥಮಾಚಾರ್ಯವರೇಣ್ಯರೂ, ಸರ್ವಲೋಕ ವಿಶ್ರುತರೂ ಸರ್ವಲೋಕ ಶರಣ್ಯರೂ ಮತ್ತೂ ಶಿವಲಿಂಗೋದ್ಭವ ದಿವ್ಯ ದೇಹಧಾರಿಗಳೆಂದೂ, ನಿತ್ಯೋದಿತರೆಂದೂ, ಜಂಗಮ ಸಾರ್ವಭೌಮರೆಂದೂ, ಅಖಿಲ ಲೋಕದ ಸುರಾಸುರ ನರರಾದಿಯಾಗಿ ಸಮಸ್ತರಿಂದ ವಂದ್ಯರೂ ಸ್ತುತ್ಯರೂ ಆಗಿರುವರು.

ಭಾನುಕೋಟಿ ಪ್ರಕಾಶದಂತೆ ಇದು ಸತ್ಯವೆನಿಸಿ ಸನಾತನ ಕಾಲದಿಂದಲೂ ಸುಪ್ರಸಿದ್ಧವೆನಿಸಿರುವ ಶಾಸ್ತ್ರಾಧಾರಗಳನ್ನೊಳಗೊಂಡ ಮಹದಂಶವೆನಿಸಿರುವುದರಿಂದ, ಸುಜ್ಞಾನಿಗಳೂ, ಪ್ರಸ್ಥಾನತ್ರಯಂಗಳ ಪ್ರಾಚೀನಕಾಲದ ಭಾಷ್ಯ

ಕರ್ತ್ರುಗಳೂ, ವಿರಕ್ತವೃಂದದವರೂ, ವಚನೋಪನಿಷತ್ಕಾರರುಗಳೂ, ಶಾಸ್ತ್ರಕಾರರೂ, ವಿದ್ವನ್ಮಣಿಗಳೂ, ರಾಜ ಮಹಾರಾಜರುಗಳೂ, ಚಕ್ರವರ್ತಿ ಸಾರ್ವಭೌಮರೂ, ಹಾಗೂ ಭಗವದ್ಭಕ್ತ ಜನ ಸಾಧು ಸಂತರೂ ನಿರಂತರ, ಶ್ರೀಮಜ್ಜಗದ್ಗುರು ರೇಣುಕಾದಿ ಸಾರ್ವಭೌಮರನ್ನು ಮುಕ್ತಕಂಠದಿಂದ ಸ್ತುತಿಸಿ ಶರಣಾಗತರಾಗಿರುವುದು, ಅನೇಕಾನೇಕ ಪ್ರಾಚೀನ ಭಾಷ್ಯಾದಿಗಳಿಂದಲೂ, ಮಹಾಕಾವ್ಯಗಳಿಂದಲೂ, ಶಾಸ್ತ್ರಗಳಿಂದಲೂ, ಪುರಾಣ ಇತಿಹಾಸ ಮತ್ತೂ ಕ್ಷೇತ್ರ, ತೀರ್ಥಶಿಲಾ ಶಾಸನ ತಾಮ್ರಶಾಸನಾದಿಗಳಿಂದ ಸುಪ್ರಸಿದ್ಧವೇ ಇರುತ್ತೆ.

ಇದರಿಂದಾಗಿ ಆದಿ ಅಗಸ್ತ್ಯ, ದಧೀಚಿ, ವ್ಯಾಸ, ಸಾನಂದ, ದೂರ್ವಾಸ, ಉಪಮನ್ಯು; ಜ|| ಆದಿ ಶ್ರೀ ಶಂಕರಾಚಾರ್ಯರಂಥಾ ಮಹಾ ಋಷಿ ಮಹರ್ಷಿಗಳೂ, ಯತಿಪುಂಗವರೂ, ಶ್ರೀಮಜ್ಜಗದ್ಗುರು ರೇಣುಕಾದಿ ಪಂಚಾಚಾರ್ಯರುಗಳ ದಿವ್ಯ ಅಡಿದಾವರೆಗಳಲ್ಲಿ ಶರಣಾಗತರಾಗಿ ಮುಕ್ತರಾಗಿರುವ ಅಂಶ ಲೋಕ ವಿಖ್ಯಾತವೇ ಇರುತ್ತೆ. ಶಾಸ್ತ್ರಜ್ಞನೂ ಧೀಮಂತನೂ ವಿಚಾರಪರನಾದ ಯಾವ ಪುರುಷನು ತಾನೆ ಮೇಲ್ಕಂಡೀ ವಿಷಯವನ್ನು ಸಂಶಯದಿಂದ ನೋಡಲು ಸಾಧ್ಯ. ಹಾಗೂ ಸಂಶಯಪಟ್ಟರೆ ಅವನು ಕಡು ಬಡವನೆನಿಸಿ, ನಂಬದ ದೋಷಕ್ಕೆ ಗುರಿಯಾಗುವನೆಂಬುದನ್ನು ಒತ್ತಿ ಹೇಳ ಬೇಕಾದ ಅವಶ್ಯಕತೆಯಿಲ್ಲವಷ್ಟೆ.

|| ನಂಬಿ ಕೆಟ್ಟವರಿಲ್ಲೊ | ರಂಗಯ್ಯ ನಿನ್ನ
ನಂಬದೇ ಕೆಟ್ಟರೆ ಕೆಡಲಿ ||

ಎಂಬ ಶ್ರೀ ಪುರಂಧರ ದಾಸರ ಕೀರ್ತನೆ ಮನಸ್ಸಿನ ಮೇಲೆ ಒಳ್ಳೆ ಪರಿಣಾಮವನ್ನುಂಟುಮಾಡುವ ಪ್ರಭಾವದಿಂದ ಕೂಡಿರುವುದು. ಶ್ರೀ ಕೃಷ್ಣ ಪರಮಾತ್ಮನು ಗೀತೆಯಲ್ಲಿ || ಸಂಶಯಾತ್ಮಾ ವಿನಶ್ಯತಿ || ಎಂದು ನುಡಿದಿರುವುದು ಅತ್ಯಂತಗಮನಾರ್ಹ. ಆಧ್ಯಾತ್ಮಿಕ ತತ್ವಗಳ ಸದ್ರೂಪ ಮಹದ್ವೈಖರಿಗಳನ್ನು ಚಾರಿತ್ರಿಕ ದೃಷ್ಟಿಕೋನದ ಅಳತೆಕೋಲಿನಿಂದ ಅಳೆಯಲುಪಕ್ರಮಿಸಿದ್ದಲ್ಲಿ, ಜಾತ್ಯಾಂಧನು ಕೈಯೊಳ್ ಪಿಡಿದಿರ್ಪೊಂದೂರು ಗೋಲಿನಿಂದ, ಮಹಾ ಸಮುದ್ರದ ಆಳವನ್ನು ಕಂಡು ಹಿಡಿಯಲು ಯತ್ನಿಸಿದಂತೆಯೇ ಸರಿ.

ವೀರ್ಯ, ವಿದ್ಯೆಗಳಲ್ಲಿ, ಮೂರು ಲೋಕದ ಗಂಡನೆನಿಸಿದ, ಪರಂತಪನಾದ ಪಾರ್ಥನು ಶ್ರೀ ಕೃಷ್ಣನನ್ನು, ತನ್ನ ಗೆಳೆಯನೆಂದೂ, ಗೋಪಾಲನೆಂದೂ, ಗೊಲ್ಲನೆಂದೂ, ಗೋಕುಲದಲ್ಲಿ ಪಾಲ್ಕೆನೆ ಮೊಸರ್ ಬೆಣ್ಣೆಗಳ ಕದ್ದ, ಕಾರ್ಮೇಘದಂತ ಕಪ್ಪು ಕಾಯದ ಕಳ್ಳನೆಂತಲೂ, ಜಾರ ಚೋರ ಶಿಖಾಮಣಿ ಯೆಂದೆಲ್ಲಾ ಏಕವಚನದಲ್ಲಿ ಸಂಬೋಧಿಸಿ ಅಜ್ಞಾತ ಸ್ಥಿತಿಯಲ್ಲಿ ಅರ್ಜುನನು ವರ್ತಿಸಿದ್ದುಂಟು. ಆದರೆ ನಂತರ ಅರ್ಜುನನು ಆಧ್ಯಾತ್ಮಿಕ ದೃಷ್ಟಕೋನದಿಂದ ಪಕ್ವ ಸ್ಥಿತಿಯನ್ನು ಪಡೆದು, ಶ್ರೀ ಕೃಷ್ಣನು ಸವ್ಯಸಾಚಿಗೆ, ಜ್ಞಾನನೇತ್ರ ವನ್ನು ಅನುಗ್ರಹಿಸುತ್ತಲೇ, ಪಶುಧರ್ಮದಿಂದ ಮುಕ್ತನಾಗಿ ಪಾಶದಿಂದ ದೂರ ನಾಗಿ ಶ್ರೀ ಕೃಷ್ಣನನ್ನು, ಭುವನಾಂಡ ಕೋಟಿಗಳ ಉದರದಲ್ಲಿರಿಸಿಕ್ಕೊಂಡು ರಕ್ಷಿಸುವ ದೇವಾದಿದೇವನೆಂದು ಅರಿತು, ಭಯಭಕ್ತಿಗಳಿಂದ ಬದ್ಧಾಂಜಲಿಪುಟ ನಾಗಿ—ಕಂಪಾಯಮಾನನೂ ಭಾಷ್ಪಾಂಜಲಿಗಳಿಂದಲೂ ಗದ್ಗದ ಧ್ವನಿ ಯಿಂದಲೂ ಸ್ತುತಿಸುತ್ತಾ— ॥ ತ್ವಮಾದಿದೇವಂ, ತ್ವಮಕ್ಷರಂ, । ಸ್ತ್ವಮಸ್ಯ ವಿಶ್ವಸ್ಯ ಪರಂ ನಿಧಾನಂ । ನಮೋ ನಮಸ್ತೇಸ್ತು ಸಹಸ್ರಕೃತ್ವಃ । ಪುನಶ್ಚ ಭೂಯೋಪಿ ನಮೋ ನಮಸ್ತೇ ॥ ಎಂದು ತ್ರಿಕರಣ ಪೂರ್ವಕ ಅನನ್ಯ ಭಕ್ತಿ ಭಾವದಿಂದ ಪುನಃ ಪುನಃ ಸ್ತುತಿಸಿ, ನಮಿಸಿ ಶರಣಾಗತನಾಗಿ ಕೃತಾರ್ಥನೆನಿಸಿದ ನೆಂದ ಬಳಿಕ, ಆಧ್ಯಾತ್ಮಿಕ ತತ್ವದ ಮಹೋನ್ನತವಾದ ಗೂಢ ಹೃದಯ ಕುಹರದ ದಿವ್ಯ ಪ್ರಭೆಯನ್ನೂ ಹಾಗೂ ಆ ಪರಂಜ್ಯೋತಿಮಯರೆನಿಸಿದು ಸ್ವಯಂ ಜ್ಯೋತಿಗಳಾಗಿ ಬೆಳಗುವ, ಶ್ರೀ ಮಜ್ಜಗದ್ಗುರು ರೇಣುಕಾದಿ ಪಂಚಾ, ಚಾರ್ಯರ ಪಾದ ಕಮಲಗಳ ಮಹತ್ವವನ್ನೂ ಪೂರ್ಣ ಅರಿಯಲು, ದೇವಾ ಸುರರುಗಳಿಂದಲೂ, ಮಹರ್ಷಿಕುಲ ತಿಲಕರಾದ ಶ್ರೀ ಅಗಸ್ತ್ಯ, ಗೌತಮ, ದಧೀಚಿ, ದರ್ವಾಸ, ಸಾನಂದಾದಿ ಯೋಗೀಂದ್ರ ಮುನಿಂದ್ರರಿಂದಲೂ ಅಸದಳ ವೆನಿಸಿತೆಂದ ಬಳಿಕ, ಚಾರಿತ್ರಿಕ ದೃಷ್ಟಿಕೋನಕ್ಕೆ ಮೇಲ್ಕಂಡ ಅಂಶದ ಸತ್ಯಾಂಶ ವನ್ನು ಅರಿಯಲು ಹೇಗೆ ತಾನೆ ಸಾಧ್ಯವೆನಿಸಿಸಬಲ್ಲದು.

॥ ತೇ ಧ್ಯಾನಯೋಗಾನುಗತಾ ಅಪಶ್ಯ ॥

ಜ್ಞಾನಿಗಳು ಧ್ಯಾನಯೋಗಬಲದಿಂದ ಅಂತರ್ಮುಖಿಗಳಾಗಿ, ತಮ್ಮೊಳಗೆ ಪ್ರಜ್ವಲಿಸುವ ಪರಾತ್ಪರ ಪರಂಜ್ಯೋತಿಯನ್ನು ಸಂದರ್ಶಿಸುವರು. ಆದಕಾರಣ ॥ ಧ್ಯಾನಃ ಜ್ಞಾನಾತ್ ವಿಶಿಷ್ಯತೆ ॥ ಜ್ಞಾನಕಿಂತಲೂ ಧ್ಯಾನವು (ಗುರುಧ್ಯಾನ ಶಿವಧ್ಯಾನಗಳು) ಅತ್ಯಧಿಕವೆನಿಸಿರುವುದೆಂದು ಶಾಸ್ತ್ರಾಧಾರವಿದೆ. ಅಂದರೆ ಅಂತರ್ಮುಖಿಗಳಾದ ಶಿವಯೋಗಿಗಳು ತಮ್ಮ ಘನ ಜ್ಞಾನ ಯೋಗ ಬಲದಿಂದ ಸಿದ್ಧಿಯನ್ನು ಪಡೆದು ಸಿದ್ಧಕುಲ ಚಕ್ರವರ್ತಿಗಳೆನಿಸಿದ ಶ್ರೀ ಸಿದ್ಧರಾಮ ಅಲ್ಲಮಾದಿಗಳಂಥಾ ಮಹಾತ್ಮರ ಅಂತರಂಗದಲ್ಲಿ ಪರಿಶೋಭಿಸುವ, ಗುರುವಿನ ಪಾದಕಮಲಗಳ ಮಹಿಮೆಯನ್ನು, ಸಹಸ್ರ ಹೆಡೆಗಳುಳ್ಳ ಫಣಾಮಣಿಯಿಂದಲೂ ತನ್ನ ಸಹಸ್ರ ನಾಲಿಗೆಗಳಿಂದ ಪೂರ್ಣವರ್ಣಿಸಲು ಅಸದಳವೆಂತೆಂದ ಬಳಿಕ, ಪಶುಧರ್ಮಾ ಸಕ್ತತೆಯಲ್ಲಿ ಆಹೋ ರಾತ್ರಿ ಅನಾದಿಕಾಲದಿಂದಲೂ ಮುಳುಗಿ ಪಾಶವೀಯ ಮೋಹದ ಬಲೆಗೆ ಮರುಳಾಗಿ ಕಟ್ಟುಬಿದ್ದು, ಅವಿದ್ಯಾ ಸಂಬಂಧವನ್ನು ಪರಂಪರಾನುಗತವಾಗಿ ಉಳಿಸಿ ಬೆಳಸಿಕೊಂಡು, ಸಂಸಾರ ಚಕ್ರದಲ್ಲಿ ಸಿಕ್ಕಿ ತತ್ತರಿಸುತ್ತಿರುವ ಬಡಮಾನವರಿಗೆ, ಅಸಂಗನೂ ಅಪ್ರಮೇಯನೆನಿಸಿದ ಸದ್ಗುರುವಿನ ಅಖಂಡ ಮಂಡಲಾಕಾರಮಯ, ನಿಜಚಿದ್ಘನ ಸ್ವರೂಪದ ಅರಿವು, ಹೇಗೆತಾನೇ ಅವರ ಚರ್ಮ ಚಕ್ಷುಗಳಿಗೆ ಗೋಚರವಾದೀತು. ಕಾಮಾಲೆ ರೋಗದಿಂದ ಪೀಡಿತನಾದವಂಗೆ—ಶುಭ್ರವಾದ ಬಲಮುರಿ ಶಂಖು, ಬಿಳಿಯ ತುಂಬೆ ಹೂವು, ಧಾವಳ್ಯವಾದ ಬಿಳಿದಾಸವಾಳ ಹೂವು, ಮಲ್ಲಿಗೆ ಹೂವು, ಹಾಲು ಬೆಣ್ಣೆಗಳೆಲ್ಲಾ, ಶುದ್ಧ ಸ್ಫಟಿಕದಂತೆ ಬಿಳುಪಾಗಿದ್ದರೂ, ಕಣ್ಣಿನ ದೋಷದಿಂದ, ಇವಿಷ್ಟೂ ಹಳದಿ ಬಣ್ಣದಿಂದ ತೋರುವಂತೆ, ಪತಿತನಾಗಿ ವ್ಯಾಮೋಹದಿಂದ ಕಲುಷಿತ ಚಿತ್ತನಾದನರನ ಸ್ಥಿತಿ, ಆತ್ಮಜ್ಞಾನಿಗಳಿಗೆ ಅತೀವ ವಿಶಾದವನ್ನುಂಟುಮಾಡ ತಕ್ಕಂಥದ್ದಾಗಿರುವುದು.

ಶ್ರೀ ಮಜ್ಜಗದ್ಗುರು ರೇಣುಕಾದಿ ಪಂಚಾಚಾರ್ಯರುಗಳು ಶಿವಲಿಂಗೋದ್ಭವರು ಎಂಬ ಆಗಮಾಮ್ನಾಯದಿಗಳ ಅಮೃತವಾಣಿಯನ್ನು ಆಧಾರವಾಗಿಟ್ಟುಕೊಂಡು, ಈಗ್ಗೆ ಒಂದು ಸಾವಿರ ವರ್ಷಗಳ ಹಿಂದಿದ್ದ, ಸಂಸ್ಕೃತರೇಣುಕವಿಜಯ ಮಹಾ ಗ್ರಂಥಕರ್ತರಾದ ಶ್ರೀ ಸಿದ್ಧನಾಥ ಶಿವಾಚಾರ್ಯರು, ತಮ್ಮ ಗ್ರಂಥ ರತ್ನದಲ್ಲಿ ಶ್ರೀ ಪಂಚಾಚಾರ್ಯರನ್ನು ಮುಕ್ತಕಂಠದಿಂದ ಸ್ತುತಿಸುತ್ತಾ—

॥ ರಾಗ ರಹಿತರು ಉದಾರರುರೆ
ಶೈವಾಗಮಾಂಬುಜಭಾಸ್ಕರರು
ಹೃದ್ಯರನವಧ್ಯರ್ .... .... .... ॥ (ಕನ್ನಡದನುವಾದ)

ಎಂಬುದಾಗಿ ವಿವರಿಸಿ, ಕರ್ಮಜೀವಿಗಳನ್ನು ಉದ್ಧಾರಮಾಡಲಿಕ್ಕೆಂದೇ ಭುವಿಗಳಿದು, ಅಯೋನಿಜರಾಗಿ, 1400 ವರ್ಷಗಳು ಅಂದರೆ, ಗುಪ್ತಶಿವಯೋಗಾನುಷ್ಠಾನ ಪರವಾಗಿ ಸಂಚರಿಸುತ್ತಾ 700 ವರ್ಷಗಳೂ, ವಿಶ್ವದ ದಿಗ್ವಿಜಯ ಯಾತ್ರೆಯಲ್ಲಿ ಜಗತ್ತಿಗೆ ತೋರ್ಪಟ್ಟು ಸರ್ವತ್ರ ಭೂ, ಅಂತರಿಕ್ಷಗಾಮಿಗಳಾಗಿ ಸಂಚರಿಸುತ್ತಾ 700 ವರ್ಷ, ಹೀಗೆ ಪ್ರತ್ಯಕ್ಷವಾಗಿಯೂ ಅ ಪ್ರತ್ಯಕ್ಷವಾಗಿಯೂ, ದಿವ್ಯ ದೇಹಧಾರಿಗಳಾಗಿ ಅಲ್ಲಲ್ಲಿ ಲೋಕಾನುಗ್ರಹಾರ್ಥ ಸಂಚರಿಸಿ, ಬದ್ಧ ಜೀವರುಗಳನ್ನು ಮುಕ್ತರನ್ನಾಗಿ ಮಾಡಿ ಶಿವಲೀಲಾ ವಿಭೂತಿಯೋಗದಲ್ಲಿ ಮೆರೆದ ಮಹಾಚಾರ್ಯವರೇಣ್ಯರನ್ನು, ಅಲ್ಪಜೀವಿಗಳ ಮಟ್ಟಕ್ಕಿಳಿಸಿ ಸಂಸಾರಿಯಾಗಿ ಬಂಧನಕ್ಕೊಳಪಡಿಸಿ, ಅವರಿಗೂ ಹೆಂಡರು ಮಕ್ಕಳಿದ್ದು, ಆಸ್ತಿಪಾಸ್ತಿಗಳಿದ್ದಂತೆಲ್ಲಾ ಅಪಲಪಿಸಿ, ಅವರ ವಿಳಾಸವೂ ಮಣ್ ನೆಲದಲ್ಲಿತ್ತು ಎಂದು ಸುರುವವರು, ಸತ್ಯ ದರ್ಶನಕ್ಕೆ ದೂರ ಇರುವವರು ಎಂದೇ ದೃಢಪಡುವುದು. ದಯಾಮಯನಾದ ದೇವರು ಅಂಥವರಿಗೂ ಶೀಘ್ರ ಸದ್ಬುದ್ಧಿಯನ್ನು ದಯಪಾಲಿಸಲೆಂದು ಪ್ರಾರ್ಥಿಸುತ್ತೇನೆ. ಆತ್ಮವಿದ್ಯೆಯ ಪ್ರಗತಿಯೇ ನಿಜವಾದ ಪ್ರಗತಿ.

॥ ಅನ್ಯ ವಿದ್ಯಾ ಪರಿಜ್ಞಾನಂ ।
ಅವಶ್ಯಂ ನಶ್ವರಂ ಭವೇತ್ ॥
ಬ್ರಹ್ಮ ವಿದ್ಯಾ ಪರಿಜ್ಞಾನಂ ।
ಬ್ರಹ್ಮ ಪ್ರಾಪ್ತಿ ಕರಂ ಸ್ಥಿತಂ ॥

ಆಧ್ಯಾತ್ಮ ವಿದ್ಯೆಗೆ ಅನ್ಯವೆನಿಸಿದ ಭೌತಿಕ ಜ್ಞಾನ ವಿಜ್ಞಾನಾದಿಗಳಲ್ಲಿ ಮಾನವರು ನವನಾಗರಿಕತೆಯ ಹಾದಿಯಲ್ಲಿ ಪ್ರಗತಿಪರರಾಗಿ ಭೂಮ್ಯಾಕಾಶಾದಿಗಳಲ್ಲಿ ಸಂಚರಿಸಿ, ಬುಧ, ಶುಕ್ರ, ಚಂದ್ರಮಂಡಲಗಳನ್ನು ಮುಟ್ಟುವಷ್ಟು ಕಲಾಕೃತಿಯಲ್ಲಿ

ನೈಪುಣ್ಯವನ್ನು ಪಡೆದಿದ್ದರೂ, ವಿಜ್ಞಾನ ಕೌಶಲ್ಯವು ಆಧ್ಯಾತ್ಮಿಕ ದೃಷ್ಟಿಕೋನಕ್ಕೆ ಸರಿ ತೂಗುವಂತೆ ಅಧ್ಯಾತ್ಮ ಧರ್ಮವನ್ನು ಅವಲಂಬಿಸದಿದ್ದಲ್ಲಿ ॥ ಅನ್ಯ ವಿದ್ಯಾ ಪರಿಜ್ಞಾನಂ । ಅವಶ್ಯಂ ನಶ್ವರಂಭವೇತ್ ॥ ಅಂತಂದ ಬಳಿಕ, ಕೇವಲ ಚಾರಿತ್ರಿಕ ದೃಷ್ಟಿಕೋನದಲ್ಲೇ ಮುಳಿಗಿ ಗಂಭೀರವಾದ ಆಧ್ಯಾತ್ಮಿಕ ತತ್ವವನ್ನು ಪೂರ್ಣ ವಿಶ್ವಸಿಸದೆ ಹೋದರೆ ಮೇಲುಕ್ತವಾದಂತೆ ॥ ಅವಶ್ಯಂ ನಶ್ವರಂ ಭವೇತ್ ॥ ಎಂಬಹಿತವಾಣಿ ಗಮನಾರ್ಹವೇ ಇರುತ್ತೆ.

॥ ಆ ಬ್ರಹ್ಮ ಭುವನಲ್ಲೋಕಾಃ
ಪುನರಾವರ್ತಿನೋಽರ್ಜುನ ।
ಮಾಮು ಪೇತ್ಯತುಕೌಂತೇಯ
ಪುನರ್ಜನ್ಮ ನವಿದ್ಯತೇ ॥ (ಗೀ. ಶ್ಲೋ)

॥ ಗುರುವೇ ಸರ್ವಲೋಕಾನಾಂ । ಭಿಷಜೇಭವ ರೋಗಿಣಾಂ ॥ ಎಂಬ ಶಾಸ್ತ್ರೋಕ್ತಿಯಂತೆ, ಘೋರ ಭವರೋಗಕ್ಕೆ ವೈದ್ಯನಾಥನೆನಿಸಿದ ಗುರುವಿನ ಶ್ರೀ ಪಾದಛಾಯಾಶ್ರಯದಲ್ಲಿ, ಶರಣಾಗತನಾದ ಮಾನವನು, ಭವರೋಗದಿಂದ ಪಾರಾಗಿ, ಸಂಸಾರ ಸಾಗರವನ್ನು ದಾಟಲು, ॥ ಗುರುಚರಣಂ ಭವಹರಣಂ । ಸದ್ಗುರು ಚರಣಂ ಭವಹರಣಂ ॥ ಅಂದಂತೆ ಸುಭದ್ರನಾವೆಯಂತೆ ಶ್ರೀ ಜಗದ್ಗುರುವಿನಪಾದ ಪರಿಶೋಭಿತವಾಗಿರುವುದು.

ಜಗತ್ತಿನ ಉಭಯ ಜಗದ್ಗುರು ವರೇಣ್ಯರ ಮಧ್ಯೆ ಅಂದರೆ ಒಂದುಕಡೆ ಶ್ರದ್ಧಾಭಕ್ತಿ ಪುರಸ್ಸರ ಭಾವದಿಂದ ಶ್ರೀ ಶೃಂಗೇರಿ ಶಾರದಾ ಪೀಠದ ಜಗದ್ಗುರು ಸಾರ್ವಭೌಮನಾದ ಆದಿ ಶ್ರೀ ರೇವಣಸಿದ್ಧ ಮಹಾಯೋಗಿಗಳ ದಿವ್ಯಾನುಗ್ರಹಕ್ಕಾಗಿ, ತಮ್ಮ ಕೋಮಲ ಕರಕಮಲಗಳನ್ನು ಆದರ ಭಕ್ತಿ ಭಾವದಿಂದ ನೀಡಿರಲು, ಭಗವತ್ಪಾದ ಜಗದ್ಗುರುವರೇಣ್ಯನಾದ ಶ್ರೀ ರೇಣುಕಾಚಾರ್ಯನು (ಶಿವಾಗಮಗಳು ಜಗದ್ಗುರು ರೇಣುಕಾಚಾರ್ಯರನ್ನು ರೇವಣಸಿದ್ಧನೆಂಬ ಅಭಿಧಾನದಿಂದಲೂ ಮುಕ್ತಕಂಠದಿಂದ ಸ್ತುತಿಸಿರುವುದು ಅತ್ಯಂತ ಗಮನಾರ್ಹ) ತನ್ನ

ನಿಜ ಶಿವಯೋಗ ಶಕ್ತಿಯಿಂದ ॥ ಅಂತರ್ಜ್ಯೋತಿ ರವೇ । ಯಮೇಕ ಮಮೃತಂ ॥ ಎಂದು ಸ್ತುತ್ಯವಾದ, ಅಂತರಂಗದ ಆತ್ಮಜ್ಯೋತಿಯ ಚಿತ್ಕಳೆಯನ್ನು ಶ್ರೀ ಚಂದ್ರಮೌಳೀಶ್ವರ ಲಿಂಗವಾಗಿ ತಮ್ಮ ಅಮೃತಕರ ಕಮಲ ಪೀಠಕ್ಕೆ ಶಿವಲೀಲಾ ವಿಭೂತಿಯೋಗದಿಂದ ಸಾಕ್ಷಾತ್ಕರಿಸಿ, ಓಂಕಾರ ಪ್ರಣವ ಮಯ ಪರಂಜ್ಯೋತಿಯಾಗಿ ಬೆಳಗುವ ಚಂದ್ರಮೌಳೀಶ್ವಶ ಲಿಂಗವನ್ನು ಆದಿ ಶ್ರೀ ಶಂಕರರಿಗೆ ಅನುಗ್ರಹಿಸಿ, ಶಿವಾದ್ವೈತದ ಮಹತ್ತರವಾದ ತಿರುಳನ್ನು ತಮ್ಮ ಅಮೃತವಾಣಿಯಿಂದ ಪ್ರಕಾಶಪಡಿಸುತ್ತಾ — ಧರ್ಮಗಳಲ್ಲೆಲ್ಲಾ ॥ ಧರ್ಮೋಲಿಂಗಾರ್ಚನಾತ್ಮಕಃ ॥ ಶಿವಲಿಂಗಾರ್ಚನೆ, ಗುರುದತ್ತವಾದ ಇಷ್ಟ ಲಿಂಗೋಪಾಸನೆಯೇ ಸರ್ವಶ್ರೇಷ್ಠವೂ, ಭುಕ್ತಿ ಭಕ್ತಿ ಮುಕ್ತಿ ಪ್ರದವೂ ಆಗಿ ವಿರಾಜಿಸುತ್ತಲಿರುವುದೆಂಬ ಮಹದಂಶವನ್ನು ಮುಕ್ತಕಂಠದಿಂದ ಉಪದೇಶಿಸಿ ಅನುಗ್ರಹಿಸಿರುವರು ಧರ್ಮ ಗ್ರಂಥಗಳು ॥ ಧರ್ಮಸಾರ ಮಿದಂಜಗತ್ ॥ ಎಂದು ಉದ್ಘೋಷಿಸುತ್ತಲಿರುವುದರಿಂದ, ಲಿಂಗ ತತ್ವದ ವಂದಂಶವೇ ಅಂಗವಾಗಿಯೂ ಅಖಂಡ ಪಾಂಚಭೌತಿಕ ಪ್ರಪಂಚಾಕಾರವಾಗಿ ವಿಸ್ತರಿಸಿರುವ ಕಾರಣ ಪಂಚ ಭೂತಗಳೂ ಪೃಥ್ವಿಲಿಂಗ, ಅಪ್‌ಲಿಂಗ, ಜ್ಯೋತಿರ್ಲಿಂಗ, ವಾಯುಲಿಂಗ ಮತ್ತು ಆಕಾಶಲಿಂಗಗಳ ಅಸ್ತಿತ್ವಗಳಿಂದ ಪ್ರಕಾಶಿತವಾಗಿರುವುವು. ಪಂಚಲಿಂಗಮಯ ರೆನಿಸಿದ ಜ॥ ರೇಣುಕಾದಿ ಪಂಚಾಚಾರ್ಯರು ಪಂಚಭೂತಗಳಿಗೆ ಅಧಿಪತಿ ಗಳೆಂದೂ ಅಖಿಲ ಲೋಕಗಳಿಗೂ ಶ್ರೀ ಮತ್ಪಂಚಾಚಾರ್ಯರು ॥ ಜಗದ್ಗುರು ವರೋತ್ತಮಾಃ ॥ ಎಂಬುದಾಗಿ ಶಿವಾಗಮಗಳು ಘೋಷಿಸುತ್ತಲಿರುವುವು. ಈ ತತ್ವವನ್ನರಿತ ವಿಷ್ಣು ಬ್ರಹ್ಮೇಂದ್ರಾದಿ ಪ್ರಮುಖ ದೇವಾಸು ದೇವತೆಗಳೂ ನಿತ್ಯ ಶಿವಲಿಂಗಾರ್ಚನ ತತ್ಪರರಾಗಿರುವ ಮಹದಂಶವನ್ನು ಭಗವತ್ಪಾದ ಶ್ರೀ ಮಜ್ಜಗ ದ್ಗುರು ಆದಿ ಶ್ರೀ ರೇಣುಕಾಚಾರ್ಯರು ಆದಿ ಶ್ರೀ ಶಂಕರಾಚಾರ್ಯರಿಗೆ ವಿವರಿಸಿ ಉಪದೇಶಿಸುತ್ತಾ —

॥ ಬ್ರಹ್ಮ ಮುರಾರಿ ಸುರಾರ್ಚಿತಲಿಂಗಂ ।
ನಿರ್ಮಲ ಭಾಸಿತ ಸುಶೋಭಿತ ಲಿಂಗಂ ॥

ಜನ್ಮಜ ದುಃಖ, ವಿನಾಶಕಲಿಂಗಂ ।
ತತ್ಪ್ರಣಮಾಮಿ, ಸದಾಶಿವಲಿಂಗಂ ॥

"ದೇವರೊಳುತ್ತಮಂ" ಎಂದು ಪ್ರಸಿದ್ಧನಾದ ಹಾಗೂ ದೇವಾದಿ ದೇವ ಮಹಾದೇವನೆನಿಸಿದ, ದೇವತಾ ಸಾರ್ವಭೌಮ ಶ್ರೀ ಚಂದ್ರಮೌಳೀಶ್ವರ ಮಹಾಲಿಂಗದ ನಿರಂತರ ಸಂಪರ್ಕ, ಸ್ಮರಣೇ, ಕೀರ್ತನೆ ನಿತ್ಯಾರಾಧನೆ, ತೀರ್ಥ ಪ್ರಸಾದ ಸೇವನೆ, ಧ್ಯಾನ ಮತ್ತು ಆತ್ಮ ನಿವೇದನೆ, ಮೊದಲಾದ ಶಿವಯಜ್ಞ ರೂಪ ಕಾಯಕಗಳನ್ನು ನಿಷ್ಕಾಮಯೋಗಾಚರಣೆಗಳಿಂದ ಅನನ್ಯ ಭಾವೇನ ಭಕ್ತಿ ಪೂರ್ವಕವಾಗಿ ಅನುಷ್ಠಿಸುತ್ತಾ ಬಂದಲ್ಲಿ, ಹರಗುರುಗಳ ಅನುಗ್ರಹದಿಂದ, ಜೀವನು ಶಿವನಾಗುವನು. ಗುರುಕರುಣೆ ಅತಿ ದೊಡ್ಡದು ಹಾಗೂ ಮಹತ್ವ ಪೂರಿತವಾದುದು. ಬಂಗಾರವು ತನ್ನ ಸ್ಪರ್ಶಿಸಿದ ಕಬ್ಬಿಣವನ್ನು ಬಂಗಾರದಂತೆ ಮಾಳ್ಕುಂ. ಆದರೆ ಹಿರಣ್ಮಯ ಗರ್ಭನೆನಿಸಿದ ಪರಶಿವ ಸದೃಶಿ ಸದ್ಗುರುದೇವನು, ತನ್ನಲ್ಲಿ ಶರಣಾಗತಿಭಾವದಿಂದ ಶರಣಾದ ಶಿವಶರಣನನ್ನು ಸಾಕ್ಷಾತ್ತಾಗಿ ತನ್ನಂತೆಯೇ ಮಾಡುವನು. ಶ್ರೀ ರಾಮಕೃಷ್ಣ ಪರಮಹಂಸ ಗುರುದೇವರ ಅಡಿದಾವರೆಗಳಲ್ಲಿ ಶರಣಾದ ನರೇಂದ್ರನನ್ನು ಸದ್ಗುರುದೇವನು ನಿಮಿಷಾರ್ಧದಲ್ಲಿ ಶಿಷ್ಯನ ಪರಿಪಕ್ವವನ್ನರಿತು ಶಿವಾನಂದದಲ್ಲಿ ಮುಳುಗಿಸಿ ಅನುಗ್ರಹಿಸಲು, ವಿವೇಕಾನಂದದಲ್ಲಿ ॥ ಪ್ರಜ್ಞಾನಂ ಬ್ರಹ್ಮ ॥ ಎಂಬ ಉಚ್ಛ ಸ್ಥಿತಿಯನ್ನು ಏರಲಿಲ್ಲವೆ. ಹರನಷ್ಟೇ ಮಹಿಮಾ ಸಂಪನ್ನನಾದ ರೇಣುಕ ಜಗದ್ಗುರುದೇವನು, ಚಂದ್ರಶೇಖರನ ಮಹಾ ಮಹಿಮೆಯನ್ನು ಮುಕ್ತಕಂಠದಿಂದ ಮನಸಾರ ಆದಿ ಶ್ರೀ ಶಂಕರರಿಗೆ ವಿವರಿಸುತ್ತಾ, ಸಾಗರವ ಮುಟ್ಟಿದ ನದಿ ಸಾಗರವಾಗುವಂತೆ ಶಿವನ ಅಪ್ಪಿದ ದೇಹ ಶಿವಮಯವೆನಿಸುವುದೆಂದು, ಲಿಂಗಾಂಗ ತತ್ವಗಳ ಹಾಗೂ ಜೀವನೆಂಬ ಅಂಗನು ಶಿವಲಿಂಗದ ಅವಿಚ್ಛಿನ್ನ ಸಹಜ ಸಂಪರ್ಕದಿಂದ ಮತ್ತೂ ಅವಿನಾಭಾವ ಸಂಬಂಧದಿಂದ, ಇಷ್ಟಲಿಂಗಾರಾಧನೆಯ ಸತತ ಸಂಸರ್ಗದಿಂದ ಶಿವನಾಗಿಯೇ ಜೀವಂತಕಾಲದಲ್ಲಿ ವಿರಾಜಿಸುವನು, ಇಂತೆಂಬ ಪರಮೋತ್ಕೃಷ್ಟ ವಾದ ಮಹದಂಶಗಳನ್ನೂ, ಇಷ್ಟಲಿಂಗಾರಾಧನೆಯ ಮಹತ್ವವನ್ನೂ ತುಂಬಿದ

ಹೃದಯದಿಂದ, ಅರಳಿದ ಸದ್ಭಾವದಿಂದ, ಜಗದ್ಗುರು ಆದಿ ಶ್ರೀ ರೇಣುಕನು, ಸತ್ಪಾತ್ರರೆನಿಸಿದ ದೈವಾಂಶ ಪುರುಷರಾದ ಆದಿ ಶ್ರೀ ಶಂಕರಾಚಾರ್ಯರಿಗೆ ಸಾಕ್ಷಾತ್ತಾಗಿ ಬೋಧಿಸಿರುವರೆಂದು ನಿಸ್ಸಂದೇಹವಾಗಿ ಹೇಳಬಹುದು.

ಪರಮ ಪವಿತ್ರವೂ ಶಿವಂಕರವೂ ಆದ ಈ ಮಹೋನ್ನತವಾದ ಮಂಗಳಘಟ್ಟವನ್ನು ಮನದಲ್ಲಿ ಸ್ಮರಿಸುತ್ತಾ—ಶ್ರೀ ಗಿರಿರಾಜ ಸೂರ್ಯಸಿಂಹಾ ಸನಾಧೀಶ್ವರ ೧೦೦೮ ಶ್ರೀಶೈಲ ಶ್ರೀ ಮಜ್ಜಗದ್ಗುರು ಶ್ರೀ ಶ್ರೀ ವಾಗೀಶ ಪಾಂಡಿತಾ ರಾಧ್ಯ ಶಿವಾಚಾರ್ಯ ಶ್ರೀ ಪಾದಂಗಳರವರು, ತಮ್ಮಿಂದ ರಚಿತವಾದ ಶ್ರೀ ಮಲ್ಲಿಕಾರ್ಜುನ ಸುಪ್ರಭಾತ ಸ್ತುತಿಯಲ್ಲಿ ಸುಂದರವಾಗಿ ವರ್ಣಿಸುತ್ತಾ—

॥ ಶ್ರೀ ಶಂಕರಾದಿಯತ । ಯ ಶೈವಪೂಜಯಾಪ್ಯೈ ।
ಜೀವಶ್ಶಿವೋಭವತಿ ಸತ್ಯಮಿತಿಸ್ತುವಂತಃ ॥
ತ್ವ ದ್ಧ್ಯಾನ ಮಗ್ನಮತ । ಯಸ್ಸಮುಪಾಗತಾಶ್ಚ ।
ಶ್ರೀ ಮಲ್ಲಿಕಾರ್ಜುನ ವಿಭೋ ! ತವಸುಪ್ರಭಾತಂ ।

ಎಂದು ಮುಕ್ತಕಂಠದಿಂದ ಸ್ತುತಿಸಿರುವರು. ಶ್ರೀ ಮಲ್ಲಿಕಾರ್ಜುನನು ಬೇರೆ, ಶ್ರೀ ಚಂದ್ರಮೌಳೀಶ್ವರನು ಬೇರೆ, ಕೂಡಲ ಸಂಗಮೇಶ್ವರನು ಬೇರೆ, ಕೊಲ್ಲಿ ಪಾಕಿ ಶ್ರೀ ಸೋಮನಾಥ ಲಿಂಗವು ಬೇರೆ, ಎಂದು, ಬೇರೆ ಬೇರೆ ಭೇದವೆಣಿ ಸಲಿಕ್ಕೆ ಬಾರದ ರೀತಿಯಲ್ಲಿ ಸರ್ವೇಶ್ವರನಾದ ಪರಮೇಶ್ವರನು ॥ ಏಕಂ ಸತ್ ವಿಪ್ರಾಃ ಬಹುಧಾವದಂತಿ ॥ ಎಂಬ ಉಪನಿಷತ್ತಿನ ಹೃದಯದಂತೆ ಒಬ್ಬನೇ ಆಗಿ ವಿರಾಜಮಾನನಾಗಿರುವನು.

ಅನಂತಾನಂತ ನಾಮಗಳು ಬ್ರಹ್ಮಾಂಡಾಖಂಡಾದ್ವಯ ದೇವತಾ ಸಾರ್ವಭೌಮನಾದ ಪರಶಿವನಿಗೆ ಅನ್ವಯಿಸುವುವಾದ್ದರಿಂದ, ಜೀವ ಬ್ರಹ್ಮೈಕ್ಯ ಅಥವಾ ಲಿಂಗಾಂಗ ಸಾಮರಸ್ಯಾನುಭವಕ್ಕೆ, ಉಭಯ ಜಗದಾಚಾರ್ಯರುಗಳ ಮಧ್ಯೆ ಮೂರ್ತಾ ಮೂರ್ತ ದಿವ್ಯ ಸ್ವರೂಪದಿಂದ ವಿರಾಜಿಸಿ ಭಗವತ್ಪಾದ ದ್ವಯರ ಕಣ್ಮನಂಗಳನ್ನು ಸೂರೆಗೈದು, ಶ್ರೀ ಶ್ರೀ ಗಳವರ ಹೃನ್ಮಂದಿರ

ಗಳನ್ನು ।। ಸರ್ವ ಹೃದಯ ಪ್ರಕಾಶಃ ।। ಎಂಬಂತೆ ಸ್ವಯಂ ಜ್ಯೋತಿಯಿಂದ ಪ್ರಕಾಶಗೊಳಿಸಿದ, ಸರ್ವೋತ್ತಮೋತ್ತಮ ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಅನನ್ಯ ಭಕ್ತಿಭಾವೇನ ಮನಸ್ಸಿನಲ್ಲಿ ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಚಂದ್ರಮೌಳೀಶ್ವರ ಲಿಂಗವು ಜಗದ್ಗುರು ದ್ವಯರ ಮಧ್ಯೆ, ಆಚಾರ್ಯ ಸಾರ್ವಭೌಮರ ಅಮೃತ ಕರ ಕಮಲದಲ್ಲಿ ಅಲಂಕೃತವಾಗಿರುವ ದಿವ್ಯ ದೃಶ್ಯವು— ತ್ರಿವಿಧ ದಾಸೋಹಗಳೆನಿಸಿದ ಗುರುಲಿಂಗ ಜಂಗಮರಿಗೆ ತನುಮನ ಧನಗಳನ್ನು ಅರ್ಪಿಸಿ ಧನ್ಯವಾಗುವ ಸ್ಮರಣೆ ಉಕ್ಕಿ ಹರಿಯುವ ಸನ್ನಿವೇಶವನ್ನು ಸೂಚಿಸುವಂತಿದೆ.

ಇಂತಃ ದೇವಾಮೃತಮಯ ಸನ್ನಿವೇಶವನ್ನು ಮಾನವನು—।। ಜೀವಿತಂ ಕ್ಷಣಭಂಗುರಃ ॥ ಧರ್ಮಸ್ಯತ್ವರಿತಾಗತಿಃ ।। ತನ್ನ ಜೀವಮಾನವು ನೀರ್ಗುಳ್ಳೆಯಂತೆ ಕ್ಷಣಭಂಗುರವಾದುದೆಂದರಿತು, ಈ ಉತ್ತರ ಕ್ಷಣದಿಂದಲೇ ಧರ್ಮವನ್ನು ಆಚರಿಸಲು ಕಂಕಣಬದ್ಧನಾಗಬೇಕು. ಮೇಲುಕ್ತವಾದ ಚಂದ್ರಮೌಳೀಶ್ವರ ಲಿಂಗ ಪ್ರದಾನ ಮಂಗಳ ಘಟ್ಟದ ಸ್ಮರಣೆ ಧ್ಯಾನಾದಿಗಳಿಂದ ಹರಗುರುಗಳ ಒಲುಮೆಗೆ ಪಾತ್ರರಾಗಿ, ಹರಿಬ್ರಹ್ಮೇಂದ್ರಾದಿಗಳಿಗೂ ಅಲಭ್ಯವೆನಿಸಿದ, ನಿತ್ಯಾನಂದ ನಿಜ ಸುಖವನ್ನು ಮಾನವನು ದೇಹವಿರುವಾಗಲೇ, ಗುರುಕೃಪಾಶೀರ್ವಾದ ಬಲದಿಂದ ಹೊಂದಿ ಲಿಂಗಾಂಗ ಸಾಮರಸ್ಯವನ್ನು ಹೊಂದಬಲ್ಲನು. ಈ ಅಪೂರ್ವ ಗುರಿಯನ್ನು ಸಾಧಿಸಲಿಕ್ಕಾಗಿ ಅತ್ಯಂತ ವಿಶ್ವಾಸದಿಂದ, ಪರಿಶ್ರಮವನ್ನು ಪರಿಗಣಿಸದೆ ಈ ಗ್ರಂಥವನ್ನು ದೈವ ಪ್ರೇರಣೆಯಿಂದ ಬರೆಯಲು ಉತ್ಸಾಹ ಭರಿತನಾದೆನು.

ಶ್ರೀ ಶೃಂಗೇರಿ ಜಗದ್ಗುರು ಆದಿ ಶ್ರೀ ಶಂಕರಾಚಾರ್ಯರಿಗೆ ದತ್ತವಾದ ಶ್ರೀ ಚಂದ್ರಮೌಳೀಶ್ವರ ಲಿಂಗದ ನೈಜವೃತ್ತಾಂತವೆಂಬ ಗ್ರಂಥರತ್ನವು ಐದು ಅಧ್ಯಾಯಗಳಲ್ಲಿ ಪೂರ್ತಿಮಾಡಲು ಸಂಕಲ್ಪಿಸಿ ಪ್ರಾರಂಭಿಸಲಾಯಿತು ಪ್ರಸ್ತಾವನೆ, ನಿವೇದನೆ, ಸರ್ವಮಂಗಳಸರಣಿ, ಚಂದ್ರಮೌಳೀಶ್ವರ ಲಿಂಗಪ್ರದಾನ ಮತ್ತೂ ಕೃತಜ್ಞತಾ ಸಮರ್ಪಣ ಇವೇ 5 ಅಧ್ಯಾಯಗಳು. ಒಟ್ಟು 500 ಪುಟಗಳಲ್ಲಿ ಮುಗಿಸಬೇಕೆಂದು ಇತ್ತು. ಆದರೆ ಪ್ರಸ್ತಾವನೆಯನ್ನು ಬರೆಯಲು

ಉಪ ಕ್ರಮಿಸಿದಾಗ, ಸನಾತನ ಧರ್ಮದ ದಿವ್ಯ ದೃಶ್ಯ ಚಿತ್ತದಲ್ಲಿ ಪ್ರತಿಬಿಂಭಿತ ವಾಗಿ, ಅದರೊಳಗಿನ Diversity in Unity ಭೇಧ ಪ್ರಭೇಧಗಳ ಉಜ್ವಲ ತಾತ್ವಿಕ ಮಾರ್ಗಗಳು ಭಿನ್ನ ಭಿನ್ನವಾಗಿ ಕಂಡುಬಂದರೂ, ವಾಸ್ತವಾಂಶದಲ್ಲಿ ಒಂದೇ ಮೂಲವನ್ನು ಆಶ್ರಯಿಸಿರುವುವು ಎಂದು ಎತ್ತಿ ಹಿಡಿದು ವಿವರಣೆ ನೀಡಲು ಅವಶ್ಯವೆನಿಸಿತು. ಹಿಂದೂ ಧರ್ಮದಲ್ಲಿ ಪ್ರಧಾನವಾಗಿ ಕಂಡುಬರುವ ಭಿನ್ನ ಭಿನ್ನ ಮತಗಳೆಂದರೆ—ದ್ವೈತ, ವಿಶಿಷ್ಟಾದ್ವೈತ, ಶೈವಸಿಧ್ಧಾಂತ, ಅದ್ವೈತ ಮತ್ತೂ ಶಕ್ತಿವಿಶಿಷ್ಟಾದ್ವೈತ ಅಥವಾ ಶಿವಾದ್ವೈತಗಳೆನಿಸಿರುವುವು. ಮೇಲ್ಕಂಡೀ ಮತಗಳ ಆಚಾರ ವಿಚಾರಗಳೂ. ಸಂಪ್ರದಾಯಗಳೂ ಹಾಗೂ ಸಿದ್ಧಾಂತಗಳೂ ಆ ಆಚಾರ್ಯರುಗಳಿಂದ ಪ್ರತಿಪಾದಿತವಾದಂತೆ ಪೃಥಕ್ಕಾಗಿ ದ್ದರೂ, ಇವೊಷ್ಟರ ಅಂತ್ಯಗುರಿ, ನೆರೆನಂಬಿ ಆಶ್ರಯಿಸಿರುವ ಮುಖ್ಯಧರ್ಮ ವಂದೇ ಆಗಿರುವುದು. ಜಗತ್ಕರ್ತ ಜಗದೀಶ್ವರನೊಬ್ಬನಿದ್ದಾನೆ. ಅವನು ।। ಯೋಗಮಾಯಾ ಸಮಾವೃತಃ ।। ಎಂಬಂತೆ ದಿವ್ಯ ಶುದ್ಧ ವಿದ್ಯಾಮಯ, ಶುದ್ಧ ಮಾಯಾಶಕ್ತಿಯ · ಪ್ರಸಾರದಿಂದ ಬೆಳಗುತ್ತಿರುವನು.

।। ಪಾದೋಸ್ಯ ವಿಶ್ವಭೂತಾನಿ । ತ್ರಿಪಾದಸ್ಯಾಮೃತಂ ದಿವಿ ।। ಎಂಬ, ಶಿವಾಗಮೋಪನಿಷದಾದಿಗಳ ಘೋಷದಂತೆ, ಪರಾತ್ಪರ ವಸ್ತು ಪರಶಿವನ ಸಾಕ್ಷಾತ್ಸ್ವ ರೂಪವು, ಚತುಷ್ಪಾದಗಳಿಂದ ವಿರಾಜಿತವಾಗಿರುವುದು. ಅದರಲ್ಲಿ ಒಂದು ಪಾದದ ವಿಕಾಸವು ಏಕಾಂಶದಿಂದ

।। ವಿಷ್ಟಭ್ಯಾಹಮಿದಂ ಕೃತ್ಸ್ನ ।
ಮೇಕಾಂಶೇನ ಸ್ಥಿತೋಜಗತ್ ।। (ಗೀ. ಅಂ. 10 ಶ್ಲೊ 42)

ಭುವನಾಂಡ ಕೋಟಿಗಳಾಗಿ ವಿಸ್ತರಿಸಿ ಪ್ರಚಲಿತಗೊಂಡು, ವಿಕಾಸಮಾನವಾಗಿ ರುವುದು. ಮಿಕ್ಕುಳಿದ ಮೂರು ಪಾದಗಳು ಅಗೋಚರ, ಅವ್ಯಕ್ತ, ಅಪ್ರಮೇಯ, ಅಖಂಡಾನಂತ, ಆನಂದೋ ಬ್ರಹ್ಮವೆನಿಸಿ, ಪ್ರಜ್ಞಾನದ ಶಿಖರದ ಕೊನೆಯ ಮೊನೆಯಲ್ಲಿ ಬೆಳಗಿ ಪರಂಜ್ಯೋತಿಮಯ ವೆನಿಸಿರುವುವು.

॥ ನತದ್ಭಾಸಯು ತೇ ಸೂರ್ಯೋ ।
ನ ಶಶಾಂಕೋ ನ ಪಾವಕಃ ॥

ಅಂದಹಾಗೆ, ಯಾವ ದೇವೋತ್ತಮನ ಸಾನ್ನಿಧ್ಯದಲ್ಲಿ ಚಂದ್ರ ಸೂರ್ಯರ ಬೆಳಕು ಅಪ್ರಕಾಶಿತವಾಗುವುವೋ ಅಂತಪ್ಪ ದೇದೀಪ್ಯ ಮಾನವಾದ ಪರಂ ಜೋತಿ ಪರಶಿವನ ಮೂರು ಪಾದಗಳು ಪರಿಪೂರ್ಣ ಅಮೃತ ಮಯವೆನಿಸಿ, ವಿಷ್ಣು ಬ್ರಹ್ಮೇಂದ್ರಾದಿಗಳಿಗೂ, ಚತುರ್ವೇದಗಳಿಗೂ ನಿಲುಕದ, ಸಚ್ಚಿದಾನಂದ ಮಯವೆನಿಸಿರುವುವು. ಅಂತಪ್ಪ ಪರಮಾತ್ಮನನ್ನು, ಕರ್ಮ ಭಕ್ತಿ ಜ್ಞಾನ ನಿಷ್ಠಾಮ ಯೋಗಾನುಷ್ಠಾನಗಳ ಮೂಲಕ ಅಂತರಂಗದಲ್ಲಿ ವೀರ್ಯವತ್ತರವಾಗಿ ಸಾಕ್ಷಾತ್ಕರಿಸಿಕೊಂಡು, ನಿತ್ಯ ಸುಖಿಯೆನಿಸುವುದೇ ಈ ಎಲ್ಲಾ ಮತಗಳಲ್ಲಿನ Unity in Diversity. ವಿವಿಧ ಸಿದ್ಧಾಂತಗಳು ಒಂದು ಸ್ಥಲದಲ್ಲಿ ಸಮರಸಂದಿದ ವಿರಾಜಿಸಿ, ವಿಕಾಸಗೊಳ್ಳುತ್ತಲೇ ನಾನಾತ್ಮಕವಾಗಿ ವಿರಾಜಿಸುವುವು ಎಂಬ ಗುರಿ ಒಂದೆನಿಸಿರುವುದು. ಇವೇ ಮೊದಲಾದ ತಾತ್ವಿಕ ಆಧ್ಯಾತ್ಮಿಕ ಸಾಹಿತ್ಯ ಗಳನ್ನು ಅವಲಂಬಿಸಿ ಬೆಳಗುವ ವಿವಿಧ ಮತಗಳು ಭಕ್ತಿ ಸ್ವರೂಪವನ್ನು ಪ್ರತಿ ಪಾದಿಸಿರುವ, ವಿವಿಧ ಅಂಶಗಳನ್ನು ಸಂಕ್ಷಿಪ್ತವಾಗಿ ಅನುವಾದಿಸಿ, ಅನಂತರ ದಲ್ಲಿ ॥ ತತ್ವಾನಾಂ ಮಹದಾದೀ ನಾಂ ॥ ಎಂಬ ಶಿವಾಗಮೋಕ್ತಿಯಂತೆ, ತತ್ವಗಳಿಗೆಲ್ಲಾ ತಾಯ್ಮನೆಯಂತೆಸೆವ ಶಿವಾದ್ವೈತ ದರ್ಶನ (ಪರಮ ವೀರಶೈವ ಸಿದ್ಧಾಂತ) ವನ್ನೂ ಸಹ ಯತ್ಕಿಂಚಿತ್ ಪ್ರಸ್ತಾಪಿಸಿರುವೆನು. ವೇದಾಗಮೋಪ ನಿಷದಾದಿಗಳಲ್ಲಿ ಸ್ತುತ್ಯರಾದ, ವೀರಶೈವ ಮತಸ್ಥಾಪನಾ ಚಾರ್ಯವರ್ಯರೆನಿ ಸಿದ ಶ್ರೀಮಜ್ಜಗದ್ಗುರು ರೇಣುಕಾದಿ ಪಂಚಾಚಾರ್ಯರ ವಿಷಯವನ್ನೂ ಪ್ರಕಾಶ ಗೊಳಿಸಿ, ಆಗಮಾಮ್ನಾಯಾದಿಗಳ ಕಾಲಕ್ಕಿಂತಲೂ ಮಹಾಚಾರ್ಯರುಗಳು ಬಹುಪೂರ್ವಜರೆಂಬ ಪೂಜ್ಯ ಅಂಶ ನಿರ್ಧಾರಗೊಳ್ಳುವ ಬಗ್ಗೆ ಗಮನ ಹರಿಸ ಲಾಗಿರುತ್ತೆ.

ಜಗತ್ಸತ್ಯ ಮಿಥ್ಯೆಯಲ್ಲ. ವೀರಶೈವ ಅವಿಕಾರ ಪರಿಣಾಮ ತತ್ವವನ್ನು ಸ್ವಚ್ಛಂದವಾಗಿ ಪ್ರತಿಪಾದಿಸಿ, ಜ್ಞಾನ ಕರ್ಮಗಳ ಸಮುನ್ವಯದ ತಿರುಳನ್ನು ಎತ್ತಿ ಹಿಡಿದಿರುವುದೆಂದೂ ಪ್ರಸ್ತಾಪಿಸಲಾಗಿರುತ್ತೆ. ಶಿವಾದ್ವೈತ, ಯಜ್ಞಯಾಗಾದಿ

ಕಾಮ್ಯ ಕರ್ಮಗಳನ್ನು ಮನ್ನಿಸುವುದಿಲ್ಲವೆಂದೂ, ಅರ್ಧನಾರೀಶ್ವರತ್ವಾದಿ ಲಕ್ಷಣಗಳಿಂದ ಕೂಡಿದ ಪರಮಾತ್ಮನು ಸಕಲನೂ ಹೌದು ನಿರ್ವಿಶೇಷನೂ ಹೌದು, ಏಕನೂ ಅನಂತನೂ ತಾನೇ ಆಗಿ ಮೂರ್ತಾ ಮೂರ್ತ ಸ್ವರೂಪದಿಂದ ವಿರಾಜಿಸುವನೆಂಬ ವಿಶ್ವಧರ್ಮವನ್ನು ಅಳವಡಿಸಿಕೊಂಡು ಬೆಳಗುವುದರಿಂದ ವೀರ ಶೈವಧರ್ಮ ಸನಾತನವೂ, ವೇದವಿಹಿತವೂ ಸರ್ವ ಜನ ಮಾನ್ಯವೂ ಆಗಿ ರಾರಾಜಿಸುತ್ತಲಿರುವುದೆಂದು ವಿಸ್ತಾರವಾಗಿ ವಿವರಿಸಿದುದರ ಪರಿಣಾಮವಾಗಿ, "ಪ್ರಸ್ತಾವನೆ" ಸುಮಾರು 400 ಪುಟಗಳಷ್ಟು ಗಾತ್ರವುಳ್ಳದ್ದಾಯಿತು. ಇದಕ್ಕಾಗಿ ಸಹೃದಯರಾದ ಓದುಗರ ಕ್ಷಮೆಯನ್ನು ಯಾಚಿಸುವೆನು.

ಈ ಕಾರಣದಿಂದ ಪ್ರಸ್ತಾವನೆಯನ್ನು ಈ ಗ್ರಂಥದ ಮೊದಲನೆ ಭಾಗ ವೆಂದು ಪ್ರಕಟಪಡಿಸಿ, ಶೀಲವಂತರಾದ ವಿದ್ವನ್ಮಣಿಗಳ ಹಾಗೂ ಗುರುಕಾರುಣ್ಯ ಸ್ಥಲದ ಭಗವದ್ಭಕ್ತರ, ಕರಕಮಲವನ್ನು ಸೇರಿ ಹೃದಯಾಂಬೋಜವನ್ನಲಂ ಕರಿಸಿ, ಮನಸ್ಸಿಗೆ ಪರಮ ಶಾಂತಿಯನ್ನೂ ಬುದ್ಧಿಗೆ ನಿಲುಕಡೆಯನ್ನೂ ಪ್ರಸನ್ನತೆ ಯನ್ನಿತ್ತು, ಉಭಯ ಜಗದಾಚಾರ್ಯರ ಮತ್ತೂ ಗುರುವರೇಣ್ಯರ ಮಧ್ಯೆ ಅವರ ಕರಕಮಲದ್ವಯ ಪೀಠಗಳಲ್ಲಿ ವಿರಾಜಿತವಾದ ಶ್ರೀ ಚಂದ್ರಮೌಳೀಶ್ವರ ಲಿಂಗದ ದಿವ್ಯಕೃಪಾ ಕಟಾಕ್ಷ ಆಶೀರ್ವಾದದಿಂದ ॥ ಸಮಸ್ತ ಸರ್ವ ಮಂಗಳಾನಿ ಭವಂತು । ಲೋಕಾಸ್ಸಮಸ್ತಾ ಸುಖಿನೋಭವಂತು ॥ ಎಂಬ ದೇವವಾಣಿ ಯಂತೆ ಎಂಭತ್ತು ನಾಲ್ಕು ಲಕ್ಷ ಜೀವಕೋಟಿಗಳಿಗೂ ಅನವರತ ಸರ್ವ ಮಂಗಳ ವೇರ್ಪಡಲೆಂದು ಪರಮಾತ್ಮನಲ್ಲಿ ಭಕ್ತಿಭಾವದಿಂದ ಕೋರಿ, ನನ್ನೀಗ್ರಂಥ ಸತ್ಯ ದರ್ಶನದ ದರ್ಪಣದಂತೆ ಜಗತ್ತಿನಲ್ಲಿ ಆದರಣೀಯವನ್ನು ಪಡೆಯಲೆಂದು ಹಾರೈಸುತ್ತೇನೆ.

ಈ ಗ್ರಂಥದಲ್ಲಿ ಪ್ರಕಟಪಡಿಸಿರುವ ಮಿಕ್ಕುಳಿದ ನಾಲ್ಕು ಅಧ್ಯಾಯಗಳನ್ನು ಬರೆದು ಎರಡನೆಯ ಭಾಗವಾಗಿ ಸುಮಾರು 250 ಪುಟಗಳ ಗಾತ್ರದಲ್ಲಿ ಪ್ರಿಂಟು ಮಾಡಿಸಲುಳ್ಳವನಾಗಿದ್ದೇನೆಂದು, ಸಹೃದಯರಲ್ಲಿ ವಿನಯದಿಂದ ಬಿನ್ನೈಸಿಕೊಳ್ಳಲು ಹರ್ಷಿಸುತ್ತೇನೆ

॥ ಯತ್ಸಾರ ಭೂತಂ । ತದುಪಾಸಿತವ್ಯಂ ॥

ಬೆಂಗಳೂರು – 5
(ಕಂಟೋರ್ನ್‍ಮೆಂಟು)

ಇತಿ
ಸಜ್ಜನ ವಿಧೇಯ
**ಟಿ. ಬಿ. ಬಸವರಾಜಯ್ಯ**

C/o Dharmaprakasha N Rudriah & Sons.,
Mandy Merchants & Industrialists,
New Tharagupet, Bangalore - 2.

ಇಷ್ಟಲಿಂಗಾರಾಧನೆ ಧ್ಯಾನಗಳು ಸುಖಮಯವೂ ನಿತ್ಯಾನಂದ ಸ್ವರೂಪ ವೆನಿಸಿರುವವು.

: ಧ್ಯಾನ :

॥ ಸುಖವೇ ಸುಖಾಭಿವೃದ್ಧಿಯೇ ।
ಸುಖೋನ್ನತಿಯೇ ಸುಖಪರಿ ಪೂರ್ತಿಯೇ ।
ಸುಖಕಳಾಕೃತಿಯೇ ಸುಖಚಕ್ರವರ್ತಿಯೇ ॥
ಸುಖಮುಖ ಬಂಧುವೇ ಸುಖರಸಾಮೃತ ಸಿಂಧುವೇ ।
ನಿನ್ನವರ್ಗೆನೀಂ ಸುಖಮನೆಮಾಳ್ಪುದಯ್ಯಾ ।
ಪರಮಪ್ರಭುವೇ ಮಹದೈ ಪುರೀಶ್ವರಾ ॥

॥ ಶಿವಂ ಭೂಯಾತ್ ॥

# ESSENTIALS OF SPIRITUALISM

( A Philosophical Enterprise in English )

---

Essentials of Spiritualism is a piece of an enlightening maiden enterprise attempted by me with faith and devotion, in order to gain a personal knowledge of Brahma through constant contemplation and contribution of self awakening thoughts just to enrich the cognizance of Athman within.

Hinduism (our Sanathana Dharma), Mother of all Religions, has been loudly hailed by men of integrity, spiritual insight and divine wisdom, as a Universal Religion, in all its entirity, and is a most primitive one among innumerable ancient Religions. It traces its origin in Vedas, Upanishads and Sivagamas which date back to the den of dim yore of steep antiquity. While Vedas and Upanishads are considered to be the very Divine Breath of Providence, Sivagamas do enjoy a peerless privilege in the hierarchy of spiritual eternal chantings of God Almighty. Sivagama, are hailed to be the very articulation (Spoken Words) of Living God Almighty Parasiva, fully impregnent with the richness of fathomless Treasure of direct Wisdom Divine. Although there is no much difference or any inferiority complexion attached to, in between them, yet, Sivagamas do occupy a predominent place, in vividly expressing and expounding the most lofty and sublime tenets of Viswa Dharma and the Divine path to Perfection. It is a matter of matured consideration that the word of mouth carries more meaningful weight and is really impressive beyond all doubts, in indicating or rather asserting the primordial

purpose and aim in the spiritual (Adhyatmic) field and is imminently helpful in the attainment of Goal Supreme (ATHMA SAAKSHAATHKARA), rather than mere (hymns) said to have been emerged out from the Divine Breath of Lord, God Almighty. Hence, Sivagamas occupy pre-eminently a predominent place in the order of avocations of the Spiritual Kingdom of Living God Almighty.

In the spiritual book under reference, I have strived every nerve of mine to bring to light some Universal traits and aspects of Adhyathmic Dharma, substantiating the same with authentic Vedic and Agamic authorities of antiquity, as are flashed out within my comprehension and calibre, in a convincing manner to the best of my ability and sobriety. Although different Religions teach and preach different paths, I have stressed here that the GOAL of all of them is ONE and the same. It is worthy to bear in mind that the paths and pursuits do vary and differ. Diversity and multiplicity are the apparent key notes launched in the creation of this Universe. Upholding this sublime notion aloft, I have ventured by the Grace of God Almighty, to dwell upon the abstract philosophic tenets of Dwaita, Visistadwaita, Saiva Siddhantha, Adwaita and Sivadwaita (Veerasaivism) etc., respectively, in brief to the best of my ability and capacity with an unbiased mind, and in doing so, I have touched here and there sincerely some salient aspects of Christianity too, to the extent I know. The natural love that I cherish since my boyhood for acquainting with and realising more and more of Spiritual Knowledge from within and my ardent devotional

reverence and prayer at the Lotus Divine Feet of Bhagawan Srimad Jagadguru Sri RENUKACHARYA, the paramount pontifical Head of Sivadwaita School of Thought and Founder Mahacharya of Veerasaiva Religion, has indeed pushed me to come to the fore front in this laudable spiritual pursuit and has actuated me to solemnly undertake this noble cause as it were, and to bring out this piece of literary work in English and as well as the Canarese work (Book) written by me under the name and style of "Sri SHRUNGERI JAGADGURU ADI Sri SANKARACHARYARIGE DATTAVADA, CHANDRA MOULEESWARA LINGADA, NAIJA VRUTTAANTA". The latter having comprised of two parts, at present only the first part is printed and ready for release.

Essentials of Spiritualism may cover about 250 pages in English and 2000 books are being printed. Although prominence is given to Viswa Dharma and the propounders of the same, I have freely and frankly with an open heart, dwelt upon the tenets enunciated in Sanatana Dharma, individually and collectively as appertaining to different Schools of Thought, broadly coming under the universally glorified roof of Hinduism

I have pointedly brought to light in Essentials of Spiritualism that all the salient aspects hailed in so many tongues, under the roof of varying Schools of Thought are found merged in the Great Womb of SIVADWAITA School of Thought which profusely propounds Viswa Dharma (Universal Dharma). This effort taxed me much because I have had to keenly apply my mind with a sense of tran-

quility of mind in concentrating upon the abstract facinating philosophy of our Sanatana Dharma. The commentaries written on Prasthana Thrayas by the Pontifical Heads of various Schools of Thoughts and their expositions thereof are also referred to in brief. The frontispiece portion of about 30 pages is an introduction to Essentials of Spiritualism, which propounds chiefly on Bhakti Yoga and its importance in the realm of Spiritualism in general.

The opening chapter in Essentials of Spiritualism starts with a simple poem expounding the great significance of DANCE of Lord Nataraja who is the Sole King among the celestial Dancers and the Master of the Universe. The Westerners are lovers of dance. This fine art has captivated them so much that their chief recreation in life is nothing but dance. They dance daily merrily in order to enchant each other and for the gratification of their organs of senses. It is a regular feast unto their insatiable sencses and their summumbonum in life. In order to draw the Western mind closer to the spiritual cult of fine art of Oreintal Dance and its duel significance in embellishing both moral and spiritual faces of the same, the celestial DANCE of the Lord, God Sri Nataraja is dwelt upon in short. The expositions of attainment of Moksha as has been propounded by the illustrious pontifical Heads of various Schools of Thought, such as Ananda Teertha Sriman Madhwacharya, Bhagawathpada Sri Ramanuja charya, the FOUR great Saiva Samayacharyas viz., Saint Appar, St. Sundarar, St. Tirugnana Sambandar and St. Sri Manicka Vachagar, and that of Jagadguru

Adi Sri Sankaracharya and as well as the expositions of the paramount pontifical Heads of Veerasaivism viz., Srimad Jagadguru RENUKADI PANCHA CHARYAS are also dwelt upon by me one after another, to the extent that I have gained personal knowledge of the same through my experience and realisation. The same is really self awakening by cutting asunder, the inner veil of ignorance and intricate knots of Avidya.

I am happy to state here that I have listed about fifty foreign Universities addresses of Western World, in order to send this spiritual book of Universal Spiritualism, for the exposition of which, Mother India is hailed from time immemorial as the birth place. A few Universities in London, in South & North America, Paris, Belgium, Holland, Poland, West Germany, East Germany, (Bonn & Berlin) Dublin in Ireland and Scotland, Universities in Scandinevian Countries such as Norway, Sweden, Denmark, Greece, Athens, Zechoslavakia, Yugoslavia Universities in Russia, Japan, Australia, are some. which come under my purview and to whom I intend despatching the books directly to their respective addresses.

May it please the Lord God Almighty
"ಶಿವಶರಣಂಗೆ ಮರಣವೇ ಮಹರ್ನವಮಿ ಮತ್ತು ಮಹಾಶಿವರಾತ್ರಿ"
"Shiva Sharanange Maranave Mahar Navami and Mahasivaratri" i. e., The closure of mortal eye is overwhelmed by the unboldment of Gnana Netra-ಜ್ಞಾನ ನೇತ್ರ, Wisdom Divine unto a God intoxicated holy Seer.

Bangalore - 2
Date: 26-2-1968

**T. B. Basavarajayya**
*Author.*

JAI HIND

ಶ್ರೀ ಶೈಲ ಗಿರಿರಾಜ ಶ್ರೀ ಸೂರ್ಯ ಸಿಂಹಾಸನಾಧೀಶ್ವರ ೧೦೦೮ ಶ್ರೀ ಮಜ್ಜಗದ್ಗುರು ಶ್ರೀ ಶ್ರೀ ಶ್ರೀ ವಾಗೀಶ ಪಂಡಿತಾರಾಧ್ಯ ದೇಶಿಕೇಂದ್ರ ಶಿವಾಚಾರ್ಯ ಮಹಾಪಾದಂಗಳರವರು ಕೃಪೆಮಾಡಿ ರಚಿಸಿದ, ಮಹಾಮಹಿಮಾನ್ವಿತನಾದ ಶ್ರೀ ಶ್ರೈಲ

# ಶ್ರೀ ಮಲ್ಲಿಕಾರ್ಜುನ ಸುಪ್ರಭಾತ

## ಶ್ಲೋಕಗಳು

— ★ —

ಶ್ರೀಶೈಲವಾಸಿಯನು, ಭ್ರಮರಾಂಬೆಯೊಡೆಯನನು ।
ಈಶ ಮಲ್ಲೇಶನನು ಬೇಡಿಕೊಂಬೆ ॥
ನಾಶವಾಗಲಿ ನಮ್ಮ ಪಾಪತಾಪಗಳೆಲ್ಲ ।
ಪೋಷಿಸಲಿ ಮೂಜಗವ ಮುಕ್ಕಣ್ಣನು ॥೧॥

ಪಾಪಗಳು ಹೆಚ್ಚಾಗಿ ಪುಣ್ಯ ಕುಗ್ಗಿಹುದೀಗ ।
ತಾಪಪಡುವರು ಜನರು ಬಹುವಿಧದೊಳು ॥
ಆ ಪರಮಶಿವನಡಿಯ ನುತಿಯಿದಕೆ ವೈದ್ಯವೆನೆ ।
ರೂಪಗೊಳಿಸಿದೆ ಸುಪ್ರಭಾತವಿದನು ॥೨॥

ಶ್ರೀಶೈಲದೊಳು ನಿತ್ಯವಾಸಿಸುವ ಭ್ರಮರಾಂಬೆ ।
ಈಶಮಲ್ಲೇಶನರ್ಧಾಂಗಿಯಾಗಿ ॥
ಪೋಷಿಸುವಳೀಜಗವ ನನವರತವದಕಾಗಿ ।
ಘೋಷಿಸುವೆ ನಾ ಸುಪ್ರಭಾತವಿದನು ॥೩॥

ದೇವಾಧಿದೇವ ! ಕಾರುಣ್ಯ ಸಿಂಧುವೇ ನಿನ್ನ ।
ಭಾವವನು ಗಂಗೆಗೌರಿಯರೀರ್ವರು ॥
ಸಾವಧಾನದೆ ಸೆಳೆದು ಕೊಂಡಿರುವರಾದರೂ ।
ಕಾವುದೀಜಗವ ನಿನ್ನಯ ಧರ್ಮವು ॥೪॥

ಕತ್ತಲೆಯು ಕಳೆದಿಹುದು ಸುತ್ತು ಬೆಳಕಾಗಿಹುದು ।
ಎತ್ತಲೂ ಶಿವಮಂತ್ರ ಕೇಳುತಿಹುದು ॥
ಚಿತ್ತಜಾರಿಯೆ ! ನಿನ್ನ ಭಕ್ತಿಯಿಂದೆಬ್ಬಿಸುವೆ ।
ಮತ್ತೆ ತಪ್ಪಾದರೆನ್ನನು ಪೊರೆವುದು ॥೫॥

ಏಳು ! ಶ್ರೀಗಿರಿವಾಸ ! ಏಳು ! ಶ್ರೀಗಿರಿನಾಥ ।
ಏಳು ! ಭ್ರಮರಾಂಬಿಕೆಯ ಪತಿಯೆ ! ಏಳು ! ॥
ಏಳು ! ಮಲ್ಲೇಶ್ವರನೆ ! ಏಳು ! ಸರ್ವೇಶ್ವರನೆ !
ಏಳು ! ವಿಶ್ವೇಶ್ವರನೆ ! ಬೆಳಗಾಯಿತು ॥೬॥

ಹರಿಯು ಲಕ್ಷ್ಮಿಯ ಕೂಡ ಕರದೊಳಗೆ ಕಮಲಗಳ ।
ಸರವಿಡಿದು ನಿನ್ನ ಪೂಜಿಸಬಂದನು ॥
ಕರೆವನವ್ಮಾ ! ಗೌರಿ ! ಹರನೆದ್ದನೇ ? ಎಂದು ।
ಗಿರಿಶ ! ಬೇಗೇಳಯ್ಯ ! ಬೆಳಗಾಯಿತು ॥೭॥

ವಿಧಿಯು ವೇದವ ಪಿಡಿದು ಚದುರೆ ಶಾರದೆಯೊಡನೆ ।
ಸದಮಲಾಂಗನೆ ನಿನ್ನ ಮಹಿಮೆಗಳನು ॥
ಮುದದಿಂದ ಕೊಂಡಾಡಿ ಪಾಡಿ ಕುಣಿಯುತ ಬಂದ ।
ಮದನಾರಿ ! ಏಳಯ್ಯ ! ಬೆಳಗಾಯಿತು ॥೮॥

ವೀರ, ನಂದಿ, ಭೃಂಗಿ, ವೃಷಭ, ಷಣ್ಮುಖರೀಗ ।
ನಾರಮಡಿಗಗಳನ್ನಿಟ್ಟು ಭಕ್ತಿಯಿಂದ ॥
ಚಾರು ಸೌಗಂಧತೈಲವ ನಿನಗೆ ಲೇಪಿಸಲು ।
ದಾರಿಕಾದಿಹರೇಳು ! ಬೆಳಗಾಯಿತು ॥೯॥

ಕಾಮಧೇನುವು ತನ್ನ ಮೊಲೆಹಾಲ ನಿನಗೆರೆಯ ।
ಪ್ರೇಮದೀದಿಲ್ಲಿ ನಿಂತಿಹುದು ಬಂದು ॥
ತಾಮಸವದೇಕಯ್ಯ ! ಹಾಲುಮಜ್ಜನಕಾಗಿ ।
ಸೋಮಧಾರಿಯೆ ! ಏಳು ! ಬೆಳಗಾಯಿತು ॥೧೦॥

ಪನ್ನೀರ ನಿನಗೆರೆಯೆ ಕರದಿ ಕೊಡಗಳ ಪಿಡಿದು ।
ಮುನ್ನುಗ್ಗಿ ಬರುತಿಹರು ಮುನಿವರ್ಯರು ॥
ಮಾನ್ಯ ಮುನಿಕನ್ಯೆಯರು ದಾರಿಬಿಡಿ ಎನುತಿಹರು ।
ಸನ್ನುತನೆ ! ನೀನೇಳು ! ಬೆಳಗಾಯಿತು ॥೧೧॥

ಇಂದ್ರನೈರಾವತವು ನಿನಗೆ ಚವರಿಯ ಬೀಸ ।
ಲೆಂದು ಮಂದಿರದ ಬಳಿ ಬಂದು ನಿಂದು ॥
ಮಂದದನಿಯಿಂದ ಗರ್ಜನೆಗೆಯ್ಯುತಿಹುದೀಗ ।
ಸುಂದರಾಂಗನೆ ! ಏಳು ! ಬೆಳಗಾಯಿತು ॥೧೨॥

ವರರತ್ನ ಹಾರಗಳ ಕೇಯೂರಮುಕುಟಗಳ ।
ಕರಕಂಕಣವ ಕರ್ಣ ಕುಂಡಲಗಳ ॥
ಹರನೆ ! ನಿನಗರ್ಪಿಸಲು ಸುರರಾಜ ಬಂದಿಹನು ।
ಹರುಷದಿಂದೇಳಯ್ಯ ! ಬೆಳಗಾಯಿತು ॥೧೩॥

ಸುರಗಿ, ಸಂಪಿಗೆ ಬಕುಳ, ಪುನ್ನಾಗ, ಸೇವಂತಿ ।
ಮರುಗ, ಮಲ್ಲಿಗೆ, ಜಾಜಿ, ಪಾರಿಜಾತ ॥
ಗಿರಿಕರ್ಣಿಕಾದಿ ಕುಸುಮಗಳ ನಿನಗರ್ಪಿಸಲು ।
ಸುರರು ತಂದಿಹರೇಳು ! ಬೆಳಗಾಯಿತು ॥೧೪॥

ಸುರಗಿ ಸೇವಂತಿಗೆಯ, ಸಂಪಿಗೆಯ, ಮಲ್ಲಿಗೆಯ ।
ಸರಗಳನು ಭ್ರಮರಾಂಬೆ ಮುಡಿಯಲೆಂದು ॥
ಸುರಕುವರಿಯರು ತಾವು ತಂದು ನಿಂತಿಹರಿಲ್ಲಿ ।
ಪುರವೈರಿ ! ಏಳಯ್ಯ ! ಬೆಳಗಾಯಿತು ॥೧೫॥

ನಾರದನು ತಂಬೂರಿನಾದದೊಳು ಶಿವ ನಿನಗೆ ।
ಆರಾರು ಸರಿಯಿಲ್ಲವೆಂದು ಪಾಡಿ ॥
ಹಾರಾಡುತಿಹನಿಲ್ಲಿ ಕಾಲ್ಗೆಜ್ಜೆ ಗಿಲ್ಲೆನಲು ।
ಬಾರೈಯ್ಯ ! ನೀನೇಳು ! ಬೆಳಗಾಯಿತು ॥೧೬॥

ಗಂಧರ್ವಗಾಯಕರು ರಂಭಾದಿನಟಿಯರೂ ।
ಅಂದಚೆಂದದ ವಾದ್ಯವೃಂದದೊಡನೆ ॥
ಬಂದು ನಿನ್ನಯ ಮುಂದೆ ನಾಟ್ಯವಾಡುತ್ತಿಹರು ।
ಕಂದುಗೊರಳನೆ ! ಏಳು ! ಬೆಳಗಾಯಿತು ॥೧೭॥

ತುಂಬುರರು ಕಿನ್ನರರು ಮದ್ದಳೆಯ ಗತ್ತಿನೊಳು ।
ಸಾಂಬ ! ತಕತಕಧಿನಧಿನ್ನವೆನ್ನುತ ॥
ಕುಂಭಿನಿಯು ಬಿರಿವಂತೆ ಕುಣಿಯುತಿಹರೀಗಲ್ಲಿ ।
ಶಂಭುವೇ ! ನೀನೇಳು ! ಬೆಳಗಾಯಿತು ॥೧೮॥

ನೀಲಕುಂತಳೆಯಾದ ಭ್ರಮರಾಂಬೆ ಮೊದಲೆದ್ದು ॥
ಕಾಲಾರಿ ! ನಿನ್ನ ಪದಪದ್ಮಕೆರಗಿ ॥
ಲೀಲೆಯಿಂ ನೈದಡನಿ ಎಬ್ಬಿಸುತ್ತಿಹಳೀಗ ।
ಫಾಲಾಕ್ಷ ! ನೀನೇಳು ! ಬೆಳಗಾಯಿತು ॥೧೯॥

ಗಂಗೆ ನಿನ್ನೆಬ್ಬಿಸಲು ನೀರ ಸಿಡಿಸಲು ಬಂದು ।
ಕಂಗಳಿಂ ನಗ್ನರೂಪವನೀಕ್ಷಿಸಿ ॥
ಶೃಂಗಾರಭಾವದೊಳು ನಾಚಿ ತಲೆಬಾಗಿಹಳು ।
ಮಂಗಲಾಕರ ! ಏಳು ! ಬೆಳಗಾಯಿತು ॥೨೦॥

ಸುರರೇರಿಬಂದಿರುವ ಆನೆಸಿಂಹಗಳೊಮ್ಮೆ ।
ಗರುಡಸರ್ಪಗಳೊಮ್ಮೆ ನವಿಲೊಮ್ಮೆಯೂ ॥
ತೊರೆಯಲಾರದ ವೈರಭಾವದಿಂ ಚೀರುವವು ।
ಪರಶಿವನೆ ! ಏಳಯ್ಯ ! ಬೆಳಗಾಯಿತು ॥೨೧॥

ಸುಪ್ರಭಾದೇವಿಯೊಡೆಯನ ಶಿಲಾದನ ಸುತರು ।
ವಿಪ್ರವಂದ್ಯರು ವೀರಶೈವರವರು ॥
ಸುಪ್ರಸಿದ್ಧನು ಪರ್ವತೇಶನೇ ಗಿರಿಯಾದ ।
ಕ್ಷಿಪ್ರದೊಳು ಏಳಯ್ಯ ! ಬೆಳಗಾಯಿತು ॥೨೨॥

ವೇದಾಗಮೋಕ್ತ ಶಿವಭಕ್ತಿ ಸಿದ್ಧಾಂತವನು ।
ಮೇದಿನಿಯೊಳೂರಿ ನಿನ್ನನ್ನು ಕಾಣಲು ॥
ಆದಿಪಂಚಾಚಾರ್ಯರಿಲ್ಲಿಗೈತಂದಿಹರು ।
ವೇದಮೂರ್ತಿಯೆ ! ಏಳು ! ಬೆಳಗಾಯಿತು ॥೨೩॥

ಇಲ್ಲಿರುವ ಪಂಡಿತಾರಾಧ್ಯಗುರುಗಳು ನಿನ್ನ ।
ಮೆಲ್ಲಡಿಯ ಸೇವೆಯನು ಮಾಡಿ ಮಾಡಿ ॥
ಎಲ್ಲ ಶಿಷ್ಯರಿಗೀಗ ಬೋಧೆಯನು ಕೊಡುತಿಹರು ।
ಮಲ್ಲಿಕಾರ್ಜುನ ! ಏಳು ! ಬೆಳಗಾಯಿತು ॥೨೪॥

ಸಾನಂದ, ಕುಂಭಜ, ದಧೀಚಿ, ವಿಶ್ವಾಮಿತ್ರ ।
ಮಾನ್ಯ ದೂರ್ವಾಸಾದಿ ಮುನಿಮುಖ್ಯರು ॥
ಜ್ಞಾನಘನ ! ನಿನ್ನ ದರ್ಶನಕಾಗಿ ಬಂದಿಹರು ।
ಆನಂದದಿಂದೇಳು ! ಬೆಳಗಾಯಿತು ॥೨೫॥

ರಾವಣನ ವಧೆಯ ಪಾಪದ ಶಾಂತಿಗಾಗಿಯೇ ।
ಭೂಮಿನುತರಾಮ ಸಾಸಿರ ಲಿಂಗವ ॥
ಸೇವಿಸಲು ಬಂದಿಹನು ಕುಂಭಜನ ನುಡಿಯಂತೆ ।
ಸಾವಳಿಗ ! ನೀನೇಳು ! ಬೆಳಗಾಯಿತು ॥೨೬॥

ಪಾಂಡವರು ನಿನ್ನ ಪೂಜಿಸಿ ಮತ್ತೆ ರಾಜ್ಯಗಳ ।
ಮಂಡಲೇಶ್ವರರಾದ ಸವಿನೆನಪಿಗೆ ॥
ಮಂಡಪಂಗಳ ಕಟ್ಟಿ ಸಲ್ಲಿಸಲು ಬಂದಿಹರು ।
ಪಂಡಿತೇಶನೆ ! ಏಳು ಬೆಳಗಾಯಿತು ॥೨೭॥

ಬ್ರಹ್ಮ ಸೂತ್ರದ ಕರ್ತ ವ್ಯಾಸನೈತಂದಿಲ್ಲಿ
ಹೆಮ್ಮೆಯಿಂ ಶ್ರೀಶೈಲಖಂಡ ವೆಂಬ ॥
ನಿಮ್ಮ ಮಹಿಮೆಯ ಕಾವ್ಯರಚನೆಯೊಳು ತೊಡಗಿಹನು
ಬ್ರಹ್ಮರೊಡೆಯನೆ ! ಏಳು ! ಬೆಳಗಾಯಿತು ॥೨೮॥

ತೆಲುಗು, ಕನ್ನಡ, ತಮಿಳು, ಗುಜರಾತಿ, ಬಂಗಾಳ ।
ಚೆಲುವ ಕಾಶ್ಮೀರ ಮಹಾರಾಷ್ಟ್ರಂಗಳಿಂ
ಬಲವಂತರೈಸಿರಿಯ ನಿನಗಾಗಿ ತಂದಿಹರು ॥
ಗಳಿಲನೇ ಏಳಯ್ಯ ! ಬೆಳಗಾಯಿತು ||೯||

ಶೈವ, ವೈಷ್ಣವ, ವೀರಶೈವ, ಶಾಕ್ತರು, ಮತ್ತೆ
ಸಾವಣಿಕ ಜೈನರೆಂಬವರೆಲ್ಲರೂ ॥
ಭಾವಭೇದವನಳಿದು ಸೇವೆಗೈತಂದಿಹರು
ದೇವದೇವನೆ ! ಏಳು ! ಬೆಳಗಾಯಿತು ||೩೦||

ಎಲ್ಲ ಯಾತ್ರೆಯ ಜನರು ಶಿಖರೇಶ, ಆಟಕೇಶ
ರಲ್ಲದಲೆ ಗಣಪತಿಗೆ ವೀರೇಶಗೆ ॥
ಸಲ್ಲಿಸುತ ವಂದನೆಯ ನಿನ್ನ ಪೂಜಿಸಲೆಂದು ॥
ಇಲ್ಲಿ ಬಂದಿಹರೇಳು ! ಬೆಳಗಾಯಿತು ||೩೧||

ಪಾತಾಳಗಂಗೆಯುದಕವ ತಂದು ನಿನಗೆರೆಯೆ ।
ಯಾತ್ರಿಕರು ಕೊಡಗಳನು ಕರದಿ ಪಿಡಿದು ॥
ಆತುರದೆ ಸಾಲುಸಾಲಾಗಿ ಬರುತಿಹರೀಗ ।
ಭೂತೇಶ ! ನೀನೇಳು ಬೆಳಗಾಯಿತು ||೩೨||

ನವರಸಂಗಳ ಬಲ್ಲ ಕವಿಚಕ್ರವರ್ತಿಗಳು ।
ನವಗೀತೆಗಳ ರಚಿಸಿ ಪಾಡುತಿಹರು ॥
ಶಿವನೆ ! ನಿನಗಾನಂದವಾದಂತೆ ತೋರುವುದು ॥
ಅವನೀಶ ! ಬೇಗೇಳು ! ಬೆಳಗಾಯಿತು ||೩೩||

ನೀ ಶಿವನು, ನೀನಾದ್ಯ, ನೀನೇಕನಕ್ಷರನು ।
ನೀ ಶಕ್ತಿಯುತನುಭಯರೂಪನೆನುತ ॥
ಈಶ ! ನಿನ್ನನ್ನು ಪೊಗಳುತಿರುವವೀ ವೇದಗಳು ।
ಅಶುತೋಷನೆ ! ಏಳು ! ಬೆಳಗಾಯಿತು ||೩೪||

—

ಶಿವಪೂಜೆಯಿಂದಲೇ ಜೀವ ಶಿವನಾಗುವನು ॥
ಅವನಿಯೊಳಗೀಮಾರ್ಗ ಸುಲಭವೆನುತ ॥
ಸುವಿಚಾರಿ ಶಂಕರಾಚಾರ್ಯ ನುಡಿಯುತ ಬಂದ ।
ಭವಹರನೆ ! ನೀನೇಳು ! ಬೆಳಗಾಯಿತು ॥೩೫॥

ಗೋರಕ್ಷ ಮುಖ್ಯರಹ ನವನಾಥಸಿದ್ಧರೂ ।
ವೀರಭಕ್ತಿಯೊಳಗ್ನಿಯೊಳು ಸೇರುತ ॥
ತೋರುತಿಹರಷ್ಟಾಂಗಯೋಗವಿದನದ್ಭುತವು ।
ಮಾರಾರಿ ! ನೀನೇಳು ! ಬೆಳಗಾಯಿತು ॥೩೬॥

ಎಲ್ಲ ದೇವರ ದೇವ, ಬಲ್ಲಿದನು ಮಲ್ಲೇಶ ।
ಸಲ್ಲಿಸಿರಿ ಪೂಜೆಯನ್ನು ಶಿವನಿಗೆಂದು ॥
ಇಲ್ಲಿಗಾ ಶಿವಭಕ್ತೆ ಚಂದ್ರವತಿ ಬರುತಿಹಳು ।
ಮೆಲ್ಲನೇ ನೀನೇಳು ! ಬೆಳಗಾಯಿತು ॥೩೭॥

ಇಲ್ಲಿ ನೋಡಿಲ್ಲಿ ಜಂಗಮಜಗದ್ಗುರುವರ್ಯ ।
ಮಲ್ಲಿಕಾರ್ಜುನದೇವಶಿವಯೋಗಿಯು ॥
ಸಲ್ಲೀಲೆಯಿಂದ ಶಿವಲೀಲೆಯನು ಪಾಡುವನು ।
ಬಲ್ಲಿದನೆ ! ನೀನೇಳು ! ಬೆಳಗಾಯಿತು ॥೩೮॥

ಶ್ರೀ ಗಿರಿಯ ಪೀಠೇಶನಾದ ಶ್ರೀಪತಿಗುರುವು ।
ಆಗಮಾಮ್ನಾಯಸಿದ್ಧಾಂತವಿಡಿದು ॥
ಈಗಿಲ್ಲಿ ಭಾಷ್ಯವನು ಬರೆದು ನೀಡಲು ಬಂದ ।
ಭೋಗಿಭೂಷಣ ! ಏಳು ! ಬೆಳಗಾಯಿತು ॥೩೯॥

ಕಲ್ಯಾಣವಾಸಿ ಶರಣರು ಕದಳಿಬನದಿಂದ ।
ಅಲ್ಲಮಪ್ರಭುಸಹಿತರಾಗಿ ನಿನ್ನ ॥
ಮೆಲ್ಲಡಿಯ ದರ್ಶನಕೆ ಇಲ್ಲಿಗಾಗಮಿಸಿಹರು ।
ಸಲ್ಲೀಲೆಯಿಂದೇಳು ! ಬೆಳಗಾಯಿತು ॥೪೦॥

ಚೆನ್ನಮಲ್ಲೇಶನೆನ್ನಯ ಗಂಡನೆನ್ನುತ್ತ ।
ತನ್ನ ಜಡೆಗೂದಲದ ಮಡಿಯನುಟ್ಟು ॥
ಮಾನ್ಯಳಾದಕ್ಕಮಹಾದೇವಿ ಕಾದಿಹಳಿಲ್ಲಿ ।
ಚೆನ್ನಿಗನೆ ! ನೀನೇಳು ! ಬೆಳಗಾಯಿತು ||೪೧||

ಶಿರಿಯಾಳ ಚಂಗುಳೆಯರೀಗ ತಮ್ಮಯ ಮಗನ ।
ಹರನುಂಡು ಮತ್ತೆ ಕರೆತಂದನೆಂದು ॥
ಪರಿಪರಿಯೊಳುಲ್ಲಾಸಗೊಂಡು ಕೊಂಡಾಡುವರು ।
ಪರಶಿವನೆ ! ನೀನೇಳು ! ಬೆಳಗಾಯಿತು ||೪೨||

ಹಸಿದ ಜಂಗಮನೆಂದು ಬುತ್ತಿಯನು ತರಕೇಳಿ ।
ದಿಶೆಗೆಟ್ಟು ನೀನೋಡಿ ಬಂದೆ ಎಂದು ॥
ಪಶುಪತಿಯೆ ! ಸಿದ್ಧರಾಮಣ್ಣನುಣ್ಣಿಸ ಬಂದ ।
ಅಸಮಾಕ್ಷ । ನೀನೇಳು । ಬೆಳಗಾಯಿತು ||೪೩||

ತೆಲುಗುನಾಡಿನ ಕವಿಯು ಪಾಲ್ಕುರಿಕೆ ಸೋಮೇಶ ।
ಮಲೆಯನಾಡಿನ ಕವಿಯು ಪದುಮರಸನು ॥
ಬಲುಬಗೆಯ ಕಾವ್ಯಗಳ ಬರೆಯುತಿಹರೀಗಿಲ್ಲಿ
ಒಲಿದು ನೀನೇಳಯ್ಯ ! ಬೆಳಗಾಯಿತು ||೪೪||

ಹೇಮರೆಡ್ಡಿಯ ಸೊಸೆಯು ಶಿವಶರಣೆ ಮಲ್ಲಮ್ಮ ।
ಸ್ವಾಮಿ । ನಿನ್ನನು ಕಾಣಬಂದಿರುವಳು ॥
ಕಾಮಿತಾರ್ಥವನೀಯದಿರೆ ನಿನ್ನ ಕಾಡುವಳು ।
ತಾಮಸವು ಬೇಡೇಳು । ಬೆಳಗಾಯಿತು ||೪೫||

ಆಸುರೀಸೇನೆಯನು ತನ್ನ ಭುಜಬಲದಿಂದ ।
ನಾಶಮಾಡಿದ ಶಿವಾಜಿಯು ನಿನ್ನನು ॥
ಸಂತೋಷಗೊಳಿಸಲು ಬಂದು ಕೈಮುಗಿದು ನಿಂತಿಹನು ।
ಈಶ ! ನೀನೇಳಯ್ಯ । ಬೆಳಗಾಯಿತು ||೪೬||

ವೀರಶೈವರ ಪಂಚಮಠಗಳೊಂದೇ ಸಾಲು ।
ತೋರುವುದು ವಾಯುವ್ಯ ದಿಶೆಯೊಳಲ್ಲಿ ॥
ಸೇರಿ ಸಾವಿರಜನರು ಜಯಘೋಷ ಮಾಡುವರು ।
ಮಾರವೈರಿಯೆ । ಏಳು । ಬೆಳಗಾಯಿತು ॥೪೭॥

ನಿನ್ನೆಡದ ಮಲ್ಲಿಗೆಯ ಕುಂಡದೊಳು ಮಿಂದ ಜನ ।
ನಿನ್ನ ಬಲಗಡೆ ಮನೋಹರ ಕುಂಡಕೆ ॥
ಮುನ್ನುಗುತಿಹುದೀಗ ತೀರ್ಥಸ್ನಾನಾಶೆಯಿಂ ।
ಮಾನ್ಯನೇ । ನೀನೇಳು । ಬೆಳಗಾಯಿತು ॥೪೮॥

ಒಂದುಕಡೆ ಭೇರಿಕರ್ಕಶನಾದ ಒಂದುಕಡೆ !
ಸುಂದರಾನಂದಮುರಲೀನಾದವು ॥
ಒಂದಾಗಿ ಉದ್ವೇಗಹರ್ಷವನು ನೀಡುತಿದೆ !
ಚಂದ್ರಧರ ! ನೀನೇಳು ! ಬೆಳಗಾಯಿತು ॥೪೯॥

ವೈದ್ಯರಾಗಲೆ ಎದ್ದು ಅಡವಿಯೊಳು ತರೆತಂದು !
ವೇದ್ಯವಾದೆಲ್ಲ ಗಿಡಮೂಲಿಕೆಗಳ ॥
ಶುದ್ಧಿಯಸುಮಾಡಿ ನಿನ್ನೆಡೆಗೀಗ ತರುತಿಹರು !
ವೈದ್ಯನಾಥನೆ ! ಏಳು ಬೆಳಗಾಯಿತು ॥೫೦॥

ಚಿಗುರು ಕೈಕಾಲುಗಳು ಪೂಗೊನೆಯ ಮೊಗವೆನಲು !
ನಗದ ತರುರೂಪದೊಳು ವನದೇವಿಯು ॥
ನಗೆಜಯೋ । ಎಂಬಂತೆ ಗಿರಿಯನಾವರಿಸಿಹಳು
ಮೃಗಧರನೆ ! ನೀನೇಳು ಬೆಳಗಾಯಿತು ।೫೧॥

ಒಂದುಕಡೆ ಯೋಗಿಗಳು ಒಂದುಕಡೆ ಭೋಗಿಗಳು !
ಒಂದುಕಡೆ ರಾಜರು ಮಹಾರಾಜರು ॥
ತಂದೆ ! ಕಾಪಾಡೆಂದು ಕೈಮುಗಿದು ಬೇಡುವರು ।
ನಂದಿವಾಹನ ! ಏಳು । ಬೆಳಗಾಯಿತು ॥೫೨॥

ಹುಲಿ, ಕರಡಿ, ಸಿಂಗ, ನರಿ ತೋಳ, ಸಾರಂಗ, ಮೊಲ !
ಗಿಳಿ, ಕಾಗೆ, ಕೋಳಿ, ಕೋಗಿಲೆ ಎಲ್ಲವೂ ॥
ಬಲುಬಗೆಯ ದನಿಯಿಂದ ನಿನ್ನನೇ ನೆನೆಯುವುವು ।
ಮಲಹರನೆ ! ಏಳಯ್ಯ ! ಬೆಳಗಾಯಿತು ॥೫೩॥

ನಿದ್ದೆ ನಿನಗೆಲ್ಲಿಹುದು ? ಹಾಸಿಗೆಯು ನಿನಗೆಲ್ಲಿ ?।
ಮುಗ್ಧ ಭಕ್ತನ ಹಾಡು ನನ್ನ ಹಾಡು ॥
ನಿದ್ದೆಯನು ನೀಮಾಡೆ ಜಗವೆ ಲಯವಾದೀತು ।
ಉದ್ಧರಿಸು ಲೋಕವನು ಮಲ್ಲಿನಾಥ । ॥೫೪॥

ನನ್ನ ಗೀತೆಯು ನಿನಗೆ ಆನಂದ ನೀಡಿತೇ ?
ನಿನ್ನ ರೂಪವನೀಗ ತೋರುತಿರುವೆ ॥
ಚೆನ್ನಿಗನೆ ! ನೀನಂಬೆಯೊಡನಿರುವುದನು ಕಂಡೆ ।
ಧನ್ಯನಾದೆನು ಪೂರ್ಣ ಮಾನ್ಯನಾದೆ ॥೫೫॥

ತನುವಿನೆಲ್ಲೆಡೆ ಹಾವುಗಳ ಕಟ್ಟಿ ಮೆರೆಯುತಿಹ ।
ಘನಮಹಿಮ ಮಲ್ಲಿನಾಥಗೆ ಮಂಗಲ ॥
ಅನವರತವಾತನರ್ಧಾಂಗದೊಳು ಮೆರೆಯುತಿಹ ।
ಮುನಿವಂದ್ಯೆ ಭ್ರಮರಾಂಬೆಗೂ ಮಂಗಲ ॥೫೬॥

ಈಗ ಶೇಖರೇಶನಿಗೆ ಮಂಗಲವು ಆ ಮುಂದೆ ।
ಭೋಗಿ ಅಟಕೇಶನಿಗೆ ಮಂಗಲಗಳು ॥
ಬಾಗಿಲಿಗೆ ಕುಳಿತಿರುವ ಗಣಪತಿಗೆ ಮಂಗಲವು ।
ಯೋಗಿ ವೀರೇಶನಿಗೆ ಮಂಗಲಗಳು ॥೫೭॥

ನಂದಿಕೇಶನಿಗೀಗ ಮಂಗಲವು ಷಣ್ಮುಖಗೆ ।
ಮುಂದಿರುವ ಬಸವನಿಗೆ ಮಂಗಲಗಳು ॥
ಅಂದದೊಳು ನಾಟ್ಯವಾಡುವ ಭೃಂಗಿನಾಥನಿಗೆ ।
ಎಂದಿಗೂ ಮಂಗಲವು ಜಯಮಂಗಲ ॥೫೮॥

ಮಂಗಲವು ರೇಣುಕಗೆ ಮಂಗಲವು ದಾರುಕಗೆ ।
ಮಂಗಲವು ಧೇನುಕರ್ಣಗೆ ಮಂಗಲ ॥
ಮಂಗಲವು ವಿಶ್ವಕರ್ಣಗೆ ವಿಶ್ವವಂದ್ಯನಿಗೆ ।
ಮಂಗಲವು ಘಂಟಾಕರ್ಣರಿಂಗೆ ॥೫೯॥

ಮಂಗಲವು ವಿಷ್ಣುರೂಪಗೆ ಬ್ರಹ್ಮರೂಪನಿಗೆ ।
ಮಂಗಲವು ಜಿನರೂಪನಿಗೆ ಮಂಗಲ ॥
ಮಂಗಲವು ಬುದ್ಧರೂಪಗೆ ಸಿದ್ಧರೂಪನಿಗೆ ।
ಮಂಗಲವು ವಿಶ್ವರೂಪಗೆ ಶಿವನಿಗೆ ॥೬೦॥

ವಂದಿಮಾಗಧರಿಂದ ಚಂದದೊಳು ನುತಿಗೊಂಡ ।
ಚಂದ್ರಶೇಖರನಿಂದು ಭಕ್ತರುಗಳ ॥
ಕುಂದುಕೊರತೆಯ ಕಳೆದು ಸಕಲ ಸೌಭಾಗ್ಯವನು !
ಸಂದೇಹವಿಲ್ಲದಲೆ ಪಾಲಿಸುವನು ॥೬೧॥

ಬೆಳಗು ಮುಂಜಾವದೊಳು ಗಳಿಲನೇ ಮೇಲೆದ್ದು ।
ಇಳೆಯಾಣ್ಮ ಮಲ್ಲಿಕಾರ್ಜುನದೇವನ ॥
ಹೊಳೆಯುವೀ ಸುಪ್ರಭಾತವನಾರು ಪಠಿಸುವರೊ ।
ಇಳೆಯೊಳವರಿಷ್ಟಾರ್ಥ ಪೊಂದುತಿಹರು ॥೬೨॥

ಬೊಮ್ಮನಾಯುಷ್ಯವನು ಇಂದ್ರನಾಭೋಗವನು ।
ಹೆಮ್ಮೆಪಡುವಾ ಕುಬೇರೈಶ್ವರ್ಯವ ॥
ನೆಮ್ಮದಿಯನಾರೋಗ್ಯಭಾಗ್ಯವನು ಮಾನವನು ॥
ಸಮ್ಮತಿಸಿ ಕೊಡುತಿಹನು ಪರಮೇಶನು ॥೬೩॥

ಪಂಡಿತಾರಾಧ್ಯ ಪೀಠೇಶನಹ ವಾಗೀಶ ।
ಪಂಡಿತಾರಾಧ್ಯ ಕವಿವರ್ಯನಾರ್ಯ ॥
ಮಂಡಿಸುತ ಶ್ರೀಶೈಲಪೀಠದೊಳು ಬರೆದಿದನು ।
ಪಂಡಿತರಿಗಿತ್ತು ಭಕ್ತರ ಪೊರೆದನು ॥೬೪॥

॥ ಓಂ ತತ್ ಸತ್ ॥

## ಶ್ರೀ ಶೃಂಗೇರಿ ಶ್ರೀಮಜ್ಜಗದ್ಗುರು
## ಆದಿ ಶ್ರೀ ಶ್ರೀ ಶಂಕರಾಚಾರ್ಯರಿಗೆ ದತ್ತವಾದ
## ಶ್ರೀ ಚಂದ್ರಮೌಳೀಶ್ವರ ಲಿಂಗದ ನೈಜ ವೃತ್ತಾಂತ

ಎಂಬ ಕನ್ನಡ ಗ್ರಂಥದ ಪ್ರಥಮ ಭಾಗವಾದ ಪ್ರಸ್ತಾವನೆ ಸಮಾಪ್ತಿಯ ಮಂಗಳಾಚರಣೆಗೋಸ್ಕರವಾಗಿ ಮೇಲ್ಕಂಡ ಗ್ರಂಥದ, ಗ್ರಂಥಕರ್ತರು, ಹರಿ ಬ್ರಹ್ಮೇಂದ್ರ ಸುರೇಂದ್ರ, ದಾನವೇಂದ್ರ, ನರೇಂದ್ರ ಅಖಿಲ ಯೋಗೀಂದ್ರ ರಿಂದಲೂ ಅನವರತ ವಂದ್ಯನೂ, ಸ್ತುತ್ಯನೂ ಹಾಗೂ ಅಗಣಿತ ಮಹಿಮಾನ್ವಿ ತನೂ, ಅಪ್ರಮೇಯನೂ, ಜಗಜ್ಜನನಿ ಶ್ರೀ ಭ್ರಮರಾಂಬಾವಲ್ಲಭನೂ ಆದ ಶ್ರೀ ಮಲ್ಲಿಕಾರ್ಜುನನ ಸುಪ್ರಭಾತವನ್ನು, ಶ್ರೀಶೈಲ ಗಿರಿರಾಜ ಶ್ರೀ ಸೂರ್ಯ ಸಿಂಹಾಸನಾಧೀಶ್ವರ, ೧೦೦೮ ಶ್ರೀಮಜ್ಜಗದ್ಗುರು ಶ್ರೀ ಶ್ರೀ ಶ್ರೀ ವಾಗೀಶ ಪಂಡಿತಾರಾಧ್ಯ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು ॥ಸರ್ವೇಜನಾಃ ಸುಖಿನೋಭವಂತು। ಲೋಕಾಸ್ಸ ಮಸ್ತಾಸ್ಸರ್ವ ಮಂಗಳಾನಿ ಭವಂತು ॥ ಎಂಬ ವಿಶ್ವ ಧರ್ಮದ ತಳಹದಿಯಮೇಲೆ, ಕೃಪೆಮಾಡಿ ರಚಿಸಿರುವ "ಶ್ರೀ ಮಲ್ಲಿಕಾರ್ಜುನ ಸುಪ್ರಭಾತ" ವನ್ನು, ನಿತ್ಯಪಠನೆ, ಪಾರಾಯಣ, ಪರ್ವತೇಶನ ನಿತ್ಯಾನು ಸಂಧಾನಕ್ಕಾಗಿ, ನಾನು ಈ ಗ್ರಂಥದಲ್ಲಿ ಶ್ರೀಮಜ್ಜಗದ್ಗುರು ಶ್ರೀ ಶ್ರೀಗಳರವರ ದಿವ್ಯ ಪಾದ ಸ್ಮರಣೆಯೊಂದಿಗೆ ಪ್ರಕಟಗೊಳಿಸಿರುವೆನು.

॥ ಅಸ್ತು ॥

ಬೆಂಗಳೂರು-5
6-6-1968

ಟಿ. ಬಿ. ಬಸವರಾಜಯ್ಯ
ನಂ. 38, ನೇತಾಜಿ ರೋಡ್

ಸತ್ಯಂ ಶಿವಂ ಸುಂದರಂ

